ಮೈಸೂರು ವಿಶ್ವವಿದ್ಯಾನಿಲಯ ಕನ್ನಡ ಗ್ರಂಥಮಾಲೆ—೨೨

ಪ್ರಧಾನ ಸಂಪಾದಕ:
ಕೆ. ವಿ. ಪುಟ್ಟಪ್ಪ, ಎಂ. ಎ.

# ಇಸ್ಲಾಂ ಸಂಸ್ಕೃತಿ




ಮೂಲಲೇಖಕ:
ಪ್ರೊಫೆಸರ್ ಮಹಮ್ಮದ್ ಅಬ್ಬಾಸ್ ಷೂಸ್ತ್ರಿ

ಅನುವಾದಕ:
ರಾಜಸೇವಾಸಕ್ತ ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್.

ಮೈಸೂರು
ಮೈಸೂರು ವಿಶ್ವವಿದ್ಯಾನಿಲಯ
೧೯೪೮

# ಮುನ್ನುಡಿ

ಭರತವರ್ಷದ ರಾಜಕೀಯ ಇತಿಹಾಸವನ್ನು 'ನಿರಂತರವಾದ ಸುಲಿಗೆಯ ಕಥೆ' ಎಂಬೊಂದು ಮಾತಿನಲ್ಲಿ ಬಣ್ಣಿಸಬಹುದು. ಈ ವರ್ಣನೆ ಮುಸ್ಲಿಂ ಪ್ರಾಬಲ್ಯದ ಮಧ್ಯಕಾಲದ ಇತಿಹಾಸಕ್ಕೂ ಅನ್ವಯಿಸುತ್ತದೆ. ಮುಸ್ಲಿಮರಿಗೂ ಇಲ್ಲಿಯ ಆರ್ಯಧರ್ಮೀಯರಿಗೂ (ಇಲ್ಲಿ ಆರ್ಯ ಅಥವಾ ಹಿಂದು ಶಬ್ದ ವಿಶಾಲಾರ್ಥದಲ್ಲಿ ಜೈನ ಬೌದ್ಧರಿಗೂ ಅನ್ವಯಿಸುವಂತೆ ಪ್ರಯೋಗವಾಗಿದೆ.) ನಡೆದ ಹೋರಾಟಕ್ಕೆ ನಿಲುಗಡೆಯಿಲ್ಲವೇನೊ ಎಂಬಂತೆ ಮೇಲ್ನೋಟಕ್ಕೆ ಕಾಣುತ್ತದೆ. ಎಲ್ಲ ಕಾಲದ, ಎಲ್ಲ ದೇಶಗಳ, ಎಲ್ಲ ಮಾನವ ಜನಾಂಗಗಳ ಕಥೆಯಂತೆಯೆ ಈ ಮಧ್ಯಯುಗದ ಭಾರತೇತಿಹಾಸವೂ ರಾಜಕೀಯ ಸಾರ್ವಭೌಮತ್ವಕ್ಕಾಗಿ ನಡೆದ ರಕ್ತರಂಜಿತವೂ ದಾರುಣವೂ ಆದ ಸಮರ ಕಥೆ. ಈ ಕಥೆ ಭೀಷಣ ರಕ್ತಪಾತದ ಕಥೆಯಾದರೂ ಪೃಥ್ವಿಯ ಅನ್ಯರಾಷ್ಟ್ರಗಳಲ್ಲಾದಂತೆ ಈ ಆರ್ಯಭೂಮಿಯಲ್ಲಿ ಧಾರ್ಮಿಕ ವಿರಸತೆಯಿಂದಾಗಲಿ ಜಾತೀಯ ಅಸಹನೆಯಿಂದಾಗಲಿ ರಕ್ತಪ್ಲಾವಿತವಾಗಿಲ್ಲವೆಂದು ಬಹುಮಟ್ಟಿಗೆ ಹೇಳಬಹುದಾಗಿದೆ. ಹಿಂದು ಮುಸ್ಲಿಮನ ಮೇಲೆ, ಮುಸ್ಲಿಂ ಹಿಂದುವಿನಮೇಲೆ ಕತ್ತಿ ಹಿರಿದಿದ್ದಾನೆ, ನಿಜ. ಆದರೆ ಬಹುಮಟ್ಟಿಗೆ ಇದು ಸಂಕುಚಿತ ಧರ್ಮಾಂಧತೆಯಿಂದಲ್ಲ, ಮತವೈಷಮ್ಯದಿಂದಲ್ಲ. ಮುಸ್ಲಿಮ-ಮುಸ್ಲಿಮರೂ, ಹಿಂದು-ಹಿಂದುಗಳೂ ಎಂತಹ ಪ್ರಮಾಣದಲ್ಲಿ ಹಲವಾರು ಬಾರಿ ಸ್ವಯುದ್ಧ ಕಲಹದಲ್ಲಿ ಪ್ರವೃತ್ತರಾದರೊ ಅಂತಹ ಪ್ರಮಾಣದಲ್ಲಿಯೆ ಮುಸ್ಲಿಮ-ಹಿಂದುಗಳಲ್ಲಿಯೂ ಸಮರ ನಡೆದಿದೆ. ಆದರೆ ಮತಾಂಧತಾಮೂಲವಾದ ವೈರವೈರಸ್ಯಗಳು ಪ್ರತಿದ್ವಂದ್ವಿಗಳಾಗಿದ್ದ ಅಂದಿನ ಹಿಂದು ಅಥವಾ ಮುಸ್ಲಿಮ ಯೋಧರ ಮನಸ್ಸನ್ನು ಬಹಿರಂಗವಾಗಿ ಹೊಕ್ಕು ಕೆಡಿಸಲಿಲ್ಲವೆಂದೇ ಹೇಳಬಹುದು.

ಆ ನಿಡುಗಾಲದ ಸೆಣಸಿಕೆಯ ಮೂಲಕಾರಣವೆ ಬೇರೆ. ಇದು ಅರಬ್ಬೀ ವರ್ತಕ ಜನರು ಸಿಂಧೂ ಪ್ರಾಂತದಲ್ಲಿ ನೆತ್ತರೊದಲು ಕೈಕೊಂಡ, ಆಕ್ರಮಣಶೀಲವಾದ ವಾಣಿಜ್ಯಾಭಿಲಾಷೆಯಿಂದ ಪ್ರೇರಿತವಾದದ್ದು. ವಿಜಿಗೀಷುವಾದ ಘಜ್ನಿ ಮಹಮೂದನು ಖುರಾಸಾನ್

ಮೊದಲನೆಯ ಮುದ್ರಣ—೧೯೪೮

ಬೆಂಗಳೂರಿನ ಬಿ. ಬಿ. ಡಿ. ಪವರ್ ಪ್ರೆಸ್ಸಿನಲ್ಲಿ
ಎಂ. ಹನುಮಂತ ರಾಯರಿಂದ ಮುದ್ರಿತವಾಯಿತು

ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು
ಇವರಿಂದ ಪ್ರಕಟಿತವಾಯಿತು

# ಮುನ್ನುಡಿ

ಭರತವರ್ಷದ ರಾಜಕೀಯ ಇತಿಹಾಸವನ್ನು 'ನಿರಂತರವಾದ ಸುಲಿಗೆಯ ಕಥೆ' ಎಂಬೊಂದು ಮಾತಿನಲ್ಲಿ ಬಣ್ಣಿಸಬಹುದು. ಈ ವರ್ಣನೆ ಮುಸ್ಲಿಂ ಪ್ರಾಬಲ್ಯದ ಮಧ್ಯಕಾಲದ ಇತಿಹಾಸಕ್ಕೂ ಅನ್ವಯಿಸುತ್ತದೆ. ಮುಸ್ಲಿಮರಿಗೂ ಇಲ್ಲಿಯ ಆರ್ಯಧರ್ಮೀಯರಿಗೂ (ಇಲ್ಲಿ ಆರ್ಯ ಅಥವಾ ಹಿಂದು ಶಬ್ದ ವಿಶಾಲಾರ್ಥದಲ್ಲಿ ಜೈನ ಬೌದ್ಧರಿಗೂ ಅನ್ವಯಿಸುವಂತೆ ಪ್ರಯೋಗವಾಗಿದೆ.) ನಡೆದ ಹೋರಾಟಕ್ಕೆ ನಿಲುಗಡೆಯಿಲ್ಲವೇನೊ ಎಂಬಂತೆ ಹೊರನೋಟಕ್ಕೆ ಕಾಣುತ್ತದೆ. ಎಲ್ಲ ಕಾಲದ, ಎಲ್ಲ ದೇಶಗಳ, ಎಲ್ಲ ಮಾನವ ಜನಾಂಗಗಳ ಕಥೆಯಂತೆಯೆ ಈ ಮಧ್ಯಯುಗದ ಭಾರತೇತಿಹಾಸವೂ ರಾಜಕೀಯ ಸಾರ್ವಭೌಮತ್ವಕ್ಕಾಗಿ ನಡೆದ ರಕ್ತರಂಜಿತವೂ ದಾರುಣವೂ ಆದ ಸಮರ ಕಥೆ. ಈ ಕಥೆ ಭೀಷಣ ರಕ್ತಪಾತದ ಕಥೆಯಾದರೂ ಪೃಥ್ವಿಯ ಅನ್ಯರಾಷ್ಟ್ರಗಳಲ್ಲಾದಂತೆ ಈ ಆರ್ಯಭೂಮಿಯಲ್ಲಿ ಧಾರ್ಮಿಕ ವಿರಸತೆಯಿಂದಾಗಲಿ ಜಾತೀಯ ಅಸಹನೆಯಿಂದಾಗಲಿ ರಕ್ತಪ್ಲಾವಿತವಾಗಿಲ್ಲವೆಂದು ಬಹುಮಟ್ಟಿಗೆ ಹೇಳಬಹುದಾಗಿದೆ. ಹಿಂದು ಮುಸ್ಲಿಮನ ಮೇಲೆ, ಮುಸ್ಲಿಂ ಹಿಂದುವಿನಮೇಲೆ ಕತ್ತಿ ಹಿರಿದಿದ್ದಾನೆ, ನಿಜ. ಆದರೆ ಬಹುಮಟ್ಟಿಗೆ ಇದು ಸಂಕುಚಿತ ಧರ್ಮಾಂಧತೆಯಿಂದಲ್ಲ, ಮತವೈಷಮ್ಯದಿಂದಲ್ಲ. ಮುಸ್ಲಿಮ-ಮುಸ್ಲಿಮರೂ, ಹಿಂದು-ಹಿಂದುಗಳೂ ಎಂತಹ ಪ್ರಮಾಣದಲ್ಲಿ ಹಲವಾರು ಬಾರಿ ಸ್ವಯೂಥ ಕಲಹದಲ್ಲಿ ಪ್ರಮತ್ತರಾದರೊ ಅಂತಹ ಪ್ರಮಾಣದಲ್ಲಿಯೆ ಮುಸ್ಲಿಮ-ಹಿಂದುಗಳಲ್ಲಿಯೂ ಸಮರ ನಡೆದಿದೆ. ಆದರೆ ಮತಾಂಧತಾಮೂಲವಾದ ವೈರವೈರಸ್ಯಗಳು ಪ್ರತಿದ್ವಂದ್ವಿಗಳಾಗಿದ್ದ ಅಂದಿನ ಹಿಂದು ಅಥವಾ ಮುಸ್ಲಿಮ ಯೋಧರ ಮನಸ್ಸನ್ನು ಬಹಿರಂಗವಾಗಿ ಹೊಕ್ಕು ಕೆಡಿಸಲಿಲ್ಲವೆಂದೇ ಹೇಳಬಹುದು.

ಆ ನಿಡುಗಾಲದ ಸೆಣಸಿಕೆಯ ಮೂಲಕಾರಣವೆ ಬೇರೆ. ಅದು ಅರಬ್ಬೀ ವರ್ತಕ ಜನರು ಸಿಂಧೂ ಪ್ರಾಂತದಲ್ಲಿ ಮೊತ್ತಮೊದಲು ಕೈಕೊಂಡ ಆಕ್ರಮಣಶೀಲವಾದ ವಾಣಿಜ್ಯಾಭಿಲಾಷೆಯಿಂದ ಪ್ರೇರಿತವಾದದ್ದು. ವಿಜಿಗೀಷುವಾದ ಘಜ್ನೀ ಮಹಮೂದನು ಖುರಾಸಾನ್

ತುರ್ಕಿಸ್ಥಾನಗಳನ್ನು ತೊತ್ತಳದುಳಿದಂತೆಯೇ ಈ ಸ್ವರ್ಣಭೂಮಿಯನ್ನು ಸೂರೆಗೊಂಡದ್ದೂ ತನ್ನ ರಾಜ್ಯದ ರಾಜಧಾನಿಯ ಶೃಂಗಾರವೈಭವ ವರ್ಧನೆಗಾಗಿ; ಆಫ್ಘನ್ನರು ತಂಡೋಪತಂಡವಾಗಿ ಇಲ್ಲಿಗೆ ವಲಸೆ ಬಂದದ್ದು ಮಧ್ಯ ಏಷ್ಯಾನಿವಾಸಿಗಳ ಒತ್ತಡದ ಫಲವಾಗಿ; ಪ್ರಾಚೀನ ಯುಗದ ಆರ್ಯರ ಆಗಮನದ ಕಥೆಯೂ ಇದರಂತೆಯೆ. ದಿಲ್ಲೀಶ್ವರ ಬಾಬರನ ಆತ್ಮವೃತ್ತವೂ ಈ ಮಾತಿನ ಸತ್ಯತೆಯನ್ನೇ ಸಮರ್ಥಿಸುತ್ತದೆ. ಸಾರಾಂಶ: ಮುಸ್ಲಿಮರು ಯಾವುದೋ ಒಂದು ಒತ್ತಡದ ಫಲ ವಾಗಿಯೊ, ಹಣದಾಸೆಯಿಂದಲೊ, ನೆಲದಾಸೆಯಿಂದಲೊ ಇಲ್ಲಿ ಕಾಲೂರಿ, ನೆಲಸಿ ನಿಂತು, ತಮ್ಮ ಪ್ರಭುತ್ವ ಕಟ್ಟಿದ್ದು; ಕಟ್ಟುವಾಗ ಅನಿವಾರ್ಯ ವಾಗಿ ನಡೆದ ಯುದ್ಧಗಳಿಗೆ ಮೂಲಕಾರಣಗಳು ಬೇರೆಯಾಗಿದ್ದರೂ, ಅವುಗಳಲ್ಲಿ ಮತಾವೇಶದ ಬಣ್ಣದೆಳೆಯೂ ಸೇರಿಕೊಂಡದ್ದುಂಟು.

ಹೀಗೆ ಭಾರತ ಚರಿತ್ರೆ ಸುಲಿಗೆ ಸೆಣಸುಗಳ ಕಥೆ ಎಂಬುದು ವಾಸ್ತವವಾದದ್ದು. ಆದರೆ ಈ ಪ್ರಾಚೀನರಾಷ್ಟ್ರದ ಸುದೀರ್ಘಾವಧಿಯ ಚರಿತ್ರೆಯನ್ನು ಅನ್ಯ ದೇಶಗಳ ಚರಿತ್ರೆಯೊಡನೆ ಹೋಲಿಸಿದಲ್ಲಿ, ಇಲ್ಲಿ ನಡೆದ ಯುದ್ಧಗಳ ಸಂಖ್ಯೆ ಅತೀವ ಅಲ್ಪವೆನಿಸೀತು. ಇದನ್ನು ಸಮರ ಕಥೆ ಎನ್ನುವುದಕ್ಕಿಂತಲೂ ಒಂದು ಸಮನ್ವಯಸಾಧನೆಯ ಕಥೆ, ಆರ್ಯ ಸಂಸ್ಕೃತಿಯ ನಿರಂತರವೂ ಅವ್ಯಾಹತವೂ ಅದ್ವಿತೀಯವೂ ಆದ ದಿಗ್ವಿ ಜಯ ಪರಂಪರೆಯ ಕಥೆ ಎನ್ನುವುದು ಹೆಚ್ಚು ಸಮಂಜಸವಾದೀತೆಂದು ವಿಚಾರಮತಿಗೆ ವೇದ್ಯವಾಗುತ್ತದೆ. ಹಿರಿಯ ಸಂಸ್ಕೃತಿಯ ಅಕ್ಷಯ ನಿಧಿಯಾದ ಪ್ರಾಚೀನ ಗ್ರೀಸ್ ದೇಶ ರೋಮನರ ಪಶುಬಲಕ್ಕೆ ಮಣಿ ಯಿತು, ರಾಜಕೀಯದಲ್ಲಿ. ಆದರೆ ವಿಜಿತ ಗ್ರೀಕ್ ಸಂಸ್ಕೃತಿಯ ಶ್ರೀಮಂತ ವೈಭವಕ್ಕೆ ಆ ವಿಜೇತ ರೋಮನ್ ಮಸ್ತಕ ಗೌರವದಿಂದ ಮಣಿಯ ಬೇಕಾಯಿತು. ಭಾರತ ವಿಜೇತರ ಸ್ಥಿತಿಯೂ ಹಾಗೆಯೆ ಆಯಿತು. ರಣರಂಗದಲ್ಲಿ ಹಿಂದುಗಳು ಮುಸ್ಲಿಮರ ಆಘಾತಕ್ಕೆ ಬಾಗಿದ್ದುಂಟು; ರಣಲಕ್ಷ್ಮಿ ಮುಸ್ಲಿಮರಿಗೆ ಆಗಾಗ್ಗೆ ವಿಜಯಮಾಲೆ ಹಾಕಿದ್ದುಂಟು. ರಾಜಕೀಯ ರಂಗದಲ್ಲಿ ಮುಸ್ಲಿಂ ಸಾರ್ವಭೌಮತ್ವಕ್ಕೆ ಹಿಂದೂ ಸ್ವಾಧೀನತೆ ಕೆಲಕಾಲ ಸೆರೆಯಾದುದುಂಟು. ಆದರೆ ಆರ್ಯ ಸಂಸ್ಕೃತಿಗೆ

ಮುಸ್ಲಿಮರು ಚಿರಕಾಲವೂ ಸೆರೆಯಾಗಿ ಹೋದರು. ಪರಸ್ಪರ ಘರ್ಷಣೆಯಿಂದ ದೊರೆತ ತಾತ್ಕಾಲಿಕವಾದ ಲೌಕಿಕ ಜಯಕ್ಕಿಂತಲೂ ಒಂದರ ಹೃದಯಕಾಂತಿಗೆ ಮತ್ತೊಂದು ಮಾರುಹೋದ ಗೆಲ್ಲವೆ ಶಾಶ್ವತವಲ್ಲವೆ?

ಇಂದು ಪ್ರಚಾರದಲ್ಲಿರುವ ಭರತಖಂಡದ ಇತಿಹಾಸ ಗ್ರಂಥಗಳೆಲ್ಲ ಹಿಂದೂ ಮುಸ್ಲಿಮರಿಗೆ ನಡೆದ ಹೋರಾಟಗಳಿಗೂ ನೈಸರ್ಗಿಕ ಕಾರಣಕ್ಕಾಗಿ ಬಂದ ಭಿನ್ನತೆಗಳಿಗೂ ಅಸ್ವಾಭಾವಿಕವಾದ ಪ್ರಾಧಾನ್ಯಕೊಟ್ಟಿವೆ. ಆದರೆ ಆ ಸಮರ ಕಥೆಯನ್ನು ನೆನೆಯುವ ಹವ್ಯಾಸದಲ್ಲಿ ಎರಡೂ ಜನ ಕೂಡಿ ಬಾಳಿ ಕಟ್ಟಿದ ಸಮರಸ ಕಥೆಯನ್ನು ಮರೆತಿವೆ, ಇಲ್ಲ ಕೈಬಿಟ್ಟಿವೆ. ರಾಜಮನೆತನಗಳ ಉದಯಾಭ್ಯುದಯ ಪತನಗಳ ಕಥೆಯನ್ನು ವಿಸ್ತೃತ ರೂಪದಲ್ಲಿ ಲಂಬಿಸಿ ಉಲ್ಲೇಖಿಸುತ್ತವೆ; ಹೊರನಾಡುಗಳಿಂದ ತೆರೆತೆರೆಯಾಗಿ ಬಂದ ತಂಡ ತಂಡಗಳ ವಿಜಯಯಾತ್ರಾ ಪರಂಪರೆಗಳನ್ನೂ ಉಗ್ರ ದಬ್ಬಾಳಿಕೆ ಸುಲಿಗೆ ಕೊಲೆ ಕ್ರೌರ್ಯಗಳನ್ನೂ ಒತ್ತಿ ಒತ್ತಿ ಚಿತ್ರಿಸುತ್ತವೆ. ಆದರೆ ಇಲ್ಲಿ ನೆಲಸಿ ನಿಂತ ಜನ ಜನಾಂಗಗಳ ಘನಿಷ್ಠವಾದ ಸಂಸರ್ಗದಿಂದ ಅನಿವಾರ್ಯವಾಗಿ ಆವಿರ್ಭವಿಸಿದ ಸಂಸ್ಕೃತಿ-ಶ್ರೀ ಸಂವರ್ಧನೆಯ ಅಮೋಘವಾದ ಆಖ್ಯಾನದ ಉಲ್ಲೇಖವೆ ಸಾಕಷ್ಟುಪ್ರಮಾಣದಲ್ಲಿ ನಡೆದಿಲ್ಲವೆಂದು ವಿಷಾದದಿಂದ ಹೇಳಬೇಕಾಗಿದೆ.

ಪ್ರಚಲಿತ ಭಾರತೇತಿಹಾಸ ಗ್ರಂಥಗಳಲ್ಲಿ ಉಲ್ಲೇಖನಾಭಾವದಿಂದಾದ ಅನಾಹುತ ಅಷ್ಟಿಷ್ಟಲ್ಲ. ಈಗ ನಮಗೆ ಬಂದಿರುವ ಸಂಸ್ಕೃತಿ ಪರಂಪರೆ ಶುದ್ಧ ಹಿಂದೂ ಸಂಸ್ಕೃತಿ, ಅದು ವಿಕಾಸಗೊಂಡದ್ದು ಮುಸ್ಲಿಂ ಪೂರ್ವದ, ಅಚ್ಚ ಹಿಂದೂ ಯುಗದಲ್ಲಿ—ಎಂಬ ಅಪೂರ್ಣ ಭಾವನೆ ಹಿಂದುಗಳನೇಕರಲ್ಲಿ ಮನೆಮಾಡಿದೆ. ಮುಸ್ಲಿಮರಿಗೂ ತಮ್ಮ ಸಂಸ್ಕೃತಿಯನ್ನು ಕುರಿತು ಇದೇ ತೆರನಾದ ಭ್ರಾಂತಿ ಬಲವಾಗಿದೆ.

ಈ ಶತಮಾನಗಳ ದೀರ್ಘಾವಧಿಯಲ್ಲಿ ಎರಡೂ ಜನರ ಸಂಸ್ಕೃತಿಗಳೂ ಯಮಳ ನದಿಗಳಂತೆ ಜೊತೆ ಜೊತೆಗೆ ಸಾಗಿಯೂ ಒಂದನ್ನೊಂದು ವರ್ಧಿಸದೆ, ಒಂದರ ಮುನ್ನಡೆಗೆ ಮತ್ತೊಂದು ನೆರವಾಗದೆ ಒಂದನ್ನೊಂದು ಸಂಗಮಿಸದೆ ಅಪರಿಚಿತರಂತೆ ಮಾರ್ಮಲೆತು ಮೊಗದಿರುಹಿ ದೂರ ದೂರವೆ ನಿಲ್ಲುವುದು ಅಸಾಧ್ಯವೆಂಬ ಮಾತು ಎಂತಹರಿಗೂ ಸುಸಂವೇದ್ಯ.

ಆದರೆ ಇಂದು ಏನಾಗಿದೆ? ಹಿಂದೂಗಳು-ಮುಸ್ಲಿಮರು ಇಬ್ಬರಲ್ಲೂ—ವಿಶೇಷತಃ ಇಸ್ಲಾಂ ಬಂಧುಗಳಲ್ಲಿ—ಪ್ರತ್ಯೇಕತಾ ಮನೋಭಾವ ಉಲ್ಬಣವಾಗಿ, ಪರಸ್ಪರ ಸಂದೇಹಕ್ಕೂ ತಿರಸ್ಕಾರಕ್ಕೂ ವಿದ್ವೇಷ ದೃಷ್ಟಿಗೂ ಅವಕಾಶವಿತ್ತಿರುವುದರ ಮೂಲಕಾರಣ, ಮುಖ್ಯವಾಗಿ ಇತಿಹಾಸ ಬುದ್ಧಿಲೋಪ. ಇಂದಿನ ಭರತಖಂಡದ ಸಂಸ್ಕೃತಿವಿಕಾಸಕ್ಕೆ ಪ್ರೇರಕ ಶಕ್ತಿ ಇಲ್ಲಿಯ ಹಿಂದೂ ಮುಸ್ಲಿಮಾದಿ ಎಲ್ಲ ಜನತೆಯ ಮಧುರ ಮೈತ್ರಿ ಸಹಕಾರಗಳೆಂಬುದರ ಅರಿವಿಲ್ಲದಿರುವುದೆ ನಮ್ಮ ಬೀಳಿಗೆ ಕಾರಣವಾಗಿದೆ. ಈ ಅಜ್ಞಾನ ಕಾರ್ಕೋಟಕ ತನ್ನ ಪ್ರತ್ಯೇಕತಾಭಾವದ ಹೆಡೆ ಮನ್ನೆತ್ತಿ ಇಂದು ರಾಜಕೀಯದಲ್ಲಿ ವಿರೂಪಕಾರಕವಾದ ಮಾರಕ ವಿಷವನ್ನು ಕಾರಿ, ಅಖಂಡ ರಾಷ್ಟ್ರಪುರುಷನನ್ನು ಇಬ್ಭಾಗವಮಾಡಿದೆ.

ಇದು ರಾಷ್ಟ್ರದ ದುರದೃಷ್ಟ. ಭಾರತಮಹಾಮಾನಸದಲ್ಲಿ ಆರ್ಯೇಯ ಸಂಸ್ಕೃತಿಯೊಡನೆ ಅನ್ಯ ಸಂಸ್ಕೃತಿಗಳು ಮಧುರವಾಗಿ ಕೂಡಿ, ಕೊಂಡು, ಕೊಟ್ಟು, ಬೆಳೆದು, ಬೆಳಗಿ ಬಾಳಿರುವುದನ್ನು ಅರಿಯದೆ ಹೋದುದು ನಿಜವಾಗಿಯೂ ನಮ್ಮ ನಾಡಿನ ದೌರ್ಭಾಗ್ಯ. ವಿಚಾರಿಸಿ ನೋಡಿದರೆ ಒಂದು ರಾಷ್ಟ್ರದ ಇತಿಹಾಸದ ತಿರುಳಿರುವುದು ಅಲ್ಲಿ ಸಂಧಿಸಿದ ವಿವಿಧ ಜನಾಂಗಗಳ ಸಮರಸ ಜೀವನದಿಂದ ಹೊಮ್ಮುವ ಸಂಸ್ಕೃತಿಯ ಸಾರಸೌರಭದಲ್ಲಿ.

ಅಂತೆಯೆ ಭರತವರ್ಷವು ಇತಿಹಾಸ ಪೂರ್ವಕಾಲದಿಂದಲೂ ನಾನಾ ಜನಾಂಗಗಳ ನಾಗರಿಕತೆ ಸಭ್ಯತೆಗಳ ಸುಂದರ ಸಮುಚ್ಚಯ ಮಂದಿರವಾಗಿದೆ. ತನ್ನದೊಂದು ಅವಿಚ್ಛಿನ್ನ ಇತಿಹಾಸಪರಂಪರೆಯಿರುವ ಪ್ರಾಚೀನ ನಾಗರಿಕತೆಯೆಂದರೆ—ಪ್ರಾಯಃ ಚೀನವನ್ನು ಬಿಟ್ಟರೆ—ಈ ಭರತಖಂಡದ ನಾಗರಿಕತೆಯೆ. ಉಳಿದ ನಾಗರಿಕತೆಗಳು ಹಲವು ಹೇಳ ಹೆಸರಿಲ್ಲದಂತೆ ಅಳಿದಿವೆ. ಈ ಭಾರತೀಯ ಆರ್ಯಸಂಸ್ಕೃತಿ ಉಳಿದದ್ದು ಹೆಚ್ಚಲ್ಲ; ಉಳಿದು, ವರ್ಧಿಷ್ಣುವಾಗಿ, ಆತ್ಮವರ್ಚಸ್ಸಿನಿಂದ ಬೆಳಗಿದುದು ಇದರ ಹಿರಿಮೆ. ಶಕಹೂಣಾದಿ ನೂರಾರು ಭಿನ್ನಭಿನ್ನ ಜನಾಂಗಗಳು ಒತ್ತಿ ಬಂದು ಸೆಣಸಿ, ರಕ್ತ ಸುರಿಸಿ, ಕೊನೆಗೆ ಈ ಸಂಸ್ಕೃತಿಗೆ ಮಾರುಹೋಗಿ, ಮಾರ್ಪಟ್ಟು, ರಕ್ತಬಂಧುಗಳಾಗಿ ಲೀನವಾಗಿವೆ, ಈ ಪುಣ್ಯ ಸನಾತನ

ಆರ್ಯಭೂಮಿಯಲ್ಲಿ! ಭಾರತ ರಾಷ್ಟ್ರಶಕ್ತಿ ಆ ಆಸ್ತಿಯನ್ನು ನಿಜ ಸಂತಾನದಂತೆ ಕಂಡು. ವಿಶ್ವಪ್ರೇಮದ ತನ್ನ ಮಡಿಲಲ್ಲಿ ಹಾಕಿಕೊಂಡಿದ್ದಾಳೆ. ಭೌತವಾದ ರಾಜಕೀಯ ಕರ್ಮರಂಗದಲ್ಲಿ ಯಾವೊಂದು ನೆರೆನಾಡಿನ ನೆತ್ತಿಯ ಮೇಲೆಯಾಗಲಿ ತನ್ನ ದೋರ್ದಂಡ ದರ್ಪದ ವಿಜಯವೈಜಯಂತಿಯನ್ನು ಮೆರಸದಿದ್ದರೂ, ಎಲ್ಲ ದಾಳಿಗಳನ್ನೂ ಎಲ್ಲ ಘರ್ಷಣೆಗಳನ್ನೂ ದಿಟ್ಟತನದಿಂದ ಎದುರಿಸಿ, ಸಾಗರೋಪಮವಾಗಿ ಮೇಲ್ವಾಯ್ದು ಬಂದ ಎಲ್ಲ ವಿಜೇತ ಜನಾಂಗಗಳ ಸಂಸ್ಕೃತಿ ಸತ್ವವನ್ನೂ ಅಗಸ್ತ್ಯ ಮಹಾಮುನಿಯಂತೆ ಆಪೋಶಿಸಿ, ಐಕ್ಯವಾಗಿಸಿ, ಆತ್ಮಶ್ರೀಯಿಂದ ಬೆಳಗಿ, ಹಿಮಾಚಲದಂತೆ ಅಚಲವಾಗಿ ನಿಂತ ಈ ಸನಾತನವೂ ನಿತ್ಯ ನೂತನವೂ ಆದ ಭಾರತೀಯ ಸಂಸ್ಕೃತಿಯ ಜೀವಸತ್ವ ಅಡಗಿರುವುದೆಲ್ಲಿ? ತನ್ನತನಕ್ಕೆ ಚ್ಯುತಿ ಬಾರದಂತೆ ಕಾಲಕ್ಕೆ ತಕ್ಕಂತೆ ಪರಿವರ್ತನಶೀಲವಾಗಿ ಹೊಸತನ್ನು ಹೊಂದಿಸಿಕೊಳ್ಳುವ ಒಂದು ಮನೋವೈಶಾಲ್ಯದಲ್ಲಿ: ಭಿನ್ನತೆಗಳಲ್ಲಿ ಏಕತೆಯನ್ನು ಕಾಣುವ ಒಂದು ಸಮಷ್ಟಿದೃಷ್ಟಿಯಲ್ಲಿ; ಸಾರ್ವಕಾಲಿಕವೂ ಸಾರ್ವ ದೇಶಿಕವೂ ಆದ ಒಂದು ಉದಾರ ವಿಶ್ವಮತ ತತ್ವದಲ್ಲಿ; ಎಲ್ಲಕ್ಕೂ ಮಿಗಿಲಾಗಿ, ಸರ್ವಗ್ರಾಹಿಯಾದ ಸಚ್ಚಿದಾನಂದ ಸಾಕ್ಷಾತ್ಕಾರದ ಪೂರ್ಣಯೋಗದ ಸ್ವಾನುಭವಸಾಕ್ಷಿಯಲ್ಲಿ!

ಬೃಹದ್ ವಿಶಾಲವಾದ ಭರತಖಂಡದ ವಿರಾಡ್ರೂಪಿಯಾದ ಪ್ರಕೃತಿ ಸೌಂದರ್ಯದಲ್ಲಿ ದೃಷ್ಟಿ ಗೋಚರವಾಗುವ ಒಂದು ವೈವಿಧ್ಯ ಈ ರಾಷ್ಟ್ರದ ಸಂಸ್ಕೃತಿಯಲ್ಲಿಯೂ ಸಹಸ್ರ ಸಹಸ್ರ ವರ್ಣರಂಜಿತವಾಗಿ ವೈಭೋರಿದೆ. ಈ ಸಂಸ್ಕೃತಿ ವಿಸ್ತಾರದಲ್ಲಿ ಆಳದಲ್ಲಿ ಹಿಂದೂ ಮಹಾಸಾಗರಕ್ಕೆ ಹೊಯ್‌ಕಯ್: ಔನ್ನತ್ಯದಲ್ಲಿ ಭವ್ಯತೆಯಲ್ಲಿ ಸಹ್ಯಾದ್ರಿ ವಿಂಧ್ಯ ಹಿಮಾಚಲ ಸ್ಪರ್ಧಿ: ಗರಿಮೆಯಲ್ಲಿ ಗೌರೀಶಂಕರದಂತೆ ಗಗನ ವಿಹಾರಿ. ಇದು ಒಬ್ಬ ವ್ಯಕ್ತಿಯ ವಾಣಿಯಲ್ಲ. ಈ ಆ ಸಂಘದ ಕುಬ್ಜ ದೃಷ್ಟಿಯಲ್ಲ. ಇದು ಅನುಭವ ಸಮೂಹಗಳ ಅಪಾರವಾದ ಸಮಷ್ಟಿ ದೃಷ್ಟಿ. ಇಲ್ಲಿ ಪ್ರಕೃತಿಶಕ್ತಿಗಳ ಉಪಾಸನೆಯಿಂದ ಹಿಡಿದು ನಿರ್ಗುಣ ಬ್ರಹ್ಮಾರಾಧನೆಯ ವರೆಗೆ ಎಲ್ಲ ಶ್ರದ್ಧೆಗೂ ಸ್ಥಾನವುಂಟು. ಇಲ್ಲಿ ಜೈನ ನಿರೀಶ್ವರವಾದಕ್ಕೆ ಎಡೆಯಿರುವಂತೆ ಬೌದ್ಧವಿಜ್ಞಾನವಾದಕ್ಕೂ

ಚಾರ್ವಾಕ ನಾಸ್ತಿಕವಾದಕ್ಕೂ ಅವಕಾಶವಿದೆ. ಮುಸ್ಲಿಮನಾದರೆಯೇ ಮುಕ್ತಿ, ಕ್ರೈಸ್ತನಾದರೆಯೇ ಮೋಕ್ಷ, ಮೋಕ್ಷಕ್ಕೆ ಮತಾಂತರೀಕರಣವೇ ಮಾರ್ಗ ಎಂಬ ಹೃದಯಾಂಧದುರಭಿಮಾನ ಇಲ್ಲಿ ಸಲ್ಲದು. ಅವನಾವ ಮತಾನುಯಾಯಿಯಾಗಿರಲಿ ಪರಿಶುದ್ಧಾತ್ಮನಾದ ಭಕ್ತನಿಗೆ ಈಶನೊಲಿವುದು ಖಂಡಿತವೆಂಬ ಶ್ರದ್ಧೆಯುಳ್ಳದ್ದು. ಎಲ್ಲವನ್ನೂ ಒಳಕೊಳ್ಳುವ ಈ ಸಂಸ್ಕೃತಿಧರ್ಮದ ಕಡಲುಹರಹಿನ ಔದಾರ್ಯ "ಏಕಂ ಸದ್ವಿಪ್ರಾಃ ಬಹುಧಾ ವದಂತಿ" ಎಂಬ ವೇದೋಕ್ತಿಯಲ್ಲಿ ಸೂತ್ರರೂಪದಲ್ಲಿ ಸೊಗದೋರಿದೆ. ಎಲ್ಲ ಧರ್ಮಶ್ರದ್ಧೆಗಳಲ್ಲಿಯೂ ಸತ್ಯದ ಕಿಡಿಯಿದೆ. ಅವು ಭಿನ್ನ ಭಿನ್ನ ದೃಷ್ಟಿಗೆ ಕಂಡ ವಿರಾಟ್ ಸತ್ಯದ ವಿವಿಧ ಮುಖಗಳು ಮಾತ್ರ. ಶೈವರು ಶಿವನೆಂದಾಗಲಿ, ವೇದಾಂತಿಗಳು ಬ್ರಹ್ಮನೆಂದಾಗಲಿ, ಬೌದ್ಧರು ಬುದ್ಧನೆಂದಾಗಲಿ, ನೈಯಾಯಿಕರು ಕರ್ತನೆಂದಾಗಲಿ, ಮೀಮಾಂಸಕರು ಕರ್ಮ ಎಂದಾಗಲಿ, ಜೈನರು ಅರ್ಹತ್ ಎಂದಾಗಲಿ ಕರೆಯಲಿ. ಅವರು ಉಪಾಸನೆ ಸಲ್ಲಿಸುವ ಸರ್ವ ವಿಭುಶಕ್ತಿ ಒಂದೆಯೆ ಸತ್ಯ.

ಇಂಥ ಸಂಸ್ಕೃತಿಯು ನರುಗಂಪು ಬಹು ಹಿಂದೆಯೆ ಭಾರತದ ಹೊರಗಡೆ ಎಲ್ಲ ದೂರದೇಶಗಳ ಮೂಲೆ ಮೂಲೆಗೂ ಹಬ್ಬಿತು. ಇಲ್ಲಿ ಹುಟ್ಟಿದ ಬೌದ್ಧಮತದ ವಿಚಾರ ಧಾರೆ ಅನ್ಯದೇಶಗಳನ್ನು ಹೊಕ್ಕಂತೆ ಪಶ್ಚಿಮದಲ್ಲಿ ಅರೇಬಿಯಾ, ಈಜಿಪ್ಟ್ ಮುಂತಾದ ಮುಸ್ಲಿಂ ರಾಜ್ಯಗಳನ್ನೂ ಸೋಕಿತು. ಕುರ್ರಾ ತತ್ವಮಾತೃಕೆಯಿಂದ ಸಂಭವಿಸಿದ ಸೂಫಿ ಪಂಥ ಗ್ರೀಕ್ ತತ್ವಪ್ರಭಾವಕ್ಕೆ ಒಳಗಾದಂತೆಯೇ ಹಿಂದೂ ವಿಚಾರಧಾರೆಯಿಂದಲೂ ರೂಪಾಂತರ ಹೊಂದಿದೆ. ಆದ್ದರಿಂದಲೇ ಸೆಮೆಟಿಕ್ ಮತಗಳಲ್ಲಿ ಕಾಣಬರದ ಬ್ರಹ್ಮಾತ್ಮ ಐಕ್ಯದ ಮಾತು ಸೂಫಿ ಪಂಥದಲ್ಲಿ ಕಂಡು ಬರುತ್ತದೆ. ಈ ಅಧ್ಯಾತ್ಮ ತತ್ವವಾಹಿನಿಯಂತೆಯೆ ಇತರ ತತ್ವವಾಹಿನಿಗಳೂ ಭಾರತದಿಂದ ಹೊರಗೆ ಹರಿದು ಅರಬಸ್ಥಾನ ಮುಂತಾದ ಮಧ್ಯಪ್ರಾಚ್ಯದೇಶಗಳ ಮೇಲೆ ಪ್ರಭಾವ ಬೀರಿದ್ದುವು.

ಇಂಥ ಪ್ರಬಲವರ್ಚಸ್ಸಿನ ಭಾರತ ಸಂಸ್ಕೃತಿಯು ಪ್ರದೀಪಕಾಂತಿ ಭಾರತಕ್ಕೆ ಇಸ್ಲಾಂ ಮತ ಸಂಸ್ಕೃತಿಗಳು ಅಡಿಯಿಟ್ಟ ಕಾಲಕ್ಕೆ ಸ್ವಲ್ಪ ಮಟ್ಟಿಗೆ ಕಳೆಗುಂದಿತ್ತು. ಈ ಸಂಸ್ಕೃತಿಯು ಔದಾರ್ಯದ ಫಲವಾಗಿಯೆ

ಏಕದೇವತಾರಾಧನೆಯು ಜೊತೆಜೊತೆಗೆ ಅನೇಕ ಕ್ಷುದ್ರದೇವತೆಗಳ ಉಪಾಸನೆಯೂ ನಾಡಿನಲ್ಲಿ ಸರ್ವತ್ರ ಪ್ರಚಲಿತವಾಗಿ, ಜನತೆ ಧರ್ಮದ ತಿರುಳನ್ನೇ ಮರೆತಿತ್ತು. ವರ್ಣವ್ಯವಸ್ಥೆ ವಿರಸಕ್ಕೆ ಬಿಟ್ಟುಕೊಂಡು ಅವ್ಯವಸ್ಥೆಯಾಗಿ ಪರಿಣಮಿಸಿತ್ತು. ಒಂದು ಕಾಲಕ್ಕೆ ಸಮಾಜದ ಭದ್ರತೆಗೆ ರಕ್ಷಾಪ್ರಾಯವಾಗಿದ್ದ ವರ್ಣವ್ಯವಸ್ಥೆ ಬರುಬರುತ್ತಾ ಭಾರತೀಯ ಐಕ್ಯತೆಯ ಕೊರಳಿಗೆ ಉರುಲಾಯ್ತು. ಜನ ಉತ್ಸಾಹಹೀನರಾಗಿ ಪೌರುಷಜೀವನವನ್ನು ತ್ಯಜಿಸಿದ್ದರು. ಹೀಗೆ ಆರ್ಯಸಂಸ್ಕೃತಿಯ ಸೂರ್ಯನು ಅಜ್ಞಾನ ರಾಹುಗ್ರಸ್ತನಾಗಿ ನಿಸ್ತೇಜನಾಗಿದ್ದ ಅವಧಿಯಲ್ಲಿ ಅದನ್ನು ಇಸ್ಲಾಂ ಸಂಸ್ಕೃತಿ ಸಂಧಿಸಿತು, ಘರ್ಷಿಸಿತು. ಈ ಘರ್ಷಣೆಯಿಂದ ಆರ್ಯಸಂಸ್ಕೃತಿ ಮತ್ತು ಧರ್ಮಗಳ ಆತ್ಮಪರೀಕ್ಷಣ ನಡೆಯಿತು. ಜೀವನೋತ್ಸಾಹದಿಂದ ಸಪ್ರಾಣವಾದ ನವ ತಾರುಣ್ಯದ ಇಸ್ಲಾಂ ಧರ್ಮದ ಅನುಯಾಯಿಗಳು ಅಧ್ಯಾತ್ಮ ರಂಗಕ್ಕಿಂತಲೂ ಹೆಚ್ಚಾಗಿ ಲೌಕಿಕ ಕರ್ಮರಂಗದಲ್ಲಿ ವಿಜೃಂಭಿಸಿದರು. ಸರ್ವ ಸಮಾನತೆ ಮತ್ತು ಏಕೇಶ್ವರವಾದ—ಇಸ್ಲಾಂ ಧರ್ಮದ ಈ ಎರಡು ಬೀಜಮಂತ್ರಗಳು ಆ ಅನುಯಾಯಿಗಳ ಐಕ್ಯತೆಗೆ ಅಡಿಗಲ್ಲಾಗಿವೆ. ಇಂಥ ನವಧರ್ಮ ಸಂಸ್ಕೃತಿಯ ಸಂಸರ್ಗದಿಂದ ಆರ್ಯ ಧರ್ಮಾನುಯಾಯಿಗಳು ಮಂಪರ ದಿಂದ ಎಚ್ಚತ್ತರು. ಆಲೋಚಿಸಿದರು. ಜೀವನ ಜಿಹಾಸೆಯನ್ನು ತೊರೆದು ಸಾಹಸೋತ್ಸಾಹದಿಂದ ಲೌಕಿಕ ರಂಗಕ್ಕೆ ಇಳಿದರು. ಜಾತಿ ಪಂಥದ ಹರಕುಬೊಂತೆಯನ್ನು ಕಿತ್ತೊಗೆದು ಉಚ್ಚ ನೀಚ ಭೇದರಹಿತ ಉದಾರಭಕ್ತಿಯ ಬಾವುಟವನ್ನು ಬಾಸಿಗೆತ್ತಿದರು. ಹೀಗೆ ಆರ್ಯ ಜೀವನ ಹಸನಾಗಿ, ಆರ್ಯಸಂಸ್ಕೃತಿ-ಶ್ರೀ ವರ್ಧಿಸಲು ಇಸ್ಲಾಂ ಸಂಸ್ಕೃತಿ ಪ್ರಚೋದನೆಯಿತ್ತಿತು.

ಭಾರತೀಯ ಸಂಸ್ಕೃತಿ ಇಸ್ಲಾಂ ಸಂಸ್ಕೃತಿಯ ಮಾನ್ಯಾಂಶವನ್ನು ಬಿಚ್ಚೆದೆಯಿಂದ ಕೊಂಡು ಮೈಗೂಡಿಸಿಕೊಂಡರೂ, ಅದಕ್ಕೆ ಮಣಿಯದೆ, ಅದಕ್ಕೂ ಭಾರತೀಕರಣದ ಮುದ್ರೆಯೊತ್ತಿತು. ಮಾನವಸಮಾಜದಲ್ಲಿ ಭಾವದೊಡನೆ ಭಾವದ ಸಮ್ಮಿಳನವಾದಾಗ ನವಚೈತನ್ಯ ಹೊಮ್ಮುತ್ತದೆ. ಮುಸ್ಲಿಮರ ಜಯಮುಷ್ಟಿ ಕಾಲಕ್ರಮದಲ್ಲಿ ಸಡಲಿ ಹಿಂದೂ-

ಮುಸ್ಲಿಮರಲ್ಲಿ ಚಿಗುರಿದ ಸೌಹಾರ್ದದ ಬೆಳೆಯಲ್ಲಿ ಈ ನವಚೈತನ್ಯವನ್ನು ಗುರುತಿಸಬಹುದಾಗಿದೆ. ಈ ಸಮನ್ವಯಕ್ರಿಯೆ ಪಠಾಣರ ಕಾಲದಿಂದ ಕ್ರಮವಾಗಿ ಸಾಗಿ, ಮೊಗಲರ ಕಾಲಕ್ಕೆ ಮೇಲ್ಮೆಲೆ ಮುಟ್ಟಿತು. ವಿಶೇಷವಾಗಿ ಉತ್ತರಭಾರತದ ಮುಸ್ಲಿಮ-ಹಿಂದುಗಳಿಬ್ಬರ ಜೀವನ ಪದ್ಧತಿಗಳಲ್ಲಿ, ಧರ್ಮರಂಗದಲ್ಲಿ, ಕಲಾಕ್ಷೇತ್ರದಲ್ಲಿ, ಸಾಮಾಜಿಕ ಜೀವನ ದಲ್ಲಿ, ಗೃಹಜೀವನದಲ್ಲಿ, ವೇಷಭೂಷಗಳಲ್ಲಿ ಪರಸ್ಪರ ಪ್ರಭಾವ ಎದ್ದು ಕಾಣುತ್ತದೆ. ಇಸ್ಲಾಂ ಸಂಸ್ಕೃತಿಯ ಭಾರತೀಕರಣದಿಂದ ರೂಪಗೊಂಡ ಈ ನವೀನ ಜೀವನ ರೀತಿಯನ್ನು ಬಾಬರನು "ಹಿಂದೂಸ್ತಾನಿ ರೀತಿ" ಎಂದು ಹೆಸರಿಸಿದ್ದಾನೆ.

ಈ ಇಸ್ಲಾಂ ಸಂಸ್ಕೃತಿಯ ಭಾರತೀಕರಣವು ಲೋಕೋತ್ತರ ಫಲ ವನ್ನೇ ಕೊಟ್ಟಿತು. ದೂರದರ್ಶಿಯಾದ ಮೊಗಲರ ಮೂಲಪುರುಷ ಬಾಬರನು ಈ ಎರಡು ಜನಾಂಗಗಳಲ್ಲಿ ಮೂಡಬೇಕಾದ ಸಹಕಾರವನ್ನು ಗುರುತಿಸಿಕೊಂಡು, ಹಿಂದುಗಳನ್ನು ಪ್ರೀತಿಗೌರವಗಳಿಂದ ನಡಸಿಕೊಂಡ ರೇನೆ ಭಾರತದಲ್ಲಿ ಮೊಗಲಸಾಮ್ರಾಜ್ಯ ಸ್ಥಾಯಿಯಾದೀತೆಂದು ತನ್ನ ಉಯಿಲಿನಲ್ಲಿ ನಚ್ಚಿನ ಪುತ್ರ ಹುಮಾಯೂನನಿಗೆ ಸಂದೇಶವಿತ್ತಿದ್ದಾನೆ. ಈ ಉಪದೇಶದಂತೆ ಅಕ್ಬರ ಸಾಮ್ರಾಟನು ಹಿಂದೂ ಜೀವನದಲ್ಲಿ ಒಂದಾಗಿ ಪಾಲುಗೊಂಡು, ಬರುವ ತಲೆಮಾರುಗಳಿಗೆ ಮೇಲ್ಪಂಕ್ತಿ ಹಾಕಿ ದನು. ಹಿಂದುಗಳ ಮೇಲಿನ ಅಪಮಾನಕರವಾದ ತೆರಿಗೆಗಳನ್ನು ತೆಗೆದು ಹಾಕಿ, ಅವರನ್ನೂ ಆತ್ಮೀಯರನ್ನಾಗಿ ಕಂಡು, ಹಿಂದೂ ಧರ್ಮಪಾಲಕ ರೆಂದು ಹೆಸರಾಂತ ರಾಜಪುತ್ರ ಮನೆತನಗಳೊಡನೆ ಸ್ನೇಹಸಂಬಂಧದ ಜೊತೆಗೆ ರಕ್ತಬಾಂಧವ್ಯವನ್ನೂ ಬೆಳಸಿದನು. ಅವನ ತರುವಾಯ ಬಂದ ಜಹಾಂಗೀರ್, ಷಹಜಹಾನ್ ಇವರು ಹೆಸರಿಗೆ ಮೊಗಲರಾದರೂ ವಾಸ್ತವ ವಾಗಿಯೂ ರಾಜಪೂತ ಬಳ್ಳಿಯ ಸುಳಿಗಳು. ಹಿಂದುಗಳು ವಿಶಾಲಮತಿ ಅಕ್ಬರನ ಸ್ನೇಹಾಶ್ರಯದಲ್ಲಿ ಮೊಗಲ ಸಾಮ್ರಾಜ್ಯದ ಭದ್ರತೆಗೆ ರಕ್ಷ ಕರೂ ಪಾಲಕರೂ ಆದರು. ಅಕ್ಬರನದು ಬಹು ದೂರದೃಷ್ಟಿ. ಅಸಹ ನೀಯ ಮತವೈಷಮ್ಯವನ್ನು ತೊಡೆದು ಹಾಕಿ ಎಲ್ಲರೂ ಏಕ ಧರ್ಮ ವನ್ನು ಪಾಲಿಸುವ ಒಂದು ಜನಾಂಗದ ನಿರ್ಮಾಣದ ಕನಸೇ ಅವನ

ಹೃದಯಮಂದಿರದಲ್ಲಿ ಮೂಡಿದ 'ದೀನಿ ಇಲ್ಲಾಹಿ' ಮತ. ಈ ಜೀವನದೀಪ್ತಿಯಿಂದ ಉದ್ದೀಪಿತರಾಗಿ ಮುನ್ನಡೆದ ಜಹಾಂಗೀರ್, ಷಹಜಹಾನರು ಹಿಂದುಗಳ ಹೃದಯವನ್ನು ಸೂರೆಗೊಂಡು, ಭಾರತ ದಲ್ಲಿ ಮೆರೆಸಿದ ಒಂದು ರಸೋಜ್ವಲ ಕಲಾವೈಭವದ ಕೀರ್ತಿ ದಿಗಂತ ವ್ಯಾಪಿಯಾಯ್ತು.

ಇದೇ ಸಮನ್ವಯ ಸೌಹಾರ್ದ ಗೀತೆಯನ್ನು ಅಮೀರ್ ಖುಸ್ರು, ರಾಮಾನಂದ, ಕಬೀರ, ನಾನಕ, ಚೈತನ್ಯರ ಜೀವನಗಳು ಹಾಡಿವೆ. ಸೂಫಿ ಪಂಥದಲ್ಲಿಯೂ ಬಂಗಾಳ ಮಹಾರಾಷ್ಟ್ರಗಳಲ್ಲಿ ಮೈದೋರಿದ ಭಕ್ತಿ ಪಂಥಗಳಲ್ಲಿಯೂ ಪ್ರಕಟವಾದ ಸಮಾನತಾಭಾವಗಳು ಪೂರ್ವೋಕ್ತ ಸಮನ್ವಯದೃಷ್ಟಿಯ ಪ್ರತಿಬಿಂಬಗಳಾಗಿವೆ. ಅಕ್ಬರನ 'ಫತೇಪೂರ್‌ಸಿಕ್ರಿ' ಯಲ್ಲಿ ಕಾಣುವ ರಜಪೂತ ರೀತಿ, ಲೋಕವನ್ನೇ ಸೂರೆಗೊಂಡಿರುವ ಅದ್ಭುತ ಕಲಾಕೃತಿ 'ತಾಜಮಹಲ್'ನಲ್ಲಿ ಮೈತಳೆದ ಹಿಂದೂ-ಪಂಚ ರತ್ನ ರೀತಿಯ ವಿನ್ಯಾಸ—ಇವು ಮುಸ್ಲಿಮರ ಇರಾನೀ ಶಿಲ್ಪರೀತಿಗೆ ತೊಡಿಸಿದ ಭಾರತೀಯ ಶಿಲ್ಪಕಲೆಯ ಮುಕುಟಗಳು. ಈ ಭಾರತೀ ಕರಣದ ಮತ್ತೊಂದು ಕಾಣಿಕೆಯೆಂದರೆ, ಅಖಂಡ ಭಾರತಕ್ಕೆ ಸಂಯುಕ್ತ ಭಾಷೆಯಾಗಬಹುದಾದ ಹಿಂದೂಸ್ಥಾನಿ.

ಇಷ್ಟಾದರೂ ಹಿಂದು-ಮುಸ್ಲಿಮರ ಪ್ರತ್ಯೇಕತೆಯ ಪಲ್ಲವಿಯನ್ನೇ ಹಾಡುವವರ ಸಂದೇಹವು ಬಯಲಾಗುವಂತಹ ಒಂದು ನಿದರ್ಶನವನ್ನು ಬಂಗಾಳೀ ಸಾಹಿತ್ಯ ಚರಿತ್ರೆಯಲ್ಲಿ ನಾವು ಕಾಣಬಹುದಾಗಿದೆ. ವಂಗ ಸಾಹಿತ್ಯದ ಪ್ರಾರಂಭ ಕಾಲದಿಂದಲೂ ಬಂಗಾಳಿ ಮುಸ್ಲಿಮರು ಅಲ್ಲಿಯ ಬೌದ್ಧ ವೈಷ್ಣವ ಶಾಕ್ತೇಯ ಶೈವ ನಾಥಯೋಗಿಗಳೊಡನೆ ಸಮಜೋಡಿ ಯಾಗಿ ನಿಂತು ಸಾಹಿತ್ಯಕ್ಷೇತ್ರದಲ್ಲಿ ಅನುಪಮವಾಗಿ ದುಡಿದಿದ್ದಾರೆ. ಅವರ ಅನನ್ಯವಾದ ದೇಶಭಾಷಾಪ್ರೇಮಕ್ಕೆ ಯಾವೊಂದು ಸಂಕುಚಿತ ಜಾತಿಪಂಥವೂ ಭಂಗ ತರಲಿಲ್ಲ. ನಿಜವಾಗಿ ನೋಡಿದರೆ, ವಂಗಸಾಹಿತ್ಯದ ಸತ್ವವಾಹಿನಿ ಕಾಲಸೂರ್ಯನ ಝಳಕ್ಕೆ ಬತ್ತದೆ, ಅತಿ ಸಂಸ್ಕೃತೀಕರಣದ ಅಣೆಕಟ್ಟಿನಲ್ಲಿ ಬಂಧಿತವಾಗದೆ, ನಿರ್ಮಲತರವಾಗಿ ಹರಿದಿರುವುದು ಬಂಗಾಳೀ ಮುಸ್ಲಿಂ ಜೀವನನಾಡಿಯಲ್ಲಿ ಎಂದು ತಿಳಿದವರು ಹೇಳುತ್ತಾರೆ.

ಇತಿಹಾಸವೂ ಅದನ್ನು ಸಮರ್ಥಿಸುತ್ತಿದೆ, ಭಾಷೆಯ ವಿಚಾರವಾಗಿ ಇತ್ತೀಚೆಗೆ ಇತ್ಯರ್ಥವಾದ ಪಾಕಿಸ್ತಾನದ ಬಂಗಾಳಿಗಳ ದೃಢನಿರ್ಧಾರದಲ್ಲಿ.

ಆ ಸಂಗತಿ ಕನ್ನಡನಾಡಿನ ಕನ್ನಡ ಮುಸ್ಲಿಂ ಬಾಂಧವರ ಕಣ್ಣು ತೆರಸಿದರೆ ಸಾಕು. ಅವರೂ ಈ ಸ್ವತಂತ್ರಭಾರತದಲ್ಲಿ ಮೂಡಿರುವ ನವಚೈತನ್ಯವನ್ನು ಕಂಡುಕೊಂಡು, ತಮ್ಮ ದೇಶಭಾಷೆ ಕನ್ನಡವನ್ನೇ ವ್ಯವಹಾರ ಭಾಷೆಯನ್ನಾಗಿ ಒಪ್ಪಿ, ತಮ್ಮ ವಿಶಿಷ್ಟವಾದ ಕಾಣಿಕೆಯನ್ನು ನಾಡ ಬೆಳಸಿನ ಭಾಗ್ಯಕ್ಕೆ ನಿವೇದಿಸಲಿ. ಅಂತಹ ಮಂಗಳೋದಯಕ್ಕೆ ನಾಂದಿಯಂತೆ ಮೂಡಿದೆ ಈ ಕನ್ನಡದ 'ಇಸ್ಲಾಂ ಸಂಸ್ಕೃತಿ' ಗ್ರಂಥ.

ಈ ನವೋದಯದ ನಾಂದಿಯನ್ನು ಹಾಡಿ ಕನ್ನಡನಾಡು ನುಡಿಗಳ ಏಳಿಗೆಗೆ ತಮ್ಮ ಬಾಳೆಲ್ಲವನ್ನೂ ಬೇಳಿದ ದಿವಂಗತ 'ಶ್ರೀ'ಯವರ ಪ್ರೇರಣೆಯಿಂದಲೇ ಈ ಕೃತಿ ಕನ್ನಡಿಗರಿಗೆ ಲಭಿಸುವಂತಾಯ್ತು. ಶ್ರೀ ಶ್ರೀಕಂಠಯ್ಯನವರ ಕೋರಿಕೆಯನ್ನು ನಡಸಿ, ಇದರ ಮೂಲಕೃತಿಯನ್ನು ಆಂಗ್ಲಭಾಷೆಯಲ್ಲಿ ಬರೆದುಕೊಡುವ ಉಪಕಾರ ಮಾಡಿದ ಮೈಸೂರು ವಿಶ್ವವಿದ್ಯಾನಿಲಯದ ಪರ್ಷಿಯನ್ ಪ್ರೊಫೆಸರಾಗಿದ್ದ ಶ್ರೀ ಮಹಮದ್ ಅಬ್ಬಾಸ್ ಷೂಸ್ತ್ರಿಯವರು ಕನ್ನಡಿಗರ ಕೃತಜ್ಞತೆಗೆ ಚಿರಕಾಲವೂ ಪಾತ್ರರು. ಮೂಲಕೃತಿಯನ್ನು ಪ್ರೇರಿಸಿ ಬರಸಿದ್ದಲ್ಲದೆ ಅದರ ಕನ್ನಡ ಅನುವಾದದ ಭಾರವನ್ನು ವಹಿಸಿ, ಕೃತಿ ಉತ್ತಮೋತ್ತಮವಾಗುವಂತೆಯೂ ಕನ್ನಡ ವಾಙ್ಮಯದ ಶ್ರೀಮಂತತೆಯ ಅಭಿವೃದ್ಧಿಗೆ ನೆರವಾಗುವಂತೆಯೂ ಸಾಧನೆಗೈದ ದಿವಂಗತ ಬಿ. ಎಂ. ಶ್ರೀ.ಯವರಿಗಂತೂ ಕನ್ನಡ ಎಂದೆಂದೂ ಋಣಿ.

ಮೈಸೂರು, ಕೆ. ವಿ. ಪುಟ್ಟಪ್ಪ,
೩೦-೮-೧೯೫೮. ಪ್ರಧಾನ ಸಂಪಾದಕ.

# ವಿಷಯಾನುಕ್ರಮಣಿಕೆ

# ಇಸ್ಲಾಂ ಸಂಸ್ಕೃತಿ

## ಅಧ್ಯಾಯ ೧

### ಪೈಗಂಬರ್ ಮಹಮ್ಮದ್—ಜೀವನ ಮತ್ತು ತತ್ತ್ವೋಪದೇಶ

ಪ್ರಪಂಚದ ದೊಡ್ಡ ಸಂಸ್ಕೃತಿಗಳಲ್ಲಿ ಇಸ್ಲಾಂ ಸಂಸ್ಕೃತಿಯೂ ಒಂದಾಗಿದೆ. ಇದು ಭರತಖಂಡ, ಪಶ್ಚಿಮ ಏಷ್ಯಾಖಂಡ, ಉತ್ತರ ಮತ್ತು ಮಧ್ಯ ಆಫ್ರಿಕ, ಪೂರ್ವದ ದ್ವೀಪಸ್ತೋಮ, ಚೀನ, ರಷ್ಯ ಮುಂತಾದ ಭೂಭಾಗಗಳಲ್ಲಿ ಹಬ್ಬಿರುತ್ತದೆ. ಭರತಖಂಡದ ಐದರಲ್ಲಿ ಒಂದುಪಾಲುಜನ ಮುಸ್ಲಿಮರಾಗಿರುತ್ತಾರೆ. ಇಸ್ಲಾಂ ಮತ, ನಾಗರಿಕತೆ, ಸಂಸ್ಕೃತಿಗಳು ಒಟ್ಟುಗೂಡಿ ಸರ್ವಮುಸ್ಲಿಂ ಅಭಿಮಾನದಲ್ಲಿ ಬೆಳೆಯುತ್ತಿವೆ. ಲೋಕದ ಚರಿತ್ರೆಯಲ್ಲಿಯೂ, ಭವಿಷ್ಯತ್ತಿನಲ್ಲಿಯೂ ಆಸಕ್ತಿಯುಳ್ಳವರು ಮುಸ್ಲಿಂ ಚರಿತ್ರೆಯನ್ನು ಅಗತ್ಯವಾಗಿ ತಿಳಿಯಬೇಕಾಗಿದೆ.

ಇಸ್ಲಾಂ ಸಂಸ್ಕೃತಿಗೆ ಆದ್ಯಪ್ರವರ್ತಕ ಪೈಗಂಬರ್ ಮಹಮ್ಮದ್. ಈತನು ಅರೇಬಿಯದ ಕುರಾಯಿಷ್ ಬುಡಕಟ್ಟಿಗೆ ಸೇರಿದವನು. ಈ ಬುಡಕಟ್ಟಿನ ಮಹಾಪುರುಷನಾದ ಫೈಹರ್ ಎಂಬವನ ಸಂತತಿಯ ಕುಸ್ಸಾಯ್ ಎಂಬವನು ಖುಜಾಯಿತರನ್ನು ಮೆಕ್ಕಾದಿಂದ ಹೊರದೂಡಿದಂದಿನಿಂದ ಈ ಬುಡಕಟ್ಟು ಇನ್ನೂ ಮುಖ್ಯಸ್ಥಾನವನ್ನು ಪಡೆಯಿತು. ಕುಸ್ಸಾಯ್ (ಹುಟ್ಟಿದ್ದು ಸು. ಕ್ರಿ.ಶ. ೪೦೦) ಖುಜಾಯಿತ ಬುಡಕಟ್ಟಿನ ನಾಯಕನಾದ ಹುಲಯ್‌ಲ್ ಎಂಬವನ ಮಗಳನ್ನು ಮದುವೆಯಾಗಿ, ಅವನ ಮಾವ ತೀರಿಕೊಂಡಮೇಲೆ ಮೆಕ್ಕಾ ನಾಯಕತ್ವವೂ ಅಲ್ಲಿಯ ಪ್ರಸಿದ್ಧ ದೇವಾಲಯದ ಯಜಮಾನಿಕೆಯೂ ತನಗೆ ಬರಬೇಕೆಂದು ಹೇಳಿ, ಕಾಬಾ ದೇವಾಲಯದ ಸುತ್ತಲೂ ಕುರಾಯಿಷರು ನೆಲಸುವಂತೆ ಮಾಡಿ, ಅದರ ನೆರೆಯಲ್ಲಿಯೇ ತಾನೂ ಮನೆಕಟ್ಟಿಕೊಂಡು ಮೆಕ್ಕಾ ನಾಯಕತ್ವವನ್ನು ತನ್ನ ಕೈಗೆ ತೆಗೆದುಕೊಂಡನು. ಅವನ ಮನೆಯೇ ಕುರಾಯಿಷರಿಗೆ ಮಂತ್ರಣಶಾಲೆ ಆಯಿತು. ಅವನು ರಿಫ಼ದಾ ಎಂಬ ತೆರಿಗೆ ಎತ್ತಿ ಅನೇಕ ಬಡ ಯಾತ್ರಿಕರಿಗೆ ಅನ್ನ ಹಾಕುವುದರಿಂದ ಹೊರಗಿನವರು

ದೇವಾಲಯಕ್ಕೆ ಬಂದು ಹೋಗುವುದಕ್ಕೆ ಉತ್ತೇಜನ ಕೊಟ್ಟನು. ಕುಸ್ಸಾಯ್ ೮೨ ವರ್ಷಗಳು ಬದುಕಿ, ಕುರಾಯಿಷರೆಲ್ಲರೂ ತನ್ನನ್ನು ನಾಯಕನೆಂದು ಒಪ್ಪಿಕೊಳ್ಳುವಂತೆಮಾಡಿ, ಅವರಿಗೆ ಮುಂದಾಳೂ ಕಟ್ಟಳೆ ಕೊಡುವವನೂ ಆದನು. ಅವನು ಸತ್ತಮೇಲೆ ಅವನ ಸ್ಥಾನಕ್ಕೆ ಅವನ ಹಿರಿಯಮಗ ಅಬ್ದದ್-ದಾರ್ ಬಂದನು. ಇವನ ತರುವಾಯ ಮೆಕ್ಕಾ ನಾಯಕತ್ವ ಇವನ ಸೋದರ ಮಕ್ಕಳ ಕೈಸೇರಿ ಹಂಚಿಕೆಯಾಯಿತು. ಯಾತ್ರಿಕರಿಗೆ ಅನ್ನ ನೀರನ್ನು ಒದಗಿಸುವ ಕೆಲಸ ಅಬ್ದೇಮನಾಫನ ಮಗ ಅಬ್ದುಷ್ ಷಮ್ಸಿಗೆ ಸೇರಿತು. ಕೆಲವುಕಾಲದಮೇಲೆ ಈ ಹಕ್ಕನ್ನು ಇವನು ತನ್ನ ಸೋದರನಾದ ಹಾಷಿಮನಿಗೆ (ಮಹಮ್ಮದನ ಮುತ್ತಾತ) ಬಿಟ್ಟುಕೊಟ್ಟನು. ಆದರೆ ಅಬ್ದುಷ್‌ಷಮ್ಸ್ ಸತ್ತಮೇಲೆ ಅವನ ಮಗ ಉಮಯ್ಯ ತನ್ನ ಹಕ್ಕನ್ನು ಹಿಂದಕ್ಕೆ ಕೇಳಿ ವ್ಯಾಜ್ಯಹೂಡಿದನು. ಈ ವ್ಯಾಜ್ಯದಲ್ಲಿ ಇವನು ಸೋತು ಹೋದರೂ, ಹಕ್ಕಿಗಾಗಿ ವ್ಯಾಜ್ಯ ಉಮಯ್ಯರ ಮತ್ತು ಹಾಷಿಮರ, ಮನೆತನಕ್ಕೆಲ್ಲ ಹರಡಿ ಪ್ರತಿ ತಲೆಮೊರೆಯವರೂ ಕಾದಾಡುತ್ತಿದ್ದರು. ಕೊನೆಗೆ ಹಾಷಿಮರು ಗೆದ್ದು ಪಾರಸಿಕರ ನೆರವಿನಿಂದ ತಮ್ಮ ಮನೆತನವನ್ನು ನೆಲೆಗೊಳಿಸಿ ಮುಸ್ಲಿಂ ರಾಜ್ಯವನ್ನು ೪೦೦ ವರ್ಷಗಳು ಆಳಿದರು.

ಹಾಷಿಮ್ ಕ್ರಿ. ಶ. ೫೧೦ ರಲ್ಲಿ ಸತ್ತಮೇಲೆ, ಅಧಿಕಾರ ಅವನ ಸೋದರ ಮುತ್ತಾಲಿಬ್‌ಗೆ ಬಂದು, ಅವನೂ ತೀರಿಕೊಂಡು ಹಾಷಿಮನ ಮಗ ಅಬ್ದುಲ್ ಮುತ್ತಾಲಿಬ್‌ಗೆ ಬಂತು. ಅಬ್ದುಲ್ ಮುತ್ತಾಲಿಬ್‌ಗೆ ೧೨ ಗಂಡುಮಕ್ಕಳೂ, ೬ ಹೆಣ್ಣುಮಕ್ಕಳೂ ಇದ್ದರು. ಮಹಮ್ಮದಿನ ತಂದೆಯಾದ ಅಬ್ದುಲ್ಲ ಇವರಲ್ಲೊಬ್ಬ. ಈ ಅಬ್ದುಲ್ಲ ಕುರಾಯಿಷ್ ಬುಡಕಟ್ಟಿನಲ್ಲಿ ಹೆಸರುಗೊಂಡ ಜುಹ್ರ ಮನೆತನದ ಆಮಿನ ಎಂಬವಳನ್ನು ಮದುವೆಯಾದನು. ಇವರ ಒಬ್ಬನೇ ಮಗನಾದ ಮಹಮ್ಮದ್ ಕಿ. ಶ. ಸು. ೫೭೦ ರಲ್ಲಿ ಹುಟ್ಟಿದನು. ಮಗು ಹುಟ್ಟುವುದಕ್ಕೆ ಮೊದಲೇ ತಂದೆ ತೀರಿಕೊಂಡಿದ್ದನು. ಮಗುವನ್ನು ಸಾಕುವ ಭಾರ ಸುವೈಬಾ ಎಂಬ ಗುಲಾಮಿ ಹೆಂಗಸೊಬ್ಬಳಿಗೆ ಬಂತು. ಇವಳು ಕೆಲವು ದಿನಗಳಾದ ಮೇಲೆ ಅದನ್ನು ಬನೂಸಾದ್ ಪಂಗಡದ ಹಲೀಮ ಎಂಬ ದಾದಿಯ

ಕೈಗೆ ಒಪ್ಪಿಸಿದಳು. ಈ ದಾದಿ ಮಗುವನ್ನು ಎರಡು ವರ್ಷಗಳ ಕಾಲ ತನ್ನ ಮರಳುಗಾಡಿನ ಮನೆಯಲ್ಲಿ ಸಾಕಿ, ತರುವಾಯ ತಾಯಿ ಬಳಿಗೆ ಕರೆತಂದಳು. ಮಗುವಿಗೆ ಆರು ವರ್ಷಗಳು ತುಂಬುವ ಹೊತ್ತಿಗೆ ತಾಯಿಯೂ ತೀರಿಕೊಂಡು, ಮಗುವನ್ನು ಬೆಳಸುವುದು ತಾತನಾದ ಅಬ್ದುಲ್ ಮುತ್ತಾಲಿಬ್‌ನ ಪಾಲಿಗೆ ಬಂತು. ಕ್ರಿ. ಶ. ಸು. ೫೭೭ ರಲ್ಲಿ ಇವನೂ ತೀರಿಹೋಗಿ, ಮಗು ತನ್ನ ಚಿಕ್ಕಪ್ಪ ಅಬೂತಾಲಿಬ್‌ನ ಕೈಯಲ್ಲಿ ಬೆಳೆಯಿತು. ಮಹಮ್ಮದ್ ೧೨ ವರ್ಷದ ಹುಡುಗನಾಗಿದ್ದಾಗಲೇ ತನ್ನ ಚಿಕ್ಕಪ್ಪನ ಜತೆಯಲ್ಲಿ ಸಿರಿಯಾಕ್ಕೆ ಹೋಗಿ. ಅಲ್ಲಿ ಮೊದಲನೆಯ ಸಲ ಹೊರಗಿನ ಪ್ರಪಂಚದ, ಮುಖ್ಯವಾಗಿ ಕ್ರೈಸ್ತ ಸನ್ಯಾಸಿಗಳ, ಪರಿಚಯ ವನ್ನು ಪಡೆದನು. ೧೬–೧೭ ವರ್ಷದ ಹರೆಯದವನಾಗಿದ್ದಾಗಲೇ ಕುರಾಯಿಷ್ ಮತ್ತು ಬನೂಹುವಾಸ್ಸಿನ್ ಪಂಗಡಗಳ ಹೋರಾಟದಲ್ಲಿ ಭಾಗ ವಹಿಸಿದನು. ಇವನ ನಿಷ್ಕಳಂಕ ಜೀವನಕ್ಕೂ ನೇರನಡತೆಗೂ ಎಲ್ಲರೂ ಮೆಚ್ಚಿ ಇವನನ್ನು ಅಮೀನ್ (ವಿಶ್ವಾಸಪಾತ್ರ ಅಥವಾ ಆಪ್ತ) ಎಂದು ಕರೆಯುತ್ತಿದ್ದರು.

ಮಹಮ್ಮದ್ ತನ್ನ ಚಿಕ್ಕಪ್ಪನಿಗೆ ಕುರಿಕಾಯುವುದರಲ್ಲೂ ಮಾರಾಟದ ಕೆಲಸದಲ್ಲೂ ನೆರವಾಗುತ್ತಿದ್ದನು. ೨೫ನೆಯ ವಯಸ್ಸಿನ ಹೊತ್ತಿಗೆ ಮಹಮ್ಮದಿನ ಹೆಸರು ವರ್ತಕರಲ್ಲೆಲ್ಲ ಹಬ್ಬಿತ್ತು. ಕುರಾಯಿಷ್ ಪಂಗಡದ ಖದೀಜಾ ಎಂಬ ಧನಿಕ ವಿಧವೆಯೊಬ್ಬಳು ಮಹಮ್ಮದನನ್ನು, ಅವನ ಚಿಕ್ಕಪ್ಪನ ಮಾತಿನಮೇಲೆ, ಸಿರಿಯಾ ದೇಶದಲ್ಲಿ ತನ್ನ ವ್ಯಾಪಾರ ಪ್ರತಿನಿಧಿಯನ್ನಾಗಿ ನೇಮಿಸಿಕೊಂಡಳು. ಅವನ ಸರಳತೆ, ಪ್ರಾಮಾಣಿಕತೆ, ಕಾರ್ಯದಕ್ಷತೆ, ಘನತೆ, ಗಾಂಭೀರ್ಯಗಳನ್ನು ಮೆಚ್ಚಿ, ಚೆಲುವಿಗೆ ಮನ ಸೋತು ತನ್ನನ್ನು ಮದುವೆಯಾಗೆಂದು ಕೇಳಿದಳು. ಆವೇಳೆಗೆ ಅವಳಿಗೆ ೪೦ ವರ್ಷಗಳು ಕಳೆದು, ಎರಡುಸಲ ವಿಧವೆಯಾಗಿ, ಹಿಂದಿನ ಗಂಡಂದಿರಿಂದ ಮಕ್ಕಳೂ ಇದ್ದರು. ೨೫ ವರ್ಷದ ನವಯುವಕನಾದರೂ ಮಹಮ್ಮದ್ ಒಪ್ಪಿಕೊಂಡು, ಚಿಕ್ಕಪ್ಪನ ಒಪ್ಪಿಗೆ ಪಡೆದು, ಮದುವೆಯಾದನು. ಆಗಿನ ಕಾಲದಲ್ಲಿ ಬಹುಪತ್ನೀತ್ವ ರೂಢಿಯಲ್ಲಿದ್ದರೂ ಮಹಮ್ಮದ್ ತನ್ನ ವಯಸ್ಸಾದ ಹೆಂಡತಿಯಲ್ಲಿಯೆ ಅನುರಾಗವಿಟ್ಟು ಸಂತುಷ್ಟನಾಗಿದ್ದನು.

ಆಕೆ ೬೫ನೆಯ ವಯಸ್ಸಿನಲ್ಲಿ ಸತ್ತಳು. ಇವರಿಗೆ ಹಲವು ಗಂಡುಮಕ್ಕಳೂ ಹೆಣ್ಣುಮಕ್ಕಳೂ ಆಗಿ, ಗಂಡುಮಕ್ಕಳೆಲ್ಲ ಚಿಕ್ಕಂದಿನಲ್ಲೇ ಸತ್ತುಹೋಗಿ, ಹೆಣ್ಣುಮಕ್ಕಳು ಬೆಳೆದು ಮದುವೆಯಾಗಿ ಮಕ್ಕಳನ್ನು ಪಡೆದರು. ಕಿರಿಯ ಮಗಳಾದ ಫಾತಿಮಳು ತಂದೆತಾಯಿಗಳ ಒಲ್ಮೆಗೂ ಇತರರ ಮೆಚ್ಚಿಗೆ ಗೌರವಗಳಿಗೂ ಪಾತ್ರಳಾಗಿದ್ದಳು. ಮಹಮ್ಮದ್ ಸಾಯುವ ಹೊತ್ತಿಗೆ ಅವನ ಮಕ್ಕಳಲ್ಲಿ ಬದುಕಿದ್ದವಳು ಇವಳೊಬ್ಬಳೆ. ಇವಳು ಅಬೂತಾಲೆಬ್‌ನ ಮಗನೂ, ಮಹಮ್ಮದಿನ ಸಾಕುಮಗನೂ ಆದ ಅಲಿಯನ್ನು ಮದುವೆಯಾಗಿ, ಹಸನ್ ಮತ್ತು ಹುಸೇನ್ ಎಂಬ ಮಕ್ಕಳನ್ನು ಪಡೆದಳು. ಈ ಮಕ್ಕಳ ಸಂತತಿಯವರನ್ನೇ ಈಗ ಸಯ್ಯದ್ದರು ಎಂದು ಕರೆಯುವುದು. (ಮಹಮ್ಮದನ ಸಂತತಿಯವರು ತಮ್ಮ ಮನೆತನವನ್ನು ಈ ಫಾತಿಮಳಿಂದಲೂ, ಮಹಮ್ಮದನ ಹಿರಿಯಮಗಳು ಸ್ಯೈನಬ್ ಎಂಬವಳಿಂದಲೂ ಮೊದಲುಮಾಡಿ ಎಣಿಸುತ್ತಾರೆ. ಫಾತಿಮಳು ಸತ್ತಮೇಲೆ, ಅದೇ ಮನೆತನದ ಹೆಣ್ಣಾದ ಅಮಾಮಳು ಅಲಿಯನ್ನು ಮದುವೆಯಾಗಿ ಮಕ್ಕಳನ್ನು ಪಡೆದರೂ, ಆ ಮಕ್ಕಳನ್ನೂ ಅವರ ಸಂತಾನವನ್ನೂ ಸಯ್ಯದ್ದರು ಎಂದು ಕರೆಯಲಿಲ್ಲ). ಮಹಮ್ಮದ್ ಮದೀನಕ್ಕೆ ಹೋಗುವುದಕ್ಕೆ ಮೊದಲೇ ಖದೀಜಾ ತೀರಿಕೊಂಡಳು. ಇವಳು ಸತ್ತಮೇಲೆ ಮಹಮ್ಮದ್ ಹಲವು (೧೧-೧೨) ಹೆಂಡಿರನ್ನು ಮದುವೆಯಾದನು. ಇವರಲ್ಲಿ ಆಯೆಷ ಪ್ರಸಿದ್ಧಳು. ಇವರಲ್ಲಿ ಒಬ್ಬರಿಗೂ ಮಕ್ಕಳಾಗಲಿಲ್ಲ. ಇವರು ಮಹಮ್ಮದನ ಮತವನ್ನು ಹರಡುವುದರಲ್ಲಿ ಸಹಾಯಕರಾದರು.

ಮಹಮ್ಮದ್ ತಾನು ಮದುವೆಯಾದ ವರ್ಷವೇ, ಬಲಿಷ್ಠರೂ ಅಧರ್ಮಿಗಳೂ ಆದ ನಿರಂಕುಶನಾಯಕರ ತುಳಿತಕ್ಕೆ ಸಿಕ್ಕಿ ಬಿಡುಗಡೆ ಕಾಣದೆ ನರಳುತ್ತಿದ್ದವರ ರಕ್ಷಣೆಗಾಗಿ ಏರ್ಪಟ್ಟ ಸಂಘವೊಂದಕ್ಕೆ ಸೇರಿಕೊಂಡನು. ಹೀಗೆ ಜನಸೇವೆ ಮಾಡುತ್ತಿದ್ದರೂ, ಸುಮಾರು ೪೦ ವರ್ಷ ವಯಸ್ಸಿನವರೆಗೆ ಇವನ ಜೀವನದಲ್ಲಿ ವಿಶೇಷವೇನೂ ನಡೆಯದೆ, ತನ್ನ ವ್ಯಾಪಾರದಲ್ಲಿಯೂ ಏಕಾಂತ ಧ್ಯಾನದಲ್ಲಿಯೂ ಬದುಕು ಸಾಗಿತು. ಸಾಮಾನ್ಯವಾಗಿ, ಇವನು ಆಗಾಗ್ಗೆ ಬುತ್ತಿ ಕಟ್ಟಿಕೊಂಡು ಹೀರಾ ಗುಡ್ಡಕ್ಕೆ ಹೋಗಿ, ಅಲ್ಲಿ ಪ್ರಾರ್ಥನೆ ಧ್ಯಾನಗಳಲ್ಲಿ ಮಗ್ನನಾಗಿರುತ್ತಿದ್ದದ್ದುಂಟು.

ಮುಹಮ್ಮದಿನ ಉಪದೇಶಮಹತ್ತ್ವವನ್ನು ತಿಳಿಯಬೇಕಾದರೆ ಆ ಕಾಲದ ಮೆಕ್ಕಾ ಮತ್ತು ಅದರ ಜನರ ಸ್ಥಿತಿಯನ್ನು ಕೊಂಚಮಟ್ಟಿಗೆ ತಿಳಿದಿರಬೇಕು. ಅರಬರ ಪವಿತ್ರಸ್ಥಳವಾದ ಮೆಕ್ಕಾ ನಡುಅರೇಬಿಯದ ಪಡುವಲ ಭಾಗದಲ್ಲಿ ಒಂದು ಪಟ್ಟಣ. ಇದರಲ್ಲಿ ಅನೇಕ ಪಂಗಡ ಗಳಿದ್ದುವು. ಇವುಗಳ ಸಮುದಾಯನಾಮ ಕುರಾಯಿಷ್. ಇವುಗಳಲ್ಲಿ ಬನೀಮಖ್‌ಝೂಮ್ ಬನೀಉಮಯ್ಯ ಬನೀಹಾಷಿಮ್ ಎಂಬ ಮೂರು ಪಂಗಡಗಳು ಪ್ರಬಲವಾಗಿದ್ದುವು. ಅಲ್ಲದೆ ಮೊದಲನೆಯ ಎರಡೂ ಮುಹ ಮ್ಮದಿನ ಪಂಗಡವಾದ ಮೂರನೆಯದರಮೇಲೆ ಸದಾ ಕೈಮಾಡುತ್ತಿದ್ದುವು. ಈ ಕಾಲದಲ್ಲಿ, ಮೆಕ್ಕಾದಲ್ಲಿ ಅಧಿಕಾರ ಪಡೆದ ನಾಯಕರು ಯಾರೂ ಇರ ಲಿಲ್ಲ. ಅಬ್ದುಲ್ ಮುತ್ತಾಲಿಬ್‌ನ ಮಗ ಅಬೂತಾಲಿಬ್ ಇತರ ಪಂಗಡಗಳ ಮುಂದಾಳುಗಳನ್ನು ಎದಿರಿಸಿ ಸರ್ವಾಧಿಕಾರ ವಹಿಸುವಷ್ಟು ಹಣವಂತ ನಾಗಿರಲಿಲ್ಲ. ಅವನನ್ನು ಎಲ್ಲರೂ ಗೌರವಿಸುತ್ತಿದ್ದರೇ ಹೊರತು ಒಬ್ಬರೂ ವಿಧೇಯರಾಗಿ ಮಾತ್ರ ನಡೆಯುತ್ತಿರಲಿಲ್ಲ. ಮೆಕ್ಕಾದ ಕಾಬಾ ದೇವಾ ಲಯ ದೊಡ್ಡ ಯಾತ್ರಾ ಕ್ಷೇತ್ರವಾಗಿದ್ದು, ಅಲ್ಲಿ ಅರೇಬಿಯದ ಎಲ್ಲ ಕಡೆ ಗಳಿಂದಲೂ ಯಾತ್ರಿಕರು ಬಂದು ನೆರೆಯುತ್ತಿದ್ದರು. ಅಲ್ಲದೆ, ಅದು ದೊಡ್ಡ ವ್ಯಾಪಾರಸ್ಥಳವಾಗಿಯೂ ಇತ್ತು. ಹಲವು ತರದ ಜನರು ಬಂದು ಸಂದಣಿ ನೆರೆಯುತ್ತಿದ್ದದ್ದರಿಂದ, ಈ ಉತ್ಸವ ವ್ಯಾಪಾರಗಳ ಜತೆಗೆ, ಜೂಜು, ಕುಡಿತ, ಸೂಳೆಗಾರಿಕೆ ಮೊದಲಾದ ದುರಾಚಾರಗಳೂ ತಲೆ ದೋರಿಕೊಂಡುವು. ಆರಾಧನೆಯ ವಿಷಯದಲ್ಲೂ ವಿಗ್ರಹಾರಾಧನೆ ತೀರ ಕೀಳಿಗಿಳಿದು, ಕಂಡದ್ದೆಲ್ಲ ದೇವರಾಗಿ, ಕಾಬಾ ದೇವಾಲಯದಲ್ಲೇ ೩೬೦ ವಿಗ್ರಹಗಳು ಪೂಜೆಗೊಳ್ಳುತ್ತಿದ್ದುವು.

ಇದನ್ನೆಲ್ಲ ಕಂಡ ಕುರಾಯಿಷ್ ಪಂಗಡದ ಕೆಲವು ವಿದ್ಯಾವಂತರು ಸಮಾಜ ಸುಧಾರಣೆಗಾಗಿ ಹಂಬಲಿಸುತ್ತಿದ್ದರು. ಆಗಿನ ಮತಧರ್ಮದಲ್ಲಿ, ಅದರಲ್ಲೂ ವಿಗ್ರಹಾರಾಧನೆಯಲ್ಲಿ, ಬಹು ಜುಗುಪ್ಸೆಗೊಂಡು ಕೆಲವರು ಕ್ರೈಸ್ತಧರ್ಮವನ್ನು ಅವಲಂಬಿಸಿದರು. ಆದರೆ, ಮತ್ತೆ ಕೆಲವರು ತಮ್ಮ ಧರ್ಮವನ್ನೇ ಉತ್ತಮಗೊಳಿಸಿ ಸುಧಾರಿಸಬೇಕೆಂದು ನಿರ್ಧರಿಸಿದರು. ಮೆಕ್ಕಾದವರು ಪವಿತ್ರ ಕಾಬಾ ರಕ್ಷಕರೂ, ಧನಿಕರೂ, ಬುದ್ಧಿವಂತರೂ,

ಇತರ ಪ್ರಾಂತದವರಿಗಿಂತ ಹೆಚ್ಚು ನಾಗರಿಕರೂ ಆಗಿದ್ದೂ ಕೂಡ ಒಳ ಹೋರಾಟ, ಕರುಬು, ಭೋಗಲಾಲಸೆಗಳಿಗೆ ತುತ್ತಾಗಿ ಕೆಟ್ಟ ಬದುಕಿನಲ್ಲಿ ತೊಳಲುತ್ತಿದ್ದರು. ಸುಧಾರಕರಿಗೆ ಹಿಡಿಯಬೇಕಾದ ದಾರಿಯೇ ತಿಳಿಯದೆ ಹೋಯಿತು. ಮಹಮ್ಮದ್ ಇಂಥ ಸನ್ನಿವೇಶದಲ್ಲಿ ಮುಂದೆ ಬಂದು ಜನರನ್ನು ಉದ್ಧರಿಸಿದನು.

ಮಹಮ್ಮದ್ ಮಾನವ ಮುಕ್ತಿಗೆ ಸಾಧನವಾದ ಒಂದೇ ಒಂದು ಮಾರ್ಗವನ್ನು ಪರ್ಯಾಲೋಚಿಸಿ ಮನಸ್ಸಿನಲ್ಲಿ ದೃಢಮಾಡಿಕೊಂಡು, ಅದನ್ನು ಮೊದಲು ತನ್ನ ಕಟ್ಟೊಲ್ಮೆಯ ಮಡದಿಯಲ್ಲಿ ಬಿಚ್ಚಿದನು. ಒಡನೆಯೇ, ಅವಳು ಮಾನವರಿಗೆ ಆ ಸಂದೇಶವನ್ನು ಕೊಡುವುದಕ್ಕಾಗಿ ದೇವರೇ ಅವನನ್ನು ಕಳಿಸಿರುವನೆಂದು ಒಪ್ಪಿ, ತಾನು ಮೊದಲು ಅವನ ಧರ್ಮವನ್ನು ಸ್ವೀಕಾರ ಮಾಡಿದಳು. ತರುವಾಯ ಮಹಮ್ಮದನ ಚಿಕ್ಕಪ್ಪನ ಮಗ ೯-೧೦ ವರ್ಷದ ಅಲಿ, ಗುಲಾಮನಾಗಿದ್ದ ಜೈಯದ್, ಸ್ನೇಹಿತ ಅಬೂಬಕರ್-ಇವರು ಸ್ವೀಕಾರಮಾಡಿದರು. ಅಬೂಬಕರ್ ತನ್ನ ಪ್ರಭಾವದಿಂದ ಅನೇಕ ಸ್ನೇಹಿತರು ಈ ಹೊಸ ಮತವನ್ನು ಹಿಡಿಯುವಂತೆ ಮಾಡಿದನು. ಸುಮಾರು ಮೂರು ವರ್ಷಗಳು ಮಹಮ್ಮದ್ ಗುಟ್ಟಾಗಿಯೇ ಧರ್ಮೋಪದೇಶ ನಡಸುತ್ತಿದ್ದು ತನ್ನ ಅನುಯಾಯಿಗಳ ಬಲದಿಂದ ಅವರಲ್ಲಿಯೂ ಹಂಜ಼ ಮತ್ತು ಉಮರ್ ಎಂಬಿಬ್ಬರ ಉತ್ತೇಜನದಿಂದ ಬಹಿರಂಗವಾಗಿ ಉಪದೇಶಿಸುವುದಕ್ಕೆ ಹೊರಟನು. ಒಡನೆಯೇ ಪ್ರತಿಭಟನೆಗೆ ಮೊದಲಾಯಿತು. ತಾನೂ ತನ್ನ ಅನುಯಾಯಿಗಳೂ ಹತ್ತು ವರ್ಷಗಳ ಕಾಲ ಬಹು ಹಿಂಸೆಯನ್ನು ಅನುಭವಿಸಿದರು. ಹಿಂಸೆ ತಾಳಲಾರದೆ ಕೆಲವರು ಅಬಿಸೀನಿಯಕ್ಕೆ ಓಡಿಹೋದರು. ಅಲ್ಲದೆ, ತನ್ನ ಬೆಂಬಲವಾಗಿದ್ದ ಹೆಂಡತಿಯೂ ಚಿಕ್ಕಪ್ಪನೂ ಈ ವೇಳೆಗೆ ತೀರಿಕೊಂಡು, ಕುರಾಯಿಷರ ಪ್ರತಿಭಟನೆ ಮತ್ತಷ್ಟು ಹೆಚ್ಚಿತು. ಆದರೂ, ಮಹಮ್ಮದ್ ಮದೀನದಿಂದ ಜಾತ್ರೆಗೆ ಬರುತ್ತಿದ್ದ ಬಹುಮಂದಿ ತನ್ನ ಮತವನ್ನು ಒಪ್ಪಿಕೊಳ್ಳುವಂತೆ ಮಾಡುವುದರಲ್ಲಿ ಜಯಶಾಲಿಯಾಗಿ, ಅವರ ಸಹಾಯದ ವಾಗ್ದಾನದ ಮೇಲೆ ತಾನೂ ತನ್ನ ಅನುಯಾಯಿಗಳೂ ಮದೀನಕ್ಕೆ ಹೊರಟರು. ಕುರಾಯಿಷರು ಇದನ್ನೂ ಸಹಿಸದೆ ಮದೀನ

ದಲ್ಲೂ ಮಹಮ್ಮದಿಗೆ ತೊಂದರೆ ಕೊಡುವುದಕ್ಕೆ ಮೊದಲಿಟ್ಟರು. ಮೊದ ಮೊದಲು ಮಹಮ್ಮದ್ ಕೇವಲ ರಕ್ಷಣೆಯಲ್ಲೇ ತೃಪ್ತನಾಗಿದ್ದು, ಕೊನೆಗೆ ಬಲ ಹೆಚ್ಚಿ, ಹಗೆಗಳ ಮೇಲೆ ಬಿದ್ದು ಕೆಲವು ವರ್ಷಗಳಲ್ಲೇ ಅವರನ್ನು ಮುರಿದನು. ಕ್ರಿ.ಶ. ೬೩೦ ರಲ್ಲಿ ಮೆಕ್ಕಾಕ್ಕೆ ಸೈನ್ಯಸಮೇತವಾಗಿ ಹೋಗಿ ಪಟ್ಟಣವನ್ನು ಆಕ್ರಮಿಸಿಕೊಂಡನು. ಆದರೆ ಒಬ್ಬರಿಗೂ ಕೆಡುಕು ಮಾಡದೆ ಎಲ್ಲ ಶತ್ರುಗಳಿಗೂ ದಂಡವಿಮೋಚನೆ, ಅಭಯಪ್ರದಾನಗಳನ್ನು ಕೊಟ್ಟನು. ಇದು ಅವರ ಮೇಲೆ ಬಹು ಗಾಢಪರಿಣಾಮವನ್ನು ಉಂಟು ಮಾಡಿತು.

ಇವನ ಉಪದೇಶಾಮೃತವನ್ನು ಕೇಳಿ ಮೆಕ್ಕಾ ಜನರು ಇವನ ಧರ್ಮ ಒಪ್ಪಿಕೊಂಡರು. ಸಫ್ಹಾ ಎಂಬ ಗುಡ್ಡದ ಬಳಿ ತಾವು "ಇಸ್ಲಾಂ ಧರ್ಮದಂತೆ ನಡೆಯುವುವಾಗಿಯೂ; ಒಬ್ಬನೇ ದೇವನಾದ ಅಲ್ಲಾವಿನಲ್ಲಿ ನಂಬಿ ಭಕ್ತಿ ಮಾಡುವುದಾಗಿಯೂ; ವಿಗ್ರಹಾರಾಧನೆ ಬಿಡುವುದಾಗಿಯೂ; ಚಾಡಿ, ಸುಳ್ಳು, ಕಳ್ಳತನ, ಸೂಳೆಗಾರಿಕೆ, ಕುಡಿತ, ಹೆಣ್ಣುಮಕ್ಕಳನ್ನು ಕೊಲ್ಲುವುದು ಇವೇ ಮೊದಲಾದ ಕೆಟ್ಟ ಕೆಲಸಗಳನ್ನೆಲ್ಲ ತೊರೆಯುವುದಾಗಿಯೂ" ಪ್ರಮಾಣ ಮಾಡಿದರು. ಕಾಬಾ ದೇವಾಲಯದ ೩೬೦ ವಿಗ್ರಹಗಳೂ ಗೋಡೆಯ ಚಿತ್ರಗಳೂ ನಾಶವಾದುವು. ಮೆಕ್ಕಾ ಕೈಗೆ ಬಿದ್ದದ್ದು ಮಹಮ್ಮದನ ದೊಡ್ಡ ಜಯ ವಾಯಿತು. ಆಮೇಲೆ ಕ್ರಮೇಣ ಎಲ್ಲ ಪ್ರಾಂತದವರೂ ತಂಡತಂಡವಾಗಿ ಬಂದು ತಮಗೆ ತಾವೇ ಇಸ್ಲಾಂ ಧರ್ಮವನ್ನು ಸ್ವೀಕರಿಸಿದರು. ಮಹಮ್ಮದ್ ಸಾಯುವ ವೇಳೆಗೆ (ಕ್ರಿ.ಶ. ೬೩೨-೩೩) ಅರೇಬಿಯದಲ್ಲೆಲ್ಲ ಲೌಕಿಕ ಧಾರ್ಮಿಕಗಳೆರಡರಲ್ಲೂ ತಾನೇ ಸರ್ವಾಧಿಕಾರಿಯಾಗಿದ್ದನು. ಮಹಮದ್ ದಿವಂಗತನಾದಾಗ ಆತನಿಗೆ ೬೩ ವಯಸ್ಸು.

ಮಹಮ್ಮದ್ ಮಾಡಿದ ಉಪದೇಶದ ಮುಖ್ಯತತ್ವಗಳು ಕುರಾನಿನಲ್ಲಿವೆ. ಅವು ಹೀಗಿವೆ:—

೧. **ದೇವರು:** ಮಹಮ್ಮದ್ ಬಹುದೇವಾರಾಧನೆ, ದ್ವಿತತ್ವ, ನಿರ್ದೇವವಾದ ಮತ್ತು ವಿಗ್ರಹಾರಾಧನೆಗಳನ್ನು ಖಂಡಿಸಿ ಏಕದೇವಾರಾಧನೆಯನ್ನು ಬೋಧಿಸಿದನು. ಮೋಡಕಟ್ಟಿ ಚೆದರುವುದು, ಮಳೆ

ಹೊಯ್ಯುವುದು, ಗಿಡ ಬೆಳೆಯುವುದು, ಪ್ರಾಣಿಜೀವನ, ನಕ್ಷತ್ರ ಚಲನೆ, ಋತುಪರ್ಯಾಯ, ಜನಾಂಗಗಳ ಏಳುಬೀಳುಗಳು, ಬಾಳು, ಸಾವು ಎಲ್ಲದರಲ್ಲೂ—ಪ್ರಕೃತಿಯಲ್ಲಿ, ಮನುಷ್ಯಚರಿತ್ರೆಯಲ್ಲಿ—ಒಂದೇ ನಿಯಮ ಕಂಡುಬಂದು, ಮೇಲೆ ಭಿನ್ನತೆ ತೋರಿದರೂ ಒಳಗೆ ಏಕತೆ ಇರುವುದ ರಿಂದ ಇದಕ್ಕೆಲ್ಲ ಕಾರಣಕರ್ತನು ಒಬ್ಬನೇ ಇರಬೇಕೆಂದು ವಾದಿಸಿದನು. ಮಹಮ್ಮದನ ದೇವರು ಒಬ್ಬ, ನಿತ್ಯ, ವಿಶ್ವಾತ್ಮ. ಅಲ್ಲಾ ಕರುಣಾಮಯ, ಪುನರುತ್ಥಾನದಿನದ ಪ್ರಭು; ಅವನೊಬ್ಬನೇ ಸೇವ್ಯ. ಎಲ್ಲರೂ ಅವನ ಮರೆಹೊಗಬೇಕು. ದೇವರು ಭಾವನಾತೀತನೂ ಅಚಿಂತನೀಯನೂ ಆದ್ದರಿಂದ ಅವನಿಗೆ ಹೋಲಿಕೆಯನ್ನಾಗಲಿ ಆಕಾರವನ್ನಾಗಲಿ ಕೊಡುವ ಪಾಪಕ್ಕಿಂತ ಹೆಚ್ಚಿನ ಪಾಪ ಯಾವುದೂ ಇರುವುದಿಲ್ಲವೆಂದು ವಾದಿಸಿ ವಿಗ್ರಹಾರಾಧನೆಯನ್ನು ಖಂಡಿಸಿದನು. "ಅಲ್ಲಾ ಒಬ್ಬನೇ; ಅವನೇ ವಿಶ್ವಾಧಾರ; ಅವನು ಹುಟ್ಟಿಸುವವನೂ ಅಲ್ಲ; ಹುಟ್ಟಿದವನೂ ಅಲ್ಲ; ಅವನಿಗೆ ಎಣೆಯಿಲ್ಲ" (ಸೂರ. ೨). ಇದರಿಂದ ಪುರುಷಪ್ರಕೃತಿಗಳು ಅನಾದಿಯೆಂಬುದನ್ನೂ, ಒಂದನ್ನೊಂದು ಅವಲಂಬಿಸಿರುವುದೆಂಬುದನ್ನೂ ಅವುಗಳ ಸಂಯೋಗಕ್ಕೆ ಬೇರೊಂದು ಮೂರನೆಯ ಶಕ್ತಿ ಬೇಕೆಂಬುದನ್ನೂ ಖಂಡಿಸಿದನು. ಪಾರಸಿಕರ ದ್ವಿತತ್ತ್ವವಾದವನ್ನೂ, ಕ್ರೈಸ್ತರ ತ್ರಿಮೂರ್ತಿ ವಾದವನ್ನೂ ಅವತಾರದಲ್ಲಿ ನಂಬಿಕೆಯನ್ನೂ ಮಹಮ್ಮದ್ ಒಪ್ಪಲಿಲ್ಲ.

**೨. ಆತ್ಮ ಮತ್ತು ಅದರ ಅಮರತ್ವ:** ಕುರಾನಿನ ಪ್ರಕಾರ ಮನುಷ್ಯನು ಇಹಲೋಕದಲ್ಲಿ ದೇವರ ಪ್ರತಿನಿಧಿ. ಅವನು ವಿಶ್ವದ ಅಡಕ. ಅವನ ಆತ್ಮ ಪರಿಶುದ್ಧವೂ ಅಪಾರ್ಥಿವವೂ ಇದ್ದು ಕರ್ಮದ ಮೂಲಕ ವ್ಯಕ್ತವಾಗುತ್ತದೆ. ವಿಶ್ವಾತ್ಮದೊಡನೆ ಹೋಲಿಸಿದರೆ ಜೀವಾತ್ಮಕ್ಕೆ ಆದಿ ಯುಂಟು. ಅದಕ್ಕೆ ವ್ಯಕ್ತಿತ್ವವೂ ತನ್ನ ಬೆಳವಣಿಗೆ ಪೂರ್ಣತ್ವಗಳಿಗೆ ಸಹಾಯಕವಾದ ಇಚ್ಛಾಶಕ್ತಿಯೂ ಉಂಟು. ಆದರೆ ಈ ಶಕ್ತಿ ದೈವ ಸಂಕಲ್ಪಕ್ಕೆ ಹೊಂದಿಕೊಂಡು ಹೋಗಬೇಕು. "ಅವರು ಆತ್ಮದ ವಿಷಯ ಕೇಳುತ್ತಾರೆ, ನೀನು ಹೀಗೆಹೇಳು—ಆತ್ಮ ನನ್ನ ಪ್ರಭುವಿನ ಆಜ್ಞಾಧೀನ ವಾದದ್ದು, ಅದರ ಯಥಾರ್ಥಜ್ಞಾನ ನಿಮಗೆ ತಿಳಿದಿರುವುದು ಬಹು ಸ್ವಲ್ಪ" (೧೭-೮೫). ಆತ್ಮಕ್ಕೆ ಮೇಲೆ ಮೇಲೆ ಏರಿ ತನ್ನನ್ನು ತಾನು

ಸಾಧಿಸಿ ಅರಿತುಕೊಂಡು ದೇವಸಾನ್ನಿಧ್ಯವನ್ನೈದುವ ಶಕ್ತಿಯುಂಟು. ಆದರೆ, ಕಾಮಕ್ರೋಧಾದಿ ಕಷಾಯಗಳ ತುಳಿತಕ್ಕೆ ಸಿಕ್ಕಿ ಪಶುವಿಗಿಂತ ಕಡೆಯಾಗಿ ಬೀಳಲೂಬಹುದು. ಒಂದು ದೃಷ್ಟಿಯಿಂದ, ಆತ್ಮಕ್ಕೆ ತನ್ನರಿವು ಇದ್ದು ಅದರ ಏಳುಬೀಳುಗಳಿಗೆ ಅದೇ ಹೊಣೆಯಾಗಿದೆ. "ಆತ್ಮವನ್ನು ಪರಿಪೂರ್ಣಗೊಳಿಸಿ, ಅದಕ್ಕೆ ಪಾಪಪುಣ್ಯವಿವೇಚನೆಯ ಶಕ್ತಿಯನ್ನು ಕೊಟ್ಟೆದೆ. ಅದರ ಪರಿಶುದ್ಧತೆಯನ್ನು ಕಾಪಾಡಿಕೊಂಡವನು ಗೆದ್ದ; ಅದನ್ನು ಅದುಮಿ ತುಳಿದವನು ಬಿದ್ದ" (೯೧. ೭-೧೦). ಕುರಾನಿನಲ್ಲಿ ಆತ್ಮಕ್ಕೆ ಅವರ ಬೇರೆಬೇರೆ ಬೆಳವಳಿಗೆ ಮೆಟ್ಟಲುಗಳನ್ನು ಅನುಸರಿಸಿ ಬೇರೆಬೇರೆ ಹೆಸರುಗಳನ್ನು ಹೇಳಿದೆ. (೧) ಅಮ್ಮಾ (ಪಶು ಆತ್ಮ); (೨) ಲವ್ವಾಮ (ಸ್ವಯಂನಿಂದಕ ಆತ್ಮ); (೩) ಮುಲ್‌ಹಮ (ಪ್ರೇರಿತ ಆತ್ಮ); (೪) ಮುತ್‌ಮಿನ (ಪ್ರಶಾಂತ ಆತ್ಮ); (೫) ರಜೀಯ (ತೃಪ್ತ ಆತ್ಮ); (೬) ಮರ್‌ಜೀಯ (ದೇವಪ್ರಿಯ ಆತ್ಮ). ಈ ಕೊನೆಯ ಮೆಟ್ಟಲಲ್ಲಿ ಆತ್ಮ ಸಂಪೂರ್ಣ ವಿಕಾಸಹೊಂದಿ, ಪಾಪಸ್ವಭಾವಗಳೆಲ್ಲ ಅಳಿದು ಪುಣ್ಯಸ್ವಭಾವಗಳು ಮಾತ್ರ ಉಳಿದು, ತೃಪ್ತವಾಗಿ ವಿಶ್ವಾತ್ಮಕ್ಕೆ ವಿಧೇಯವಾಗಿ ನಡೆಯುತ್ತದೆ. ಕಾಮಿಲ (ಪರಿಪೂರ್ಣತೆ) ಎಂಬುದೇ ಕೇವಲ ದಶೆ. ಇದರಲ್ಲಿ ಪಾರ್ಥಿವ ಉಪಾಧಿಗಳೆಲ್ಲ ಕಳೆದು, ಆತ್ಮ ವ್ಯಾಪಾರಗಳೆಲ್ಲ ದೈವಾಜ್ಞೆಯಂತೆಯೇ ನಡೆದು, ಆತ್ಮ ದೇವರಿಗಾಗಿಯೂ ದೇವರಲ್ಲಿಯೂ ಜೀವಿಸುತ್ತದೆ. "ನಿಜ; ನಾನು ಮಾಡುವ ಪ್ರಾರ್ಥನೆ, ನಾನು ಕೊಡುವ ಬಲಿ, ನನ್ನ ಬಾಳು, ಸಾವು, ಎಲ್ಲವೂ ದೇವರಿಗಾಗಿ, ಸರ್ವಲೋಕನಾಥನಿಗಾಗಿ."

೩. **ಜೀವನ ಧ್ಯೇಯ :** ನಿಷಿದ್ಧಫಲವನ್ನು ತಿಂದದ್ದೇ ಮನುಷ್ಯನ ಅಸಂಪೂರ್ಣತೆಗೆ (ಬೀಳಿಗೆ) ಕಾರಣವಾಯಿತು. ಸ್ವಾಭಾವಿಕ ಸರಳ ಜೀವನ ಬಿಟ್ಟು, ಅಹಂಕಾರದಿಂದ ಅತಿಮಾನುಷವೃತ್ತಿಗೊಂಡು ಮನುಷ್ಯನು ಇಹಲೋಕದ ಪಾಶಕ್ಕೆ ಕಟ್ಟುಬಿದ್ದನು. "ನಾವು ಹೊಣೆಯನ್ನು (ನ್ಯಾಸವನ್ನು) ಸ್ವರ್ಗ, ಮರ್ತ್ಯ, ಪರ್ವತಗಳಿಗೆ ಹೊರಿಸಿದೆವು, ಆದರೆ ಅವು ಹೆದರಿ ಹಿಮ್ಮೆಟ್ಟಿದುವು. ಮನುಷ್ಯನು ಅದನ್ನು ಹೊತ್ತು ಸ್ವೈರವೃತ್ತಿಯವನೂ ಅಜ್ಞನೂ ಆದನು." ಮನುಷ್ಯನು ಸಂಸಾರ

ಬಂಧನದಿಂದ ಬಿಡುಗಡೆಹೊಂದಿ ಮತ್ತೆ ಶಾಂತಿಗಳಿಸಿದರೆ ಆತ್ಮದ ಪರಿಪೂರ್ಣತೆಯನ್ನು ಸಾಧಿಸಿದಂತಾಯಿತು. ಈ ಸಾಧನೆ ಲಭಿಸುವುದು ದೇವರ ಸೇವೆಯಿಂದ, ಮತ್ತು ಅವನ ಸೃಷ್ಟಿಯ ವಿಮರ್ಶೆಯಿಂದ. ದೇವರನ್ನು ಸೇವಿಸುವುದರಮೂಲಕ ಐಹಿಕ ಬಂಧನಗಳಿಂದ ಬಿಡುಗಡೆ ಹೊಂದುವುದೇ ಜೀವನದ ಪರಮ ಧ್ಯೇಯ. ಪಶು ಅರಿಯದ ಹೋರಾಟ ಮನುಷ್ಯನಿಗುಂಟು. ಪಶುವಿನ ಅಂಶ ಅಳಿದು ಪರಿಶುದ್ಧ ಆತ್ಮ ಬಂಧನ ಮುಕ್ತವಾಗುವವರೆಗೂ ದೇವರನ್ನು ಸೇವಿಸಬೇಕು. "ನಾನು (ದೇವರು) ಜಿನ್‌ಗಳನ್ನೂ ಮನುಷ್ಯರನ್ನೂ ನನ್ನ ಸೇವೆಗಲ್ಲದೆ ಮತ್ತೆ ಯಾವುದಕ್ಕೂ ಸೃಷ್ಟಿಸಲಿಲ್ಲ." "ನಿನಗೆ ನಿತ್ಯಪದವಿ ಬರುವವರೆಗೂ ನಿನ್ನ ಸ್ವಾಮಿಯನ್ನು ಸೇವಿಸು." "ಪ್ರತಿಯೊಬ್ಬನೂ ಅವನವನ ಮಾರ್ಗವನ್ನೇ ಅನುಸರಿಸುತ್ತಾನೆ. ಆದರೆ ಯಾರ ಮಾರ್ಗ ಸರಿಯೆಂಬುದನ್ನು ನಿನ್ನ ಸ್ವಾಮಿ ಬಲ್ಲ." ಆದರೂ ಪ್ರತಿಯೊಬ್ಬ ಮನುಷ್ಯನೂ ಸ್ವಪ್ರಯತ್ನದಿಂದ ಮೇಲಿಂದ ಮೇಲಕ್ಕೆ ಏರುತ್ತಹೋಗಿ ತನ್ನ ಗುರಿಯನ್ನು ತಾನು ಸಾಧಿಸಿಕೊಳ್ಳಬೇಕು; ಈ ಸಾಧನೆಯಲ್ಲಿ ದೇವರು ನೆರವಾಗುತ್ತಾನೆ. "ನನ್ನನ್ನು ಕರೆ, ನಾನು ಓ ಎನ್ನುತ್ತೇನೆ."

**೪. ಪುನರುತ್ಥಾನ:** ಇಲ್ಲಿ ತಾನು ಮಾಡಿದ ಕರ್ಮಗಳಿಗೆ ಅಲ್ಲಿ ತಕ್ಕ ಫಲವನ್ನು ಉಣ್ಣುವ ದಿನವೇ ಪುನರುತ್ಥಾನ ದಿನ. ಮನುಷ್ಯನೊಬ್ಬನೇ ಅಲ್ಲದೆ ಮೃಗಪಕ್ಷಿಗಳೂ ಈ ಪುನರುತ್ಥಾನದಲ್ಲಿ ಭಾಗಿಗಳಾಗುತ್ತವೆ. ಮನುಷ್ಯನು ತನ್ನ ಅಜ್ಞಾನವನ್ನರಿತು ಹಿಂದಿನ ಒಳ್ಳೆಯದು ಕೆಟ್ಟದನ್ನು ಕಂಡುಕೊಂಡು, ತನ್ನ ನಿಜಸ್ಥಿತಿಯನ್ನು ತಿಳಿಯುವುದೇ ಪುನರುತ್ಥಾನ. "ಆ ದಿನ, ಒಂದು ಆತ್ಮ ಮತ್ತೊಂದು ಆತ್ಮಕ್ಕೆ ಹೊಣೆಯಾಗಿ ನಿಲ್ಲಲಾರದು" (೮೨). "ಆ ದಿನ ತಂದೆ, ತಾಯಿ, ಮಡದಿ, ಮಕ್ಕಳು—ಎಲ್ಲರನ್ನೂ ದೂರ ತೊರೆದು ಒಬ್ಬನೇ ನಿಲ್ಲಬೇಕು" (೮೦). "ಪ್ರತಿಯೊಂದು ಆತ್ಮವೂ ತಾನು ಸಾಧಿಸಿದ್ದಕ್ಕೆ ತಾನೇ ಹೊಣೆಯಾಗಿರುತ್ತದೆ" (೭೪). "ಪ್ರತಿಯೊಬ್ಬನ ವಿಧಿಯನ್ನೂ ಅವನವನ ಕೊರಳಿಗೇ ಕಟ್ಟಿದ್ದೇವೆ. ಪುನರುತ್ಥಾನ ದಿನದಲ್ಲಿ ಪುಸ್ತಕವನ್ನು ತೆರೆದು ಅವನೆದುರಿಗೆ ಇಡುತ್ತೇವೆ" (೧೭-೨೪).

**೫. ವಿಧಿ ಅಥವಾ ತಕ್‌ದೀರ್ :** ತಕ್‌ದೀರ್ ಎಂದರೆ ಅಳೆದು ಕೊಡುವುದು ಎಂದು ಅರ್ಥ. ಎಂದರೆ ಎಲ್ಲವೂ ಭಗವಂತನಿಂದ ಮೊದಲೇ ಗೊತ್ತುಮಾಡಿ ಬಿಟ್ಟಿರುತ್ತದೆ. ದೈವನಿಯಾಮಕವಾಗದೆ ಯಾವುದೂ ಸಂಭವಿಸುವುದಿಲ್ಲ. ಆದರೆ ಈ ತಕ್‌ದೀರ್ ಮನುಷ್ಯನ ಇಚ್ಛಾಶಕ್ತಿಯ ಸ್ವಾತಂತ್ರ್ಯಕ್ಕೆ ಅಡ್ಡಿ ಬರುವುದಿಲ್ಲ; ಭಗವಂತನ ಸರ್ವಶಕ್ತತ್ವವನ್ನು ಮಾತ್ರ ತೋರಿಸತಕ್ಕದ್ದಾಗಿದೆ. ಮನುಷ್ಯನು ತಾನು ಪ್ರಯತ್ನಪಟ್ಟ ಹೊರತು ಏನೊಂದನ್ನೂ ಸಾಧಿಸಲಾರ. ಆದರೆ ಎಷ್ಟು ಪ್ರಯತ್ನಪಟ್ಟರೂ ದೈವಸಂಕಲ್ಪಕ್ಕೆ ವಿರುದ್ಧವಾಗಿ ಏನನ್ನೂ ಸಾಧಿಸಲಾರ; ಸಿದ್ಧಿ, ದೈವಾಧೀನ: ದೈವೇಚ್ಛೆ. "ಸಮಸ್ತವನ್ನೂ ವಿಧಿಗೊಳಪಡಿಸಿಯೇ ನಾವು ಸೃಷ್ಟಿಸಿರುತ್ತೇವೆ." (೫೪–೪೯). "ನಿನ್ನನ್ನು ನಗಿಸುವವನೂ, ಅಳಿಸುವವನೂ, ಬದುಕಿಸುವವನೂ, ಸಾಯಿಸುವವನೂ ಎಲ್ಲಾ ಅವನೇ." "ದೇವರು ತನ್ನ ಮನಬಂದವರನ್ನು ತಪ್ಪುದಾರಿಗೆ ಎಳೆಯುತ್ತಾನೆ, ತನ್ನ ಮನಬಂದವರನ್ನು ನೇರದಾರಿಯಲ್ಲಿಡುತ್ತಾನೆ." ಈ ಮೇಲಿನ ಸ್ವವಿರುದ್ಧ ವಚನಗಳಿಂದ ಹೊರಪಡುವುದಿಷ್ಟೆ. ಭಗವಂತನ ಇಚ್ಛಾಶಕ್ತಿಗೊಳಪಟ್ಟು ಮನುಷ್ಯನು ತನ್ನ ಕರ್ಮಗಳಿಗೆ ತಾನೇ ಕಾರಣ. ಮನುಷ್ಯನ ಇಚ್ಛಾಶಕ್ತಿಗೂ ಆ ಶಕ್ತಿಯನ್ನು ಕಾರ್ಯಕ್ಕೆ ಪ್ರೇರಿಸುವ ಕಾರಣಕ್ಕೂ ಇರುವ ಸಂಬಂಧ ಮನುಷ್ಯೇತರನಿಂದ ನಿಯಾಮಕವಾದದ್ದು. ಅದನ್ನು ಪ್ರಕೃತಿ ಅಥವಾ ವಿಶ್ವೇಚ್ಛೆ ಎಂದು ಕರೆಯಬಹುದು. ಸರ್ ಮಹಮ್ಮದ್ ಇಖ್‌ಬಾಲ್ ಅವರು ಹೇಳುವಂತೆ—"ಒಂದು ದೃಷ್ಟಿಯಿಂದ ನೋಡಿದರೆ, ವಿಧಿ ಯಾವುದೋ ಹೊರಗಿನ ಒಬ್ಬ ಜೀತ ತೆಗೆಯುವ ಯಜಮಾನನಲ್ಲ. ಆದರೆ ತನ್ನಲ್ಲೇ ಅಡಗಿದ್ದು ಮುಂದೆ ಸಾಧ್ಯವಾಗಲಿರುವ ಶಕ್ತಿ."

**೬. ಮೂರು ಮೂಲ ತತ್ವಗಳು :** ಇಸ್ಲಾಂ ಸಿದ್ಧಾಂತ ಮೂರು ಮೂಲತತ್ತ್ವಗಳನ್ನು ಅವಲಂಬಿಸಿದೆ. (೧) ಅಲ್ಲಾವಿನಲ್ಲಿ ನಂಬಿಕೆ. (೨) ಪುನರುತ್ಥಾನದಲ್ಲಿ ನಂಬಿಕೆ. (೩) ಪುಣ್ಯಕಾರ್ಯಗಳಲ್ಲಿ ನಂಬಿಕೆ. ಈ ತತ್ವಗಳನ್ನು ಅನುಸರಿಸಿ ಯಾರು ನಡೆದರೂ ಮುಸ್ಲಿಮರಾಗಲಿ, ಯೆಹೂದ್ಯರಾಗಲಿ, ಕ್ರೈಸ್ತರಾಗಲಿ ಇತರ ಯಾವ ಧರ್ಮದವರೇ ಆಗಲಿ

ಅವರಿಗೆ ಆಧ್ಯಾತ್ಮಿಕಪರಿಪೂರ್ಣತೆಯೂ ಮೋಕ್ಷವೂ ಉಂಟೆಂದು ಕುರಾನಿನ ಈ ಕೆಳಗಿನ ವಾಕ್ಯಗಳಿಂದ ತಿಳಿಯುತ್ತದೆ. "ಇಸ್ಲಾಮಿನಲ್ಲಿ ನಂಬಿಕೆಯುಳ್ಳವರು—ಯೆಹೂದ್ಯರು, ಕ್ರೈಸ್ತರು, ಸೇಬಿಯನ್ನರು,—ಯಾರೇ ಆಗಲಿ ಅಲ್ಲಾವಿನಲ್ಲೂ ಪುನರುತ್ಥಾನದಿನದಲ್ಲೂ ನಂಬಿ, ಒಳ್ಳೆಯ ಕೆಲಸಗಳನ್ನು ಮಾಡಿದರೆ ಅವರು ತಮ್ಮ ಸ್ವಾಮಿಯಿಂದ ಪ್ರತಿಫಲ ಪಡೆಯುತ್ತಾರೆ. ಅವರು ಅಂಜಬೇಕಾದ್ದಿಲ್ಲ, ನೋಯುವುದಿಲ್ಲ." (೨-೬೨). "ಧರ್ಮ ಎಂದರೆ ನೀನು ಪೂರ್ವಾಭಿಮುಖವಾಗಿ ಅಥವಾ ಪಶ್ಚಿಮಾಭಿಮುಖವಾಗಿ ನಿಲ್ಲುವುದಲ್ಲ. ಯಾವನು ಅಲ್ಲಾ, ಕಡೆಯ ದಿನ (ಪುನರುತ್ಥಾನ), ದೇವದೂತರು, ಶಾಸ್ತ್ರಗಳು, ಪೈಗಂಬರರು—ಇವರಲ್ಲಿ ನಂಬುತ್ತಾನೋ, ದೇವರ ಮೇಲಿನ ಭಕ್ತಿಗಾಗಿ ತನ್ನವರಿಗೂ, ಅನಾಥರಿಗೂ, ದಾರಿಹೋಕರಿಗೂ, ಭಿಕ್ಷುಕರಿಗೂ, ತನ್ನ ಧನವನ್ನು ದಾನಮಾಡುತ್ತಾನೋ, ತನ್ನ ಗುಲಾಮರನ್ನು ದಾಸ್ಯದಿಂದ ಬಿಡುಗಡೆ ಮಾಡುತ್ತಾನೋ, ಸರಿಯಾದ ಪ್ರಾರ್ಥನೆ ಪೂಜೆಗಳನ್ನು ಸಲ್ಲಿಸುತ್ತಾನೋ, ಬಡವರಿಗೆ ಕೊಡುತ್ತಾನೋ, ಕೊಟ್ಟ ಮಾತನ್ನು ನಡಸುತ್ತಾನೋ, ಕಷ್ಟದಲ್ಲಿ ತಾಳ್ಮೆ ತಂದುಕೊಳ್ಳುತ್ತಾನೋ ಅವನೇ ಧರ್ಮಿಷ್ಠ."

ಸಾರಾಂಶದಲ್ಲಿ ಯಾವನು ಪ್ರಾರ್ಥಿಸಿ, ಉಪವಾಸ ಮಾಡಿ, ಒಮ್ಮೆ ಮೆಕ್ಕಾಕ್ಕೆ ಯಾತ್ರೆ ಹೋಗಿ, ದಾನಧರ್ಮ ಕೊಟ್ಟು, ಮಾತು ನಡಸಿ, ತಾಳ್ಮೆಯುಳ್ಳವನಾಗಿ ಇರುವನೋ ಅವನೇ ಮುಸ್ಲಿಮ್.

# ಅಧ್ಯಾಯ ೨

## ಇಸ್ಲಾಂ ಹರಡಿಕೆ ಮತ್ತು ಇಸ್ಲಾಂ ದೇಶಗಳು

### ಆರೇಬಿಯ

ಪಡುವಲಲ್ಲಿ ಕೆಂಪುಕಡಲು, ಮೂಡಲಲ್ಲಿ ಹಿಂದೂಸಾಗರ, ಬಡಗಲಲ್ಲಿ ಸಿರಿಯಾ ಮರಳುಗಾಡು, ಈ ನಡುವೆ ಇರುವ ಸುಮಾರು ೧೦ ಲಕ್ಷ ಚದರ ಮೈಲಿಗಳ ವಿಸ್ತೀರ್ಣದ ಆರೇಬಿಯ ಮುಕ್ಕಾಲುಪಾಲೆಲ್ಲ ಬರಿಯ ಮರಳುಗಾಡು. ಇದರ ಮೂಲನಿವಾಸಿಗಳೆಂದು ಹೇಳುವ ಬಾದ್ಯರ ವಿಷಯವಾಗಿ ಏನೂ ತಿಳಿದುಬಂದಿಲ್ಲ. ಅವರನಂತರ ಅರಬರೂ, ಆಮೇಲೆ ಮುಸ್ತಾರಬರೂ ಅಲ್ಲಿದ್ದರು. ಇಸ್ಲಾಮಿನ ಏರಿಕೆಯ ಕಾಲದಲ್ಲಿ ಜನರು ತೆಂಕಣ ಬುಡಕಟ್ಟಿನವರು, ಬಡಗಣ ಬುಡಕಟ್ಟಿನವರು ಎಂದು ಎರಡು ಭಾಗವಾಗಿದ್ದರು. ಅಲ್ಲಲ್ಲಿ ಬೇಸಾಯದಲ್ಲಿ ತೊಡಗಿದ್ದ ಕೆಲವರು ಹೊರತು ಉಳಿದವರು ಹುಲ್ಲುಗಾವಲನ್ನೂ ಹಸುರನ್ನೂ ಅರಸುತ್ತಾ ಎಡೆಯಿಂದೆಡೆಗೆ ಅಲೆಯುತ್ತಾ ಜೀವಿಸುತ್ತಿದ್ದರು. ಈ ಬದವಿಗಳು ಅಂದರೆ ಅಲೆಯುವ ಅರಬರು ಪಶುಪಾಲನೆಯಿಂದಲೂ ಬೇಟೆಯಿಂದಲೂ ಜೀವಿಸುತ್ತಿದ್ದರು. ಒಂದು ವ್ಯವಸ್ಥಿತ ನೆಲೆ, ಆಡಳಿತ, ಅವರ ಮನಸ್ಸಿಗೆ ಅಷ್ಟಾಗಿ ಒಪ್ಪಿದಂತೆ ತೋರಲಿಲ್ಲ. ಅವರು ಬುದ್ಧಿವಂತರೂ ಧೈರ್ಯಶಾಲಿಗಳೂ ಶ್ರಮಜೀವಿಗಳೂ ಸ್ವತಂತ್ರರೂ ಆತ್ಮಗೌರವಿಗಳೂ ಉದಾರರೂ ಆಗಿದ್ದರು. ಆದರೆ ತಮ್ಮ ನೆಂಟರ ಅಥವಾ ಬುಡಕಟ್ಟಿನ ಜನರ ಕೊಲೆಯ ಸೇಡುತೀರಿಸಿಕೊಳ್ಳುವುದರಲ್ಲಿ ಅತಿಕ್ರೂರರೂ ನಿಷ್ಕರುಣಿಗಳೂ ಆಗಿದ್ದರು. ಕಳ್ಳು, ವ್ಯಾಪಾರಿಗಳ ಕೊಳ್ಳೆ, ಕೊಲೆ, ಹೆಣ್ಣು—ಇವುಗಳಲ್ಲಿ ಬಹು ಪ್ರೀತಿ ಅವರಿಗೆ. ಆದರೂ ತಮ್ಮ ನಾಯಕನಿಗೆ ಭಕ್ತಿಯಿಂದ ನಡೆದುಕೊಳ್ಳುತ್ತಿದ್ದರು; ಸ್ವತಂತ್ರಪ್ರಿಯರಾಗಿದ್ದರು. ಇವರಲ್ಲಿ ಕೆಲವರು ವಿಗ್ರಹಾರಾಧಕರು; ಕೆಲವರು ನಾಸ್ತಿಕರು; ಕೆಲವರು ಸಾವೇ ಕೊನೆಯೆಂದು ನಂಬಿದವರು; ಕೆಲವರು ಕ್ರೈಸ್ತ ಯೆಹೂದ್ಯ ಮತಗಳನ್ನು ಸೇರಿಕೊಂಡವರು.

ಮಹಮ್ಮದ್ ಸಾಯುವ ಒಂದೆರಡು ವರ್ಷಗಳಿಗೆ ಮುಂಚೆಯೆ ಅವನನ್ನು ಅರೇಬಿಯದಲ್ಲೆಲ್ಲರೂ ಐಹಿಕ ಪಾರಲೌಕಿಕ ವಿಷಯಗಳೆರಡ ರಲ್ಲೂ ಅಧಿಪತಿಯನ್ನಾಗಿ ಒಪ್ಪಿಕೊಂಡರು. ಮದೀನ ಹೊಸ ಸಾಮ್ರಾಜ್ಯದ ಕೇಂದ್ರವಾಯಿತು. ಮಹಮ್ಮದ್ ಕ್ರಿ.ಶ. ೬೩೨ ರಲ್ಲಿ ಸತ್ತು, ಅವನ ಅಧಿಕಾರಕ್ಕೆ ಅಬೂಬಕರ್ ಬಂದು ಸುಮಾರು ಮೂರು ವರ್ಷಗಳು ಆಳಿದನು. ಈ ಸ್ವಲ್ಪ ಕಾಲದಲ್ಲಿ ಇವನು ದಂಗೆ ಎದ್ದಿದ್ದ ಪಂಗಡಗಳನ್ನೆಲ್ಲ ಅಡಗಿಸಿ, ರೋಮನರಿಗೂ ಪಾರಸಿಕರಿಗೊ ಸೇರಿದ ಕೆಲವು ನಾಡುಗಳಿಗೆ ದಾಳಿ ಮೊದಲುಮಾಡಿದನು. ಎರಡನೆಯ ಕಲೀಫ಼ ಉಮರನ ಆಳಿಕೆಯಲ್ಲಿ ಪರ್ಷಿಯ, ಈಜಿಪ್ಟ್ ಮತ್ತು ಸಿರಿಯ ದೇಶಗಳು ಕೈವಶವಾದುವು. ಮೂರನೆಯ ಕಲೀಫ಼ ಉಸ್ಮಾನ್ ಮೂಡಲಲ್ಲಿ ಅಫ಼್ಘಾನಿಸ್ಥಾನದವರೆಗೂ, ಪಡುವಲಲ್ಲಿ ಆಫ್ರಿಕದ ತ್ರಿಪೋಲಿಯವರೆಗೂ ಇಸ್ಲಾಂ ಸಾಮ್ರಾಜ್ಯವನ್ನು ವಿಸ್ತರಿಸಿದನು. ನಾಲ್ಕನೆಯ ಕಲೀಫ಼ ಅಲಿ ಸರ್ಕಾರದ ಕೇಂದ್ರವನ್ನು ಇರಾಕಿನಲ್ಲಿಯ ಕೂಫ಼ಾ ಪಟ್ಟಣಕ್ಕೆ ವರ್ಗಾಯಿಸಿದನು. ಅಂದಿನಿಂದ ಅರೇಬಿಯ ಇಸ್ಲಾಂ ಸಾಮ್ರಾಜ್ಯದ ಒಂದು ಪ್ರಾಂತವಾಗಿತ್ತು. ಈಗ ಅದು ಅನೇಕ ರಾಜ್ಯಗಳಾಗಿ ಒಡೆದುಹೋಗಿದೆ; ಅಲ್ಲದೆ ಬ್ರಿಟಿಷರ ಪ್ರಭಾವಕ್ಕೆ ಒಳಪಟ್ಟಿವೆ. ಜನರು ಬಹುಪಾಲು ಸುನ್ನತ್ ಜಮಾತ್, ಮತ್ತು ವಹಾಬಿ ಪಂಗಡದವರು. ಇರಾಕ್ ಮುಂತಾದಕಡೆ ಷಿಯಾ ಪಂಗಡದವರೂ ಉಂಟು.

## ಸಿರಿಯ

ಇದು ರೋಮ್ ಮತ್ತು ಪರ್ಷಿಯ ಸಾಮ್ರಾಜ್ಯಗಳ ಹೋರಾಟದ ಕಣವಾಗಿತ್ತು. ಅಲ್ಲಿಯ ಜನರು ಅರಬರು, ಗ್ರೀಕರು, ರೋಮನರು, ಯೆಹೂದ್ಯರು, ಮೆಸಿಡೋನಿಯನ್ನರು, ಪಾರಸಿಕರು, ಕಾಡು ಜನರು—ಇವರೇ ಮೊದಲಾದ ಸಂಕರಜನರು. ಸಿರಿಯ ಅರಬರಿಗೆ ಪುಣ್ಯಕ್ಷೇತ್ರವಾಗಿತ್ತು. ಮಹಮ್ಮದ್ ತಾನು ಸಾಯುವುದಕ್ಕೆ ಮುಂಚೆಯೇ ಅದರಮೇಲೆ ದಂಡುಕಳಿಸಿದ್ದನು. ಕ್ರಿ. ಶ. ೬೩೭ ರಲ್ಲಿ ಎರಡನೆಯ ಕಲೀಫ಼ನ ಕಾಲದಲ್ಲಿ ಜೆರೂಸಲೆಮ್ ಮತ್ತು ಸಿರಿಯ ಇಸ್ಲಾಂ ರಾಜ್ಯಕ್ಕೆ

ಸೇರಿದುವು. ಮೊದಲನೆಯ ಉಮಯ್ಯ ಕಲೀಫ಼ ಮಾವಿಯನು ಡೆಮಾಸ್ಕಸ್ಸನ್ನು ತನ್ನ ರಾಜಧಾನಿಯಾಗಿ ಮಾಡಿಕೊಂಡನು. ಉಮಯ್ಯರ ಆಳಿಕೆಯ ಕೊನೆಯವರೆಗೆ ಇದೇ ರಾಜಧಾನಿಯಾಗಿತ್ತು. ಉಮಯ್ಯರ ನಂತರ ಬಂದ ಅಬ್ಬಾಸಿಯರು ಬಾಗ್‌ದಾದನ್ನು ರಾಜಧಾನಿಯಾಗಿ ಮಾಡಿಕೊಂಡರು. ಫ಼ಾತಿಮಿಯರ ಆಳಿಕೆಯಲ್ಲಿ ಸಿರಿಯ ಈಜಿಪ್ಟಿಗೆ ಸೇರಿತು. ಅನಂತರ ಅಯ್ಯುಬಿಯರಿಗೂ ಗುಲಾಮಿ ಅರಸರಿಗೂ ಕೈವಶವಾಗಿ, ಕೊನೆಯಲ್ಲಿ ಅಟೋಮನ್ ತುರ್ಕರ ಕೈಗೆಬಂದು, ಕ್ರಿ.ಶ. ೧೯೧೮ರ ಮಹಾಯುದ್ಧದವರೆಗೂ ಅವರ ವಶದಲ್ಲೇ ಇತ್ತು. ಈಗ ಅದು ಫ಼್ರಾನ್ಸಿನ ಕೈಕೆಳಗೆ ಆಶ್ರಿತಸಂಸ್ಥಾನ (ಮ್ಯಾಂಡೇಟರಿ) ಆಗಿದೆ. ಪ್ಯಾಲೆಸ್ಟೈನಿನಲ್ಲಿ ಇಂಗ್ಲಿಷರ ಆಳಿಕೆ ಇದೆ; ಜನರು ಬಹುಪಾಲು ಮುಸ್ಲಿಮರು; ಕ್ರೈಸ್ತರೂ, ಯೆಹೂದ್ಯರೂ ಹಲವರಿದ್ದಾರೆ. ಸಿರಿಯನ್ನರು ಅರಬ್ಬೀ ಭಾಷೆಯನ್ನು ಆಡುತ್ತಾರೆ. ಅರಬ್ಬೀ ಭಾಷೆಯಲ್ಲಿ ಮೊದಲನೆಯ ನಾಟಕದ ಕರ್ತೃ ಸಿರಿಯಾದವನು.

## ಈಜಿಪ್ಟ್

ಕ್ರಿ. ಶ. ೬೩೯ರಲ್ಲಿ ಎರಡನೆಯ ಕಲೀಫ಼ನ ಆಳಿಕೆಯಲ್ಲಿ ಅರಬರು ಈಜಿಪ್ಟಿಗೆ ದಾಳಿಯಿಟ್ಟು ಕ್ರಿ. ಶ. ೬೪೦ ರಲ್ಲಿ ರೋಮನ್ ಸೈನ್ಯವನ್ನು ಸೋಲಿಸಿದಂದಿನಿಂದ ಈಜಿಪ್ಟ್ ಮುಸ್ಲಿಂ ದೇಶವಾಗಿದೆ. ಕ್ರಿ.ಶ. ೧೧೭೧ ರ ವರೆಗೆ ಅದನ್ನು ಅರಬರೇ ಆಳಿದರು. ಅವರು ಪ್ರಜೆಗಳ ಮತವಿಷಯದಲ್ಲಿ ಕೈಹಾಕಲಿಲ್ಲ. ಫ಼ಾತಿಮಿಯರ ಆಳಿಕೆಯಲ್ಲಿ ಈಜಿಪ್ಟ್ ಸ್ವತಂತ್ರ ನಾಡಾಗಿ, ಇಸ್ಲಾಂ ಜ್ಞಾನ ಮತ್ತು ಸಂಸ್ಕೃತಿಗಳ ಪ್ರಸಿದ್ಧ ಕೇಂದ್ರಗಳಲ್ಲಿ ಒಂದಾಗಿತ್ತು. ಸಲಾಹುದ್ದೀನ್ ಎಂಬವನು ಕೊನೆಯ ಫ಼ಾತಿಮಿ ಕಲೀಫ಼ನನ್ನು ಉರುಳಿಸಿ ಕ್ರಿ. ಶ. ೧೧೭೧ ರಲ್ಲಿ ತನ್ನ ಸಂತತಿಯನ್ನು ನೆಲೆಗೊಳಿಸಿದನು. (ಇವನ ಕಾಲದಲ್ಲೇ ಕ್ರೈಸ್ತರ ೩ನೆಯ "ಕ್ರೂಸೇಡ್" ನಡೆದದ್ದು. ಸ್ಯಾಲಡೀನ್ ಎಂದು ಯುರೋಪಿಯನರು ಹೇಳುವವನು ಇವನೇ.) ಈ ಸಂತತಿ ಕ್ರಿ. ಶ. ೧೨೫೦ ರವರೆಗೆ ನಡೆದು ತರುವಾಯ ಕ್ರಿ. ಶ. ೧೫೧೭ರ ವರೆಗೆ ಮಂಲೂಕ್ ಅಥವಾ ಗುಲಾಮಿ

ಅರಸರು ಆಳಿದರು. ಇಂಡಿಯಾದ ಗುಲಾಮಿ ಅರಸರು ಮೊಗಲರ ದಾಳಿಯನ್ನು ಹಿಮ್ಮೆಟ್ಟಿಸಿದಂತೆಯೇ ಇವರೂ ಈಜಿಪ್ಟಿನಮೇಲೆ ದಂಡೆತ್ತಿಬಂದ ಮೊಗಲರನ್ನು ಓಡಿಸಿದರು. ಹೀಗೆ ಎರಡು ಗುಲಾಮಿ ಸಂತತಿಗಳು ಮೊಗಲರ ಕೈಯಿಂದ ಎರಡು ಪುರಾತನ ಸಂಸ್ಕೃತಿ ನಾಗರಿಕತೆಗಳು ನಾಶವಾಗುತ್ತಿದ್ದದ್ದನ್ನು ಸಂರಕ್ಷಣೆಮಾಡಿದುವು. ಕ್ರಿ.ಶ. ೧೫೧೭ರಲ್ಲಿ ತುರ್ಕಿ ಸುಲ್ತಾನ್ ಸಲೀಮನು ಈಜಿಪ್ಟನ್ನು ಗೆದ್ದು ತುರ್ಕಿ ಪ್ರಾಂತವನ್ನಾಗಿ ಸೇರಿಸಿಕೊಂಡನು. ಮಹಮ್ಮದಾಲಿ ಪಾಷಾವಿನ ಕಾಲದಲ್ಲಿ ಅದು ತುರ್ಕಿ ಸಾಮ್ರಾಜ್ಯದ ಅಧೀನದಲ್ಲಿ ಅರ್ಧ ಸ್ವತಂತ್ರರಾಷ್ಟ್ರವಾಯಿತು. ಕ್ರಿ. ಶ. ೧೯೧೪ ರಲ್ಲಿ ಬ್ರಿಟಿಷರು ಈಜಿಪ್ಟನ್ನು ಸ್ವತಂತ್ರ ರಾಷ್ಟ್ರವನ್ನಾಗಿ ಮಾಡಿ ಕೆಲವು ವಿಷಯಗಳಲ್ಲಿ ಅದನ್ನು ರಕ್ಷಿತರಾಜ್ಯವನ್ನಾಗಿ (ಪ್ರೊಟೆಕ್ಟೊರೇಟ್) ಮಾಡಿಕೊಂಡರು. ಈಗ, ಮಹಮ್ಮದಾಲಿ ಪಾಷಾ ಸಂತತಿಗೆ ಸೇರಿದ ಒಬ್ಬ ರಾಜನ ಕೈಕೆಳಗೆ ಅದು ನಾಮಮಾತ್ರ ಸ್ವಾತಂತ್ರ್ಯವನ್ನು ಅನುಭವಿಸುತ್ತಿದೆ. ಈಜಿಪ್ಟಿನಲ್ಲಿ ಇಸ್ಲಾಂ ಆಳಿಕೆಯನ್ನು ಮೂರು ಕಾಲದ್ದಾಗಿ ವಿಭಾಗಿಸಬಹುದು. ಮೊದಲನೆಯದು ಶುದ್ಧ ಅರಬರ ಆಳಿಕೆ. ಎರಡನೆಯದು ಪಾರಸೀ-ಅರಬರ ಆಳಿಕೆ. ಮೂರನೆಯದು ತುರ್ಕಿ-ಅರಬರ ಆಳಿಕೆ. ಮೊದಲನೆಯ ಕಾಲದಲ್ಲಿ ಅರಬ್ಬೀ ಭಾಷೆ ಸಾಮಾನ್ಯ ಭಾಷೆಯಾಗಿತ್ತು; ಅನೇಕ ಅರಬರು ಅಲ್ಲಿ ಹೋಗಿ ನೆಲಸಿ, ಮೆಕ್ಕಾ ಮತ್ತು ಮದೀನ ಪ್ರಭಾವ ಅದರಮೇಲೆ ಬಿದ್ದು ಇಸ್ಲಾಂ ಬಹುಬೇಗ ಹರಡಿತು. ಈಗಲೂ ನಡೆಯುತ್ತಿರುವ ಬಹು ಪ್ರಖ್ಯಾತವಾದ ಅಲ್‌ಅಸ್ಹರ್ ಎಂಬ ಇಸ್ಲಾಂ ವಿಶ್ವವಿದ್ಯಾನಿಲಯ ಆಗ (ಕ್ರಿ. ಶ. ೯೭೧) ಸ್ಥಾಪನೆಯಾದದ್ದು. ಎರಡನೆಯ ಕಾಲದಲ್ಲಿ ಅನೇಕ ಸೂಫಿ ಮಠಗಳು ಸ್ಥಾಪನೆಯಾದುವು. ಈಗಲೂ ಈಜಿಪ್ಟಿನವರು, ಕೆಲವು ಕಾಪ್ಟ್ ಕ್ರೈಸ್ತರ ಮತ್ತು ಯೂರೋಪಿನ ನೆಲಸಿಗರ ಹೊರತು, ಎಲ್ಲರೂ ಮುಸ್ಲಿಮರು. ಇವರು, ತುರ್ಕಿಯವರಂತೆ, ಇಸ್ಲಾಮನ್ನು ಹೊಸ ಕಾಲಕ್ಕೆ ಹೊಂದಿಸುವವರಲ್ಲಿ ಪ್ರಮುಖರು.

## ಇರಾಕ್

ಬಹು ಪುರಾತನ ನಾಗರಿಕತೆಯ ಮುಖ್ಯ ಕೇಂದ್ರಗಳಲ್ಲೆರಡಾದ ಬ್ಯಾಬಿಲೋನ್ ಮತ್ತು ಸಿರಿಯಗಳು ಇರಾಕಿನ ತೆಂಕಣ ಮತ್ತು ಬಡಗಣ

ಭಾಗಗಳಲ್ಲಿವೆ. ಇವು ಇರಾನ್ ಮತ್ತು ಸೆಮಿಟಿಕ್ ನಾಗರಿಕತೆಗಳ ಸಂಗಮಸ್ಥಾನ. ಇವು ಸೈರಸ್ ದಿ ಗ್ರೇಟ್ (ಕ್ರಿ. ಪೂ. ೫೬೦–೨೯) ಕಾಲದಲ್ಲಿ ಪಾರಸಿಕರಿಗೆ ಸೋತು, ಅಲೆಕ್ಸಾಂಡರ್ ಮತ್ತು ಸೆಲ್ಯೂಕಿನ ದೊರೆಗಳ ಕಾಲದಲ್ಲಿ ಹೊರತು, ಉಳಿದ ಕಾಲದಲ್ಲೆಲ್ಲ ಪರ್ಷಿಯದ ಕೈ ಕೆಳಗೆ ಇದ್ದುವು. ಮೊದಲನೆಯ ಕಲೀಫನ ಕಾಲದಲ್ಲಿ (ಕ್ರಿ.ಶ.೬೩೨-೩೪) ಅರಬರು ಮೊದಲು ಇರಾಕಿಗೆ ದಾಳಿಯಿಟ್ಟರು. ಹದಿನೈದು ವರ್ಷಗಳೊಳಗೆ ಇರಾಕ್ ಒಂದನ್ನೇ ಅಲ್ಲದೆ ಒಟ್ಟು ಪರ್ಷಿಯವನ್ನೇ ಗೆದ್ದು ಅರಬ್ಬೀಸಾಮ್ರಾಜ್ಯಕ್ಕೆ ಸೇರಿಸಿಕೊಂಡರು. ಮಹಮ್ಮದ್ ತನ್ನ ಅನುಯಾಯಿಗಳು ಇರಾಕನ್ನು ಗೆಲ್ಲುವುದಾಗಿ ಮುನ್ನುಡಿದಿದ್ದನಂತೆ. ಅರಬರ ನೆಲಸಿನಲ್ಲಿ ಕೂಫ ಮತ್ತು ಬಸ್ರ ಪಟ್ಟಣಗಳು ಎರಡು ಮುಖ್ಯ ದಂಡುಗಳಾಗಿಯೂ (ಲಷ್ಕರು). ತರುವಾಯ ಎರಡು ಪ್ರಸಿದ್ಧ ಜ್ಞಾನಕೇಂದ್ರಗಳಾಗಿಯೂ ಪರಿಣಮಿಸಿದುವು. ಕ್ರಿ.ಶ. ೭೫೦ ರಿಂದ ಕ್ರಿ.ಶ. ೧೨೫೮ ರ ವರೆಗೆ ಆಳಿದ ಅಬ್ಬಾಸಿದ್ದರಿಗೆ ಬಾಗ್‌ದಾದ್ ರಾಜಧಾನಿಯಾಗಿತ್ತು. ೧೩ನೆಯ ಶತಮಾನದಲ್ಲಿ ಮೊಗಲರು ಹಲಾಗುಖಾನನ ಕೈಕೆಳಗೆ ದಂಡೆತ್ತಿ ಬಂದು ಬಾಗ್‌ದಾದನ್ನು ಹಿಡಿದು, ಎಂಟುಲಕ್ಷ ಪ್ರಜೆಗಳನ್ನು ಕತ್ತಿಯ ಬಾಯಿಗಿಟ್ಟು, ಕೊನೆಯ ಕಲೀಫ ಮುಸ್ತಾಸಿಮ್ ಮತ್ತು ಅವನ ಮನೆತನದವರನ್ನು ಕೊಲೆ ಮಾಡಿದರು. ಹೀಗೆ ಇರಾಕ್ ಪರ್ಷಿಯನ್-ಮೊಗಲರ ಪ್ರಾಂತವಾಯಿತು. ೧೬ ರಿಂದ ೧೮ ನೆಯ ಶತಮಾನದವರೆಗೆ ಇರಾಕಿನ ಆಡಳಿತ ಪರ್ಷಿಯ ಮತ್ತು ತುರ್ಕಿ ರಾಜರ ಕೈ ಮಾರುತ್ತಲೇ ಇದ್ದು ಕೊನೆಗೆ ತುರ್ಕಿ ರಾಜ್ಯಕ್ಕೇ ಸೇರಿ, ಕ್ರಿ.ಶ. ೧೯೧೪ ರ ಮಹಾಯುದ್ಧದವರೆಗೆ ಅವರ ಅಧೀನದಲ್ಲೇ ಇತ್ತು. ಈಗ ಅದು ನಾಮಮಾತ್ರ ಸ್ವತಂತ್ರ ಸಂಸ್ಥಾನವಾಗಿದ್ದು, ನಿಜವಾಗಿ ಬ್ರಿಟಿಷರ ರಕ್ಷಣೆಯಲ್ಲಿದೆ. ಇರಾಕ್ ಷಿಯಾಪಂಗಡದ ದೇವತಾಶಾಸ್ತ್ರ (ಥಿಯಾಲೊಜಿ) ವ್ಯಾಸಂಗಕ್ಕೆ ಮುಖ್ಯ ಕೇಂದ್ರವಾಗಿದೆ. ಬಹುಪಾಲು ಜನರು ಷಿಯಾಪಂಗಡದವರು. ಸುನ್ನೀಪಂಗಡದವರೂ ಹೆಚ್ಚಾಗಿದ್ದಾರೆ. ಕ್ರೈಸ್ತರೂ ಯೆಹೂದ್ಯರೂ ಕೆಲವರುಂಟು.

## ಇರಾನ್ ಅಥವಾ ಪರ್ಷಿಯ

ಇರಾನ್ ಪ್ರಸ್ಥಭೂಮಿ ಟೈಗ್ರಸ್ ನದಿಯಿಂದ ಸುಲೇಮಾನ್ ಪರ್ವತದವರೆಗೂ ಜಕ್ಸಾರ್ಟಿಸ್ ನದಿಯಿಂದ ಪರ್ಷಿಯನ್ ಕೊಲ್ಲಿಯ ವರೆಗೂ ಹಬ್ಬಿ, ೧೦ ಲಕ್ಷ ಚದರ ಮೈಲಿಗಳ ಹರವು ಉಳ್ಳದ್ದಾಗಿದೆ. ಇರಾನಿನ ಚರಿತ್ರಕಾಲ ಮೀದಿಯ ರಾಜಸಂತತಿಯಿಂದ ಮೊದಲಾಗುತ್ತದೆ. ಇವರ ನಂತರ ಅಖೆಮಿನಾನಿಯರು ಬಂದರು. ಅಲೆಕ್ಸಾಂಡರ್ ಮತ್ತು ಸೆಲ್ಯೂಕಿಡೆ ದೊರೆಗಳ ಕೈಕೆಳಗಿನ ಹೊರ ಆಳಿಕೆಯ ತರುವಾಯ ಪಾರ್ಥಿಯನ್ನರು ಹೊಸ ಇರಾನ್ ಸಾಮ್ರಾಜ್ಯ ಸ್ಥಾಪಿಸಿ ೪೫೦ ವರ್ಷಗಳ ಕಾಲ ಆಳಿದರು. ಪಾರ್ಥಿಯನ್ನರ ತರುವಾಯ ಇಸ್ಲಾಂ ಪ್ರಬುದ್ಧಮಾನದ ವರೆಗೂ ಸಸಾನಿಯನ್ ಸಂತತಿಯವರು ಆಳಿದರು. ಈ ಸಂತತಿಯ ಕೊನೆಯ ದೊಡ್ಡದೊರೆಯಾದ ಎರಡನೆಯ ಖುಸ್ರೋ ಎಂಬವನು ಪಟ್ಟದಿಂದ ಉರುಳಿ ಕೊಲೆಯಾಗಿ ಪರ್ಷಿಯದಲ್ಲೆಲ್ಲ ೧೦ ವರ್ಷಗಳು ಅರಾಜಕತೆ ನೆಲಸಿ, ಸಾಮ್ರಾಜ್ಯವೇ ಬಿಗಿ ಸಡಿಲಿ ಅರಬರ ಬಾಯಿಗೆ ತುತ್ತಾಯಿತು. ಮೊದಲನೆಯ ಕಲೀಫ ಅಬೂಬಕರ್ ಪರ್ಷಿಯದ ಅನಾಯಕತ್ವವನ್ನು ಸ್ವಪ್ರಯೋಜನಕ್ಕೆ ತಿರುಗಿಸಿಕೊಳ್ಳಲು ದಂಡೆತ್ತಿ ಕಳಿಸಿದನು. ಅವನ ತರುವಾಯ ಬಂದವರು ದಾಳಿಯ ಮೇಲೆ ದಾಳಿಯಿಟ್ಟು, ಕ್ರಿ.ಶ. ೬೫೦ ರ ವೇಳೆಗೆ ಪರ್ಷಿಯದಲ್ಲೆಲ್ಲ ಅರಬರ ಆಳಿಕೆ ನೆಲಸಿತು. ಈ ಅರಬರ ಆಳಿಕೆಯನ್ನು ಎರಡುಭಾಗ ಮಾಡಬಹುದು. ಮೊದಲನೆಯದು ಶುದ್ಧ ಅರಬರ ಆಳಿಕೆ,—ಎರಡನೆಯ ಕಲೀಫನ ಕಾಲದಿಂದ ಅಬ್ಬಾಸಿ ಸಂತತಿಯ ಸ್ಥಾಪನೆಯವರೆಗಿನದು. ಎರಡನೆಯದು ಪಾರಸಿ-ಅರಬರ ಮತ್ತು ತುರ್ಕಿ-ಪಾರಸಿಕರ ಪ್ರಾಬಲ್ಯಕಾಲ. ಈ ಕಾಲದಲ್ಲಿ ಅನೇಕ ಸ್ವತಂತ್ರರಾಜ್ಯಗಳು ಮತ್ತು ಅರ್ಧಸ್ವತಂತ್ರರಾಜ್ಯಗಳು ಹುಟ್ಟಿಕೊಂಡು, ಅವು ಬಾಗ್ದಾದಿನ ಕಲೀಫನನ್ನು ಲೌಕಿಕ ಪಾರಲೌಕಿಕಗಳೆರಡರಲ್ಲೂ ನಾಮಮಾತ್ರಕ್ಕೆ ಒಡೆಯನನ್ನಾಗಿ ಒಪ್ಪಿಕೊಂಡುವು. ಪಾರಸಿಕರು ತಾವೇ ಇಷ್ಟಪಟ್ಟು ಇಸ್ಲಾಂ ಮತವನ್ನು ಸ್ವೀಕರಿಸಿದರು. ಬಲಾತ್ಕಾರವೇನೂ ನಡೆಯಲಿಲ್ಲ. ತಮ್ಮ ಪುರಾತನ ಝೊರಾಸ್ಟರ್ ಧರ್ಮಕ್ಕೂ ಇಸ್ಲಾಂ

ಧರ್ಮಕ್ಕೂ ಅನೇಕ ಸಾಮ್ಯಗಳನ್ನು ಕಂಡುಕೊಂಡು. ಧರ್ಮಾಸಕ್ತಿಯಿಂದಲೊ, ಸಾಮಾಜಿಕ ರಾಜಕೀಯ ಪದವಿಗಳನ್ನು ಗಳಿಸಬೇಕೆಂಬ ಆಸೆಯಿಂದಲೊ, ತಮ್ಮ ರಾಜರ ನಂಬಿಕೆಯನ್ನು ಸಂಪಾದಿಸಿಕೊಳ್ಳಬೇಕೆಂದೊ ಅವರು ಆಳುವರಸರ ಧರ್ಮವನ್ನೇ ಅಂಗೀಕರಿಸಿದರು. ಅಷ್ಟೇ ಅಲ್ಲ. ಅವರು ಕ್ರಮೇಣ ಅರಬ್ಬೀ ಭಾಷೆ, ಸಾಹಿತ್ಯ, ದರ್ಶನ, ದೇವತಾ ಶಾಸ್ತ್ರಗಳಲ್ಲಿ ಬಹು ಆಸಕ್ತಿ ವಹಿಸಿ ಕೆಲಸ ಮಾಡಿದರು. ೧೬ ನೆಯ ಶತಮಾನದವರೆಗೂ ಪರ್ಷಿಯದ ಬಹುಭಾಗದಲ್ಲಿ ಸುನ್ನತ್ ಜಮಾತ್ ಪಂಗಡ ಪ್ರಬಲವಾಗಿತ್ತು. ತರುವಾಯ ಷಿಯಾಮತ ರಾಜ್ಯಮತವಾಯಿತು. ಈಗ ಇರಾನ್ ಪ್ರಸ್ಥಭೂಮಿ ಪರ್ಷಿಯ ಮತ್ತು ಅಫ್ಘಾನಿಸ್ಥಾನ ಎಂದು ಎರಡು ಸ್ವತಂತ್ರ ರಾಜ್ಯಗಳಾಗಿ ಒಡೆದಿರುವುದಲ್ಲದೆ, ಕೆಲವು ಭಾಗ ಸೋವಿಯಟ್ ರಷ್ಯಾಕ್ಕೂ ಮತ್ತೆ ಕೆಲವುಭಾಗ ಪರ್ಷಿಯ, ತುರ್ಕಿ ಮತ್ತು ಇಂಗ್ಲಿಷರ ಆಳಿಕೆಗೂ ಸೇರಿಕೊಂಡುಹೋಗಿದೆ. ಸೈಬೀರಿಯಾದಲ್ಲಿಯೂ ಮುಸ್ಲಿಮರಿದ್ದಾರೆ.

## ಚೀನ

ಕ್ರಿ.ಶ. ೬೫೧ರ ವೇಳೆಗೆ ಸಾದ್ ಎಂಬವನೊ ಅಥವಾ ವಹಾಬ್ ಎಂಬವನೊ ಮುಸ್ಲಿಮನೊಬ್ಬನು ಕಡಲುಹಾಯ್ದು ಕಾಂಟನ್ನಿಗೆ ಬಂದಿದ್ದನೆಂದು ಚೀನೀಯರಲ್ಲಿ ನಂಬಿಕೆಯಿದೆ. ಆದರೆ ನಮಗೆ ಚಾರಿತ್ರಿಕ ಸಂಗತಿ ತಿಳಿಯುವುದು ಪರ್ಷಿಯದ ಸಸಾನಿಯನ್ ಸಂತತಿಯ ಕೊನೆಯ ದೊರೆ ಯಸ್ದ್‌ಜರ್ದ್ ಎಂಬವನೂ ಮತ್ತು ಅವನ ಮಗ ಫಿರೂಸ್ಸನೂ, ಅರಬರು ಪರ್ಷಿಯಾಕ್ಕೆ ದಂಡೆತ್ತಿಬಂದ ಕಾಟವನ್ನು ತಪ್ಪಿಸಿಕೊಳ್ಳುವುದಕ್ಕಾಗಿ, ಚೀನೀಯರ ಸಹಾಯ ಬೇಡಿದ್ದು. ಮೂರನೆಯ ಕಲೀಫನ ಕಾಲದಲ್ಲಿ ಮೊದಲನೆಯ ಚೀನ ರಾಯಭಾರಿ ಮದೀನಕ್ಕೆ ಬಂದಿದ್ದನು. ಉಮಯ್ಯ ಮತ್ತು ಅಬ್ಬಾಸಿ ಆಳಿಕೆಯಲ್ಲಿ ಮುಸ್ಲಿಮರಿಗೂ ಚೀನೀಯರಿಗೂ ಸೌಹಾರ್ದವಿತ್ತು. ಈ ಕಾಲದಲ್ಲಿ ಕೆಲವು ಮುಸ್ಲಿಂ ವ್ಯಾಪಾರಿಗಳೂ ಸಾಹಸೋದ್ಯಮಿಗಳೂ ಚೀನಾದಲ್ಲಿ ನೆಲಸಿದರು. ಸುಮಾರು ಕ್ರಿ.ಶ. ೭೪೨ ರಲ್ಲಿ ಷೆನ್‌ಸಿ ಪ್ರಾಂತದಲ್ಲಿ ಮೊದಲನೆಯ ಮಸೀದಿ ಕಟ್ಟಿತು.

ಎರಡನೆಯ ಅಬ್ಬಾಸಿ ಕಲೀಫ್ಷ ಮನ್‌ಸೂರ್ ಎಂಬವನು ಕ್ರಿ. ಶ. ೭೫೫ ರಲ್ಲಿ ಚೀನಾದಲ್ಲಿ ಎದ್ದ ದಂಗೆಯನ್ನಡಗಿಸಲು ಚೀನಾ ಚಕ್ರವರ್ತಿಯ ಸಹಾಯಕ್ಕಾಗಿ ನಾಲ್ಕು ಸಾವಿರ ಮುಸ್ಲಿಮರನ್ನು ಕಳಿಸಿದನೆಂದು ಚೀನೀಯರಲ್ಲಿ ಐತಿಹ್ಯವೊಂದುಂಟು. ಆದರೆ ಇದು ಕೇವಲ ಕಟ್ಟುಕತೆಯಾಗಿ ತೋರುತ್ತದೆ. ಆದರೂ, ಅರಬ ಮತ್ತು ಪಾರಸಿಕ ವ್ಯಾಪಾರಿಗಳು ಚೀನಾದೊಡನೆ ನೆಲದ ಮೇಲೂ ಕಡಲ ಮೇಲೂ ವ್ಯವಹಾರವಿಟ್ಟುಕೊಂಡಿದ್ದರೆಂಬುದೇನೊ ನಿಜ. ಮೊಗಲರು ಪರ್ಷಿಯವನ್ನು ಆಕ್ರಮಿಸಿದಾಗ ಪಾರಸಿಕರನೇಕರು—ಸಿಪಾಯಿಗಳು, ವ್ಯಾಪಾರಿಗಳು, ಕೆಲಸಗಾರರು—ಮೊಗಲರ ಪಾಳಯದಲ್ಲಿ ಸೇರಿಕೊಂಡು ಚೀನಾದಲ್ಲಿ ನೆಲಸಿ ಅಲ್ಲಿಯ ಹೆಂಗಸರನ್ನು ಮದುವೆಯಾದರು. ಮೊಗಲರ ಉಚ್ಛ್ರಾಯಕಾಲದಲ್ಲಿ ಪರ್ಷಿಯದಿಂದ ಒಂದೇಸಮನೆ ಮುಸ್ಲಿಮರು ಬಂದು ನೆಲಸುತ್ತಿದ್ದರು. ಒಮ್ಮೆ ಮಹಮ್ಮದ್‌ಷಾತೊಗಲಕ್ ವ್ಯಾಪಾರಿಗಳ ಮೂಲಕ ಚೀನಾದಲ್ಲಿ ಇಸ್ಲಾಂ ಅಭಿವೃದ್ಧಿಯನ್ನು ಕೇಳಿ, ಅಲ್ಲಿಯ ಮುಸ್ಲಿಮರ ಸಹಾಯವನ್ನು ನಿರೀಕ್ಷಿಸಿ ಚೀನಾಕ್ಕೆ ದಾಳಿಯಿಡಹೋದನು. ಆದರೆ ಅಲ್ಲಿಯ ಮುಸ್ಲಿಮರು ಮತಭೇದಕ್ಕಾಗಿ ತಮ್ಮ ದೇಶಕ್ಕೆ ಎರಡು ಬಗೆಯಲಿಲ್ಲ. ಇದರಿಂದ ಅವನ ಮನೋರಥ ಮುರಿದುಬಿತ್ತು. ಅಲ್ಲಿಯ ಮುಸ್ಲಿಮರು ಒಟ್ಟು ಜನತೆಯಲ್ಲಿ ಕಲೆತುಹೋಗಿ ಅವರೊಡನೆ ಒಂದಾಗಿ ನಾಡಿನ ಕಟ್ಟಳೆಗಳು, ಶಾಸ್ತ್ರಗಳು, ಸಂಪ್ರದಾಯಗಳು, ವೇಷಭೂಷಣಗಳು (ಕೊನೆಗೆ ಕೆಲವು ಮತಪ್ರಕ್ರಿಯೆಗಳನ್ನು ಕೂಡ)—ಇವೆಲ್ಲವನ್ನೂ ಗೌರವಿಸಿ ತಮ್ಮ ಜೀವನದಲ್ಲಿ ತಂದುಕೊಂಡು ನಡೆಯುತ್ತಿದ್ದರು. ಅವರ ಮಸೀದಿಗಳು ಬಹುಮಟ್ಟಿಗೆ ಚೀನೀಯರ ದೇವಾಲಯವನ್ನು ಹೋಲುತ್ತವೆ. ಚೀನಾದಲ್ಲಿ ಮುಸ್ಲಿಮರು ಸುಮಾರು ಮೂರು ಕೋಟಿಯಷ್ಟಿದ್ದಾರೆ. ತುರ್ಕಿಯ ಸುಲ್ತಾನ್ ಅಬ್ದುಲ್ ಹಮೀದ್ 'ಸರ್ವ ಇಸ್ಲಾಂ' ಸಂಸ್ಥಾಪನೆಯ ಉದ್ದೇಶದಿಂದ, ಚೀನಾ ಮುಸ್ಲಿಮರೊಡನೆ ನೇರವಾದ ವ್ಯವಹಾರ ಬೆಳಸುವುದಕ್ಕೆ ಪ್ರಯತ್ನಪಟ್ಟಿದ್ದನು. ಆದರೆ ಕ್ರಿ.ಶ. ೧೯೧೪ರ ಮಹಾಯುದ್ಧ ತುರ್ಕಿಯ ಗತಿನೀತಿಗಳನ್ನೇ ಬದಲಾಯಿಸಿ, 'ಸರ್ವ ಮುಸ್ಲಿಮ್' ನೀತಿ ನಿಂತುಹೋಯಿತು.

## ತುರ್ಕಿ

ತನ್ನ ಉಚ್ಛ್ರಾಯಕಾಲದಲ್ಲಿ ತುರ್ಕಿ ಸಾಮ್ರಾಜ್ಯ ಏಷ್ಯಾ-ಮೈನರ್, ಆರ್ಮೀನಿಯ, ಮೆಸಪಟೋಮಿಯ, ಸಿರಿಯ, ಅರೇಬಿಯ, ಬಾಲ್ಕನ್, ಹಂಗೇರಿ, ಈಜಿಯನ್ ದ್ವೀಪಗಳು, ಈಜಿಪ್ಟ್, ಉತ್ತರಆಫ್ರಿಕ ಮೊದಲಾದ ಪ್ರದೇಶಗಳನ್ನು ಒಳಗೊಂಡಿತ್ತು. ಈ ಸಾಮ್ರಾಜ್ಯದ ಮೊದಲನೆಯ ಸುಲ್ತಾನನಾದ ಉಸ್ಮಾನಿನಿಂದ ಅದಕ್ಕೆ ಉಸ್ಮಾನಿ ಅಥವಾ ಆಟೊಮನ್ ಸಾಮ್ರಾಜ್ಯವೆಂದು ಹೆಸರಾಯಿತು. ತುರ್ಕರು ಸಾಮಾನ್ಯವಾಗಿ ತಮ್ಮ ಪ್ರಜೆಗಳ ಮತವಿಷಯದಲ್ಲಿ ಕೈಹಾಕುತ್ತಿರಲಿಲ್ಲ. ತೆರಿಗೆಕೊಟ್ಟು, ರಾಜರಿಗೆ ಭಕ್ತಿಯಿಂದ ನಡೆದುಕೊಂಡರೆ ತೃಪ್ತರಾಗುತ್ತಿದ್ದರು. ವಸ್ತುತಃ ತುರ್ಕಿಯ ಕ್ರೈಸ್ತಪ್ರಜೆಗಳು, ಮಿಕ್ಕಕಡೆಗಳಲ್ಲಿಯ ತಮ್ಮ ಸಧರ್ಮಿಗಳ ಆಳಿಕೆಯಲ್ಲಿದ್ದದ್ದಕ್ಕಿಂತಲೂ ಹೆಚ್ಚು ಸ್ವಾತಂತ್ರ್ಯವನ್ನೂ ಅಧಿಕಾರವನ್ನೂ ಅನುಭವಿಸಿದರು. ಕ್ಯಾಥೊಲಿಕ್ ಮತ್ತು ಗ್ರೀಕ್ ಚರ್ಚುಗಳ ಪರಸ್ಪರ ದ್ವೇಷವೂ ಕ್ರೈಸ್ತ ವೈದಿಕರ ದಬ್ಬಾಳಿಕೆಯೂ ಸರ್ಕಾರದ ಪ್ರಭಾವವೂ ಇಸ್ಲಾಂ ಹರಡಿಕೆಗೆ ಸಹಾಯವಾದುವು. ಆದರೆ ಆಟೊಮನ್ ಸಾಮ್ರಾಜ್ಯದ ಎಲ್ಲಕಾಲದಲ್ಲಿಯೂ ಬಹುಸಾಮಾನ್ಯವಾಗಿಬಿಟ್ಟಿದ್ದ ದಂಗೆಗಳನ್ನು ಅಡಗಿಸುವುದರಲ್ಲಿ ಸರ್ಕಾರ ನಿರ್ದಾಕ್ಷಿಣ್ಯದಿಂದಲೂ ನಿಷ್ಕರುಣೆಯಿಂದಲೂ ಅನೇಕರನ್ನು ಕೊಲ್ಲಬೇಕಾಯಿತು. ಆಗ ಮುಸ್ಲಿಮ್ ಅಲ್ಲದವರನ್ನಲ್ಲದೆ ಷಿಯಾ ಪಂಗಡದ ಅನೇಕ ಮುಸ್ಲಿಮರನ್ನೂ ಕೊಂದರು. ಇದು ಕೇವಲ ರಾಜಕೀಯಕ್ಕಾಗಿ ಮಾಡಿದ್ದೇಹೊರತು ಮತಕ್ಕಲ್ಲ. ಕ್ರಿ. ಶ. ೧೯೧೪ರ ಮಹಾಯುದ್ಧದಲ್ಲಿ ತುರ್ಕಿ ಜರ್ಮನಿಯಕಡೆ ಸೇರಿಕೊಂಡು, ಅಪಜಯದಿಂದ ಆಫ್ರಿಕ ಮತ್ತು ಯೂರೋಪ್ ಖಂಡಗಳಲ್ಲಿ ತನಗೆ ಸೇರಿದ್ದ ಭಾಗಗಳನ್ನೆಲ್ಲ ಕಳೆದುಕೊಂಡು ಅದರ ದೊಡ್ಡ ಸಾಮ್ರಾಜ್ಯ ಒಂದು ಸಣ್ಣರಾಜ್ಯಕ್ಕಿಳಿಯಿತು. ಈಗಿನ ಜನಸಂಖ್ಯೆ ಸುಮಾರು ೧೬೦-೧೭೦ ಲಕ್ಷ. ಇದರಲ್ಲಿ ಬಹುಪಾಲು ಮುಸ್ಲಿಮರು. ವೇಷಭೂಷಣಗಳು, ಆಚಾರ ವ್ಯವಹಾರಗಳು ಎಲ್ಲದರಲ್ಲೂ ಅವರು ಐರೋಪ್ಯರನ್ನು ಅನುಕರಣೆ ಮಾಡುತ್ತಿದ್ದಾರೆ. ಅರಬ್ಬೀ ಲಿಪಿಯನ್ನು ಬಿಟ್ಟು ರೋಮನ್ ಲಿಪಿಯನ್ನು

ಅಂಗೀಕರಿಸಿದ್ದಾರೆ. ದೇವತಾಪ್ರಾರ್ಥನೆ ಕೂಡ ಅರಬ್ಬೀ ಭಾಷೆಗೆ ಬದಲು ತುರ್ಕಿಭಾಷೆಯಲ್ಲಿ ನಡೆಯುತ್ತಿದೆ. ಸ್ತ್ರೀಯರ ಸ್ವಾತಂತ್ರ್ಯ ಮತ್ತು ವಿದ್ಯೆ ಹೆಚ್ಚುತ್ತಿದೆ. ತುರ್ಕಿ ಸಮ್ರಾಟನು ಎಲ್ಲಾ ಮುಸ್ಲಿಮರಿಗೂ ಕಲೀಫ್ಹನೂ ಆಗಿದ್ದದ್ದು ತ್ಯಾಜ್ಯವಾಗಿದೆ. ತುರ್ಕರು ಕೇವಲ ರಾಷ್ಟ್ರೀಯತೆಯನ್ನು ಅವಲಂಬಿಸಿ, ಮತವನ್ನು ಹಿಂದಕ್ಕೆ ಹಾಕಿದ್ದಾರೆ.

## ಮಲೆಯಾ ದ್ವೀಪಸ್ತೋಮ

ಚೀನಾ ದೇಶದಲ್ಲಿಯಂತೆಯೇ ಪೆಸಿಫಿಕ್ ಸಾಗರದ ದ್ವೀಪಗಳಲ್ಲಿಯೂ ಇಸ್ಲಾಂ ಧರ್ಮ, ಅರಬ ಮತ್ತು ಪಾರಸಿಕ ವ್ಯಾಪಾರಿಗಳು ಸಿಪಾಯಿಗಳು ಮುಂತಾದವರಿಂದ ಪ್ರಚಾರವಾಯಿತು. ಆದರೆ ಕ್ರೈಸ್ತ "ಮಿಷನರಿ"ಗಳಂತೆ ಧರ್ಮಪ್ರಚಾರ ಸಂಸ್ಥೆಗಳನ್ನು ಏರ್ಪಡಿಸಿಕೊಂಡು ಕೆಲಸಮಾಡದೆ ಈ ತರದ ಉದ್ಯಮ ಹಲಕೆಲವು ವ್ಯಕ್ತಿಗಳಮೂಲಕ ನಡೆಯಿತು. ಪರ್ಷಿಯ ಅರೇಬಿಯಗಳಿಂದ ನೇರವಾಗಿ ಕೆಲವರೂ, ಇಂಡಿಯದಲ್ಲಿ ನೆಲಸಿ ಅಲ್ಲಿಂದ ಮುಂದೆಹೋಗಿ ಕೆಲವರೂ ಈ ದ್ವೀಪಗಳಲ್ಲಿ ಹರಡಿಕೊಂಡರು. ಈ ವ್ಯಾಪಾರಿಗಳು ಸಿಪಾಯಿಗಳು ಮುಂತಾದವರು ಹೋದೆಡೆಗಳಲ್ಲೆಲ್ಲ ಆಯಾನಾಡಿನ ನುಡಿಯನ್ನು ಆಡಿ ನಡೆಯನ್ನು ನಡೆದು ಅಲ್ಲಿಯ ಹೆಂಗಸರನ್ನು ಮದುವೆಯಾಗಿ ಅಲ್ಲಿಯ ಆಚಾರ ವ್ಯವಹಾರಗಳನ್ನು ಅನುಸರಿಸಿ ಜನತೆಯಲ್ಲಿ ಒಂದಾಗಿ ಕಲೆತುಬಿಡುತ್ತಿದ್ದರು. ೧೩ನೆಯ ಶತಮಾನದವೇಳೆಗೆ ಉತ್ತರ ಸುಮಾತ್ರದಲ್ಲಿ ಒಂದು ಮುಸ್ಲಿಂ ಮನೆತನ ಆಳುತ್ತಿತ್ತು. ಇಬ್ನೆ ಬತೂತ ಎಂಬ ಪ್ರಸಿದ್ಧ ಮುಸ್ಲಿಂ ದೇಶಯಾತ್ರಿಕನೊಬ್ಬನು ಈ ಮುಸ್ಲಿಂ ನೆಲಸುನಾಡುಗಳ ಮತ್ತು ಅಲ್ಲಿಯ ಜನರ ವಿಷಯದ ವಿವರಣೆಕೊಟ್ಟಿದ್ದಾನೆ. ಜಾವಾದಲ್ಲಿ ಇಸ್ಲಾಂ ಹರಡಿಕೆ ನಿದಾನವಾಗಿ ನಡೆದರೂ, ಕಾಲಕ್ರಮದಲ್ಲಿ ನ್ಯೂಗಿನಿ, ಬೋರ್ನಿಯೊ, ಸಾಂಬವ, ಸೆಲೆಬಿಸ್, ಮೊಲಕ್ಕಾ, ಫಿಲಿಫೈನ್ ಇವೇ ಮೊದಲಾದ ಪೆಸಿಫಿಕ್‌ಸಾಗರದ ದ್ವೀಪಗಳಲ್ಲಿ ಹರಡಿತು. ಅರಬರನ್ನನುಸರಿಸಿ ಪೋರ್ಚುಗೀಸರು, ಸ್ಪ್ಯಾನಿಷರು, ಡಚ್ಚರು, ಇಂಗ್ಲಿಷರು ಮೊದಲಾದ ಯೂರೋಪ್ ಜನರು ಸಮುದ್ರ ವ್ಯಾಪಾರವನ್ನು ಕೈಕೊಂ

ಡದ್ದಲ್ಲದೆ, ಅದನ್ನು ಮುಸ್ಲಿಮರಿಂದ ಕಸಿದುಕೊಂಡು ಹಿಂದೂಸಾಗರ, ಚೀನಾಸಮುದ್ರ ಮತ್ತು ಪೆಸಿಫಿಕ್ ಸಾಗರಗಳಲ್ಲೆಲ್ಲ ತಾವೇ ಬಲಶಾಲಿಗಳಾದರು. ಇದರಿಂದ ಅಡಚಣೆಗಳು ಒದಗಿ ಇಸ್ಲಾಂ ಪ್ರಚಾರ ತಡೆ ಹೊಂದಿತು. ಆದರೂ ನಿಧಾನವಾಗಿ ಸಾಗುತ್ತಲೇ ಇತ್ತು. ಈಗ ಈ ದ್ವೀಪಗಳ ಇಸ್ಲಾಂ ದೊರೆಗಳು ತಮ್ಮ ರಾಜಕೀಯ ಪ್ರಾಬಲ್ಯವನ್ನೂ ಅಧಿಕಾರವನ್ನೂ ಕಳೆದುಕೊಂಡು ಡಚ್ಚರು ಮುಂತಾದ ಯೂರೋಪ್ ಜನಾಂಗಗಳಿಗೂ ಅಮೆರಿಕಾ ಜನಾಂಗಕ್ಕೂ ಅಧೀನರಾಗಿದ್ದಾರೆ.

## ಉತ್ತರ ಮತ್ತು ಮಧ್ಯ ಆಫ್ರಿಕ

ಅರಬರು ಈಜಿಪ್ಟನ್ನು ಗೆದ್ದ ತರುವಾಯ, ಉಮಯ್ಯರ ಆಳಿಕೆಯಲ್ಲಿ ಪಶ್ಚಿಮದಕಡೆಗೆ ಒತ್ತಿಕೊಂಡುಹೋಗಲು ಮೊದಲು ಮಾಡಿದರು. ಉತ್ತರ ಆಫ್ರಿಕ ಕೈವಶವಾಗಿ, ಬರ್ಬರರು ೮ನೆಯ ಶತಮಾನದವೇಳೆಗೆ ಇಸ್ಲಾಂ ಮತಕ್ಕೆ ಸೇರಿದರು. ಕ್ರಿ. ಶ. ೭೧೧ರಲ್ಲಿ ತಾರೀಕ್ ಎಂಬೊಬ್ಬ ಬರ್ಬರ ಮುಸ್ಲಿಮನು ೧೨,೦೦೦ ಬರ್ಬರ ಮುಸ್ಲಿಮರೊಂದಿಗೆ ಸಮುದ್ರ ದಾಟಿ ಸ್ಪೈಯ್ನ್ ಮುತ್ತಿದನು. ಹೀಗೆ ಮುಹಮ್ಮದ್ ಸತ್ತ ೭೦ ವರ್ಷಗಳೊಳಗೆ ಇಸ್ಲಾಂ ಆಫ್ರಿಕದ ಪಶ್ಚಿಮಕ್ಕೆಲ್ಲ ಹರಡಿದ್ದೀ ಅಲ್ಲದೆ ಸ್ಪೈಯ್ನ್ ಕೈವಶವಾಗಿ ಮುಸ್ಲಿಂ ಕಲೀಫರು ಮತ್ತು ಮುಸ್ಲಿಂ ದೊರೆಗಳು ಅದನ್ನು ಸುಮಾರು ೭೦೦ ವರ್ಷಗಳು ಆಳಿದರು. ೧೧ನೆಯ ಶತಮಾನದಲ್ಲಿ ಇಸ್ಲಾಂ ಸಹರದ ಕಡೆಗೆ ಹೊರಟು, ೧೬ನೆಯ ಶತಮಾನದ ಕೊನೆಯ ಹೊತ್ತಿಗೆ, ಅದರ ಬಹುಭಾಗದಲ್ಲೆಲ್ಲ ಹರಡಿ ಟಿಂಬಕ್ಟು, ಬೋರ್ನೊ, ಮೊದಲಾದ ಮುಸ್ಲಿಂ ರಾಜ್ಯಗಳು ಹುಟ್ಟಿಕೊಂಡುವು. ೧೮ನೆಯ ಶತಮಾನದ ಕೊನೆಯಲ್ಲಿ ಉಸ್ಮಾನ್ ದನ್‌ಫದೀರ್ ಎಂಬೊಬ್ಬ ಮತಾಭಿಮಾನಿ ಅರೇಬಿಯಕ್ಕೆ ಬಂದು ಅಲ್ಲಿ ವಹಾಬಿ ತತ್ತ್ವಗಳನ್ನು ತಿಳಿದುಕೊಂಡು ಹಿಂದಿರುಗಿ ತನ್ನ ಅನುಯಾಯಿಗಳ ಸಂಸ್ಥೆಯೊಂದನ್ನೇರ್ಪಡಿಸಿ, ಆಫ್ರಿಕದ ಮುಸ್ಲಿಮರು ತನ್ನ ತತ್ತ್ವಗಳನ್ನು ಅನುಸರಿಸುವಂತೆಮಾಡಿ, ಅವರ ಸಹಾಯದಿಂದ ಅನೇಕ "ಕಾಫರ್" ಪಂಗಡಗಳನ್ನು ಇಸ್ಲಾಂ ಮತಕ್ಕೆ ಸೇರುವಂತೆ ಬಲಾತ್ಕರಿಸಿದನು. ೧೯ ನೆಯ ಶತಮಾನದ

ಮೊದಲಲ್ಲಿ ಸೂಫಿಮತದ ಕಾದ್ರೀಯಾ ಪಂಗಡದ ಗುರುವಾದ ಅಹಮದ್ ಎಂಬವನು ಆಫ್ರಿಕಕ್ಕೆ ತನ್ನ ಹಿಂಬಾಲಕರನ್ನು ಕಳುಹಿಸಿದನು. ಅದೇ ಶತಮಾನದ ಮಧ್ಯದಲ್ಲಿ ಮಹಮದ್ ಎಂಬವನು ತನ್ನ ಪ್ರಖ್ಯಾತ ಮತ ಪ್ರಚಾರಕ ಸಂಘವನ್ನು ಸ್ಥಾಪಿಸಿ, ಅದರ ಶಾಖೆಗಳನ್ನು ಈಜಿಪ್ಟಿನಿಂದ ಮೊರಾಕೊ ವರೆಗೆ ದೇಶದ ಮೇಲೆಲ್ಲ ಏರ್ಪಡಿಸಿದನು. ಈ ಸಂಘದ ಕೇಂದ್ರ ಜಘ್‌ಬುತ್‌ನಲ್ಲಿದೆ. ಈ ಸಂಘ ಮುಸ್ಲಿಂ ಸುಧಾರಣೆಯನ್ನೂ, 'ಕಾಫ್ಫರ' ರಲ್ಲಿ ಮುಸ್ಲಿಂ ಪ್ರಚಾರವನ್ನೂ, ತ್ರಿಪೋಲಿಯಲ್ಲಿ ಇಟಲಿಯ ಆಕ್ರಮಣದ ದಾಳಿಯನ್ನು ಪ್ರತಿಭಟಿಸುವ ಕಾರ್ಯವನ್ನೂ ಕೈಕೊಂಡಿದೆ. ಈ ಪ್ರದೇಶಗಳಲ್ಲಿ ಈಗೀಗ ಕ್ರೈಸ್ತಮತ 'ಮಿಷನರಿ' ಸಂಸ್ಥೆಗಳ ಬಲದಿಂದ ಪ್ರಚಾರವಾಗುತ್ತಿದೆ.

## ಇಂಡಿಯ

ಇಂಡಿಯಕ್ಕೂ ಪಶ್ಚಿಮ ಏಷ್ಯಕ್ಕೂ ಚರಿತ್ರಪೂರ್ವಕಾಲದಲ್ಲಿಯೇ ವ್ಯಾಪಾರ ಸಂಬಂಧ ಬೆಳೆದಿತ್ತು. ಇಂಡಿಯಕ್ಕೂ ರೋಮ್ ಚಕ್ರಾಧಿಪತ್ಯಕ್ಕೂ ಕ್ರಮವಾದ ವ್ಯಾಪಾರ ನಡೆಯುತ್ತಿತ್ತು. ಈಜಿಪ್ಟಿನವರು, ಪಾರಸಿಕರು, ಗ್ರೀಕರು, ರೋಮನರು, ಅರಬರು—ಇವರೇ ಮೊದಲಾದ ವ್ಯಾಪಾರಿಗಳು ಇಂಡಿಯದ ಪಡುವಲ ಕರೆಗೆ ಬಂದುಹೋಗುತ್ತಿದ್ದರು. ಮಲಬಾರಿನಿಂದ ಮೆಣಸು, ಏಲಕ್ಕಿ, ತೇಗುಮರ, ದಂತ, ರತ್ನಗಳು ಮುಂತಾದುವು ಹೊರಕ್ಕೆ ಹೋಗುತ್ತಿದ್ದುವು. ಷರೀಫ್, ಮಲಿಕ್—ಮೊದಲಾದ ಪಾರಸಿಕರೊ ಅಥವಾ ಮಿಶ್ರ ಅರಬರೊ ಮಲಬಾರಿಗೆ ಬಂದಿದ್ದರೆಂದೂ, ಚಂದ್ರನಗರಕ್ಕೆ ಬಂದು ಅಲ್ಲಿಯ ಹಿಂದೂ ದೊರೆಯನ್ನು ತಮ್ಮ ಮತಕ್ಕೆ ಸೇರಿಸಿಕೊಂಡರೆಂದೂ ಐತಿಹ್ಯವಿದೆ. ಇದು ಅಕಸ್ಮಾತ್ ಘಟನೆಯಾದರೂ, ಇಂಡಿಯದಲ್ಲಿ ಇಸ್ಲಾಂ ಮಿಷನರಿ ಕೆಲಸಕ್ಕೆ ಅದೇ ಮೊದಲೆನ್ನಬಹುದು. ಡೆಮಾಸ್ಕಸ್ಸಿನಲ್ಲಿ ಉಮಯ್ಯ ಸಂತತಿ ಸ್ಥಾಪನೆಯಾದಮೇಲೆ, ಮೆಸಪಟೋಮಿಯ ಮತ್ತು ಪರ್ಷಿಯದಲ್ಲಿ ಆ ಕಲೀಫರ ಪ್ರತಿನಿಧಿಯಾಗಿದ್ದ ಹಜ್ಜಾಜ್ ಎಂಬವನು ತನ್ನ ಸೋದರಮಗ ಮಹಮ್ಮದ್ ಎಂಬವನ ಕೈಕೆಳಗೆ ಒಂದು ಸೈನ್ಯವನ್ನು ಇಂಡಿಯದ ಮೇಲೆ

ಕಳುಹಿಸಿದನು. ಮಹಮ್ಮದ್ ಸಿಂಧುವನ್ನು ಮುತ್ತಿ ಅಲ್ಲಿಯ ರಾಜನನ್ನು ಸೋಲಿಸಿ ಕ್ರಿ.ಶ. ೭೧೧ರಲ್ಲಿ ಖಿಲಾಫತ್ ಆಳಿಕೆಯನ್ನು ನೆಲೆಗೊಳಿಸಿದನು.

೯ನೆಯ ಶತಮಾನದ ಕೊನೆಗೆ ಅರಬರ ಖಿಲಾಫತ್ ಕ್ಷೀಣ ಹೊಂದಿ ಪರ್ಷಿಯದಲ್ಲೂ ಬಹು ವಿಸ್ತಾರವಾಗಿದ್ದ ಇಸ್ಲಾಂ ಚಕ್ರಾಧಿಪತ್ಯದ ಇತರ ಭಾಗಗಳಲ್ಲೂ ಸ್ವತಂತ್ರರಾಜ್ಯಗಳು ಹುಟ್ಟಿಕೊಂಡುವು. ಇವುಗಳಲ್ಲಿ ತುರ್ಕಿ ಗುಲಾಮನಾದ ಸಬಕ್ತಗೀನ್ ಸ್ಥಾಪಿಸಿದ ಘಸ್ನಿ ರಾಜ್ಯ ಒಂದಾಗಿತ್ತು. ಇವನ ಮಗ ಶಕ್ತಿವಂತನೂ ಸಾಹಸಿಯೂ ಮಹತ್ವಾಕಾಂಕ್ಷಿಯೂ ಆದ ಮಹಮ್ಮದ್ ತನ್ನ ತಂದೆಯ ದಾರಿಯನ್ನೇ ಹಿಡಿದು ತಾನೂ ಇಂಡಿಯಕ್ಕೆ ನಡೆದು, ಪಂಜಾಬ್ ಮುತ್ತಿ ಅಲ್ಲಿಯ ರಾಜನನ್ನು ಸೋಲಿಸಿದನು. ಆವನ ಸುಲಭ ಜಯ. ಮಿತಿಯಿಲ್ಲದ ಕೊಳ್ಳೆ, ವಿಗ್ರಹಾರಾಧಕರ ಮೇಲೆ ಹೂಡಿದ ಪವಿತ್ರಯುದ್ಧದ ನೆಪ—ಇವೆಲ್ಲವೂ ಒಟ್ಟು ಸೇರಿ ಅನೇಕ ಜನರು ಘಸ್ನಿಮಹಮ್ಮದನ ಸೈನ್ಯಕ್ಕೆ ಸೇರಿಕೊಂಡರು. ಈ ಮಹಮ್ಮದ್ ಸಾಯುವ ಹೊತ್ತಿಗೆ ತನ್ನ ಬಲವನ್ನು ಪಂಜಾಬಿನಲ್ಲಿ ಚೆನ್ನಾಗಿ ನೆಲೆಗೊಳಿಸಿದ್ದನು. ಇವನು ಆರಂಭಿಸಿದ ಕೆಲಸವನ್ನು ಮೊಗಲರು, ತಾರ್ತರರು, ಖೊರಾಸಾನಿಗಳು, ಆಫ್ಘನರು ಮುಂದುವರಿಸಿದರು. ಕೆಲವರು ದಾಳಿಯಿಟ್ಟು ಕೊಳ್ಳೆ ಹೊಡೆದು ಹಿಂದಿರುಗಿದರು. ಮತ್ತೆ ಕೆಲವರು ಇಲ್ಲಿಯೇ ನೆಲಸಿ ರಾಜ್ಯಗಳನ್ನು ಸ್ಥಾಪಿಸಿ ಚಕ್ರಾಧಿಪತ್ಯಗಳನ್ನು ಕಟ್ಟಿದರು. ಈ ಸೇನಾನಿಗಳೊಬ್ಬರಿಗೂ ಮತಪ್ರಚಾರ ಮಾಡಬೇಕೆಂಬ ಉದ್ದೇಶ ಕೊಂಚವೂ ಇರಲಿಲ್ಲ. ಹಿಂದೂ ದೊರೆಗಳ ಒಳಹೋರಾಟದ ಪ್ರಯೋಜನ ಹೊಂದಿ ಕೊಳ್ಳೆ ಹೊಡೆಯುವುದು, ತಮ್ಮ ಲೌಕಿಕ ಲೋಭಗಳನ್ನು ತೀರಿಸಿಕೊಳ್ಳುವುದು, ಸಾಧ್ಯವಾದೆಡೆ ರಾಜ್ಯ ಕಟ್ಟುವುದು—ಇವೇ ಅವರ ಮಹೋದ್ದೇಶಗಳಾಗಿದ್ದುವು. ಅವರಲ್ಲಿ ಅನೇಕರು ನಿರಕ್ಷರಕುಕ್ಷಿಗಳು. ಒಬ್ಬರಿಗೂ ಹೆಗ್ಗುರಿಯಾಗಲಿ ಧಾರ್ಮಿಕ ದೃಷ್ಟಿಯಾಗಲಿ ಇದ್ದಂತೆ ತೋರುವುದಿಲ್ಲ. ಘಸ್ನಿ ಮಹಮ್ಮದ್, ತೈಮೂರ್, ಔರಂಗಜೇಬ್, ಟಿಪ್ಪುಸುಲ್ತಾನ್—ಮೊದಲಾದವರು ಇಸ್ಲಾಮಿನಲ್ಲಿ ಅತ್ಯಭಿಮಾನವನ್ನೇನೋ ತೋರಿಸಿದ್ದಾರೆ. ಆದರೆ ಅವರ ಆಳಿಕೆಯನ್ನು ಒಳಹೊಕ್ಕು ನೋಡಿದರೆ ಇಲ್ಲಿ ವಿಗ್ರಹಗಳನ್ನು ಒಡೆಯುವುದು, ಅಲ್ಲಿ

ಗುಡಿಗಳನ್ನು ಕೆಡಹುವುದು, ಮತ್ತೊಂದೆಡೆಯಲ್ಲಿ ಕೆಲವರನ್ನು ಇಸ್ಲಾಮಿಗೆ ಬಲಾತ್ಕಾರದಿಂದ ಸೇರಿಸುವುದು—ಮೊದಲಾದ ಅಂಶಗಳನ್ನು ಬಿಟ್ಟರೆ ಇಸ್ಲಾಂ ಧರ್ಮದ ಸರಿಯಾದ ಪ್ರಚಾರಕ್ಕೆ ಇವರು ದೊಡ್ಡ ಕೆಲಸವೇನೂ ನಡಸಲಿಲ್ಲ. ರಾಜಕೀಯಕ್ಕಾಗಿ ಇವರು ಹಿಂದೂ ಮಂತ್ರಿಗಳನ್ನು ಇಟ್ಟು ಕೊಂಡಿದ್ದರು. ಆದರೆ ಈ ಸಾಹಸಿಗಳು, ಚಕ್ರವರ್ತಿಗಳು ಇಸ್ಲಾಮಿಗೆ ಮಾಡಿದ ದೊಡ್ಡ ಉಪಕಾರವೆಂದರೆ ಪರ್ಷಿಯ, ಅರೇಬಿಯ ಮೊದಲಾದೆಡೆ ಗಳಿಂದ ವಿದ್ವಾಂಸರು ಬಂದು ಇಂಡಿಯದಲ್ಲಿ ನೆಲಸುವುದಕ್ಕೆ ಕೊಟ್ಟ ಉತ್ತೇಜನ. ಹೀಗೆ ನೆಲಸಿದ ವಿದ್ವಾಂಸರು ದೇಶದ ಭಾಷೆ, ಆಚಾರ ವ್ಯವ ಹಾರಗಳನ್ನೇ ಅನುಸರಿಸಿ, ತಮ್ಮ ಇಸ್ಲಾಂ ತತ್ತ್ವಗಳನ್ನು ಇಲ್ಲಿಯ ಸಂಸ್ಕೃತಿ ದರ್ಶನಗಳೊಡನೆ ಹೊಂದಿಸಿಕೊಂಡು ಒಂದು ಹೊಸ ಮಾರ್ಗ ವನ್ನು ಸ್ಥಾಪಿಸಿ, ಸಾವಿರಗಟ್ಟಳೆ ಜನರನ್ನು (ಮುಖ್ಯವಾಗಿ ಕೆಳವರ್ಗ ದವರನ್ನು) ಇಸ್ಲಾಂ ಮತಕ್ಕೆ ಸೇರಿಸಿಕೊಂಡರು.

## ಮುಸ್ಲಿಂ ಮತಪ್ರಚಾರ

ಈ ಮತಾಂತರೀಕರಣದಲ್ಲಿ (೧) ಹಿಂದುಗಳಲ್ಲಿ ಜಾತಿಪದ್ಧತಿಗಳ ಕಟ್ಟು ಬಹು ಬಿಗಿಯಾಗಿ ನಿಮ್ನ ಜನರಿಗೆ ಬಹು ತೊಂದರೆಗಿಟ್ಟುಕೊಂ ಡದ್ದು ಮತ್ತು ಇಸ್ಲಾಮಿನಲ್ಲಿ ಸರ್ವಸಮತ್ವದೃಷ್ಟಿ ಇದ್ದದ್ದು; (೨) ಆರ್ಥಿಕ ದುಸ್ಥಿತಿ; (೩) ಸ್ವಧರ್ಮದಲ್ಲೇ ಅಜ್ಞಾನ; (೪) ಮುಸ್ಲಿಂ ಶ್ರೀಮಂತರ, ಸೇನಾನಿಗಳ, ಮೌಲ್ವಿಗಳ, ಆಳುವರಸರ ಬಲಾತ್ಕಾರ; (೫) ಇಸ್ಲಾಮಿಗೆ ಸೇರಿದವರಿಗೆ ದಂಡವಿಮೋಚನೆ ಅಥವಾ ಉದ್ಯೋಗ ಕಲ್ಪನೆ; (೬) ಸೂಫಿ ಸಾಧುಗಳ 'ಮಿಷನರಿ' ಪ್ರಚಾರ—ಇವೇ ಮೊದಲಾದ ಕಾರಣಗಳು ಇವರಿಗೆ ನೆರವಾದುವು. ಈ ಕೊನೆಯದೇ ಎಲ್ಲಕ್ಕಿಂತಲೂ ಮುಖ್ಯವಾದ ಕಾರಣ. ಬೇರೆ ಕಡೆಗಳಂತೆಯೇ ಇಂಡಿಯ ದಲ್ಲೂ ಇಸ್ಲಾಂ ಪ್ರಚಾರ ಕೆಲವು ವ್ಯಕ್ತಿಗಳ ಮೂಲಕ ನಡೆಯಿತೇ ಹೊರತು ಸಂಸ್ಥಾ ಬಲದಿಂದಾಗಲಿ ಸರ್ಕಾರದ ಬಲದಿಂದಾಗಲಿ ಅಷ್ಟಾಗಿ ನಡೆಯಲಿಲ್ಲ. ಅಜ್ಮೀರದಲ್ಲಿ ಬಂದು ನೆಲಸಿದ ಇರಾನಿನ ಖಾಜ ಮೊಯೀ ನುದ್ದೀನ್ ಚಿಶ್ತೀ (೧೨ ಶ. ಮಾ.), ಲಾಹೋರಿನಲ್ಲಿ ಬಂದು ನೆಲಸಿದ

ಷೇಕ್ ಇಸ್ಮಾಯೀಲ್ (ಕ್ರಿ.ಶ. ೧೦೦೫), ಗುಜರಾತಿನಲ್ಲಿ ಬಂದು ನೆಲಸಿದ ಇರಾನಿನ ಇಸ್ಮೇಲಿಯಾ ಪಂಗಡದ ನೂರುದ್ದೀನ್ ಮೊದಲಾದವರು ಈ ಪ್ರಚಾರಕರಲ್ಲಿ ಮುಖ್ಯರಾದವರು. ಮುಸ್ಲಿಮರು ಹಿಂದಿನ ರಾಜಕೀಯ ಬಲವನ್ನು ಈಗ ಕಳೆದುಕೊಂಡಿದ್ದರೂ ಮತಪ್ರಚಾರದ ಹಮ್ಮು ಏನೂ ಕಡಮೆಯಾಗಿಲ್ಲ. ಕ್ರೈಸ್ತ ಮಿಷನರಿಗಳ ಮತ್ತು ಆರ್ಯಸಮಾಜದ ಸ್ಪರ್ಧೆಯಿಂದ ಈ ಪ್ರಚಾರ ಬಲಗೊಳ್ಳುತ್ತಿದೆ. ಈ ಕೆಲಸಕ್ಕಾಗಿ ಈಗೀಗ ಅಲ್ಲಲ್ಲಿ ಹಲಕೆಲವು ಸಂಘಗಳು ಏರ್ಪಟ್ಟಿವೆ. ಕಾಲಕ್ಕೆ ತಕ್ಕಂತೆ ಇವು ಮುಸ್ಲಿಂ ಸಂಸ್ಕೃತಿಯನ್ನೂ ಮತವನ್ನೂ ಒಕ್ಕಣಿಸಿ ವಿಜ್ಞಾನಶಾಸ್ತ್ರಕ್ಕೂ ನೂತನ ಜ್ಞಾನಕ್ಕೂ ಸರಿಹೊಂದಿಸಿ ಜನರ ಬಲವನ್ನು ಸೆಳೆದುಕೊಳ್ಳುತ್ತಿವೆ. ಮೊದಲಿಂದಲೂ ಇಸ್ಲಾಂ ಧರ್ಮಪ್ರಭಾವ ಹಿಂದುಗಳ ಮೇಲೆ ಬೀಳದೆ ಇಲ್ಲ. ಹಿಂದೂ ಮುಸ್ಲಿಂ ಸಂಘಟನೆಗೆ ಕೆಲಸ ಮಾಡಿದ ರಮಾನಂದ್, ನಾನಕ್, ದಾದೂ, ಕಬೀರ್, ಚೈತನ್ಯ—ಇವರೇ ಮೊದಲಾದ ಸುಧಾರಕರು ಇದಕ್ಕೆ ದೃಷ್ಟಾಂತವಾಗಿದ್ದಾರೆ.

## ಹಿಂದೂ ರಾಷ್ಟ್ರೀಯತೆ ಮತ್ತು ಇಸ್ಲಾಂ

ಹಿಂದೂ ಮುಸ್ಲಿಂ ಸಂಬಂಧಗಳು ಮತೀಯ ಕ್ಷೇತ್ರದಲ್ಲಿ ಹೇಗೋ ಹಾಗೆ ರಾಷ್ಟ್ರೀಯ ಕ್ಷೇತ್ರದಲ್ಲೂ ಕೂಡಿಕೊಳ್ಳುತ್ತಿವೆ. ಆದರೆ ಪ್ರತಿಬಂಧಕಗಳು ಇಲ್ಲದೇ ಇಲ್ಲ. ಏಕದೇವತಾ ವಾದಕ್ಕೆ ಬಹು ದೇವತಾ ಅಥವಾ ಸರ್ವದೇವತಾ ವಾದ ಹೇಗೆ ವಿರುದ್ಧವೋ ಹಾಗೆಯೇ ತಮ್ಮ ಹಿಂದಿನ ಇಸ್ಲಾಂ ಮತ್ತು ಮೊಗಲಾಯಿ ವೈಭವಗಳನ್ನೂ ರಾಜ್ಯಭಾರವನ್ನೂ ಮುಸ್ಲಿಮರೂ, ಪುರಾತನ ಭಾರತದ ಹಿಂದೂ ವೈಭವಗಳನ್ನೂ ರಾಜ್ಯಭಾರವನ್ನೂ ಹಿಂದೂಗಳೂ ಮರೆಯಲಾರರಾಗಿದ್ದಾರೆ. ಜನಾಂಗದ ಒಕ್ಕಟ್ಟಿಗೂ ಏಳಿಗೆಗೂ ಬೇಕಾದ ರಾಜಕೀಯ, ಸಾಮಾಜಿಕ, ಆರ್ಥಿಕಗಳಲ್ಲಿ ಏಕಗ್ರ್ಯಹಕ್ಕೃತ್ಯವೃಷ್ಟಿ ಪೂರ್ಣವಾಗಿ ಬೆಳೆಯಲು ಅಡಚಣೆಯಾಗಿದೆ. ಏಕಭಾಷೆ, ಉಡುಪು, ಆಚಾರವ್ಯವಹಾರ, ಇವುಗಳಲ್ಲಿ ಮಧ್ಯಸ್ಥಿಕೆ, ರಾಜಿ ಸಾಧ್ಯ; ಮೊಗಲಸಾಮ್ರಾಜ್ಯದಲ್ಲಿ ಇವು ಏಕರೂಪಕ್ಕೆ ತಿರುಗಲು ಆರಂಭವಾಗಿ ಬ್ರಿಟಿಷ್ ಆಳಿಕೆಯಲ್ಲಿ ಮತ್ತಷ್ಟು ಒಮ್ಮುಖ

ವಾಗುತ್ತಿವೆ. ನಾಳೆಯ ಇಂಡಿಯದ ಸಮಾಜ ಇಂಡೋ-ಯೂರೋಪಿಯನ್ ತಳಹದಿಯ ಮೇಲೆ ರೂಪುಗೊಳ್ಳುತ್ತಿದೆ. ವಿದ್ಯಾವಂತರಾದ ಹಿಂದೂಗಳೂ ಮುಸ್ಲಿಮರೂ ಇದರಲ್ಲಿ ಭ್ರಾತೃಭಾವದಿಂದ ಕೈಗೂಡಿಸಿ ಕೆಲಸ ಮಾಡುತ್ತಿದ್ದಾರೆ. ರಮಾನಂದ್, ಕಬೀರ್ ಮುಂತಾದ ಸುಧಾರಕರೂ, ಸೂಫಿಭ್ರಾತೃವರ್ಗವೂ ಧಾರ್ಮಿಕ ದಾರ್ಶನಿಕ ವಿರೋಧಗಳನ್ನು ಸಮನ್ವಯದಿಂದ ಬಹುಮಟ್ಟಿಗೆ ಸಮಾಧಾನ ಮಾಡಿದ್ದಾರೆ. ಕೇವಲ ಮತೀಯತೆಯನ್ನು ಕಡಮೆ ಮಾಡಿ ಹೆಚ್ಚುಹೆಚ್ಚಾಗಿ ರಾಷ್ಟ್ರೀಯತೆಯನ್ನು ಬಲಪಡಿಸುತ್ತಾ ಹೋದಲ್ಲಿ, ಹಿಂದೂ ಮುಸ್ಲಿಂ ಮೈತ್ರಿಯೂ ಐಕಮತ್ಯವೂ ಸ್ಥಿರವಾಗಿ, ಬ್ರಿಟಿಷ್ ಸಂಪರ್ಕದ ನೂತನ ಜೀವನದಲ್ಲಿ ದಾಸ್ಯವೃತ್ತಿ ತೊಲಗಿ, ಮೂಢಭಕ್ತಿಗಳೂ ಒಣಸಂಪ್ರದಾಯಗಳೂ ಬಿಟ್ಟು ಹೋಗಿ, ಪ್ರಜಾಪ್ರಭುತ್ವದ ಮಾರ್ಗದಲ್ಲಿ ಒಂದು ಸ್ವತಂತ್ರವಾದ ಮತ್ತು ಒಕ್ಕಟ್ಟಾದ ಜನಾಂಗವಾಗಿ ಇಂಡಿಯ ಪರಿಣಮಿಸುವುದೆಂದು ನಂಬಬಹುದಾಗಿದೆ.

# ಅಧ್ಯಾಯ ೩

## ಮುಸ್ಲಿಂ ಮತಭೇದಗಳು

ಇತರ ಧರ್ಮಗಳಲ್ಲಿಯಂತೆಯೇ ಇಸ್ಲಾಮಿನಲ್ಲೂ ಕ್ರಮೇಣ ಮತಭೇದಗಳು ಹುಟ್ಟಿಕೊಂಡುವು. ಇವುಗಳಲ್ಲಿ ಮುಖ್ಯವಾದ ಮೂರನ್ನು ಮಾತ್ರ ಕುರಿತು ಇಲ್ಲಿ ತಿಳಿಸುತ್ತದೆ.

(೧) **ಸುನ್ನತ್ ಜಮಾತ್** ಅಥವಾ ಸನಾತನ ಸಂಪ್ರದಾಯಿಗಳ ಮತ. ಈ ಮತೀಯರ ಸಂಖ್ಯೆ ನೂರಕ್ಕೆ ಎಪ್ಪತ್ತು. ಇವರು ಈ ಕೆಳಗಿನ ದೇವತಾಶಾಸ್ತ್ರಜ್ಞರಲ್ಲಿ (ಇವರಿಗೆ ಇಮಾಮರು ಎಂದು ಹೆಸರು) ಯಾರಾದರೊಬ್ಬರ ಅನುಯಾಯಿಗಳಾಗಿರುತ್ತಾರೆ. (i) ಅಬೂ ಹನೀಫ಼ ಎಂದು ವ್ಯವಹೃತನಾಗಿರುವ, ಥಾಬಿತ್ತನ ಮಗ ಇಮಾಮ್ ನೋಮಾನ್ (ಕ್ರಿ.ಶ. ೭೦೨-೭೬೭). ಇವನು ಪರ್ಷಿಯದವನು. ಇವನ ಅನುಯಾಯಿಗಳು ತುರ್ಕಿ, ಮಧ್ಯ ಏಷ್ಯ, ಅಫ್ಘಾನಿಸ್ಥಾನ, ಬೆಲೂಚಿಸ್ಥಾನ, ಇಂಡಿಯ ಮೊದಲಾದೆಡೆಗಳಲ್ಲೆಲ್ಲ ಬಹಳವಾಗಿದ್ದಾರೆ. ಇವನ ದೇವತಾಶಾಸ್ತ್ರದ ವಿಶೇಷತೆ ಏನೆಂದರೆ—ಅನುಮಾನಿಕ ಮತ್ತು ದೃಷ್ಟಾಂತರೀತಿಯಲ್ಲಿ ತರ್ಕಿಸುವುದು, ಮತ್ತು ಕಾಲದೇಶವರ್ತಮಾನಾನುಸಾರ ಬದಲಾವಣೆ ಮಾಡಿಕೊಳ್ಳುವುದು. (ii) ಇದ್ರೀಸನ ಮಗ ಇಮಾಮ್ ಮುಹಮ್ಮದ್ (ಕ್ರಿ. ಶ. ೭೬೭-೮೨೦). ಷಾಫ಼ೈ ಎಂದು ವ್ಯವಹೃತನಾಗಿರುವ ಇವನು ಪ್ಯಾಲೆಸ್ಟೈನಿನಲ್ಲಿ ಹುಟ್ಟಿದ ಅರಬ. ಇವನ ಅನುಯಾಯಿಗಳು ಈಜಿಪ್ಟ್, ಅರೇಬಿಯ, ದಕ್ಷಿಣ ಇಂಡಿಯ, ವಾಯುವ್ಯ ಪರ್ಷಿಯ ಮೊದಲಾದೆಡೆಗಳಲ್ಲಿದ್ದಾರೆ. (iii) ಮದೀನದಲ್ಲಿ ಹುಟ್ಟಿದ ಅರಬ ಅನಸಿನ ಮಗ ಇಮಾಮ್ ಮಾಲಿಕ್ (ಕ್ರಿ.ಶ. ೭೧೫-೭೯೫). ಇವನ ಅನುಯಾಯಿಗಳು ಉತ್ತರ ಆಫ್ರಿಕದಲ್ಲಿದ್ದಾರೆ. (iv) ಇರಾನಿನಲ್ಲಿ ಹುಟ್ಟಿದ ಅರಬ ಹಮ್‌ಬಲಿನ ಮಗ ಇಮಾಮ್ ಅಹ್‌ಮದ್ (ಕ್ರಿ.ಶ. ೭೮೦-೮೫೫). ಇವನ ಅನುಯಾಯಿಗಳು ಬಹಳ ಕೊಂಚ; ಅರೇಬಿಯದಲ್ಲಿದ್ದಾರೆ.

(೨) **ಷಿಯಾ ಮತ.** ಈ ಮತೀಯರಿಗೂ ಸುನ್ನತ್ ಜಮಾತರಿಗೂ ಇರುವ ಮುಖ್ಯ ಭೇದವೆಂದರೆ ಮುಹಮ್ಮದನ ತರುವಾಯ ಅವನ

ಪಟ್ಟಕ್ಕೆ ಬರಬೇಕಾದವರ ವಿಷಯದಲ್ಲಿ. ಸುನ್ನಿಗಳು ಅಬೂಬಕರನ್ನು ಸರಿಯಾದ ಉತ್ತರಾಧಿಕಾರಿ ಎಂದು ಕಲೀಫ಼ನನ್ನಾಗಿ ಆಯ್ದರು. ಅವನ ಬಳಿಕ ಉಮರನ್ನೂ, ಅವನ ತರುವಾಯ ಉಸ್ಮಾನನ್ನೂ, ಅವನ ತರುವಾಯ ನಾಲ್ಕನೆಯವನನ್ನಾಗಿ ಅಲಿಯನ್ನೂ ಆಯ್ದರು. ಆದರೆ ಷಿಯಾಗಳು ಇದನ್ನು ಒಪ್ಪದೆ, ಕುರಾನಿನಲ್ಲಿ ಅಡಗಿರುವ ತತ್ವಗಳು ಬಹು ಸಂಗ್ರಹರೀತಿಯಲ್ಲಿಯೂ ಜಟಿಲವಾಗಿಯೂ ಹೇಳಿವೆಯೆಂದೂ ಅವುಗಳನ್ನು ಬಿಡಿಸಿ ಅರ್ಥ ಹೇಳತಕ್ಕವನು ಮಹಮ್ಮದನಷ್ಟೇ ಪರಿಶುದ್ಧಾತ್ಮನೂ ದೈವನಿಯಮಿತನೂ ಆಗಿರಬೇಕೆಂದೂ ಹೇಳಿ, ಅಂಥವನು ಮಹಮ್ಮದನ ಸೋದರಮಗನೂ ಅಳಿಯನೂ ಆದ ಅಲಿಯೊಬ್ಬನೇ ಎಂದು ಸಾಧಿಸಿದರು. ಈ ಅಲಿಯನಂತರ, ಅವನಿಗೆ ಫ಼ಾತಿಮಳಲ್ಲಿ ಹುಟ್ಟಿದ ಸಂತತಿಯವರನ್ನು ಮಾತ್ರ ಉತ್ತರಾಧಿಕಾರಿಗಳೆಂದು ಅಂಗೀಕರಿಸಿ ಅವರನ್ನು ಇಮಾಮರು (ದೇವಪ್ರಸಾದದಿಂದ ಮತಾಧಿಕಾರಿಗಳು) ಎಂದು ಕರೆದು, ಅಲಿಯಿಂದ ಮೊದಲುಮಾಡಿ ಹಸನ್ ಮಗ ಮಹಮ್ಮದನನ್ನು ಕೊನೆ ಮಾಡಿ ಹನ್ನೆರಡು ಜನ ಕಲೀಫ಼ರ ಪಟ್ಟಾವಳಿಯನ್ನು ಕೊಡುತ್ತಾರೆ. ಈ ೧೨ನೆಯವನಾದ ಮಹಮ್ಮದ್ ಮಗುವಾಗಿದ್ದಾಗಲೇ ಅದೃಶ್ಯನಾದನೆಂದೂ, ಇನ್ನೂ ಜೀವಂತನಾಗಿಯೇ ಇರುವನೆಂದೂ, ಹಾಗೆಯೇ ಜೀವಂತನಾಗಿರುವ ಯೇಸುಕ್ರಿಸ್ತನೊಡನೆ ಮತ್ತೆ ಕಾಣಿಸಿಕೊಳ್ಳುವನೆಂದೂ, ದೈವಾಜ್ಞೆಯ ಮೇರೆ ಅವರಿಬ್ಬರೂ ಮತ್ತೆ ಪ್ರಪಂಚದಲ್ಲಿ ಧರ್ಮೋದ್ಧಾರ ಮಾಡುತ್ತಾರೆಂದೂ ಷಿಯಾಗಳು ನಂಬುತ್ತಾರೆ. ಇವರು ಸುನ್ನತ್ ಜಮಾತರ ಇಮಾಮರನ್ನು ಒಪ್ಪದೆ ಈಗಲೂ ತಮ್ಮಲ್ಲಿಯೇ ಬೇರೆ ಇಮಾಮರನ್ನು ಆಯ್ದುಕೊಳ್ಳುತ್ತಾರೆ. ಇಷ್ಟೇ ಅಲ್ಲದೆ ಕೆಲವು ಮತ ಪ್ರಕ್ರಿಯೆಗಳಲ್ಲೂ, ಮದುವೆ, ಆಸ್ತಿ, ಹಕ್ಕು ಮೊದಲಾದ ವಿಷಯಗಳಲ್ಲೂ ಇಬ್ಬರಿಗೂ ಭೇದವಿದೆ. ಷಿಯಾಗಳಲ್ಲಿಯೇ ೧೨ ಇಮಾಮಿಗಳು ೭ ಇಮಾಮಿಗಳು ಎಂಬ ಒಳ ಪಂಗಡಗಳಿವೆ. ಏಳು ಇಮಾಮಿ ಪಂಗಡದವರು ಇಂಡಿಯದಲ್ಲೂ ಅರೇಬಿಯದ ಯಮನ್ ಪ್ರಾಂತದಲ್ಲೂ ಇದ್ದಾರೆ. ಭೋರರು ಮತ್ತು ಖೋಜರು ಎಂದು ಈಗ ಕರೆಯುವ ಈ ಜನರು ಬೊಂಬಾಯಿಯ ಆಗಾಖಾನನಿಗೆ ಶಿಷ್ಯರಾಗಿ ನಡೆಯುತ್ತಾರೆ.

(೩) **ವಹಾಬೀಗಳು ಅಥವಾ ಅಹ್ಲೆ-ಹದೀಗಳು.** ಇವರನ್ನು ಇಸ್ಲಾಮಿನ ಕಠಿಣ ನಿಯಮವಾದಿಗಳು (ಪ್ಯೂರಿಟನ್ನರು) ಎಂದು ಕರೆಯಬಹುದು. ಈ ಮತಸ್ಥಾಪಕನಾದ ಅಬ್ದುಲ್‌ವಹಾಬನ ಮಗ ಮಹಮ್ಮದ್ ಅರೇಬಿಯದಲ್ಲಿ ಕ್ರಿ.ಶ. ೧೭೦೩ ರಲ್ಲಿ ಹುಟ್ಟಿದನು. ಇವನು ಇಸ್ಲಾಮಿನ ಸರಳ ತತ್ತ್ವಗಳನ್ನು ಪುನರುದ್ಧಾರಮಾಡಲು ಪ್ರಯತ್ನಿಸಿ, ವೈದಿಕವರ್ಗದ ಇಮಾಮರನ್ನೇ ಎಲ್ಲದರಲ್ಲಿಯೂ ಒಪ್ಪಿಕೊಳ್ಳದೆ, ಸ್ವಬುದ್ಧಿಯಿಂದಲೂ ಸನಾತನ ಸಂಪ್ರದಾಯದ ಬಲದಮೇಲೂ ಕುರಾನನ್ನು ಅರ್ಥಮಾಡಿಕೊಳ್ಳಬೇಕು ಎಂದು ವಾದಿಸಿದನು. ಸೂಫಿ ಸಾಧುಗಳಿಗೂ ಅವರ ಗೋರಿಗಳಿಗೂ ಸಲ್ಲಿಸುತ್ತಿದ್ದ ಭಕ್ತಿಯನ್ನು ಇವನು ಒಪ್ಪಲಿಲ್ಲ. ಈ ವಹಾಬೀಗಳು ಪ್ರಾರ್ಥನೆ, ಉಪವಾಸ, ಮೊದಲಾದ ವಿಷಯಗಳಲ್ಲಿ ಇತರರಿಗಿಂತ ಹೆಚ್ಚು ನಿಯಮಿಷ್ಠರು. ಇವರು ಮಧ್ಯಅರೇಬಿಯದಲ್ಲಿ ಹೆಚ್ಚಾಗಿದ್ದಾರೆ. ಇಂಡಿಯದಲ್ಲೂ ಕೆಲವರುಂಟು. ಈಗ ಮೆಕ್ಕಾ ಮತ್ತು ಮದೀನದಲ್ಲೂ ತುಂಬಿಕೊಂಡಿದ್ದಾರೆ.

ಮುಖ್ಯವಾದ ಈ ಮೂರು ಮತಗಳಲ್ಲದೆ ಷೈಖಿ (ಇದು ಷಿಯಾ ಮತಪ್ರಭೇದ), ಮಹ್‌ದವೀಯ (ಇದು ಸುನ್ನತ್ ಮತಪ್ರಭೇದ) ಮೊದಲಾದ ಪಂಗಡಗಳೂ ಉಂಟು. ಮಹ್‌ದವೀಯ ಪಂಗಡದವರು ಮೈಸೂರು ಮತ್ತು ಹೈದರಾಬಾದು ಸಂಸ್ಥಾನಗಳಲ್ಲಿದ್ದಾರೆ. ಇವರು ೧೨ನೆಯ ಇಮಾಮ್ ಮಹದಿ ಆಗಲೇ ಬಂದುಹೋದನೆಂದು ನಂಬುತ್ತಾರೆ.

## ನೂತನ ಸುಧಾರಣೆಗಳು

ಧರ್ಮವಿಷಯದಲ್ಲಿ ತತ್ತ್ವಭೇದದಿಂದ ಹುಟ್ಟಿದ ಈ ಮತಗಳೇ ಅಲ್ಲದೆ ಸಾಮಾಜಿಕ, ರಾಜಕೀಯ ಮತ್ತು ಆರ್ಥಿಕ ಸುಧಾರಣೆಗಳನ್ನು ಮೂಲಮಾಡಿಕೊಂಡು ಹೊರಟ, ಮತ್ತು ಇಸ್ಲಾಂ ಧರ್ಮಕ್ಕೆ ಹೊರಗಿನಿಂದ ಸೇರಿಕೊಂಡಿರುವ ಇತರ ಧರ್ಮತತ್ತ್ವಗಳನ್ನೂ ಪ್ರಕ್ರಿಯೆಗಳನ್ನೂ ಗೋರಿಯ ಪೂಜೆ ಮುಂತಾದ ಹೊಸಪದ್ಧತಿಗಳನ್ನೂ ಕಳೆದು ಹಾಕಿ ಶುದ್ಧ ಇಸ್ಲಾಂ ಧರ್ಮದ ಪುನರುದ್ಧಾರಕ್ಕೆ ಕೆಲಸ ನಡಸುತ್ತಿರುವ ಅನೇಕ ಸಂಸ್ಥೆಗಳೂ ಅವುಗಳ ಅನುಯಾಯಿಗಳ ಪಂಗಡಗಳೂ ಹುಟ್ಟಿ

ಕೊಂಡಿವೆ. ಇವುಗಳನ್ನು ಕುರಿತು ಹೇಳುವುದಕ್ಕೆ ಇಲ್ಲಿ ಎಡೆಯಿಲ್ಲ. ಒಂದುಮಾತಿನಲ್ಲಿ ಹೇಳಬಹುದಾದರೆ, ಈ ಸುಧಾರಣಾ ಕಾರ್ಯಗಳಿಗೆಲ್ಲ ಮೂಲಕಾರಣ, ಮೊಗಲ್‌ಪಾದಷಾಹಿ ಒಡೆದುಹೋಗಿ, ಮುಸ್ಲಿಮರ ಪ್ರಾಬಲ್ಯ ಕ್ಷೀಣದೆಸೆಗೆಬಂದು, ಪೂರ್ವದೇಶಗಳಿಗೆ ಕ್ರಮೇಣ ಪಾಶ್ಚಾತ್ಯ ಸಂಪರ್ಕ ಉಂಟಾಗಿ, ಅದರ ಪ್ರಭಾವದಿಂದ ಜನಜೀವನದಲ್ಲಿ ಮೂಡಿದ ಒಂದು ಹೊಸ ಚೈತನ್ಯ. ಸಾಮಾನ್ಯವಾಗಿ ಈ ಸುಧಾರಣೆಯ ಕೆಲಸ ಸುಸಂಘಟಿತ ಸಂಸ್ಥೆಯಿಂದಾಗಲಿ ಸರ್ಕಾರದ ಬೆಂಬಲದಿಂದಾಗಲಿ ನಡೆದಿರುವುದಕ್ಕಿಂತ ಹೆಚ್ಚಾಗಿ ಹಲಕೆಲವು ವ್ಯಕ್ತಿಗಳಿಂದ ನಡೆದಿದೆ. ಈ ವಿಷಯದಲ್ಲಿ ಮುಂದಾಳುಗಳಾಗಿ ನಿಂತು ಕೆಲಸಮಾಡಿದವರಲ್ಲಿ ತುರ್ಕಿಯ ಮಿಥತ್‌ಪಾಷ, ಇರಾನಿನ ಮುಖ್ಯಮಂತ್ರಿ ಮಿರ್ಸ್ಸಾತಕೀ ಖಾನ್, ಅಫ್ಘಾನಿಸ್ಥಾನದ ಸಯದ್ ಜಮಾಲುದ್ದೀನ್, ಇಂಡಿಯದಲ್ಲಿ ಬಂಗಾಳದ ಹಾಜಿಷರಿಯತ್‌ಉಲ್ಲ ಮತ್ತು ಪಂಜಾಬಿನ ಸರ್ ಸಯದ್ ಅಹ್‌ಮದ್, ಇಂಡಿಯದ ಮಿರ್ಜ ಗುಲಾಮ್ ಅಹ್‌ಮದ್ (ಅಹಮದೀಯ ಚಳವಳಿ), ಆಫ್ರಿಕದ ಸಿದಿ ಮಹಮ್ಮದ್ ಅಸ್ಸನೂಸೀ, ಮೊದಲಾದವರ ಹೆಸರನ್ನು ಹೇಳಬಹುದು. ಇಸ್ಲಾಮಿನಲ್ಲಿ ನಡೆದಿರುವ ಇತ್ತೀಚಿನ ಸುಧಾರಣೆಗಳಲ್ಲಿ ತೀವ್ರ ರೀತಿಯದೂ ಬಹು ಪರಿಣಾಮಕಾರಿಯೂ ಒಂದು ರೀತಿಯಲ್ಲಿ ಕ್ರಾಂತಿಕಾರಕವೂ ಆದ ಚಳವಳಿ ಎಂದರೆ, ತುರ್ಕಿ ರಿಪಬ್ಲಿಕಿನ ಅಧ್ಯಕ್ಷನಾದ ಮುಸ್ತಾಫ ಕಮಾಲ್‌ಪಾಷನು ಕಳೆದ ಮಹಾ ಯುದ್ಧದ ನಂತರ ಹೂಡಿದ ಚಳವಳಿ. ಈ ಚಳವಳಿಯ ಫಲವಾಗಿ, ತುರ್ಕಿಯು ಸರ್ವಮುಸ್ಲಿಮ್ ಚಳವಳಿಯನ್ನು ಕನಸೆಂದು ಕೈಬಿಟ್ಟು, ಕಲೀಫ ಅಬ್ದುಲ್‌ಮಜೀದನನ್ನು ಓಡಿಸಿ ದೇಶದಲ್ಲಿ 'ರಿಪಬ್ಲಿಕ್' ಪ್ರಜಾಧಿಕಾರವನ್ನು ನೆಟ್ಟು, ತನ್ನ ಸಾಮಾಜಿಕ ಮತ್ತು ಧಾರ್ಮಿಕ ಸುಧಾರಣೆಗಳನ್ನು ರಾಷ್ಟ್ರ ತತ್ತ್ವದ ಮೂಲಭಾವನೆಯಮೇಲೆ ನಿಲ್ಲಿಸಿತು. ರಾಷ್ಟ್ರಪ್ರಗತಿಗೆ ಸಹಾಯವಾದ್ದನ್ನೆಲ್ಲ ಉಳಿಸಿಕೊಂಡು, ಹಾನಿಕರವಾದ್ದನ್ನೆಲ್ಲ ಕಳೆದು ಬಿಸುಟಿತು. ಈ ಸುಧಾರಣೆಯ ಕಾರ್ಯದಲ್ಲಿ ಯೂರೋಪಿನ ಅನುಕರಣೆಯೇ ಹೆಚ್ಚಾಗಿ, ಜನರ ವೇಷಭೂಷಗಳು ಆಚಾರ ವ್ಯವಹಾರಗಳು—ಎಲ್ಲವೂ ಮಾರ್ಪಟ್ಟುಹೋದುವು. ಇದೇ ರೀತಿಯ

ನೂತನ ಮನೋಭಾವ ಇರಾನ್, ಈಜಿಪ್ಟ್, ಮೆಸಪಟೋಮಿಯ— ಮೊದಲಾದೆಡೆಗಳಲ್ಲೆಲ್ಲ ಬಹು ಮಿತಪ್ರಮಾಣದಲ್ಲಿ ಹಬ್ಬುತ್ತಿದೆ. ಭಾರತೀಯ ಮುಸ್ಲಿಮರು ರಾಷ್ಟ್ರೀಯತೆಗೂ ಮತೀಯತೆಗೂ ನಡುವೆ ನಿರ್ಧಾರಕ್ಕೆ ಬರದೆ ಹಿಂದುಮುಂದು ನೋಡುತ್ತಿದ್ದಾರೆ. ಆದರೆ ರಾಷ್ಟ್ರೀಯತೆ ಗೆಲ್ಲುವುದು ಖಂಡಿತ. ಇಂಡಿಯದಲ್ಲಿ ಎಲ್ಲಾ ಮತೀಯರೂ ಒಂದು ಜನಾಂಗದಂತೆ ರಾಜಕೀಯ ದೃಷ್ಟಿಯಿಂದ ಬಾಳುವ ದಿನ ಬಂದೇ ಬರುತ್ತದೆ.

## ಅಧ್ಯಾಯ ೪

## ಇಸ್ಲಾಮಿನ ರಾಜಕೀಯ ಚರಿತ್ರೆ

**ಅರಬಖಿಲಾಫತ್ತು**—ಇಸ್ಲಾಂ ಸ್ಥಾಪನೆಯ ಕಾಲಕ್ಕೆ ಅರೇಬಿಯದ ಬೇರೆ ಬೇರೆ ಭಾಗಗಳು ಬೇರೆ ಬೇರೆ ಆಳಿಕೆಯಲ್ಲಿ ಸಿಕ್ಕಿಕೊಂಡಿದ್ದುವು. ವಾಯವ್ಯದಲ್ಲಿ ಹೀರಾ ರಾಜ್ಯವನ್ನು ಲಖ್‌ಮಿದ್ ಸಂತತಿಯವರು ಪರ್ಷಿಯ ರಾಜರಿಗೆ ಅಧೀನರಾಗಿ ಮೂರನೆಯ ಶತಮಾನದಿಂದ ಆರ ನೆಯ ಶತಮಾನದ ಅಂತ್ಯದವರೆಗೆ ಆಳುತ್ತಿದ್ದರು. ವಾಯವ್ಯದಲ್ಲಿ ಗಸ್ಸನಿಯರು ನೆಲಸಿ, ಜಾಫ್ನಿ ಅರಸುಮನೆತನದವರು ರೋಮನ್ ಚಕ್ರವರ್ತಿಗಳ ಅಧೀನದಲ್ಲಿ ಆಳುತ್ತಿದ್ದರು. ಪೂರ್ವದಲ್ಲಿ ಯಮಾಮ ಪ್ರಾಂತವನ್ನು ಕಿಂದೀ ಅರಸರು ಆಳುತ್ತಿದ್ದರು. ಬಹ್‌ರೈನ್‌ದ್ವೀಪ ಪರ್ಷಿಯದ ಕೈಕೆಳಗಿನ ಪ್ರಾಂತವಾಗಿತ್ತು. ಆಗ್ನೇಯದ ಅಂಚಿನಲ್ಲಿಯ ಉಮ್ಮಾನಿನಲ್ಲಿ ಪಾರಸಿ-ಅರಬರ ಸಂಕರಜನರಾದ ಆಸ್‌ದೈತರು ಪ್ರಬಲ ರಾಗಿದ್ದರು. ನೈಋತ್ಯದಲ್ಲಿಯ ಯಮನ್ ಪ್ರಾಂತವನ್ನು ಪರ್ಷಿಯ ಆಕ್ರಮಿಸಿಕೊಂಡು ಇಸ್ಲಾಂ ಪ್ರಬಲಿಸುವವರೆಗೂ ಆಳುತ್ತಿತ್ತು. ಮಧ್ಯ ಅರೇಬಿಯ ಮಾತ್ರ ಅಜೇಯವೂ ಸ್ವತಂತ್ರವೂ ಆಗಿ ಉಳಿದು ತನ್ನ ಬುಡಕಟ್ಟಿನವರ ಆಡಳಿತದಲ್ಲೇ ಇತ್ತು. ಪ್ರತಿಯೊಂದು ಬುಡಕಟ್ಟಿಗೂ ಒಬ್ಬ ಷೇಖ್ ಅಥವಾ ನಾಯಕನಿದ್ದನು. ಜನರಲ್ಲಿ ಬಹುಪಾಲು ಕಾಫಿರ ರಾಗಿದ್ದರು. ಪೂರ್ವ ಮತ್ತು ಉತ್ತರದಲ್ಲಿ ಕ್ರೈಸ್ತರ ಮತ್ತು ಯೆಹೂದ್ಯರ ಪ್ರಭಾವವೂ ಪೂರ್ವದಲ್ಲಿ ಸೇಬಿಯನ್ನರ ಮತ್ತು ಝೊರಾಸ್ಟರ್ ಮತೀ ಯರ ಪ್ರಭಾವವೂ ಹೆಚ್ಚಾಗಿತ್ತು.

ಷೇಖನ್ನು ಅವನ ಮನೆತನ, ವಯಸ್ಸು, ಬುದ್ಧಿ, ಜ್ಞಾನ, ಧೈರ್ಯ, ವಿವೇಕ, ಮುಂದಾಳುತನ—ಮೊದಲಾದ ಗುಣಗಳನ್ನು ನೋಡಿ ಆ ಬುಡಕಟ್ಟಿನವರು ಆಯುತ್ತಿದ್ದರು. ಈ ಪದವಿ ವಂಶಪಾರಂಪರ್ಯವಾಗಿ ಬರುವ ಹಕ್ಕಾಗಿರಲಿಲ್ಲ. ಇತರ ಬುಡಕಟ್ಟುಗಳೊಡನೆ ಹೋರಾಟದಲ್ಲಿ ಮುಂದಾಳಾಗಿ ಜನರನ್ನು ನಡಸುವುದೂ, ಒಳ ಜಗಳಗಳನ್ನು ತೀರಿಸು ವುದೂ ಷೇಖಿನ ಕೆಲಸವಾಗಿತ್ತು. ಇದಕ್ಕೆ ಪ್ರತಿಫಲವಾಗಿ ಅವನಿಗೆ

ಕೊಳ್ಳೆಯಲ್ಲಿ 'ಸಿಂಹಭಾಗ' ದೊರೆಯುತ್ತಿತ್ತು. ಒಂದೇ ಮೂಲಪುರುಷ ನಿಂದ ಹುಟ್ಟಿದ ಅನೇಕ ಮನೆತನಗಳು ಒಟ್ಟುಸೇರಿ ಒಂದು ಬುಡಕಟ್ಟು ಏರ್ಪಡುತ್ತಿತ್ತು. ಜನರು ಒಂದು ಬುಡಕಟ್ಟಿನಿಂದ ಮತ್ತೊಂದು ಬುಡ ಕಟ್ಟಿಗೆ ಬದಲಾಯಿಸಿಕೊಳ್ಳಬಹುದಾಗಿತ್ತು. ಮವಾಲಿಗಳೂ, ಅಂದರೆ ದಾಸ್ಯಮುಕ್ತ ಗುಲಾಮರೂ, ಬುಡಕಟ್ಟಿನ ಜನರೆಂದೇ ಗಣನೆಯಿತ್ತು. ಆದರೆ, ಅವರ ಸಾಮಾಜಿಕ ಸ್ಥಾನ ಕೊಂಚ ಕೆಳಗಿನದಾಗಿತ್ತು. ಮೆಕ್ಕಾ ದಲ್ಲಿ ನೆಲಸಿದ್ದ ಹಲವು ಬುಡಕಟ್ಟುಗಳಲ್ಲಿ ಬಹುಮುಖ್ಯವೂ ಪ್ರಬಲವೂ ಆಗಿದ್ದದ್ದು ಕುರಾಯಿಷ್ ಬುಡಕಟ್ಟು. ಬೇರೆಬೇರೆ ಬುಡಕಟ್ಟಿನವರು ಅಥವಾ ಬುಡಕಟ್ಟಿನ ಗುಂಪಿನವರು ಬೇರೆಬೇರೆ ವಿಗ್ರಹಗಳನ್ನು ಪೂಜಿಸು ತ್ತಿದ್ದರು. ಈ ವಿಗ್ರಹಗಳು ಆಯಾ ಬುಡಕಟ್ಟಿನ ಅಥವಾ ಬುಡಕಟ್ಟುಗಳ ಗುಂಪಿನ ಒಗ್ಗಟ್ಟಿನ ಗುರುತಾಗಿದ್ದುವು. ಅರೇಬಿಯದ ಏಕೀಕರಣಕ್ಕೆ ದೊಡ್ಡ ಅಡಚಣೆಯಾಗಿದ್ದ ಈ ಪ್ರತ್ಯೇಕ ಬುಡಕಟ್ಟುಗಳ ವ್ಯವಸ್ಥೆ ಯನ್ನೂ ವಿಗ್ರಹಪೂಜೆಯನ್ನೂ ಮುಹಮ್ಮದ್ ತೊಡೆದುಹಾಕಿ, ಪರಮೇ ಶ್ವರನಾದ ಅಲ್ಲಾ ಒಬ್ಬನೇ ದೇವರೆಂದೂ, ಮಾನವರೆಲ್ಲರೂ ಅವನ ಸೇವಕರೆಂದೂ ಸಾರಿದನು. ಪೈಗಂಬರನು ಕೂಡ ತನ್ನ ಸ್ವಾಧಿಕಾರದಿಂದ ಆಳುತ್ತಿಲ್ಲವೆಂದೂ ತಾನು ದೇವರ ಸಂದೇಶ ಒಯ್ಯುವವನು ಮಾತ್ರ ವೆಂದೂ, ಕುರಾನ್ ದೇವವಾಕ್ಯವಾದದ್ದರಿಂದ ಎಲ್ಲರೂ ಅದಕ್ಕೆ ವಿಧೇಯ ರಾಗಿ ನಡೆಯಬೇಕೆಂದೂ ಉಪದೇಶಿಸಿದನು.

ದೇವರೊಬ್ಬನೇ, ಅವನೇ ಪರಮಪ್ರಭು ; ಮಾನವಕುಲ ಭೂಮಿ ಯಲ್ಲಿ ಅವನ ಪ್ರತಿನಿಧಿ ಎಂಬೀ ಭಾವಗಳು ಇಸ್ಲಾಮಿನ ಮೂಲತತ್ತ್ವ ಗಳಾದುವು. ಯಾವ ಮನುಷ್ಯನೇ ಆಗಲಿ ದೈವಸಂಕಲ್ಪವನ್ನು ನೆರ ವೇರಿಸುವುದರಲ್ಲಿ ತಾನೂ ಒಂದು ಸಾಧನವಾಗಬಹುದೇ ಹೊರತು, ಯಾವ ವಿಧದಲ್ಲೂ ತಾನು ಇತರರಿಗಿಂತ ಶ್ರೇಷ್ಠನಾಗಿ ವ್ಯವಹರಿಸುವು ದಕ್ಕೆ ಅವನಿಗೆ ಅಧಿಕಾರವಿಲ್ಲ. ರಾಜ್ಯಾಧಿಕಾರ ಜನರಲ್ಲಿ ನೆಲಸಿದ್ದೇ ಹೊರತು ಕಲೀಫನದಲ್ಲ ; ಅವನಿಗೆ ಅದನ್ನು ಪರಭಾರೆ ಮಾಡುವ ಹಕ್ಕಿಲ್ಲ; ಈ ಭಾವನೆಯಿಂದ ಆಳುವ ಕಲೀಫನೇ ನಿಜವಾದ ಕಲೀಫ. ಹಾಗಿಲ್ಲ ದವನು ಕಲೀಫನಲ್ಲ, ಸತ್ತಾಪಹಾರಿ. ಇದೇ ಅಭಿಪ್ರಾಯವನ್ನು

ಅಬೂಬಕರ್ ತಾನು ಮೊದಲನೆಯ ಕಲೀಫನಾದಾಗ ಈ ರೀತಿಯಾಗಿ ಹೇಳಿದ್ದಾನೆ—"ನಾನೂ ನಿಮ್ಮಂಥವನೆ; ನಿಮಗಿಂತ ಮೇಲಲ್ಲ. ನನ್ನದು ಸರಿಯಾಗಿದ್ದರೆ ನನ್ನ ಅಪ್ಪಣೆಯಂತೆ ನಡೆಯಿರಿ; ತಪ್ಪಾಗಿದ್ದರೆ ನಡೆಯಬೇಡಿ." ಈ ವಿಶಾಲ ಪ್ರಜಾಧಿಕಾರಭಾವ ಮೂವತ್ತು ವರ್ಷಗಳಕಾಲ, ಐದನೆಯ ಕಲೀಫನಾದ ಹಸನ್ ಕಲೀಫ್ ಪಟ್ಟವನ್ನು ಮೋಆವಿಯನಿಗೆ ಬಿಟ್ಟುಕೊಡುವವರೆಗೂ ಉಳಿದುಕೊಂಡು ಬಂತು. ಮೋಆವಿಯ ಈ ಭಾವನೆಯನ್ನು ಬದಿಗೊತ್ತಿ ತನ್ನ ಮಗನನ್ನು ಉತ್ತರಾಧಿಕಾರಿಯನ್ನಾಗಿ ನೇಮಿಸಲು ಮೊದಲುಮಾಡಿದನು. ಹೀಗೆ ಪ್ರಜಾಪ್ರಭುತ್ವವೂ ಸರಳರೀತಿಯ ಬುಡಕಟ್ಟಿನ ವ್ಯವಸ್ಥೆಯೂ ಹೋಗಿ, ವಂಶಪಾರಂಪರ್ಯ ಅಧಿಕಾರವೂ ಕೇಂದ್ರೀಕೃತ ಪ್ರಭುತ್ವವೂ ತಲೆದೋರಿದುವು.

ಮಹಮ್ಮದನ ಮಗಳಾದ ಫಾತಿಮಳ ಗಂಡ ಅಲಿಯನ್ನು ನಾಲ್ಕನೆಯ ಕಲೀಫನನ್ನಾಗಿ ಆಯ್ದಾಗ, ಕೊಲೆಯಾಗಿ ಸತ್ತ ಹಿಂದಿನ ಕಲೀಫನ ನೆಂಟ ಮೋಆವಿಯನು ಆ ಆಯ್ಕೆಯನ್ನು ಪ್ರತಿಭಟಿಸಿದನು. ಅಲಿ ಇನ್ನೂ ತಾನು ಐದುವರ್ಷಗಳು ಕೂಡ ಆಳುವುದಕ್ಕೆ ಮೊದಲೆ ಕೊಲೆಯಾಗಿ ಸತ್ತು, ಜನರು ಅವನ ಮಗ ಹಸನ್ನನ್ನು ಆಯ್ದರು. ಆದರೆ ಹಸನ್ ತನ್ನ ದೌರ್ಬಲ್ಯವನ್ನು ಕಂಡುಕೊಂಡು ಕಲೀಫ ಪಟ್ಟವನ್ನು ಮೋಆವಿಯನಿಗೆ—ಇನ್ನು ಮುಂದೆಯೂ ಹಿಂದಿನ ಆಯ್ಕೆಯ ಪದ್ಧತಿಯನ್ನೇ ಅನುಸರಿಸಿಕೊಂಡು ಬರಬೇಕೆಂಬ ಒಪ್ಪಂದದಮೇಲೆ —ಬಿಟ್ಟುಕೊಟ್ಟನು. ಮೋಆವಿಯನು ಸುಮಾರು ಇಪ್ಪತ್ತು ವರ್ಷಗಳು ಆಳಿ, ತನ್ನ ಸ್ಥಾನ ಭದ್ರವಾಗಿ ಹೋದದ್ದರಿಂದ ಒಪ್ಪಂದವನ್ನು ಮೀರಿ, ತನ್ನ ಮಗ ಯಸ್ತೀದನನ್ನು ಮುಂದಿನ ಕಲೀಫನನ್ನಾಗಿ ನೇಮಿಸಿದನು. ಅಲಿಯ ಕಿರಿಯಮಗ ಹುಸೇನನೇ ಮೊದಲಾದ ಕುರಾಯಿಷ್ ಬುಡಕಟ್ಟಿನ ತಲೆಯಾಳುಗಳು ಇದನ್ನು ಪ್ರತಿಭಟಿಸಿದರು. ಈ ಹೋರಾಟದಲ್ಲಿ ಹುಸೇನ್ ಮಡಿದು, ಉಮಯ್ಯರು ತಮ್ಮ ಸ್ಥಾನವನ್ನು ಮತ್ತಷ್ಟು ಬಲಪಡಿಸಿಕೊಂಡರು. ಮಹಮ್ಮದನ ಮುತ್ತಾತನಾದ ಹಾಷಿಮನು ಮೂಲಪುರುಷನಾದ ಬನೀಹಾಷಿಮ್ ಬುಡಕಟ್ಟಿನವರು ಮೊದಲಿಂದಲೂ ಈ ಉಮಯ್ಯರ ವೈರಿಗಳಾಗಿದ್ದರು. ಇವರು

ಪರ್ಷಿಯದಲ್ಲಿ ಚಳವಳಿ ನಡಸಿ ಅನೇಕ ಅನುಯಾಯಿಗಳನ್ನು ಗಳಿಸಿ, ಖುರಾಸಾನಿ ನಾಯಕರಲ್ಲಿ ಮುಖ್ಯನಾದ ಅಬೂ ಮುಸ್ಲಿಂ ಎಂಬವನನ್ನು ಮುಂದಾಳು ಮಾಡಿಕೊಂಡು ಕಾರ್ಯ ನಡಸಿದರು. ಈ ಅಬೂ ಮುಸ್ಲಿಂ ಉಮಯ್ಯರ ಅಧಿಕಾರವನ್ನು ಪ್ರತಿಭಟಿಸಿ ಹೋರಾಡಿ, ಕೊನೆಯಲ್ಲಿ ಉಮಯ್ಯ ಕಲೀಫನನ್ನು ಸೋಲಿಸಿ, ಬನೀಹಾಷಿಮ್ ಬುಡಕಟ್ಟಿನ ಶಾಖೆಯಾದ ಬನೀ ಅಬ್ಬಾಸ್ ಪಂಗಡದ ಅಧಿಕಾರವನ್ನು ಬಾಗ್‌ದಾದಿನಲ್ಲಿ ನೆಲೆಗೊಳಿಸಿದನು.

ಅಧಿಕಾರ ಕೈ ಬದಲಾಯಿಸಿದರೂ ನಿರಂಕುಶಪ್ರಭುತ್ವ ಪ್ರಜಾ ಪ್ರಭುತ್ವಕ್ಕೆ ತಿರುಗಲಿಲ್ಲ. ಅಬ್ಬಾಸಿಯರೂ ಉಮಯ್ಯರಂತೆಯೇ ತಮ್ಮ ಉತ್ತರಾಧಿಕಾರಿಗಳನ್ನು ತಾವೇ ನೇಮಿಸಲಾರಂಭಿಸಿದರು. ಈ ಅಬ್ಬಾಸಿಯರು ೭೫೦ ರಿಂದ ೧೨೫೮ ರ ವರೆಗೆ ಆಳಿದರು. ಅವರ ಬಲ ಕುಗ್ಗಿದಾಗ, ಆಡಳಿತ ಪಾರಸಿ ಮತ್ತು ತುರ್ಕಿ ಮಂತ್ರಿಗಳ ಮತ್ತು ಸೇನಾನಿಗಳ ಕೈವಶವಾಯಿತು. ಹೀಗೆ ಇಸ್ಲಾಂ ಸಾಮ್ರಾಜ್ಯಕ್ಕೆ ಹೆಸರಿಗೆಮಾತ್ರ ಅಬ್ಬಾಸಿ ಕಲೀಫನು ಪ್ರಭುವಾಗಿದ್ದರೂ, ರಾಜ್ಯ ಒಡೆದು ಅಲ್ಲಲ್ಲಿ ಅರೆಬರೆ ಸ್ವತಂತ್ರರಾಜ್ಯಗಳು ಹುಟ್ಟಿಕೊಂಡುವು. ಕ್ರಿ.ಶ. ೧೨೫೩ ರಲ್ಲಿ ಕೊನೆಯ ಅಬ್ಬಾಸಿ ಕಲೀಫನಾದ ಅಲ್‌ಮೊಸ್ತಾಸಿಮ್ ಎಂಬವನು ಮೊಗಲ ಚಕ್ರವರ್ತಿಯಾದ ಹಲಾಗುಖಾನ್ ಎಂಬವನಿಗೆ ಸೋತು ಶರಣಾಗತನಾದನು. ಮೊಸ್ತಾಸಿಮನೂ ಅವನು ಮನೆತನದವರೂ ಕೊಲೆಯಾಗಿ, ಇಸ್ಲಾಂ ಸಾಮ್ರಾಜ್ಯ ಕಾಫಿರ್ ಚಕ್ರವರ್ತಿಯ ಆಡಳಿತಕ್ಕೆ ಒಳಪಟ್ಟಿತು. ಈ ಮಧ್ಯೆ ಅಬ್ಬಾಸಿ ಮನೆತನದವನೊಬ್ಬನು ಈಜಿಪ್ಟಿಗೆ ತಪ್ಪಿಸಿಕೊಂಡು ಓಡಿಹೋದನು. ಅಲ್ಲಿಯ ಗುಲಾಮಿ ಸಂತತಿಯವರು ತಮ್ಮ ಸ್ವಾರ್ಥಸಾಧನೆಯ ಉದ್ದೇಶದಿಂದ ಅವನಿಗೆ ಆಶ್ರಯಕೊಟ್ಟು, ಅವನನ್ನು ನಾಮಮಾತ್ರ ಕಲೀಫನನ್ನಾಗಿ ಉಳಿಸಿದರು. ಈ ಮನೆತನದ ಕೊನೆಯ ಕಲೀಫನನ್ನು ಕ್ರಿ. ಶ. ೧೫೧೭ ರಲ್ಲಿ ತುರ್ಕಿ ಸುಲ್ತಾನನಾದ ಸಲೀಮನು ಕಾನ್‌ಸ್ಟಾಂಟಿನೋಪಲಿಗೆ ಹಿಡಿದುಕೊಂಡು ಹೋಗಿ, ಅಲ್ಲಿ ಅವನಿಂದ ಅವನ ಕಲೀಫ ಬಿರುದನ್ನೂ ಮುಹಮ್ಮದನ ಅವಶೇಷಗಳನ್ನೂ ಪವಿತ್ರ ಧ್ವಜವನ್ನೂ ಒಪ್ಪಿಸಿಕೊಂಡನು. ಹೀಗೆ ಖಿಲಾಫತ್ ಅಬ್ಬಾಸಿಯರಿಂದ

ತುರ್ಕರಿಗೂ, ಅಲ್ಲದೆ ಈ ತುರ್ಕರ ಸಮಕಾಲೀನರಾಗಿದ್ದ ಇಂಡಿಯಾ ಚಕ್ರವರ್ತಿಗಳಿಗೂ ಮೊರಾಕೊ ಸುಲ್ತಾನರಿಗೂ ವರ್ಗವಾಯಿತು. ಹೀಗೆ ಅಬ್ಬಾಸಿ ಮತ್ತು ತುರ್ಕಿ ಅರಸರ ಖಿಲಾಫತ್ ಕಾಲದಲ್ಲಿ ಸ್ಪೈಯ್‌ನ್, ಈಜಿಪ್ಟ್ ಮತ್ತು ಇಂಡಿಯದಲ್ಲೂ ಕಲೀಫರು ಹುಟ್ಟಿಕೊಂಡರೂ ಕೊನೆಗೆ ಉಳಿದವರು ತುರ್ಕಿ ಕಲೀಫರೇ. ಇಂಡಿಯದಲ್ಲಿ ಮೊಗಲರು ಬಿದ್ದನಂತರ ಇಂಡಿಯ ಮುಸ್ಲಿಮರು ತುರ್ಕಿ ಕಲೀಫರನ್ನೇ ಒಪ್ಪಿಕೊಂಡರು. ಎರಡನೆಯ ಅಬ್ದುಲ್ ಹಮೀದ್ (ಕ್ರಿ.ಶ. ೧೮೭೬-೧೯೦೮) ಎಲ್ಲ ಮುಸ್ಲಿಮರಿಗೂ ಲೌಕಿಕ ಧಾರ್ಮಿಕಗಳೆರಡರಲ್ಲೂ ತಾನೇ ಗುರುವಾಗಬೇಕೆಂಬ ಉದ್ದೇಶದಿಂದ ' ಸರ್ವ ಇಸ್ಲಾಂ ' ಸಂಘಟನೆಗೆ ಪ್ರೋತ್ಸಾಹ ಕೊಟ್ಟನು. ಆದರೆ, ಕಳೆದ ಮಹಾಯುದ್ಧ ಕಮಾಲ್‌ಪಾಷನ ಪಕ್ಷವನ್ನು ಅಧಿಕಾರಕ್ಕೆ ತಂದಿತು. ಈ ಪಕ್ಷದ ಜಯ ತುರ್ಕಿ ಕಲೀಫನಾದ ಅಬ್ದುಲ್ ಮಜೀದನನ್ನು ಪದಚ್ಯುತನನ್ನಾಗಿ ಮಾಡಿದ್ದೇ ಅಲ್ಲದೆ, ಖಿಲಾಫತ್ ಸಂಸ್ಥೆಯನ್ನೇ ತೊಡೆದುಹಾಕಿಬಿಟ್ಟಿತು.

ಮೇಲೆ ಹೇಳಿದಂತೆ ಖಿಲಾಫತ್ ಕೈ ಬದಲಾಯಿಸುತ್ತ ಹೋದ ಹಾಗೆಲ್ಲ ಇಸ್ಲಾಂ ದೇವತಾಶಾಸ್ತ್ರಜ್ಞರು ತಮ್ಮ ಅಭಿಪ್ರಾಯಗಳನ್ನು ಪರಿಸ್ಥಿತಿಗೆ ತಕ್ಕಂತೆ ಹೊಂದಿಸಿಕೊಂಡು ಹೋಗಬೇಕಾಯಿತು. ಕೊನೆಗೆ ಸತ್ಯಸಂಧನಾದ ಕಾಫಿರ್ ದೊರೆ ಸತ್ಯಸಂಧನಲ್ಲದ ಮುಸ್ಲಿಂ ಕಲೀಫನಿಗಿಂತಲೂ ಮೇಲು ಎಂಬ ಭಾವನೆಯೂ ಕೆಲವರಲ್ಲಿ ಬಂತು. ಹನಫಿ ಮತದವರು ಮೂರುರೀತಿಯ—ಜನರು ಆಯ್ದು, ನಾಮಕರಣ ಮಾಡಿದ, ಜನರು ಇಷ್ಟಪಡಲಿ ಪಡದಿರಲಿ ಆ ಸ್ಥಾನವನ್ನು ಆಕ್ರಮಿಸಿಕೊಂಡುಬಿಟ್ಟ, ಕಲೀಫರನ್ನು ಒಪ್ಪಿಕೊಂಡರು. ನಾಯಕನಿಲ್ಲದೆ ಒಳಗಿನ ಅನಾಯಕತ್ವವನ್ನೂ ಹೊರಗಿನ ದಾಳಿಯನ್ನೂ ತಡೆಯುವುದು ಅಸಾಧ್ಯವೆಂದು ವಾದಿಸಿ, ಮತವಿಷಯದಲ್ಲಿ ಕೈ ಹಾಕದಿರುವವರೆಗೂ ಯಾವ ಕಲೀಫನ ಅಧಿಕಾರವನ್ನೇ ಆಗಲಿ ಒಪ್ಪಿಕೊಳ್ಳಬಹುದೆಂದು ಹೇಳಿದರು. ಷಿಯಾ ಪಂಗಡದವರು ಈ ವಾದವನ್ನೊಪ್ಪದೆ ಕಲೀಫ ಅಥವಾ ಇಮಾಮ್ ದೈವಾಜ್ಞೆಯಿಂದ ನಿಯಮಿತನಾದವನೇ ಹೊರತು ಮನುಷ್ಯೇಚ್ಛೆಯಿಂದ ಆಯ್ದವನಲ್ಲ. ಕೊನೆಯ ಇಮಾಮ್ ಅದೃಶ್ಯನಾಗಿರುತ್ತಾನೆ; ಆವನಿಲ್ಲದಿರುವಾಗ

ದೇಶವನ್ನು ಯಾರಾದರೂ ಆಳಬಹುದು ; ಆದರೆ, ಅಂಥವನನ್ನು ಧರ್ಮ ಗುರು ಎಂದು ಕರೆಯಲಾಗದು ; ಅವನ ಪರವಾಗಿ ಮುಜ್‌ತಹಿದರು ಅಂದರೆ ಪ್ರಮುಖ ದೇವತಾಶಾಸ್ತ್ರಜ್ಞರು ಮತವಿಷಯದಲ್ಲಿ ಅಧಿಕಾರಿ ಗಳಾಗಿರತಕ್ಕದ್ದು ಎಂದು ಮೊದಲಾಗಿ ವಾದಿಸಿದರು. ಖವಾರಿಜರು ಅಂದರೆ ಕ್ರಾಂತಿಕಾರರು ಸತ್ಯ ಭಕ್ತಿಗಳನ್ನು ನೋಡಿ ಯಾರನ್ನಾದರೂ ಕಲೀಫನನ್ನಾಗಿ ಆಯಬಹುದು, ಅಲ್ಲದೆ ಅವನು ದುಷ್ಟತನಕ್ಕೆ ಬಿದ್ದೊಡ ನೆಯೇ ಆವನನ್ನು ಕೆಳಗುರುಳಿಸಿ ಕೊಲ್ಲಲೂ ಬಹುದು ಎಂದು ವಾದಿಸುತ್ತ ಉಮಯ್ಯ ಆಳಿಕೆಯಲ್ಲಿ ಅನೇಕಸಲ ದಂಗೆಯೆದ್ದರು. ಆದರೆ ಜಯ ಶಾಲಿಗಳಾಗಲಿಲ್ಲ. ಈ ಪಂಗಡ ಈಗ ಅರೇಬಿಯದಲ್ಲಿ ಬಹುಸ್ವಲ್ಪ ಸಂಖ್ಯೆಯಲ್ಲಿದೆ.

## ಮುಸ್ಲಿಂ ರಾಜ್ಯಾಡಳಿತ

ಮುಸ್ಲಿಮರು ಪಶ್ಚಿಮದಲ್ಲಿ ಮೊರಾಕೊವಿನಿಂದ ಪೂರ್ವದಲ್ಲಿ ಫಿಲಿ ಪೀನ್ ದ್ವೀಪಗಳ ವರೆಗೆ ಪ್ರಪಂಚದ ನಾನಾ ಭಾಗಗಳಲ್ಲಿ ಹರಡಿಕೊಂಡಿರು ವುದರಿಂದ ಎಲ್ಲರ ವಿಷಯವನ್ನೂ ಎತ್ತಿ ಇಲ್ಲಿ ಬರೆಯಲಾಗುವುದಿಲ್ಲ. ಮುಖ್ಯರಾಜ್ಯಗಳಾದ ಅರೇಬಿಯ, ಪರ್ಷಿಯ, ತುರ್ಕಿ, ಈಜಿಪ್ಟ್ ಮತ್ತು ಆಫ್ಘಾನಿಸ್ಥಾನ, ಮೊಗಲ ಇಂಡಿಯಗಳನ್ನು ಮಾತ್ರ ಕುರಿತು ಹೇಳಿದರೆ ಸಾಕಾಗಿದೆ.

## ಅರಬರ ರಾಜ್ಯಾಡಳಿತ

ಮೊದಲನೆಯ ನಾಲ್ಕು ಕಲೀಫರೂ ಸರಳಜೀವಿಗಳೂ ಧರ್ಮಿಷ್ಠರೂ ಆಗಿದ್ದು ಪ್ರಜೆಗಳ ಹಿತಕ್ಕಾಗಿ ತಂದೆಯಂತೆ ದುಡಿಯುತ್ತಿದ್ದರು. ಅರಮನೆ, ಸಿಂಹಾಸನ, ಕಿರೀಟ, ಕಾವಲುದಳ ಈ ಯಾವ ಆಡಂಬರವೂ ಇಲ್ಲದೆ ಗುಡಿಸಿಲಿನಲ್ಲಿ ವಾಸ, ಮಸೀದಿಯಲ್ಲಿ ಆಸ್ಥಾನ—ಈ ರೀತಿಯಲ್ಲಿ ದ್ದರು. ಯಾವ ಮುಸ್ಲಿಮನೇ ಆಗಲಿ ಬಿಳುಪು ಕಪ್ಪು, ಒಡೆಯ ಆಳು ಎಂಬ ಭೇದವಿಲ್ಲದೆ ಯಾವ ಅಡ್ಡಿಯೂ ಇಲ್ಲದೆ ನೇರವಾಗಿ ಕಲೀಫ ನನ್ನು ಕಂಡು ತನ್ನ 'ಅಹವಾಲನ್ನು' ಅರಿಕೆ ಮಾಡಿಕೊಳ್ಳಬಹು ದಾಗಿತ್ತು. ಕಲೀಫನೇ ಕಾರ್ಯಕರ್ತ, ದಂಡಾಧಿಕಾರಿ, ನ್ಯಾಯಾಧೀಶ,

ಕೋಶಾಧಿಕಾರಿ, ಎಲ್ಲವೂ ಆಗಿದ್ದನು. ವಜ್ಜೀರ್ ಅಥವಾ ಮಂತ್ರಿಗಳಿರಲಿಲ್ಲ. ಸೈನ್ಯ ಹೂಡಿಸುವುದು, ಸೇನಾನಿಗಳನ್ನು ನೇಮಿಸುವುದು, ಕೊಳ್ಳೆ ಹಂಚುವುದು, ಜನರ ವ್ಯಾಜ್ಯ ತೀರಿಸುವುದು—ಇವೇ ಮೊದಲಾದುವು ಕಲೀಫ಼ನ ಕೆಲಸವಾಗಿತ್ತು. ಆದರೆ, ಕ್ರಮೇಣ ಈ ಆಡಳಿತ ಕಷ್ಟವಾಗುತ್ತ ಬಂದು ಎರಡನೆಯ ಕಲೀಫ಼್ ಉಸ್ಮಾನನು ಒಂದು 'ದಿವಾನ್' ಅಥವಾ ಕಾರ್ಯಶಾಖೆಯನ್ನು ಏರ್ಪಡಿಸಿದನು. ಅಲ್ಲದೆ ಸೈನ್ಯಾಡಳಿತವನ್ನು ಸುಧಾರಿಸಿ ರಾಜ್ಯದ ಮುಖ್ಯಪಟ್ಟಣಗಳಲ್ಲಿ ಕಾಜಿಗಳನ್ನು (ನ್ಯಾಯಾಧೀಶರನ್ನು) ನೇಮಿಸಿದನು. ಉಮಯ್ಯರು ಪಟ್ಟಕ್ಕೆ ಬಂದಾಗ, ಅವರು ರೋಮ್ ಮತ್ತು ಪರ್ಷಿಯ ರಾಜ್ಯಗಳ ಆಡಳಿತ ರೀತಿಯನ್ನು ಅನುಕರಿಸಿದ್ದೇ ಅಲ್ಲದೆ ಆಡಳಿತದ ಖಾತೆಗಳನ್ನೂ ಹೆಚ್ಚಿಸಿದರು. ಪ್ರತಿಯೊಂದು ಖಾತೆಗೂ ಒಬ್ಬ ಮುಖ್ಯಾಧಿಕಾರಿ ಇದ್ದನು. ಅಬ್ಬಾಸಿಯರು ಸಸಾನಿಯನ್ ಆಡಳಿತಕ್ರಮವನ್ನು ಅನುಸರಿಸಿ ವಜ್ಜೀರ್ ಅಥವಾ ಮುಖ್ಯಮಂತ್ರಿಯೊಬ್ಬನನ್ನು ನೇಮಿಸಿಕೊಂಡರು. ಸಾಮ್ರಾಜ್ಯದ ಆಡಳಿತವೆಲ್ಲ ಈ ವಜ್ಜೀರನ ಕೈಕೆಳಗಿತ್ತು. ಉಳಿದ ಮಂತ್ರಿಗಳು, ಪ್ರಾಂತಾಧಿಪತಿಗಳು, ಅಧಿಕಾರಿಗಳು—ಎಲ್ಲರನ್ನೂ ಈ ವಜ್ಜೀರನೇ ನೇಮಿಸುತ್ತಿದ್ದನು ಅಥವಾ ಆ ವಿಷಯದಲ್ಲಿ ಕಲೀಫ಼ನಿಗೆ ಸಲಹೆ ಕೊಡುತ್ತಿದ್ದನು. ಈ ಮುಖ್ಯಮಂತ್ರಿಯ ಪದವಿ ಮೊನ್ನೆಮೊನ್ನೆಯವರೆಗೂ ತುರ್ಕಿ, ಪರ್ಷಿಯ ಮುಂತಾದ ಮುಸ್ಲಿಂ ರಾಜ್ಯಗಳಲ್ಲಿ ಉಳಿದಿತ್ತು. ಇದಲ್ಲದೆ ಕ್ರಮೇಣ ಖಿಲಾಫ಼ತ್ ಬಲ ಕುಗ್ಗಿ ಕೀಳುದೆಸೆಗಿಟ್ಟುಕೊಂಡಾಗ, ಕಲೀಫ಼ರು ಅಮೀರ್ ಉಲ್ ಉಮರ ಎಂಬ ಹೊಸ ಅಧಿಕಾರಿಯೊಬ್ಬನನ್ನು ನೇಮಿಸಿಕೊಂಡರು. ಇದು ಬಾಗ್‌ದಾದಿನಲ್ಲಿ ಆಳುತ್ತಿದ್ದ ಬುವಹಿ ಮನೆತನಕ್ಕೆ ಕೊಟ್ಟ ಬಿರುದಾಗಿತ್ತು. ಇವರು ಕಲೀಫ಼ನನ್ನು ತಮ್ಮ ನಾಮಮಾತ್ರ ಪ್ರಭುವಾಗಿ ಒಪ್ಪಿಕೊಂಡು ಸ್ವಂತ ವಜ್ಜೀರನನ್ನೂ ಅಧಿಕಾರಿಗಳನ್ನೂ ನೇಮಿಸಿಕೊಂಡು ಅಧಿಕಾರ ನಡೆಸುತ್ತಿದ್ದರು. ಕಲೀಫ಼ನಿಗೂ ರಯೀಸ್ ಉಲ್ ರೌಸ ಎಂಬ ಹೆಸರಿನ ಆಸ್ಥಾನಮಂತ್ರಿ ಇದ್ದನು.

ಪಟ್ಟಣವನ್ನು ಮೊಹಲ್ಲಾಗಳಾಗಿ ಭಾಗಮಾಡಿ ಒಂದೊಂದು ಮೊಹಲ್ಲಾಕ್ಕೂ ಒಬ್ಬೊಬ್ಬ ರಯೀಸ್ (ಈಗಿನ ಮೊಖ್‌ತಾರ್ ಅಥವಾ

ಕೊತ್ವಾಲ್) ಎಂಬ ಅಧಿಕಾರಿಯನ್ನು ನೇಮಿಸಿದ್ದರು. ತನ್ನ ಮೊಹಲ್ಲಾದ ಪಹರೆನೋಡಿಕೊಳ್ಳುವುದು ಇವನ ಕೆಲಸವಾಗಿತ್ತು. ಈ ಮೊಖ್‌ತಾರ್ ಗಳಿಗೆಲ್ಲ ಮೇಲಧಿಕಾರಿಯಾದ ಸಾಹಿಬ್ ಎಶುರ್ತಾ ಎಂಬವನ ಕೆಲಸ ರಾಜರಕ್ಷಣೆ, ಪುಂಡರನ್ನು ಅಡಗಿಸುವುದು, ದಂಡವ್ಯವಹಾರಗಳಲ್ಲಿ ನ್ಯಾಯತೀರಿಸುವುದು—ಮೊದಲಾದುವಾಗಿದ್ದುವು. ಸಮಾಜದ ನೀತಿ ನಡೆವಳಿಗಳ ಮೇಲ್ವಿಚಾರಣೆಗಾಗಿ ಮೊಹ್‌ತಸಿಬ್ ಎಂಬ ಅಧಿಕಾರಿ ಯೊಬ್ಬನಿದ್ದನು. ವ್ಯಭಿಚಾರ, ಕುಡಿತ, ಜೂಜು, ವ್ಯಾಪಾರ ಮೊದ ಲಾದುವುಗಳಲ್ಲಿ ಮೋಸ, ದಾಸರು, ಆಳುಗಳು, ಮೂಕಪ್ರಾಣಿಗಳು ಇವುಗಳಲ್ಲಿ ಕ್ರೌರ್ಯ, ಇವೇ ಮೊದಲಾದ ಅಧರ್ಮಗಳು ನಡೆಯದಂತೆ ನೋಡಿಕೊಳ್ಳುವುದು ಇವನ ಕೆಲಸವಾಗಿತ್ತು. (ಬಡ ಹೆಂಗಸರಿಗೆ ಗಂಡರನ್ನು ಹೊಂದಿಸಿ ಮದುವೆಮಾಡಿಸುವುದೂ ಇವನಿಗಿದ್ದ ನೂರಾರು ಕೆಲಸಗಳಲ್ಲಿ ಒಂದು). ಮುಲ್ಕಿ ವ್ಯವಹಾರಗಳಲ್ಲಿ ಕಾಜಿ ನ್ಯಾಯ ತೀರಿಸುತ್ತಿದ್ದನು. ಈ ಕಾಜಿ ಮುಸ್ಲಿಮರದು ಮಾತ್ರವಲ್ಲದೆ ಇತರರ ವ್ಯಾಜ್ಯಗಳನ್ನೂ, ಬಹಿರಂಗಸ್ಥಳದಲ್ಲಿ ಸಾಕ್ಷಿಗಳ ಮುಂದೆ ವಿಚಾರಣೆ ನಡಸಿ ತೀರಿಸುತ್ತಿದ್ದನು. ಈ ನ್ಯಾಯಸ್ಥಾನಗಳಲ್ಲಿ ಕೀಳುಮೇಲೆಂಬ ಭೇದಭಾವವಿಲ್ಲದೆ ಸರ್ವ ಸಮತಾಭಾವವಿತ್ತು. ಕಲೀಫನು ಕೂಡ, ತಾನೇ ಇಷ್ಟಪಟ್ಟು, ವ್ಯಾಜ್ಯದಲ್ಲಿ ಕಕ್ಷಿಗಾರನಾಗಿ ಕಾಜಿಯ ನ್ಯಾಯ ಸ್ಥಾನದ ಮುಂದೆ ಸಾಮಾನ್ಯ ಮನುಷ್ಯನೊಬ್ಬನ ಪಕ್ಕದಲ್ಲಿ ನಿಂತು ಕೊಳ್ಳುತ್ತಿದ್ದನು. ಕೆಲವುವೇಳೆ ಪ್ರಾಂತಾಧಿಕಾರಿ ಅಥವಾ ಕಲೀಫನು ಕಾಜಿಗಳು ಕೊಟ್ಟ ನಿರ್ಣಯವನ್ನು ಬದಲಾಯಿಸುತ್ತಿದ್ದದ್ದೂ ಉಂಟು. ಈ ಕಾಜಿಗಳಲ್ಲದೆ ನಾಸ್ಸಿರ್ ಅಲ್ ಮಸ್ಸಾಲಿಮ್ ಎಂಬ ಅಧಿಕಾರಿಯೊಬ್ಬ ನಿದ್ದನು. ಕಾಜಿಗಳ ಅಧಿಕಾರಕ್ಕೆ ಮೀರಿದ ವ್ಯವಹಾರಗಳನ್ನು ವಿಚಾರಿಸಿ ನಿರ್ಣಯಿಸುವುದು, ಕಾಜಿಗಳು ಕೊಟ್ಟ ತೀರ್ಪನ್ನು ಪುನರ್ವಿಮರ್ಶೆ ಮಾಡುವುದು—ಇವೇ ಮೊದಲಾದುವು ಇವನ ಕೆಲಸವಾಗಿತ್ತು.

ಸರ್ಕಾರದ ಆದಾಯ ಮುಖ್ಯವಾಗಿ ಐದುಮೂಲಗಳಿಂದ ಬರು ತ್ತಿತ್ತು. (೧) ಉಷರ್ ಅಥವಾ ದಶಾಂಶ. ಇದನ್ನು ಮುಸ್ಲಿಮರ ಹೊಲ ಗದ್ದೆಗಳ ಮೇಲೆ ಹಾಕುತ್ತಿತ್ತು. (೨) ಖರಾಜ್ (ಕರ ಅಥವಾ ಕಪ್ಪ)

ಇದನ್ನು ಮುಸ್ಲಿಮರು ಗೆದ್ದುಕೊಂಡು ಮತ್ತೆ ಹಿಂದಿನ ಹಕ್ಕುದಾರರಿಗೆ ಒಪ್ಪಿಸಿದ ಭೂಮಿಯಮೇಲೆ ವಸೂಲು ಮಾಡುತ್ತಿತ್ತು. ಆ ಹಕ್ಕುದಾರರು ಮುಸ್ಲಿಮರಾದಮೇಲೂ ಇದನ್ನು ಕೊಡಬೇಕಾಗಿತ್ತು. ಈ ಖರಾಜ್ ಭೂಗುಣದಮೇಲೆಯೂ ಕಲೀಫನ ಅಥವಾ ಸ್ಥಳೀಯ ಅಧಿಕಾರಿಗಳ ಇಷ್ಟದಮೇಲೆಯೂ ವ್ಯತ್ಯಾಸಹೊಂದುತ್ತ, ಕೆಲವುವೇಳೆ ಉತ್ಪತ್ತಿಯ ಅರ್ಧದಷ್ಟು ಆಗಿರುತ್ತಿತ್ತು. (೩) ಸದಕ, ಸ್ಜಕಾತ್ ಅಥವಾ ಭಿಕ್ಷೆಯ ತೆರಿಗೆ. ಇದನ್ನು ಮುಸ್ಲಿಮರಮೇಲೆ ಮಾತ್ರ, ಅವರ ಭೂ ಆದಾಯ, ವ್ಯಾಪಾರಾದಾಯ—ಮೊದಲಾದುವುಗಳಮೇಲೆ ಹಾಕುತ್ತಿತ್ತು. (೪) ಗನೀಮ (ಕೊಳ್ಳೆ). ಕೊಳ್ಳೆಯಲ್ಲಿ ೪/೫ಭಾಗ ಸಿಪಾಯಿಗಳಿಗೂ ಕೆಲಸ ಗಾರರಿಗೂ ಹಂಚಿ, ೧/೫ ಭಾಗ ಸರ್ಕಾರದ ಖಜಾನೆಗೆ ಹೋಗುತ್ತಿತ್ತು. ಇದರಲ್ಲಿ ಗಣಿ, ಗುಪ್ತನಿಧಿ, ಹಕ್ಕುದಾರರಿಲ್ಲದ ಆಸ್ತಿ—ಮುಂತಾದುವು ಸೇರುತ್ತಿದ್ದುವು. (೫) ಜಸ್ಯಿಯ. ಇದನ್ನು ಮುಸ್ಲಿಮರಲ್ಲದವರಮೇಲೆ, ಅವರನ್ನು ಸೈನ್ಯಸೇವೆಯಿಂದ 'ಮಾಫಿ' ಮಾಡಿದ್ದರ ಪರಿಹಾರಕ್ಕಾಗಿ ಹಾಕುತ್ತಿತ್ತು. ಇದು ಎರಡುತೆರನಾಗಿತ್ತು. (i) ಜನರು ತಾವಾಗಿಯೇ ಕೊಡುತ್ತಿದ್ದದ್ದು. (ii) ಸರ್ಕಾರ ಬಲಾತ್ಕಾರದಿಂದ ವಸೂಲುಮಾಡು ತ್ತಿದ್ದದ್ದು. ಈ ಕಂದಾಯ ತೆರಿಗೆಗಳನ್ನು ಪದಾರ್ಥರೂಪದಲ್ಲಿಯೂ ಹಣದ ರೂಪದಲ್ಲಿಯೂ ಎತ್ತುತ್ತಿತ್ತು. ಬೆಳ್ಳಿ ಮತ್ತು ಚಿನ್ನದ ನಾಣ್ಯ ಗಳಿದ್ದುವು.

ಕಾಲಕ್ರಮದಲ್ಲಿ ಸರ್ಕಾರಕ್ಕೆ ಕೊಡಬೇಕಾದ ಕಂದಾಯ ತೆರಿಗೆ ಗಳು ಹೆಚ್ಚುತ್ತ ಬಂದುವು. ಒಳಮಾರು (ಆಮದು), ಹೊರಮಾರು (ರಫ್ತು) ಸರಕುಗಳ ಮೇಲೂ ತೆರಿಗೆ ಹಾಕಿತು. ಸಾಮಾನ್ಯವಾದ ಈ ಕಂದಾಯ ತೆರಿಗೆಗಳಲ್ಲದೆ, ಕಲೀಫನು ವಿಶೇಷ ಸಂದರ್ಭಗಳಲ್ಲಿ ಮಂತ್ರಿ ಗಳು, ಸೇನಾನಿಗಳು, ಆಡಳಿತಗಾರರು, ಮೊದಲಾದವರಿಂದ ಹಲವು ಬಗೆಯಲ್ಲಿ ಹಣ ವಸೂಲು ಮಾಡುತ್ತಿದ್ದನು. ಕೆಲವುವೇಳೆ ಅವರನ್ನು ಅಧಿಕಾರದಿಂದ ಓಡಿಸಿಬಿಟ್ಟು ಆಸ್ತಿಯನ್ನೇ ದೋಚಿಕೊಂಡುಬಿಡುತ್ತಿ ದ್ದನು. ಈ ನೀಚ ಪದ್ಧತಿ ಅರಬ ಚಕ್ರಾಧಿಪತ್ಯ ಮುಗಿದಮೇಲೂ ಇತರ ಇಸ್ಲಾಂ ದೇಶಗಳಲ್ಲಿ ಉಳಿದುಕೊಂಡು ಬಂತು.

## ಮುಸ್ಲಿಂ ವಿಜಯದ ಬಳಿಕ ಪರ್ಷಿಯ

ಮೊದಲನೆಯ ಕಲೀಫನ ಆಳಿಕೆಯಲ್ಲಿಯೆ ಪರ್ಷಿಯಕ್ಕೆ ದಾಳಿ ಇಡಲು ಆರಂಭವಾಗಿ ೨೫ ವರ್ಷಗಳೊಳಗೆ ಇರಾನ್ ಸಾಮ್ರಾಜ್ಯ ಅರಬ ಖಿಲಾಫತ್ತಿನ ಒಂದು ಪ್ರಾಂತವಾಗಿ ಪರಿಣಮಿಸಿತು. ಆದರೆ ಪಾರಸಿಕರು ಅರಬರಿಗೆ ತಲೆಗಂದಾಯ ಕೊಟ್ಟು ತಮ್ಮ ಪಾರಸೀಧರ್ಮವನ್ನು ಉಳಿಸಿ ಕೊಳ್ಳಲು ಅನುಮತಿ ಸಿಕ್ಕಿದ್ದಲ್ಲದೆ ಪಾರಸಿಕರನ್ನು ರಾಜ್ಯಾಡಳಿತದಲ್ಲಿ ನೇಮಿಸಿಕೊಳ್ಳುತ್ತಲೂ ಇತ್ತು. ಆದರೂ ಅರಬರಲ್ಲದವರನ್ನು ಕಂಡರೆ ಉಮಯ್ಯರಿಗಿದ್ದ ದ್ವೇಷತಿರಸ್ಕಾರಗಳೂ, ಖಿಲಾಫತ್ತಿಗೆ ತಾವು ಹಕ್ಕು ದಾರರೆಂದು ಮೊದಲಿಂದಲೂ ಸಾಧಿಸುತ್ತಿದ್ದ ಬನೀಹಾಷಿಮರು ಇರಾನಿ ನಲ್ಲಿ ತಮ್ಮ ಚಳವಳಿಯನ್ನು ಆರಂಭಿಸಿದ್ದೂ, ಪಾರಸಿಕರಿಗೆ ತಮ್ಮ ಹಗೆ ಯನ್ನು ತೀರಿಸಿಕೊಳ್ಳಲು ಒಳ್ಳೆಯ ಅವಕಾಶ ಕೊಟ್ಟುವು. ಬನೀಹಾಷಿಮ ರಿಗೆ ಸಹಾಯಕವಾದ ಒಂದು ಸಂಘವೇರ್ಪಟ್ಟು, ಆ ಸಂಘ ಅಬು ಮುಸ್ಲಿಂ ಮೊದಲಾದ ಹಲವು ಮುಂದಾಳುಗಳ ನೆರವಿನಿಂದ ಕೊನೆಯ ಉಮಯ್ಯ ಕಲೀಫನನ್ನು ಸೋಲಿಸಿ ಅಬ್ಬಾಸಿ ಸಂತತಿಗೆ ಖಿಲಾಫತ್ ಪಟ್ಟವನ್ನು ಗಳಿಸಿಕೊಟ್ಟಿತು. ಅಬ್ಬಾಸಿ ಕಲೀಫರೆಲ್ಲರೂ ಪೌರಕ (ಮುಲ್ಕಿ) ಮತ್ತು ಸೈನಿಕ ಮುಖ್ಯಾಧಿಕಾರಗಳಿಗೆಲ್ಲ ಪಾರಸಿಕರನ್ನೇ ನೇಮಿಸುತ್ತಿದ್ದರು. ಅರಬ ಖಿಲಾಫತ್ ಪರ್ಷಿಯನ್ ಸ್ವಭಾವ ತಾಳಿತು. ರಾಜಧಾನಿ ಸಿರಿಯದಿಂದ ಬಾಗ್ದಾದಿಗೆ ವರ್ಗವಾಯಿತು. ಅನೇಕ ಕಲೀಫರು ಪಾರಸಿಕ ಹೆಂಡಿರನ್ನು ಮದುವೆಯಾದರು. ಬಹು ಪ್ರಖ್ಯಾತ ಕಲೀಫನಾದ ಮಾಮೂನಿನ ತಾಯಿ ಪಾರಸಿಕಳು. ಪ್ರಧಾನ ಮಂತ್ರಿ ಗಳೆಲ್ಲ ಪಾರಸಿಕರಾಗಿ ಅಬ್ಬಾಸಿಯರ ಆಸ್ಥಾನ ಪಾರಸಿಕ ವೇಷವನ್ನು ತಾಳಿದ್ದಲ್ಲದೆ—ಉಡಿಗೆ ತೊಡಿಗೆ, ನೀತಿ ನಡೆವಳಿ —ಎಲ್ಲದರಲ್ಲಿಯೂ ಪಾರಸಿಕ ಪ್ರಭಾವವೇ ಕಂಡುಬಂತು. ಈ ನಡುವೆ ೯ನೆಯ ಶತ ಮಾನದ ಮಧ್ಯದವೇಳೆಗೆ ಖೊರಾಸಾನಿನಲ್ಲಿ ಒಂದು ಅರ್ಧ ಸ್ವತಂತ್ರ ರಾಜಸಂತತಿ ತಲೆಯೆತ್ತಿತು. ಕ್ರಮೇಣ ಹೀಗೆಯೇ ಇನ್ನೂ ಅನೇಕ ಸಂತತಿಗಳೆದ್ದುವು. ೧೦ ನೆಯ ಶತಮಾನದ ಕೊನೆಯ ವೇಳೆಗೆ ಅರಬ

ಖಿಲಾಫತ್ತಿನ ಅಧಿಕಾರ ಪರ್ಶಿಯದಲ್ಲಿ ತಪ್ಪಿತು. ಈಶಾನ್ಯದಲ್ಲಿ ಘೆಸ್ನ್ವಿಯರೂ, ಪಶ್ಚಿಮ ಪರ್ಶಿಯದಲ್ಲಿ (ಬಾಗ್‌ದಾದನ್ನೂ ಒಳಗೊಂಡು) ಬೊವೈಹಿಯರೂ, ಉತ್ತರ ಪರ್ಶಿಯದಲ್ಲಿ ಸ್ಸಿಯಾರೀಯರೂ ಸ್ವತಂತ್ರ ಪ್ರಭುಗಳಾದರು. ಮತ್ತೆ ಪರ್ಶಿಯನ್ ಭಾಷೆ, ಪುರಾಣಗಳು ತಲೆಯೆತ್ತಿದುವು (ಮಹಾಕವಿ ಫಿರ್ದೌಸಿಯ ಮೂಲಕ). ಆದರೂ, ಅರಬ್ಬೀ ಭಾಷೆ ಮತಭಾಷೆಯೂ ಸಾಹಿತ್ಯ ಭಾಷೆಯೂ ಆಗಿ ಉಳಿಯಿತು.

೧೧ನೆಯ ಶತಮಾನದ ಕೊನೆಯಲ್ಲಿ ಸೆಲ್‌ಜೂಕಿಯರು, ಚೀನ, ತುರ್ಕೀಸ್ಥಾನಗಳಿಂದ ಸಿರಿಯ, ಮೆಡಿಟರೇನಿಯನ್ ತೀರಗಳವರೆಗೂ ಹರಡಿದ್ದ ದೊಡ್ಡ ಸಾಮ್ರಾಜ್ಯವನ್ನು ಕಟ್ಟಿದರು. ಈ ದೊರೆಗಳು ಪರ್ಶಿಯನ್ ಸಾಹಿತ್ಯಕ್ಕೆ ಆಶ್ರಯದಾತರಾದರು. ನೈಜಾಮ್ ಉಲ್‌ಮುಲ್ಕ್ ಎಂಬ ಅವರ ಪಾರಸಿಕ ಮಂತ್ರಿ ಸಾಮ್ರಾಜ್ಯವನ್ನು ಸುವ್ಯವಸ್ಥೆಗೊಳಿಸಿ, ಶಾಂತಿಸಮಾಧಾನಗಳು ನೆಲಸುವಂತೆ ಮಾಡಿ ರಾಜ್ಯದ ಎಲ್ಲ ಭಾಗಗಳಲ್ಲೂ ವಿದ್ಯಾಶಾಲೆಗಳನ್ನೇರ್ಪಡಿಸಿದನು. ಇವನ ಮೂವತ್ತು ವರ್ಷಗಳ ವಜೀರಗಿರಿ ಸೆಲ್‌ಜೂಕಿ ಆಳಿಕೆಯ ಸ್ವರ್ಣಯುಗವೆನ್ನಬಹುದು. ಈ ಸೆಲ್‌ಜೂಕಿ ಚಕ್ರವರ್ತಿಗಳಲ್ಲಿ ಮೊದಲನೆಯ ನಾಲ್ವರು–ತುಗ್‌ರುಲ್, ಅಲ್‌ಪರ್‌ಸ್ಲಾನ್, ಮಲಿಕ್‌ಷಾ ಮತ್ತು ಸಂಜರ್—ಏಷ್ಯದ ಪ್ರಸಿದ್ಧ ಚಕ್ರವರ್ತಿಗಳಲ್ಲಿ ಗಣ್ಯರಾಗಿದ್ದರು. ಇವರನಂತರ ಬಂದ ಖಾರಜ್ಮ್‌ ಷಾಹಿಗಳ ಕಾಲದಲ್ಲಿ ಪರ್ಶಿಯ ಮತ್ತೆ ಹೊರ ದಾಳಿಗೆ ತುತ್ತಾಯಿತು. ಚೆಂಗಿಸ್‌ಖಾನ್ ತನ್ನ ತಾರ್ತರೀ ಸೈನ್ಯದೊಡನೆ ಬಂದು ಪೂರ್ವ ಪರ್ಶಿಯವನ್ನೆಲ್ಲ ದಾಳಿಯಿಟ್ಟು, ಜನರನ್ನು ಕೊಲೆಮಾಡಿ, ಕಟ್ಟಡಗಳನ್ನುರುಳಿಸಿ, ಪುಸ್ತಕಭಂಡಾರಗಳನ್ನು ಸುಟ್ಟು ಸರ್ವಧ್ವಂಸಮಾಡಿದನು. ಇದರಿಂದ ಪಾರಸಿ ಅರಬ ಸಂಸ್ಕೃತಿ ಸಂಪೂರ್ಣ ನಾಶವಾಗದಿದ್ದರೂ ನಿಸ್ಸತ್ವವಾಯಿತು. ಚೆಂಗಿಸ್‌ಖಾನನ ಮೊಮ್ಮಗ ಹಲಾಗುಖಾನನು ಮತ್ತೆ ಇರಾನಿಗೆ ದಾಳಿಯಿಟ್ಟು ಬಾಗ್‌ದಾದನ್ನು ಹಿಡಿದು ತಾತನಂತೆ ತಾನೂ ೮ ಲಕ್ಷ ಜನ ಹೆಂಗಸು ಗಂಡಸರನ್ನು ಕೊಲೆಗಡಿದು, ಪರ್ಶಿಯನ್ ಕಲೆ, ಸಾಹಿತ್ಯ, ಸಂಸ್ಕೃತಿಗಳನ್ನು ನಾಶಮಾಡಿದನು. ಹೀಗೆ

ತಾರ್ತರರು ಅಥವಾ ಮೊಗಲರು* ಪರ್ಷಿಯದ ಸಂಪೂರ್ಣ ಒಡೆಯರಾಗಿ ಕ್ರಿ. ಶ. ೧೨೫೬ ರಿಂದ ಕ್ರಿ. ಶ. ೧೩೩೬ ರ ವರೆಗೆ ಆಳಿದರು. ಇವರು ಕ್ಷೀಣಿಸಿದನಂತರ ಮತ್ತೆ ಪರ್ಷಿಯ ಅನೇಕ ಭಾಗಗಳಾಗಿ ಒಡೆದು ಸುಮಾರು ಐವತ್ತು ವರ್ಷಗಳವರೆಗೆ ಆಯಾ ಸ್ಥಳಿಕ ಅರಸುಮನೆತನದವರ ಆಳಿಕೆಯನ್ನು ಕಂಡಿತು. ಈ ಹೊತ್ತಿಗೆ ಪ್ರಸಿದ್ಧನಾದ ತೈಮೂರನು ಬಂದು ಈ ಬುಡಕಟ್ಟಿರಾಜ್ಯಗಳನ್ನು ಕೊನೆಗಾಣಿಸಿ, ಪಶ್ಚಿಮ ಮತ್ತು ಮಧ್ಯಏಷ್ಯಕ್ಕೆಲ್ಲ ಒಬ್ಬನೇ ಪ್ರಭುವಾಗಿ ಸಾಮರ್‌ಕಂದನ್ನು ರಾಜಧಾನಿಯನ್ನಾಗಿ ಮಾಡಿಕೊಂಡು, ಅಲ್ಲಿ ಭವ್ಯಭವನಗಳನ್ನು ಕಟ್ಟಿಸಿ, ಪರ್ಷಿಯದ ಎಲ್ಲ ಭಾಗಗಳಿಂದಲೂ ವಿದ್ವಾಂಸರನ್ನೂ ಕಲಾವಿದರನ್ನೂ ಶಿಲ್ಪಿಗಳನ್ನೂ ಕರಸಿಕೊಂಡು ಆಶ್ರಯವಿತ್ತನು.

ಈ ತೈಮೂರಿ ಸಂತತಿ ಆದಮೇಲೆ ಪರ್ಷಿಯದ ಸಫ಼ವಿಯರು ಬಂದು ೧೬ನೆಯ ಶತಮಾನದ ಮೊದಲಲ್ಲಿ ಮತ್ತೆ ಸ್ವತಂತ್ರ ರಾಷ್ಟ್ರೀಯ ಪ್ರಭುತ್ವವನ್ನು ಸ್ಥಾಪಿಸಿದರು. ಇವರ ಮೊದಲನೆಯ ದೊರೆ ಷಾ ಇಸ್ಮಾಯಿಲಿನ ಕಾಲದಲ್ಲಿ ತಬ್‌ರೀಸ್ ರಾಜಧಾನಿಯಾಗಿ, ಷಿಯಾಧರ್ಮ ರಾಷ್ಟ್ರಧರ್ಮವಾಯಿತು. ಇದರಿಂದ ಪರ್ಷಿಯ ಇರಾನಿನ ಇತರ ಭಾಗಗಳಿಂದ ಪ್ರತ್ಯೇಕವಾಯಿತು. ಈ ಸಫ಼ವಿಯರ ಕಾಲದಲ್ಲಿ ಪರ್ಷಿಯನ್ ಸಂಸ್ಕೃತಿ, ಕಲೆ, ವಾಣಿಜ್ಯಗಳು ಅಭಿವೃದ್ಧಿ ಹೊಂದಿದ್ದಲ್ಲದೆ ಪರ್ಷಿಯಕ್ಕೆ ಮೊದಲನೆಯ ಸಲ ಯೂರೋಪಿನ ಜನಾಂಗಗಳ ಸಂಪರ್ಕ ವುಂಟಾಯಿತು. ಈ ಸಫ಼ವಿಯರ ಕೊನೆಯ ದೊರೆ ಅಫ್ಘನರ ದಂಗೆಯಿಂದ ಪದಚ್ಯುತನಾಗಿ, ಪ್ರಜೆಗಳಿಗೆ ಮತ್ತೆ ಕೇಡು ಬಂತು. ಅಫ್ಘನರು ೭ ವರ್ಷಗಳು ಆಳುವುದರೊಳಗಾಗಿಯೇ ನಾದಿರ್‌ಷಾ ಬಂದು ಅವರನ್ನು ಸೋಲಿಸಿ ಓಡಿಸಿದನು. ಇದಕ್ಕಾಗಿ ಅವನನ್ನು ಬಹುವಾಗಿ ಗೌರವಿಸಿ ಅವನ ಹೆಸರನ್ನು ಪರ್ಷಿಯದ ಪ್ರಸಿದ್ಧ ರಾಜರಾದ ಅರ್ದಷೀರ್, ಷಾ ಅಬ್ಬಾಸ್, ಮೊದಲಾದವರ ಪಂಕ್ತಿಯಲ್ಲಿ ಸೇರಿಸುತ್ತಾರೆ. ನಾದಿರ್‌ಷಾ ಪಶ್ಚಿಮದಲ್ಲಿ ತುರ್ಕರನ್ನು ಸೋಲಿಸಿ, ತುರ್ಕಿ ಮತ್ತು ರಷ್ಯಗಳಿಗೆ ಸೇರಿದ್ದ ಪ್ರಾಂತಗಳನ್ನು ಗೆದ್ದು ತಂದನು. ಇಂಡಿಯಕ್ಕೆ ಬಂದು ಡೆಲ್ಲಿ

*ಇಂಡಿಯದ ಬಾಬರ್, ಚೀನದ ಕುಬ್ಲೈಖಾನ್—ಇವರು ಈ ಬುಡಕಟ್ಟಿನವರು.

ಚಕ್ರವರ್ತಿ ಮಹಮ್ಮದ್‌ಷಾವನ್ನು ಸೋಲಿಸಿ ಬೇಕಾದಷ್ಟು ಕೊಳ್ಳೆ ಹೊಡೆದು ಹಿಂದಿರುಗಿದನು. ಇವನು ದೊಡ್ಡ ಸೇನಾನಿಯಾಗಿದ್ದರೂ ಸಮರ್ಥನಾದ ಆಡಳಿತಗಾರನಾಗಿರಲಿಲ್ಲ. ರಾಜ್ಯಗಳನ್ನು ಗೆಲ್ಲಬಲ್ಲವನೇ ಹೊರತು ಆಡಳಿತವನ್ನು ವ್ಯವಸ್ಥೆಮಾಡಬಲ್ಲವನಾಗಿರಲಿಲ್ಲ. ಇವನ ಕೊಲೆಯನಂತರ ಪರ್ಷಿಯದಲ್ಲೆಲ್ಲ ಅರಾಜಕತೆಗೆ ಇಟ್ಟುಕೊಂಡು ಪ್ರಾಂತಗಳೆಲ್ಲ ಮತ್ತೆ ಒಡೆದು ಬೇರೆಬೇರೆ ರಾಜರ ಕೈವಶವಾದುವು. ಇರಾನ್ ಮಾತ್ರ ಕರೀಮ್‌ಖಾನ್ (ಕ್ರಿ.ಶ. ೧೭೫೦) ಮತ್ತು ಅವನ ಮನೆತನದ ಆಳಿಕೆಯಲ್ಲಿ ಉಳಿಯಿತು. ಈ ಮನೆತನದ ನಂತರ ಕಾಜಾರ್ ಮನೆತನ ಬಂದು ಟೆಹರಾನನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳಿತು. ಈಗಲೂ ಇದೇ ರಾಜಧಾನಿಯಾಗಿದೆ. ಈ ಸಂತತಿಯ ಮೊದಲನೆಯ ದೊರೆ ಷಾ ಮಹಮ್ಮದ್‌ಖಾನ್. ಇವನನಂತರ ಬಂದ ಫ಼ತ್ ಅಲೀಷಾ (ಕ್ರಿ.ಶ. ೧೭೯೬-೧೮೩೪) ಮತ್ತೆ ಕೆಲವು ಪ್ರಾಂತಗಳನ್ನು ರಷ್ಯದವರಿಗೂ ಇಂಗ್ಲಿಷರಿಗೂ ಕಳೆದುಕೊಂಡನು. ಅವುಗಳನ್ನು ಮತ್ತೆ ಗೆದ್ದುಕೊಳ್ಳಲು ಮಾಡಿದ ಇವನ ಮೊಮ್ಮಗ ಮಹಮ್ಮದ್‌ಷಾವಿನ (ಕ್ರಿ. ಶ. ೧೮೩೪-೧೮೪೮) ಪ್ರಯತ್ನಗಳು ನಿಷ್ಫಲವಾದುವು. ಇಷ್ಟೇ ಅಲ್ಲದೆ ಇವನ ಮಗ ನಸೀರ್‌ಉದ್ದೀನ್ (ಕ್ರಿ. ಶ.೧೮೪೮-೯೬) ಮತ್ತಷ್ಟು ಪ್ರಾಂತಗಳನ್ನು ಕಳೆದುಕೊಂಡು ಇರಾನ್ ಈಗಿನಷ್ಟು ಕಿರಿದಾಯಿತು.

ಈ ನಸೀರ್‌ಉದ್ದೀನನ ಕಾಲದಲ್ಲಿ ಪರ್ಷಿಯಕ್ಕೆ ಪರಿಣಾಮಕರವಾದ ಪಾಶ್ಚಾತ್ಯ ಸಂಪರ್ಕವಾಗಿ ಅದರ ಪ್ರಭಾವ ಬಿದ್ದದ್ದು. ಜನರು ಫ್ರೆಂಚ್ ಭಾಷೆ ಕಲಿತು, ಅನೇಕ ಫ್ರೆಂಚ್ ಗ್ರಂಥಗಳು ಭಾಷಾಂತರವಾದುವು. ಆದರೆ ನಸೀರ್‌ಉದ್ದೀನ್ ಕ್ರಾಂತಿಕಾರರಿಂದ ಕೊಲೆಯಾಗಿ ಅವನ ಮಗ ಮುಸ್ತಾಫ಼ರ್‌ಉದ್ದೀನ್ ಪಟ್ಟಕ್ಕೆ ಬಂದು ಜನರ ಒತ್ತಾಯದ ಮೇಲೆ ಪ್ರಜಾಶಾಸನ ಸಭೆಯೊಂದನ್ನು ಏರ್ಪಡಿಸಿದನು. ಹೀಗೆ ಪರ್ಷಿಯದಲ್ಲಿ ವ್ಯವಸ್ಥಾಬದ್ಧ ರಾಜಪ್ರಭುತ್ವ ನೆಲಸಿದರೂ ಸ್ವಾರ್ಥೋದ್ದೇಶಗಳನ್ನು ಇಟ್ಟುಕೊಂಡಿದ್ದ ಯೂರೋಪ್ ಜನಾಂಗಗಳ ಒಳಸಂಚಿನಿಂದ ಪರ್ಷಿಯ ಮುಂದುವರಿಯದ್ದಾಯಿತು. ಕ್ರಿ. ಶ. ೧೯೦೭ರಲ್ಲಿ ರಷ್ಯ ಮತ್ತು ಇಂಗ್ಲೆಂಡ್ ಸೇರಿಕೊಂಡು ಪರ್ಷಿಯವನ್ನು ಎರಡು

ಭಾಗವಾಗಿ ಮಾಡಿ, ತಮ್ಮ ಉದ್ದೇಶಸಾಧನೆಗಳಿಗೆ ಅನುಕೂಲವಾಗುವಂತೆ ಒಪ್ಪಂದಮಾಡಿಕೊಂಡರು. ಹೀಗೆ ಪರ್ಶಿಯ ತನ್ನ ಸ್ವಾತಂತ್ರ್ಯವನ್ನು ಕಳೆದುಕೊಳ್ಳುವುದರಲ್ಲಿದ್ದಾಗ, ಕ್ರಿ.ಶ. ೧೯೧೪ ರ ಮಹಾಯುದ್ಧದ ಫಲವಾಗಿ ರಷ್ಯದ ಜ಼ಾರ್ ಪ್ರಭುತ್ವ ಕೊನೆಗೊಂಡು, ಬಾಲ್‌ಷೆವಿಕ್ ರಷ್ಯ ಹುಟ್ಟಿಕೊಂಡು ಅದು ಪರ್ಶಿಯದ ಸ್ವಾತಂತ್ರ್ಯವನ್ನು ಒಪ್ಪಿಕೊಂಡಿತು. ಆಗ ಒಂದು ಪ್ರಜಾಸಭೆ ಸೇರಿ ದಕ್ಷನಾದ ರಜ಼ಾಖಾನ್ ಎಂಬವನನ್ನು ಇರಾನಿನ ಷಾವನ್ನಾಗಿ ಆಯ್ದು, ಕೊನೆಯ ಕಾಜಾರ್ ಷಾ ಅಹ್‌ಮದನನ್ನು ಓಡಿಸಿತು. ಈಗಿನ ಇರಾನಿನ ಸರ್ಕಾರ ವ್ಯವಸ್ಥಾಬದ್ಧ ರಾಜಪ್ರಭುತ್ವ. ಮುಖ್ಯಮಂತ್ರಿ ದೊರೆಯಿಂದ ನಿಯಮಿತನಾಗಿ, ತನ್ನ ಮಂತ್ರಿವರ್ಗವನ್ನು ತಾನೇ ನೇಮಿಸಿಕೊಳ್ಳುತ್ತಾನೆ. ಶಾಸನಸಭೆಯ ಸದಸ್ಯರನ್ನು ೧೯ ವಯಸ್ಸಿಗೆ ಮೀರಿದ ಗಂಡಸರೆಲ್ಲರೂ ಸೇರಿ ಆಯುತ್ತಾರೆ. ಪರ್ಶಿಯ ಈಗ ಇರಾನ್ ಎಂಬ ಹಿಂದಿನ ಹೆಸರನ್ನು ತಾಳಿದೆ.

## ತುರ್ಕಿ ಚಕ್ರಾಧಿಪತ್ಯ

೧೩ನೆಯ ಶತಮಾನದ ಮಧ್ಯದಲ್ಲಿ ಎರಡು ಮೂರು ಸಾವಿರ ಜನ ಅಲೆಯುವ (ನೊಮಾಡ್) ತುರ್ಕರ ಗುಂಪು ಒಂದು ಎರ್-ತುಗ್‌ರಿಲ್ ಎಂಬ ನಾಯಕನೊಬ್ಬನ ಕೈಕೆಳಗೆ ನೆಲಸುವುದಕ್ಕೆ ನಾಡನ್ನು ಅರಸುತ್ತಾ ಪೂರ್ವ ಏಷ್ಯಾಮೈನರಿನ ಕಡೆ ಬಂದಿತು. ಮಾರ್ಮೊರ ಕಡಲಿನಿಂದ ಸುಮಾರು ೫೦ ಮೈಲಿ ದೂರದ ಒಂದು ಪ್ರದೇಶದಲ್ಲಿ ನೆಲಸುವುದಕ್ಕೆ ಸೆಲ್‌ಜೂಕೀ ದೊರೆಯಿಂದ ಇವರಿಗೆ ಅಪ್ಪಣೆ ದೊರೆಯಿತು. ಸುಗ್‌ಯತ್ ಅವರ ಮುಖ್ಯ ಸ್ಥಳವಾಯಿತು. ಎರ್-ತುಗ್‌ರಿಲ್ ಕ್ರಿ.ಶ. ೧೨೮೮ ರಲ್ಲಿ ಸತ್ತನಂತರ, ಅವನ ಮಗ ಉಸ್ಮಾನ್ (ಈ ಹೆಸರನ್ನು ಯೂರೋಪಿನ ಬರಹಗಾರರು ಆಟೊಮನ್ ಎಂದು ಕೆಡಿಸಿದ್ದಾರೆ.) ಅಧಿಕಾರಕ್ಕೆ ಬಂದು, ಕ್ರಿ.ಶ. ೧೩೦೦ರಲ್ಲಿ ಸೆಲ್‌ಜೂಕೀ ರಾಜ್ಯ ನಾಶವಾದಾಗ ತಾನು ಸ್ವತಂತ್ರನಾಗಿ ಸುಲ್ತಾನ್ ಬಿರುದನ್ನು ತಾಳಿದನು. ಇವನ ನಂತರ ಬಂದ ಎರಡನೆಯ ಆಟೊಮನ್ ಸುಲ್ತಾನನಾದ ಆರ್‌ಖಾನ್ (ಕ್ರಿ.ಶ. ೧೩೨೬–೫೯) ಒಬ್ಬ ಗ್ರೀಕ್ ನಾಯಕನ ಮಗಳನ್ನು ಮದುವೆಯಾಗಿ, ಇಸ್ಲಾಂಧರ್ಮಕ್ಕೆ

ಸೇರಿಕೊಂಡ ಅನೇಕ ಗ್ರೀಕ್ ಮತ್ತು ಕ್ರೈಸ್ತ ಸಿಪಾಯಿಗಳ ನೆರವಿನಿಂದ, ತನ್ನ ತಂದೆಯ ನೀತಿಯನ್ನೇ ಮುಂದುವರಿಸಿ ರಾಜ್ಯವನ್ನು ವಿಸ್ತರಿಸಿದನು. ಇವನ ಮಗ ಸುಲೇಮಾನ್ (ಕ್ರಿ.ಶ. ೧೩೫೭) ಹೆಲ್ಲಸ್‌ಪಾಂಟನ್ನು ದಾಟಿ ಗ್ಯಾಲಿಪೋಲಿ ಮತ್ತು ರಾದೊಸ್ಟೊಗಳನ್ನು ಹಿಡಿದನು. ಆರ್‌ಖಾನ್ ವಿದ್ಯಾ ಕಲೆಗಳಿಗೆ ಆಶ್ರಯದಾತನಾಗಿದ್ದು ಹಲವು ವಿದ್ಯಾಶಾಲೆಗಳನ್ನು ಸ್ಥಾಪಿಸಿದನು. ಇವನ ಮಗ ಮುರಾದ್ (ಕ್ರಿ.ಶ. ೧೩೫೯–೮೯) ಸುಗೋರವನ್ನು ಹಿಡಿದು ಬಾಲ್ಕನ್ ಸಂಸ್ಥಾನಕ್ಕೆ ದಾಳಿಯಿಟ್ಟು ಏಡ್ರಿಯನೋಪಲನ್ನು ಆಕ್ರಮಿಸಿದನು. ಕಾನ್‌ಸ್ಟಾಂಟಿನೋಪಲನ್ನು ಹಿಡಿಯುವವರೆಗೂ ಈ ಏಡ್ರಿಯನೋಪಲ್ಲೇ ರಾಜಧಾನಿಯಾಗಿತ್ತು. ಕ್ರಿ.ಶ. ೧೩೮೯ ರಲ್ಲಿ ಬಾಲ್ಕನ್ ಸಂಸ್ಥಾನದ ಒಂದುಲಕ್ಷ ಸೈನ್ಯವನ್ನು ೪೦ ಸಾವಿರ ತುರ್ಕಿ ಸೈನ್ಯ ಸೋಲಿಸಿತು. ಈ ಜಯಶಾಲಿಯಾದ ಸೈನ್ಯವನ್ನು ಪರಾಮರ್ಶೆ ಮಾಡುತ್ತಿದ್ದಾಗ ಕೃತ್ರಿಮದಿಂದ ಮುರಾದ್ ಕೊಲೆಯಾದನು. ಇವನ ಮಗ ಬಾಯಸ್ಜೀದ್ (ಕ್ರಿ.ಶ. ೧೩೮೯–೧೪೦೩) ರಾಜ್ಯವನ್ನು ವಿಸ್ತರಿಸುತ್ತ ಹೋಗಿ ಕೊನೆಗೆ ಮೊಗಲರ ತೈಮೂರನಿಗೆ ಸೋತು ಕೈಸೆರೆಯಾದನು. ಹತ್ತುವರ್ಷಗಳ ನಂತರ ಬಾಯಸ್ಜೀದನ ಮಗ ಒಂದನೆಯ ಮಹಮ್ಮದ್ (೧೪೧೩–೨೧) ಮತ್ತೆ ತಲೆಯೆತ್ತಿಕೊಂಡು, ಕಳೆದುಹೋಗಿದ್ದ ಪ್ರಾಂತಗಳನ್ನು ಮತ್ತೆ ಗಳಿಸಿ, ಒಂದು ವ್ಯವಸ್ಥಿತವಾದ ಭೂಸೈನ್ಯವನ್ನೂ ಜಲಸೈನ್ಯವನ್ನೂ ಏರ್ಪಡಿಸಿ, ವಿದ್ಯಾಪ್ರಚಾರಕ್ಕೆ ಉತ್ತೇಜನ ಕೊಟ್ಟು, ರಾಜ್ಯವನ್ನು ಮೇಲ್‌ನೆಲೆಗೆ ತಂದನು. ಇವನ ಮಗ ಎರಡನೆಯ ಮುರಾದ್ (೧೪೨೧-೫೧) ಪಟ್ಟಕ್ಕೆ ಬಂದಾಗ ರಾಜ್ಯವನ್ನು ಮತ್ತಷ್ಟು ವಿಸ್ತರಿಸಿದನು.

ಎರಡನೆಯ ಮುರಾದನ ಮಗ ಎರಡನೆಯ ಮಹಮ್ಮದ್ (ಕ್ರಿ.ಶ. ೧೪೫೧–೮೧) ಬಹಳ ಪ್ರಸಿದ್ಧನಾದ ದೊರೆ. ೫೩ ದಿನಗಳು ಮುತ್ತಿಗೆ ಹಾಕಿ ಕೊನೆಗೆ ಕಾನ್‌ಸ್ಟಾಂಟಿನೋಪಲನ್ನು ಗೆದ್ದುಕೊಂಡವನು ಇವನೇ. ಅಲ್ಲದೆ ಆರೆಬರೆ ಸ್ವತಂತ್ರರಾಗಿದ್ದ ಏಷ್ಯಾಮೈನರಿನ ಎಷ್ಟೋ ನಾಯಕರನ್ನು ಇವನು ಅಡಗಿಸಿದನು. ಭೂಸೈನ್ಯ ಜಲಸೈನ್ಯಗಳನ್ನು ಪುನರ್ ವ್ಯವಸ್ಥೆ ಮಾಡಿ, ವಿದ್ಯಾಶಾಲೆಗಳನ್ನು ತೆರೆದು, ಮಸೀದಿಗಳನ್ನು ಕಟ್ಟಿಸಿ,

ವ್ಯಾಪಾರಕ್ಕೆ ಉತ್ತೇಜನ ಕೊಟ್ಟನು. ಇವನಿಗೆ ಆರು ಭಾಷೆ ಬರುತ್ತಿತ್ತು. ಇವನ ಮಗ ಎರಡನೆಯ ಬಾಯಜೀದ್ (ಕ್ರಿ. ಶ. ೧೪೮೧–೧೫೧೨) ದೀರ್ಘಕಾಲ ಆಳಿ, ಕೊನೆಗೆ ತನ್ನ ಮಗ ಸಲೀಮನಿಗೆ (ಕ್ರಿ.ಶ. ೧೫೧೨–೨೦) ರಾಜ್ಯ ಒಪ್ಪಿಸಿಕೊಟ್ಟನು. ಮಹತ್ವಕಾಂಕ್ಷಿಯೂ ಉತ್ಸಾಹಿಯೂ ಆದ ಈ ಸಲೀಮನು ಪರ್ಷಿಯಕ್ಕೆ ದಾಳಿಯಿಟ್ಟು ಅದನ್ನು ಗೆದ್ದನು. ತರುವಾಯ ಈಜಿಪ್ಟನ್ನು ಗೆದ್ದು, ಅಲ್ಲಿ ಸೇರಿಕೊಂಡಿದ್ದ ಕೊನೆಯ ಅಬ್ಬಾಸಿ ಕಲೀಫನನ್ನು ಸೆರೆ ತಂದು ಹಿಂದೆಯೇ ಹೇಳಿದಂತೆ ಅವನಿಂದ ಖಿಲಾಫತ್ ಅಧಿಕಾರವನ್ನು ತೆಗೆದುಕೊಂಡನು. ಈ ಸಲೀಮನ ಮರಣಾನಂತರ ಇವನ ಮಗ ಸುಲೇಮಾನ್ ಪಟ್ಟಕ್ಕೆ ಬಂದು ತಂದೆಯ ಮಾರ್ಗವನ್ನೇ ಮುಂದುವರಿಸಿ ಆಟೊಮನ್ ಚಕ್ರಾಧಿಪತ್ಯವನ್ನು ಅದರ ಅತ್ಯುನ್ನತಿಗೆ ತಂದನು. ಈ ಕೆಲಸದಲ್ಲಿ ಇವನಿಗೆ ಅನೇಕ ಸೇನಾನಿಗಳೂ, ರಾಜನೀತಿನಿಪುಣರೂ ಸಹಾಯಕರಾಗಿದ್ದರು. ಸುಲೇಮಾನ್ ನಾಡಿನ ನ್ಯಾಯಕ್ರಮಗಳನ್ನು ಪುನರ್ವ್ಯವಸ್ಥೆಗೊಳಿಸಿದನು. ಇವನ ಅನಂತರ ಇವನ ಮಗ ಎರಡನೆಯ ಸಲೀಮ್ (ಕ್ರಿ.ಶ. ೧೫೬೬–೭೪) ಆಳಿದನು. ಇವನ ತರುವಾಯ ಬಂದ ಮೂರನೆಯ ಮುರಾದ್ (ಕ್ರಿ.ಶ. ೧೫೭೪–೯೫) ದುರ್ಬಲನಾಗಿದ್ದು ಅಂತಃಪುರದ ಹೆಂಗಸರ ವಶವರ್ತಿಯಾದನು. ಕ್ರಿ.ಶ. ೧೫೮೯ರಲ್ಲಿ ಸೈನ್ಯ ದಂಗೆಯೆದ್ದು ಬಹುಕ್ಷೋಭೆಗೊಂಡಿತು. ಕೊನೆಗೆ ಕ್ರಿ.ಶ. ೧೫೯೩ರಲ್ಲಿ ಆಸ್ಟ್ರಿಯ ಮತ್ತು ಹಂಗೆರಿಯೊಡನೆ ನಡೆದ ಯುದ್ಧದಲ್ಲಿ ಸೋಲಾಯಿತು. ಇವನನಂತರ ಬಂದ ಮೂರನೆಯ ಮಹಮ್ಮದ್ ಹೊರ ಹೋರಾಟ ಒಳದಂಗೆಗಳ ನಡುವೆ ಸಿಕ್ಕಿಕೊಂಡು, ಎಂಟು ವರ್ಷ ರಾಜ್ಯವಾಳಿ ಸತ್ತ ಬಳಿಕ, ಅವನ ಮಗ ೧೪ ವರ್ಷದ ಅಹ್ಮದ್ (ಕ್ರಿ.ಶ. ೧೬೦೩–೧೭) ಪಟ್ಟಕ್ಕೆ ಬಂದನು. ಮೂರನೆಯ ಮುರಾದ್ ಕಾಲದಲ್ಲಿ ಪ್ರಾರಂಭವಾದ ಆಸ್ಟ್ರಿಯ ಹಂಗೆರಿಯೊಡನೆ ಯುದ್ಧ ಇವನ ಕಾಲದಲ್ಲಿ ಕೊನೆಗಂಡು ಶಾಂತಿಯ ಒಪ್ಪಂದ ಆಯಿತು.

ಇವನನಂತರ ಹಲವರು ಅಧಿಕಾರಕ್ಕೆ ಬಂದು ಹೋದರು. ಇವರೆಲ್ಲರೂ ಬಹಳಮಟ್ಟಿಗೆ ದುರ್ಬಲರೇ ಆಗಿದ್ದರು. ಅಲ್ಲದೆ ಅನೇಕರು ಪದಚ್ಯುತರಾಗಿ ಕೊಲೆಯಾದರು. ಈ ದೊರೆಗಳು ಕೆಲವು ಪ್ರಾಂತಗಳನ್ನು

ಕಳೆದುಕೊಳ್ಳುತ್ತಲೂ ಕೆಲವು ಪ್ರಾಂತಗಳನ್ನು ಸೇರಿಸಿಕೊಳ್ಳುತ್ತಲೂ ಸಾಮಾನ್ಯವಾಗಿ ಯೂರೋಪಿನ ರಾಜ್ಯಗಳೊಡನೆ, ಅದರಲ್ಲೂ ಮುಖ್ಯವಾಗಿ ರಷ್ಯ ಆಸ್ಟ್ರಿಯ ಮೊದಲಾದವುಗಳೊಡನೆ, ಜಗಳವಾಡುತ್ತಲೇ ಇದ್ದರು. ಕ್ರಿ.ಶ. ೧೭೭೪ರಲ್ಲಿ ಮತ್ತೆ ಯೂರೋಪ್ ರಾಜ್ಯಗಳೊಡನೆ ಕರಾರಾಯಿತು. ಅಲ್ಲಿಂದಾಚೆಗೆ ತುರ್ಕಿಯ ದಾಳಿಯು ಹೆಮ್ಮೆ ಇಳಿದು ಅದು ಸಂರಕ್ಷಣೆಗೆ ತಿರುಗಿತು. ತರುವಾಯ ಬಂದ ದೊರೆಗಳು ಆಸ್ಟ್ರಿಯ ರಷ್ಯಗಳೊಡನೆ ಮತ್ತೆ ಹೋರಾಡುತ್ತಲೇ ಇದ್ದು ಇನ್ನೂ ಹಲವು ಪ್ರಾಂತಗಳನ್ನು ಬಿಟ್ಟುಕೊಟ್ಟು, ಬಹಳ ನಷ್ಟ ಹೊಂದಿ ರಷ್ಯದೊಡನೆ ಕರಾರು ಮಾಡಿಕೊಂಡರು. ಅಂತೂ ಇಂತೂ ರಷ್ಯ ಮೊದಲಾದವುಗಳೊಡನೆ ಒಮ್ಮೆ ಹೋರಾಟ ಒಮ್ಮೆ ಒಪ್ಪಂದ, ಈ ರೀತಿಯೇ ಕಾಲಕಳೆಯಿತು.

ಎರಡನೆಯ ಸಲೀಮನ ಕಾಲದಲ್ಲಿ (ಕ್ರಿ.ಶ. ೧೭೮೯) ಕೊಂಚ ಶಾಂತಿ ನೆಲಸಿ, ಯೂರೋಪ್ ಶಿಕ್ಷಕರ ಕೈಕೆಳಗೆ ಸೈನ್ಯ ಪುನರ್ವ್ಯವಸ್ಥೆಯಾಯಿತು. ತುರ್ಕಿಯ ಶಿಷ್ಯರು ಈಗ ಗುರುಗಳಾದರು! ಸಲೀಮನ ಈ ಸುಧಾರಣೆಗಳು ಮುಂದುವರಿಯುದಿದ್ದ ಅವನ ಜನರಿಗೆ ಸರಿಬೀಳದೆ, ಅವರು ದಂಗೆಯೆದ್ದು ಅವನನ್ನು ಕೊಂದರು. ಅವನ ಅನಂತರ ಬಂದ ನಾಲ್ಕನೆಯ ಮುಸ್ತಫಾನು ಒಂದು ವರ್ಷ ಆಳಿ ಹೋದನು. ಕೊನೆಗೆ ಉಸ್ಮಾನ್ ಮನೆತನದ ಕೊನೆಯವನಾಗಿ ಉಳಿದುಕೊಂಡಿದ್ದ ಎರಡನೆಯ ಸುಲ್ತಾನ್ ಮಹ್‌ಮೂದ್ ಕ್ರಿ.ಶ. ೧೮೦೮ ರಲ್ಲಿ ಪಟ್ಟಕ್ಕೆ ಬಂದು ರಾಜ್ಯದಲ್ಲಿ ನೆಲಸಿದ್ದ ಅನಾಯಕತ್ವವನ್ನು ಅಡಗಿಸಿ ಮತ್ತೆ ಸೈನ್ಯವನ್ನು ವ್ಯವಸ್ಥೆ ಮಾಡಿದನು. ಆದರೆ, ಮತ್ತೆ ಅಲ್ಲಲ್ಲಿ ದಂಗೆಗಳೆದ್ದುವು. ಗ್ರೀಕರು ಸ್ವತಂತ್ರರಾದರು. ರಷ್ಯ, ಫ್ರಾನ್ಸ್, ಇಂಗ್ಲೆಂಡ್ — ಇವು ಮೂರೂ ಸೇರಿ ಈಜಿಪ್ಟಿನ ನೌಕಾ ಸೈನ್ಯವನ್ನು ಧ್ವಂಸಮಾಡಿದ್ದರಿಂದಲೂ ಒಳಗಿನ ಕಿರುಕುಳಗಳಿಂದಲೂ ರಾಜ್ಯಕ್ಕೆ ತೊಂದರೆಗಳು ಹೆಚ್ಚಿಕೊಂಡುವು. ಇಂಥ ಅವಸ್ಥೆಯಲ್ಲಿ ಇವನು ಸತ್ತು, ಇವನ ಮಗ ೧೬ ವರ್ಷದ ಅಬ್ದುಲ್ ಮಜೀದ್ ಪಟ್ಟಕ್ಕೆ ಬಂದು (ಕ್ರಿ.ಶ. ೧೮೩೯), ತನ್ನ ತಂದೆ ಕೈಕೊಂಡಿದ್ದ ಸುಧಾರಣೆ ಮತ್ತು ಪುನರ್ವ್ಯವಸ್ಥೆಗಳ ಕಾರ್ಯವನ್ನು ಮುಂದುವರಿಸಿದನು.

ಮೊದಲಿಂದಲೂ ತುರ್ಕಿಯ ಮೇಲೆ ಕಣ್ಣಿಟ್ಟಿದ್ದ ರಷ್ಯಕ್ಕೆ ಅಬ್ದುಲ್ ಮಜೀದನ ಈ ಸುಧಾರಣೆಗಳಿಂದ ಕಳವಳ ಮತ್ತು ಕರುಬು ಹುಟ್ಟಿ ಕ್ರಿ.ಶ. ೧೮೫೪ರಲ್ಲಿ ಕ್ರಿಮಿಯನ್ ಯುದ್ಧ ಆಯಿತು. ಇದರಲ್ಲಿ ಫ್ರಾನ್ಸ್ ಮತ್ತು ಬ್ರಿಟನ್, ಮೆಡಿಟರೇನಿಯನ್ ಸಮುದ್ರದಲ್ಲಿ ತಮ್ಮ ಬಲವನ್ನು ಕಾಯ್ದುಕೊಳ್ಳುವುದಕ್ಕಾಗಿ, ತುರ್ಕಿ ಪಕ್ಷವನ್ನು ಹಿಡಿದುವು. ಕ್ರಿ. ಶ. ೧೮೫೬ರಲ್ಲಿ ಯುದ್ಧ ನಿಂತಿತು. ಯುದ್ಧದಲ್ಲಿ ರಷ್ಯಕ್ಕೆ ಸೋಲಾದರೂ ಕರಾರಿನಲ್ಲಿ ತುರ್ಕಿಯ ದೃಷ್ಟಿಯಿಂದ ರಷ್ಯವೇ ಗೆದ್ದಿತು. ಅಲ್ಲಿಂದಾಚೆಗೆ ಯುರೋಪಿನ ಪ್ರತಿಯೊಂದು ರಾಜ್ಯದ ಕಣ್ಣೂ ತುರ್ಕಿಯ ಮೇಲೇ ಇದ್ದು. ಎಲ್ಲರೂ ಸಮಯ ನೋಡುತ್ತಿದ್ದು, ಒಳಗಿನ ಕ್ಷೋಭೆ ಕ್ರಾಂತಿಗಳಿಗೆ ಉತ್ತೇಜನ ಕೊಡುತ್ತಲೂ ಹೊರಗಿನಿಂದ ಕಾಟ ಕೊಡುತ್ತಲೂ ಇದ್ದರು. ಈ ಅವಸ್ಥೆಯಲ್ಲಿ ತುರ್ಕಿ ಸಾಮ್ರಾಜ್ಯ ಬೇಗ ನಾಶವಾಗದೆ ಇದ್ದುದಕ್ಕೆ ಕಾರಣವೇನೆಂದರೆ—ಯುರೋಪ್ ರಾಜ್ಯಗಳಲ್ಲಿ ಇದರ ಹಂಚಿಕೆಯ ವಿಷಯವಾಗಿದ್ದ ಪರಸ್ಪರ ಭಿನ್ನಾಭಿಪ್ರಾಯಗಳೇ. ಪ್ರತಿಯೊಂದೂ ಸಿಂಹಭಾಗವನ್ನೇ ಅಪೇಕ್ಷಿಸುತ್ತಿತ್ತು. ಹೀಗೆ ೬೦ ವರ್ಷಗಳು ತುರ್ಕಿ ಹೆಸರಿಗೆ ಮಾತ್ರ ಜೀವಿಸಿಕೊಂಡಿತ್ತು. "ಯೂರೋಪಿನ ಕಾಯಿಲೆ ಮನುಷ್ಯ" ಎಂಬ ಹೆಸರು ತುರ್ಕಿಗೆ ಮನೆಮಾತಾಯಿತು. ಅಬ್ದುಲ್ ಮಜೀದ್ ಕ್ರಿ. ಶ. ೧೮೬೧ರಲ್ಲಿ ಸತ್ತಮೇಲೆ, ಅವನ ತಮ್ಮ ಅಬ್ದುಲ್ ಅಜೀಜ್ ಪಟ್ಟಕ್ಕೆ ಬಂದು ಪ್ರಜಾಕ್ಷೇಮಚಿಂತನೆಗಿಂತ ಭೋಗಾಪೇಕ್ಷೆಯಲ್ಲಿ ಮಗ್ನನಾದನು. ಎರಡನೆಯ ಮಹಮ್ಮದ್ ಮತ್ತು ಅಬ್ದುಲ್ ಮಜೀದರ ಸುಧಾರಣೆಗಳನ್ನು ಮುಂದುವರಿಸಿ ಆಟೊಮನ್ ರಾಜ್ಯವನ್ನು ಪುನರ್ವ್ಯವಸ್ಥೆಗೊಳಿಸುವುದಕ್ಕಾಗಿ ಮಿಥತ್ ಪಾಷನ ನಾಯಕತ್ವದಲ್ಲಿ ಒಂದು ಹೊಸ ರಾಜಕೀಯ ಪಕ್ಷ ಏರ್ಪಟ್ಟು, ಈ ಪಕ್ಷದವರು ಕ್ರಿ.ಶ. ೧೮೭೬ರಲ್ಲಿ ಅಬ್ದುಲ್ ಅಜೀಜನನ್ನು ಪಟ್ಟದಿಂದ ಇಳಿಸಿದರು. ಇವನ ತರುವಾಯ ಬಂದ ಅಬ್ದುಲ್ ಮಜೀದನ ಹಿರಿಯ ಮಗ ಮುರಾದನೂ ಪದಚ್ಯುತನಾಗಿ, ಅವನ ತಮ್ಮ ಎರಡನೆಯ ಅಬ್ದುಲ್ ಹಮೀದ್ ಪಟ್ಟಕ್ಕೆ ಬಂದನು. ಬಂದೊಡನೆಯೇ ಮತ್ತೆ ಕ್ರಾಂತಿಗಿಟ್ಟುಕೊಂಡು ರಷ್ಯಕ್ಕೆ ಯುದ್ಧ ಹೂಡಲು ಅವಕಾಶ ಸಿಕ್ಕಿತು. ಈ ಯುದ್ಧದಲ್ಲಿ

ತುರ್ಕಿಗೆ ಪೂರ್ತಿ ಸೋಲಾಯಿತು. ಇದರ ಪರಿಣಾಮವಾಗಿ ಬರ್ಲಿನ್ನಲ್ಲಿ ನಡೆದ ಕಾಂಗ್ರೆಸ್ಸಿನ ತೀರ್ಪಿನ ಮೇಲೆ ಸರ್ಬಿಯ, ಮತ್ತು ಮಾಂಟಿನೀಗ್ರೊ ರಾಜ್ಯಗಳು ಸ್ವತಂತ್ರವಾದುವು. ಜಾರ್ಸ್, ಆರ್ದಹನ್ ಮೊದಲಾದವು ರಷ್ಯಕ್ಕೆ ಸೇರಿದುವು. ಸೈಪ್ರಸ್ ದ್ವೀಪ ಬ್ರಿಟನ್ನಿಗೆ ಸೇರಿತು. ಅಲ್ಲದೆ ಗ್ರೀಸಿಗೆ ಕೆಲವು ಭಾಗಗಳೂ ಆಸ್ಟ್ರಿಯಕ್ಕೆ ಕೆಲವು ಭಾಗಗಳೂ ಸೇರಿದುವು. ಹೀಗೆ ರಾಜ್ಯ ಒಡೆದು ಸಡಿಲಿಹೋಯಿತು. ಅಬ್ದುಲ್ ಹಮೀದ್ ದುರ್ಬಲ ದೊರೆಯಾಗಿದ್ದರೂ ನಿಪುಣ ರಾಜತಂತ್ರಜ್ಞನಾಗಿ ಸುಮಾರು ಮೂವತ್ತು ವರ್ಷಗಳ ಕಾಲ ಯೂರೋಪ್ ಬಲಗಳೊಡನೆ ಎಳೆದಾಡುತ್ತಿದ್ದನು. ಈ ಅವಕಾಶದಲ್ಲಿ ತುರ್ಕಿ ಚೇತರಿಸಿಕೊಳ್ಳಬಹುದಾಗಿದ್ದರೂ, ಸಂಘಟನೆ ಪ್ರಗತಿಗಳಿಗೆ ಎಂದು ಏರ್ಪಟ್ಟ ಮಿಧತ್ ಪಾಷನ ಅನುಯಾಯಿಗಳ ಸಂಘ ಇದಕ್ಕೆ ಅವಕಾಶ ಕೊಡದೆ ಹೋಯಿತು. ಹಮೀದನೂ ಈ ಯುವಕ ತುರ್ಕರ ಸಂಘದವರಿಗೆ ಎಲ್ಲೆಲ್ಲೂ ಕಾಟ ಕೊಡುತ್ತಲೇ ಹೋದನು. ಕ್ರಿ.ಶ. ೧೯೦೮ ರಲ್ಲಿ ಅಬ್ದುಲ್ ಹಮೀದ್ ಪದಚ್ಯುತನಾಗಿ, ಅವನ ತಮ್ಮ ಐದನೆಯ ಮಹಮ್ಮದ್ ಈ ಸಂಘದ ನಾಯಕರ ಕೈಬೊಂಬೆಯಾಗಿ ಸಿಂಹಾಸನಕ್ಕೆ ಬಂದನು. ಇಂಥ ಅನಾಯಕ ಸಮಯವನ್ನೇ ಕಾಯುತ್ತಿದ್ದ ಬಲ್ಗೇರಿಯ ಆಗ ಸ್ವತಂತ್ರವಾಯಿತು. ಆಸ್ಟ್ರಿಯ ಕೆಲವು ಪ್ರಾಂತಗಳನ್ನು ಕಿತ್ತುಕೊಂಡಿತು. ಕ್ರಿ.ಶ. ೧೯೧೨ ರಲ್ಲಿ ಬಾಲ್ಕನ್ ಸಂಸ್ಥಾನಗಳು ಒಂದುಗೂಡಿ ಯೂರೋಪ್ ಬಲಗಳ ವಿಶ್ವಾಸದ ಸಹಾಯದಿಂದ ತುರ್ಕಿಯೊಡನೆ ಯುದ್ಧ ಹೂಡಿ ಅದನ್ನು ಸೋಲಿಸಿದುವು.

ಕ್ರಿ.ಶ. ೧೯೧೪ ರ ಮಹಾ ಯುದ್ಧದಲ್ಲಿ ತುರ್ಕಿ ಜರ್ಮನಿಯೊಡನೆ ಸೇರಿಕೊಂಡು ತನ್ನ ಸ್ಥಾನಕ್ಕೆ ಮತ್ತಷ್ಟು ಕುಂದನ್ನು ತಂದುಕೊಂಡಿತು. ಈ ಮಧ್ಯೆ ಐದನೆಯ ಮಹಮ್ಮದನ ಅನಂತರ ಪಟ್ಟಕ್ಕೆ ಬಂದ ಅವನ ತಮ್ಮ ಆರನೆಯ ಮಹಮ್ಮದ್ (ಕ್ರಿ.ಶ. ೧೯೧೮–೨೨) ಬಹುಕಷ್ಟದಿಂದ ಹೆಸರಿಗೆ ಮಾತ್ರ ರಾಜ್ಯವಾಳುತ್ತಿದ್ದನು. ಒಳಗಿನ ಅವ್ಯವಸ್ಥೆ ಹೊರಗಿನ ಕಾಟಗಳಿಂದ ಪಾರಾಗಲು ಒಂದು ಕೊನೆಯ ದೊಡ್ಡ ಪ್ರಯತ್ನವನ್ನು ಮಾಡುವುದಕ್ಕಾಗಿ ಮುಸ್ತಫಾ ಕಮಾಲ್ ಪಾಷನ ಕೈಕೆಳಗೆ ಒಂದು

ದಳವೇರ್ಪಟ್ಟು, ಆ ದಳ ವಿಪುಲಸೈನ್ಯದಿಂದ ಗ್ರೀಕರನ್ನು ಓಡಿಸಿ, ಸುಲ್ತಾನನನ್ನು ಉರುಳಿಸಿ, ಕಮಾಲನ ಅಧ್ಯಕ್ಷತೆಯಲ್ಲಿ ತುರ್ಕಿ ಒಂದು 'ರಿಪಬ್ಲಿಕ್' (ಪ್ರಜಾಪ್ರಭುತ್ವರಾಷ್ಟ್ರ) ಆಯಿತು. ಈ ಹೊಸ ಪರಿಸ್ಥಿತಿಯನ್ನು ಕಟ್ಟುಪಾಡಿಗೆ ತರುವುದಕ್ಕಾಗಿ ಅಬ್ದುಲ್ ಅಜೀಜನ ಕಿರಿಯ ಮಗ ಅಬ್ದುಲ್ ಮಜೀದನನ್ನು, ಅಧಿಕಾರ ವಿಷಯದಲ್ಲಿ ಕೈ ಹಾಕಕೂಡದೆಂದು ಹೇಳಿ, ಕಲೀಫನನ್ನಾಗಿ ಚುನಾಯಿಸಿದರು. ಕ್ರಿ.ಶ. ೧೯೨೪ರಲ್ಲಿ ಕಮಾಲ್‌ಪಾಷನ ಸ್ಥಾನ ಬಲಗೊಂಡಿತು. ಕಾನ್‌ಸ್ಟಾಂಟಿನೋಪಲಿನ ಅರಮನೆಯ ಕಾವಲುಗಾರರ ಸ್ಥಿತಿಗಿಳಿದಿದ್ದ ಕಲೀಫನನ್ನು ಪಟ್ಟದಿಂದ ಉರುಳಿಸಬೇಕೆಂದೂ, ಅಲ್ಲದೆ ಆಟೊಮನ್ ಮನೆತನದವರೆಲ್ಲರನ್ನೂ ಅವರ ಆಸ್ತಿಪಾಸ್ತಿಗಳನ್ನೂ ಪ್ರಜಾ ಹಕ್ಕನ್ನು ಕಿತ್ತುಕೊಂಡು ದೇಶಭ್ರಷ್ಟರನ್ನಾಗಿ ಮಾಡಬೇಕೆಂದೂ ನಿರ್ಣಯವಾಯಿತು. ಜನರ ಈ ತೀರ್ಪನ್ನು ಕಲೀಫನಿಗೆ, ಅವನನ್ನು ಕೊಡಿಸಲು ಸಿಂಹಾಸನದ ಮೇಲೆ ಕೂರಿಸಿ, ಕಮಾಲ್‌ಪಾಷ ಓದಿ ಹೇಳಿದನು. ಹೀಗೆ ಸಾಮ್ರಾಜ್ಯ ವೈಭವದಿಂದ ಮೆರೆದ ಪ್ರಸಿದ್ಧ ಆಟೊಮನ್ ರಾಜಸಂತತಿ ಕೊನೆಗೊಂಡಿತು.

ಈಗಿನ ತುರ್ಕಿ ಆಕಾರದಲ್ಲಿ ಮೂರು ಲಕ್ಷ ಚದರ ಮೈಲಿಗಿಂತ ಕಡಮೆಯಿದ್ದರೂ ಜನಸಂಖ್ಯೆ ಸುಮಾರು ಒಂದೂವರೆಕೋಟಿಯಷ್ಟು ಮಾತ್ರವಿದ್ದರೂ ಸುವ್ಯವಸ್ಥೆಯಿಂದ ಬಲಗೊಂಡು ಒಂದು ಜನಾಂಗವಾಗಿ ಏರ್ಪಟ್ಟು, 'ಸರ್ವ-ಇಸ್ಲಾಂ'—'ಸರ್ವ-ತುರುಷ್ಕ' ಭಾವನೆಗಳನ್ನು ತ್ಯಜಿಸಿ, ಭೂಸೈನ್ಯ, ಜಲಸೈನ್ಯ, ಕಲೆ, ವಾಣಿಜ್ಯ, ಎಲ್ಲದರಲ್ಲೂ ಮುಂದುವರಿಯುತ್ತ, ತನ್ನ ಹಿಂದಿನ ಶತ್ರುಮಿತ್ರರಿಬ್ಬರ ಗೌರವಕ್ಕೂ ಪಾತ್ರವಾಗಿದೆ. ಆಚಾರ, ವ್ಯವಹಾರ, ವೇಷ, ಭೂಷ ಎಲ್ಲದರಲ್ಲೂ ಯೂರೋಪಿನ ಸಂಪೂರ್ಣ ಅನುಕರಣವಿದ್ದರೂ, ಜನರು ಭಾವನೆಯಲ್ಲಿ ಏಷ್ಯದವರಾಗಿಯೇ ಇದ್ದಾರೆ.

## ಅಫ್‌ಘಾನಿಸ್ಥಾನ

ಈಗಿನ ಅಫ್‌ಘಾನಿಸ್ಥಾನ ಹೆಲ್ಮಂಡ್ ನದಿಯ ಮತ್ತು ಹಿಂದೂಕುಷ್ ಪರ್ವತದ ಉತ್ತರಪ್ರದೇಶ ಮತ್ತು ದಕ್ಷಿಣಪ್ರದೇಶ-

ಎಂದು ಎರಡು ಭಾಗವಾಗಿದೆ. ಉತ್ತರಪ್ರದೇಶ, ಇಸ್ಲಾಂ ಪೂರ್ವದ ಇರಾಣ ಸಂಸ್ಕೃತಿ ಮತ್ತು ಧರ್ಮಗಳಿಗೆ ತೊಟ್ಟಿಲಾಗಿದ್ದ ಹಿಂದಿನ ಆವೆಸ್ತನ್, ಬಾಖ್ತರಿ, ಹರೆವ, ಮೊದಲಾದ ಪ್ರದೇಶಗಳನ್ನು ಒಳಗೊಂಡಿದೆ. ಇದೇ ಈಗ ಹಿರಾತ್, ಅಫ್ಘಫನಿ, ತುರ್ಕಿಸ್ತಾನ, ಬದಕ್‌ಷಾನ್, ವಾಖಾನ್, ಕಾಫಿರಿಸ್ತಾನ ಎಂಬ ಪ್ರಾಂತಗಳಾಗಿ ವಿಭಾಗವಾಗಿದೆ. ದಕ್ಷಿಣಪ್ರದೇಶ ಕಂದಹಾರ್, ಸಿಯೆಸ್ತಾನ್, ಕಾಬೂಲ್‌ಗಳನ್ನು ಒಳಗೊಂಡಿದೆ. ಆಫ್ಘಾನಿಸ್ತಾನದ ಪ್ರಾಂತಗಳ ಈಗಿನ ರೂಪ ಅವಕ್ಕೆ ಬಂದದ್ದು ೧೮ನೆಯ ಶತಮಾನದಲ್ಲಿ ನಾದಿರ್‌ಷಾವಿನ ಕೋಶಾಧಿಕಾರಿಯಾಗಿದ್ದ ಅಹ್‌ಮದ್ ಖಾನ್ ಪರ್ಷಿಯದ ಅನಾಯಕತೆ ಅಂತಃಕಲಹಗಳನ್ನು ಸ್ವಪ್ರಯೋಜನಕ್ಕೆ ತಿರುಗಿಸಿಕೊಂಡು ಅಧಿಕಾರ ಮಾಡಲಾರಂಭಿಸಿದಾಗ. ಈ ಪ್ರಾಂತಗಳೆಲ್ಲ ಹಿಂದೆ ಅಖೇಮಿನಿಯನ್ ಚಕ್ರಾಧಿಪತ್ಯಕ್ಕೂ ಅಲೆಕ್ಸಾಂಡರಿನ ಚಕ್ರಾಧಿಪತ್ಯಕ್ಕೂ ಸೇರಿದ್ದುವು. ಕೆಲವು ಕಾಲ ದಕ್ಷಿಣ ಪ್ರಾಂತಗಳು ಚಂದ್ರಗುಪ್ತನ ಆಳಿಕೆಗೂ, ಉತ್ತರಪ್ರಾಂತಗಳು ಗ್ರೀಕರ ಆಳಿಕೆಗೂ ಒಳಪಟ್ಟಿದ್ದುವು. ತರುವಾಯ ಕುಶಾನ್ ತುರ್ಕರೂ, ಆಮೇಲೆ ಪಾರ್ಥಿಯನ್ ದೊರೆಗಳೂ, ಆಮೇಲೆ ಉತ್ತರದಲ್ಲಿ ಪಾರಸಿಕರೂ ದಕ್ಷಿಣದಲ್ಲಿ ಸ್ವತಂತ್ರರಾಜರೂ ಆಳಿದರು.

ಸುಲ್ತಾನ್ ಮಹಮೂದನ ಮತ್ತು ಅವನನಂತರ ಬಂದ ರಾಜರ ಕಾಲದಲ್ಲಿ ಪಶ್ಚಿಮದಲ್ಲಿ ಪರ್ಷಿಯದಿಂದ ಪೂರ್ವದಲ್ಲಿ ಪಂಜಾಬ್ ಸಿಂಧುಗಳವರೆಗೆ ಹಬ್ಬಿದ್ದ ವಿಸ್ತಾರ ಚಕ್ರಾಧಿಪತ್ಯಕ್ಕೆ ಘಸ್ನಿ ರಾಜಧಾನಿಯಾಗಿತ್ತು. ಕ್ರಿ. ಶ ೧೧೮೧ ರಲ್ಲಿ ಘಸ್ನವೀ ಸಂತತಿ ಕೊನೆಗೊಂಡು, ಘೋರಿಸ್ತಾನಿನ ತಾಜಿಕರು ಷಹಬುದ್ದೀನನ ಕೈಕೆಳಗೆ ಪಂಜಾಬಿನಲ್ಲಿ ಆಳತೊಡಗಿದರು. ಆದರೆ, ಅವರ ಏಳಿಗೆಗೆ ಅಷ್ಟೇನೂ ಅವಕಾಶ ದೊರೆಯಲಿಲ್ಲ. ಘೋರಿಗಳ ಅನಂತರ ಮೊಗಲಾಯರು ಪರ್ಷಿಯ ಅಫ್ಘಾನಿಸ್ತಾನಗಳಿಗೆಲ್ಲ ಒಡೆಯರಾಗಿ ಕ್ರಿ. ಶ. ೧೩೮೦ ರಲ್ಲಿ ತೈಮೂರನು ಮಧ್ಯ ಮತ್ತು ಪಶ್ಚಿಮ ಏಷ್ಯಕ್ಕೆಲ್ಲ ಚಕ್ರವರ್ತಿಯಾದನು. ಅವನ ಮಕ್ಕಳು ಮೊಮ್ಮಕ್ಕಳು, ಪಶ್ಚಿಮದಲ್ಲಿ ಸಫವಿಯರೂ ಪೂರ್ವದಲ್ಲಿ ಉಸ್‌ಬೆಕ್ಕರೂ ಏಳುವವರೆಗೆ, ಆಳಿದರು.

ಈಗಿನ ಅಫ್ಘಾನಿಸ್ಥಾನದ ಪ್ರಾಂತಗಳು ೧೬, ೧೭, ೧೮ನೆಯ ಶತಮಾನಗಳಲ್ಲಿ ಇಂಡಿಯದ ಮೊಗಲ್ ಸಾಮ್ರಾಜ್ಯಕ್ಕೆ ಕೆಲವೂ ಪರ್ಷಿಯದ ಸಫವಿಯ ಸಾಮ್ರಾಜ್ಯಕ್ಕೆ ಕೆಲವೂ ಸೇರಿದ್ದುವು. ನಾದಿರ್‌ಷಾ ಸತ್ತನಂತರ ಅಹ್ಮದ್ ಖಾನ್ ಅಬ್ದಾಲಿ ಎಂಬವನು ಖಾಂದಹಾರಿನಲ್ಲಿ ಆಳತೊಡಗಿ, ಇಂಡಿಯದ ಮೇಲೆ ಅನೇಕ ಸಲ ದಂಡೆತ್ತಿ ಬಂದು ಪಂಜಾಬನ್ನು ತನ್ನ ರಾಜ್ಯಕ್ಕೆ ಸೇರಿಸಿಕೊಂಡನು. ಅವನ ಮಕ್ಕಳು ಮೊಮ್ಮಕ್ಕಳು ತಮ್ಮ ತಮ್ಮಲ್ಲಿ ಜಗಳವಾಡಿ ಪಂಜಾಬನ್ನೇ ಅಲ್ಲದೆ ಅಫ್ಘಾನಿಸ್ತಾನದಲ್ಲಿ ತಮ್ಮ ಆಳಿಕೆಯನ್ನೇ ಕಳೆದುಕೊಂಡರು. ಇವರ ನಂತರ ಬಾರಕ್‌ಜೈ ಬುಡಕಟ್ಟಿನ ದೋಸ್ತ್ ಮಹಮ್ಮದ್ ಕ್ರಿ. ಶ. ೧೮೨೬ರಲ್ಲಿ ಕಾಬೂಲಿನಲ್ಲಿ ಆಳತೊಡಗಿದನು. ಕ್ರಿ. ಶ. ೧೮೬೩ರಲ್ಲಿ ಇವನು ಸತ್ತನಂತರ ಇವನ ಮಗ ಷೇರ್ ಅಲಿ ಅಧಿಕಾರಕ್ಕೆ ಬಂದನು. ಆದರೆ ದೇಶದಲ್ಲಿ ಅಂತಃಕಲಹ ಹುಟ್ಟಿ, ಕೊನೆಗೆ ಅಬ್ದುರ್ ರಹಮಾನನನ್ನು ಅಮೀರನನ್ನಾಗಿ ಬ್ರಿಟಿಷ್ ಇಂಡಿಯ ಸರ್ಕಾರದವರು ಒಪ್ಪಿಕೊಂಡರು. ಇವನನಂತರ ಇವನ ಮಗ ಹಬೀಬುಲ್ಲ ಖಾನ್, ಅವನಾದಮೇಲೆ ಅವನ ಮಗ ಅಮಾನ್ ಉಲ್ಲ ಅಧಿಕಾರಕ್ಕೆ ಬಂದರು. ಅಮಾನ್ ಉಲ್ಲ ಕ್ರಿ. ಶ. ೧೯೨೯ರಲ್ಲಿ ಸಿಂಹಾಸನಚ್ಯುತನಾಗಿ ಈಗಿನ ಅಮೀರ್ ನಾದಿರ್‌ಷ ಅಧಿಕಾರಕ್ಕೆ ಬಂದು, ಬಚ್ಚಾ ಸಕ್ಕಾ ಎಂದು ಪ್ರಸಿದ್ಧನಾಗಿದ್ದ ಹಬೀಬುಲ್ಲನನ್ನು ಕೊಂದು ಕಾಬೂಲನ್ನು ಸ್ವಾಧೀನ ಪಡಿಸಿಕೊಂಡು ನಾಲ್ಕು ವರ್ಷ ಆಳಿದನು. ಕ್ರಿ. ಶ. ೧೯೩೩ರಲ್ಲಿ ವಿದ್ಯಾರ್ಥಿಯೊಬ್ಬನಿಂದ ಇವನೂ ಕೊಲೆಯಾಗಿ ಇವನ ಮಗ ಜಾಹೀರನು ಈಗ ಅಮೀರನಾಗಿದ್ದಾನೆ. ಕ್ರಿ. ಶ. ೧೯೩೧ ರಿಂದ ವ್ಯವಸ್ಥಾಬದ್ಧ ರಾಜಪ್ರಭುತ್ವ ನೆಲಸಿ ಶಾಸನ ಸಭೆಯೊಂದು ಏರ್ಪಟ್ಟಿದೆ. ಕ್ರಿ. ಶ. ೧೯೩೮ರಲ್ಲಿ ಅಮೀರನು "ಷಾ" ಎಂಬ ಬಿರುದನ್ನು ತಾಳಿದನು. ಯೂರೋಪ್ ದೇಶಗಳಿಗೆ ಹೋಗಿ ನಾನಾ ಶಾಸ್ತ್ರಕಲೆಗಳಲ್ಲಿ ಪ್ರವೀಣರಾಗಿ ಬಂದವರಿಂದ ದೇಶದ ಏಳಿಗೆ ಕೆಲಸ ನಡೆಯುತ್ತಿದೆ.

ಅಫ್ಘಾನಿಸ್ತಾನ ಸುಮಾರು ಎರಡೂವರೆ ಲಕ್ಷ ಚದರ ಮೈಲಿ ವಿಸ್ತೀರ್ಣವೂ, ಎಂಬತ್ತು ಲಕ್ಷ ಜನಸಂಖ್ಯೆಯೂ, ಐದು ಕೋಟಿ

ರೂಪಾಯಿ ಹುಟ್ಟುವಳಿಯೂ ಉಳ್ಳದ್ದಾಗಿದೆ. ಇಲ್ಲಿಯ ಜನರು (೧) ತಾಜಿಕರು (ಮತದಿಂದ ಸುನ್ನಿಗಳು, ಕುಲದಿಂದ ಇರಾನಿಗಳು) (೨) ಹಸ್ಸಾರರು ಎಂಬ ಮೊಗಲರು ಮತ್ತು ತುರ್ಕರು (ಇವರ ಭಾಷೆ ಪರ್ಷಿಯನ್, ಮತ ಷಿಯ) (೩) ಹಿಂದಿಕಿ ಅಥವಾ ಇಂಡಿಯದಿಂದ ಬಂದವರು (೪) ಪಖ್‌ಥಾನ್ ಅಥವಾ ಪಠಾನ್ (ಅನೇಕ ಬುಡಕಟ್ಟುಗಳನ್ನೊಳಗೊಂಡದ್ದು) ಇವೇ ಮೊದಲಾದ ಜನತೆಗಳಿಂದ ಕೂಡಿದವರು. ಈ ಪಠಾನರ ಮತಾಂತರೀಕರಣ ಅರಬರು ಕಾಬೂಲಿಗೆ ದಾಳಿಯಿಟ್ಟಾಗಲೇ ಆರಂಭವಾಗಿ, ಘಜ್ನವಿದ್ ಸಂತತಿ ಕೊನೆಗೊಳ್ಳುವ ವೇಳೆಗೆ ಪೂರ್ಣವಾಯಿತು. ಇಂಡಿಯದಲ್ಲಿ ಆಳಿದ ಬಲ್‌ಹೂಲ್, ಸಿಕಂದರ್, ಷೇರ್ಷಾ, ಮೊದಲಾದ ಪ್ರಸಿದ್ಧ ರಾಜರೂ, ಬಂಗಾಳ, ಪಂಜಾಬ್ ಮತ್ತು ಮಧ್ಯ ಇಂಡಿಯದ ಅನೇಕ ಸಾಮಂತ ರಾಜರೂ, ಈಗಿನ ಭೂಪಾಲ್ ನವಾಬರೂ ಪಠಾನ್ ಕುಲದವರು.

ಅಫ್ಘಾನಿಸ್ಥಾನದಲ್ಲಿ ಪರ್ಷಿಯನ್, ಪಖ್‌ಥಾನ್ ಅಥವಾ ಪುಷ್ಟು. ಇರಾನಿಯನ್ ಮತ್ತು ಆರ್ಯ ಭಾಷಾಪ್ರಭೇದಗಳಾದ ಉರ್ಮರಿ, ಬಗಸ್ತ್ರ, ಕಾಫ್ಫಿರಿ, ಮೊದಲಾದ ಪ್ರಾಂತಭಾಷೆಗಳು ಪ್ರಚಾರದಲ್ಲಿವೆ. ಆದರೆ, ರಾಜಭಾಷೆ ಪರ್ಷಿಯನ್.

## ಈಜಿಪ್ಟ್

ಈಜಿಪ್ಟಿನ ಹೊಸ ಚರಿತ್ರೆ ಈಗಿನ ರಾಜಸಂತತಿ ಸ್ಥಾಪನೆಯಾದಂದಿನಿಂದ ಮೊದಲಾಗುತ್ತದೆ. ೧೮ನೆಯ ಶತಮಾನದ ಕೊನೆಯಲ್ಲಿ ಫ್ರಾನ್ಸಿನ ನೆಪೋಲಿಯನ್ ಬೋನಪಾರ್ಟೆ ಆಳಿದುಳಿದಿದ್ದ ಮಾಮೆಲೂಕರನ್ನು ಸೋಲಿಸಿ ಈಜಿಪ್ಟನ್ನು ಆಕ್ರಮಿಸಿದನು. ಆದರೆ, ಫ್ರಾನ್ಸಿನ ಒಳಸ್ಥಿತಿಯೂ, ನೆಲ್ಸನ್ನಿನಿಂದಾದ ಅಪಜಯವೂ ಅವನನ್ನು ಹಿಂದಕ್ಕೆ ಕರೆದುವು. ಈಜಿಪ್ಟಿನಲ್ಲಿದ್ದ ಫ್ರೆಂಚ್ ಸೈನ್ಯ ತುರ್ಕಿ ಮತ್ತು ಇಂಗ್ಲೆಂಡಿನ ಸಂಯುಕ್ತ ಸೈನ್ಯಗಳಿಂದ ಕ್ರಿ. ಶ. ೧೮೦೧ರಲ್ಲಿ ಸೋತು ಈಜಿಪ್ಟನ್ನು ಬಿಟ್ಟುಹೋಯಿತು. ಈ ಮಧ್ಯೆ, ತುರ್ಕಿ ಸೈನ್ಯದಲ್ಲಿ ಸೇರಿಯಿದ್ದ ಆಲ್‌ಬೇನಿಯಾ ದೇಶದ ಮಹಮ್ಮದಾಲಿ ಎಂಬ ಸೈನಿಕನೊಬ್ಬನು

ಕ್ರಮೇಣ ಬಲಗಳಿಸಿಕೊಂಡು ಈಜಿಪ್ಟಿನಲ್ಲಿ ಪಾಷ ಅಥವಾ ಚಕ್ರವರ್ತಿ ಪ್ರತಿನಿಧಿ ಎಂದು ಕರಸಿಕೊಂಡನು. ತುರ್ಕಿಯ ಸುಲ್ತಾನನೂ ಇದನ್ನು ಒಪ್ಪಿಕೊಂಡನು. ಈ ಮಹಮ್ಮದಾಲಿ ಇನ್ನೂ ಉಳಿದಿದ್ದ ಮಾಮೆಲೂಕ್ ದೊರೆಗಳನ್ನು ಅಡಗಿಸಿ, ಕೊನೆ ಕೊನೆಗೆ ತನ್ನ ಸ್ವಾಮಿಯಾದ ತುರ್ಕಿಯ ಸುಲ್ತಾನನಿಗೆ ಪ್ರತಿಸ್ಪರ್ಧಿಯಾದನು. ಇವನ ಮಗ ಇಬ್ರಾಹಿಮ್ ತುರ್ಕಿ ಸೈನ್ಯವನ್ನು ಗೆದ್ದು ಸಾಮ್ರಾಜ್ಯದೊಳಕ್ಕೆ ನುಗ್ಗಿ ಕಾನ್‌ಸ್ಟಾಂಟಿನೋಪಲಿನವರೆಗೂ ಬಂದಿದ್ದನು. ಅಲ್ಲದೆ, ಇನ್ನು ಕೊಂಚದಲ್ಲಿಯೇ ಅದನ್ನು ಹಿಡಿದು, ಒಂದು ಹೊಸ ಮುಸ್ಲಿಂ ಸಾಮ್ರಾಜ್ಯವನ್ನೇ ಕಟ್ಟುವ ಸಂಭವವೂ ಇತ್ತು. ಆದರೆ ಈ ಒಳಗುಟ್ಟನ್ನು ಮುನ್ನರಿತ ಯೂರೋಪಿನ ಬಲಗಳು ಇದನ್ನಾಗಗೊಡದೆ, ತನ್ನ ಸ್ವಾಮಿಯೊಡನೆ ಒಪ್ಪಂದಮಾಡಿಕೊಳ್ಳುವಂತೆ ಮಹಮ್ಮದಾಲಿಯನ್ನು ಒತ್ತಾಯ ಪಡಿಸಿದುವು (ಕ್ರಿ. ಶ. ೧೮೩೩). ಆದರೆ, ಸ್ವಾಮಿಗೂ ಸೇವಕನಿಗೂ ಕ್ರಿ. ಶ. ೧೮೩೯ರಲ್ಲಿ ಯುದ್ಧ ಮತ್ತೆ ಆರಂಭವಾಯಿತು. ಆಗಲೂ ಯೂರೋಪಿನ ರಾಜ್ಯಗಳು ಕೈಹಾಕಿ, ರಷ್ಯ, ಇಂಗ್ಲೆಂಡ್ ಮೊದಲಾದವು ಸುಲ್ತಾನನ ಪಕ್ಷ ವಹಿಸಿದುವು. ಕೊನೆಗೆ, ಯುದ್ಧಮಾಡುತ್ತಿದ್ದ ಇಬ್ರಾಹಿಮ್ ಸಿರಿಯ ಮೊದಲಾದ ಪ್ರದೇಶಗಳನ್ನು ಬಿಟ್ಟುಕೊಡಬೇಕಾಗಿ ಬಂದು, ಮಹಮ್ಮದಾಲಿ ಈಜಿಪ್ಟಿನಲ್ಲಿ ಚಕ್ರವರ್ತಿ ಪ್ರತಿನಿಧಿಯ ಪದವಿ ತನ್ನ ಮನೆತನದ ಹಕ್ಕಾಗಿ ಮಾಡಿಕೊಂಡದ್ದರಲ್ಲಿಯೇ ತೃಪ್ತನಾಗಬೇಕಾಯಿತು. ಆದರೂ, ಕೊನೆಗೆ ಈಜಿಪ್ಟಿನಲ್ಲಿ ವಸ್ತುತಃ ಅವನೇ ಆಳುವ ಅಧಿಕಾರಿಯಾದನು.

ಮಹಮ್ಮದಾಲಿಯ ತರುವಾಯ ಕ್ರಿ. ಶ. ೧೮೪೮ರಲ್ಲಿ ಅವನ ಮೊಮ್ಮಗ ಅಬ್ಬಾಸ್ ಅಧಿಕಾರಕ್ಕೆ ಬಂದನು. ಇವನ ಕಾಲದಲ್ಲಿ ತುರ್ಕಿ ಸುಲ್ತಾನನಿಗೆ ಪೊಗದಿ ಕೊಡಬೇಕಾಗಿ ಬಂತು. ಅಲ್ಲದೆ, ಸೈನ್ಯ ಮೊದಲಾದ ವಿಷಯಗಳಲ್ಲಿಯೂ ಸುಲ್ತಾನನ ಅಪ್ಪಣೆಗೆ ಒಳಪಟ್ಟಿರಬೇಕಾಯಿತು. ಆದರೆ, ಕ್ರಮೇಣ ಈಜಿಪ್ಟಿನ ಚಕ್ರವರ್ತಿ ಪ್ರತಿನಿಧಿಗಳು ಸುಲ್ತಾನನಿಂದ ಅನೇಕ ಅಧಿಕಾರಗಳನ್ನು ಗಳಿಸುತ್ತ ಬಂದರು. ಆದರೂ, ಇವೆಲ್ಲವನ್ನೂ ಫ್ರಾನ್ಸ್ ಮತ್ತು ಇಂಗ್ಲೆಂಡಿಗೆ

ಸೂರೆಗೊಟ್ಟರು. ಅಬ್ಬಾಸಿನ ಅನಂತರ ಬಂದ, ಅವನ ಚಿಕ್ಕಪ್ಪ, ಜನಾನುರಾಗಿಯಾಗಿದ್ದ ಸಯದ್ ಪಾಷನ ಕಾಲದಲ್ಲಿ ಒಂದು ಮಂತ್ರಸಭೆ ಏರ್ಪಟ್ಟು, ಕೈರೊವಿಗೂ ಸೂಯೆಸ್ಸ್ ಕಾಲುವೆಗೂ ರೈಲು ಹಾಕಿ, ಈಜಿಪ್ಟಿನ ಬ್ಯಾಂಕ್ ಸ್ಥಾಪನೆಯಾಗಿ, ತಂತಿ ಅಂಚೆಯ ಏರ್ಪಾಡಿಗೂ ಸೂಯೆಸ್ಸ್ ಕಾಲುವೆ ತೋಡುವುದಕ್ಕೂ (ಕಿ. ಶ. ೧೮೫೬) ಅನುಮತಿ ದೊರೆಯಿತು. ಹೊರದೇಶದಿಂದ ಸಾಲ ಕೊಳ್ಳುವುದಕ್ಕೆ ಇವನೇ ಮೊದಲನೆಯವನು. ಇವನು ಬ್ರಿಟಿಷ್ ಬ್ಯಾಂಕರುಗಳಿಂದ ಮುವ್ವತ್ತು ಲಕ್ಷ ಪೌಂಡು ಸಾಲ ಪಡೆದದ್ದೇ ಮುಂದೆ ಬ್ರಿಟಿಷರ ಪ್ರಭಾವ ಈಜಿಪ್ಟಿನಲ್ಲಿ ಹೆಚ್ಚಾಗುವುದಕ್ಕೂ ಕೊನೆಗೆ ಅದರ ಆಕ್ರಮಣಕ್ಕೂ ದಾರಿ ಕಲ್ಪಿಸಿ ಕೊಟ್ಟಿತು. ಸಯದ್ ಪಾಷನನಂತರ ಇಬ್ರಾಹಿಮನ ಮಗ ಇಸ್ಮಾಯಿಲ್ ಪಾಷ (ಕಿ. ಶ. ೧೮೬೩) ಅಧಿಕಾರಕ್ಕೆ ಬಂದು, ಸುಲ್ತಾನನಿಗೆ ಕೊಡುವ ಪೊಗದಿಯನ್ನು ಹೆಚ್ಚಿಸಿ ಖೆದೀವ್ (ಖುದಾ= ದೇವರು) ಎಂಬ ಬಿರುದನ್ನು ಪಡೆದುಕೊಂಡನು. ಇವನು ಪ್ರಜೆಗಳ ಯೋಗಕ್ಷೇಮಕ್ಕೆ ಗಮನ ಕೊಡುತ್ತಿದ್ದರೂ ಭೋಗಲೋಲುಪನಾಗಿ ಯೂರೋಪಿನ ಬ್ಯಾಂಕರುಗಳಿಂದ ತುಂಬ ಸಾಲ ಎತ್ತಿದನು. ಇವನ ಕಾಲದಲ್ಲಿ ಅನೇಕ ವ್ಯವಸ್ಥೆಗಳು ನಡೆದು ಸುಂಕ, ಅಂಚೆ, ಶಾಲೆಗಳು, ಬಂದರುಗಳು, ವಿದ್ಯಾಶಾಲೆಗಳು ಮೊದಲಾದ ಜನಾಭಿವೃದ್ಧಿಗೆ ಸಹಾಯಕವಾದ ಏರ್ಪಾಟುಗಳು ನಡೆದುವು. ಸೂಯೆಸ್ಸ್ ಕಾಲುವೆಯೂ ಇವನ ಕಾಲದಲ್ಲಿ ತೆರೆಯಿತು. ಆದರೆ, ಈ ಸುಧಾರಣೆಗಳೂ ಅವನ ಭೋಗವೈಭವವೂ ಬುಡಕ್ಕೇ ಕೊಡಲಿ ಇಟ್ಟುವು. ಹೊರ ದೇಶದ ಸಾಲ ಮುವ್ವತ್ತು ಲಕ್ಷವಿದ್ದದ್ದು ಹತ್ತು ಕೋಟಿಗೆ ಏರಿ, ಸಾಲ ತೀರಿಸದೆ ಹೋದಾಗ ಸಾಲ ಕೊಟ್ಟಿದ್ದ ಫ್ರಾನ್ಸ್ ಮತ್ತು ಇಂಗ್ಲೆಂಡ್ ದೇಶಗಳು ಇದನ್ನೇ ನೆಪಮಾಡಿ ರಾಜ್ಯಾಡಳಿತದ ಮೇಲ್ವಿಚಾರಣೆ ನಡೆಸಿ ಕೈಹಾಕಲು ಮೊದಲುಮಾಡಿದುವು. ಆದರೂ, ಇಸ್ಮಾಯಿಲ್ ಯೂರೋಪಿಯನ್ನರಿಗೆ ಪಕ್ಷಪಾತಿಯಾಗಿಯೇ ಇದ್ದನು. ಇದರಿಂದ ಜನರಲ್ಲಿ ಅತೃಪ್ತಿಯುಂಟಾಗಿ ಚಳವಳಿ ನಡೆದು ರಾಷ್ಟ್ರಪ್ರಗತಿಗಾಗಿ ಒಂದು ಸಂಸ್ಥೆ ಏರ್ಪಟ್ಟು, ಅದರ ಪರಿಣಾಮವಾಗಿ ಒಂದು ವ್ಯವಸ್ಥಾಬದ್ಧ ಮಂತ್ರಸಭೆ ಏರ್ಪಟ್ಟಿತು (ಕ್ರಿ. ಶ. ೧೮೭೮).

ಆದರೂ, ಪರಿಸ್ಥಿತಿ ಚೆನ್ನಾಗಿಲ್ಲದೆ ಕೊನೆಗೆ ಬ್ರಿಟನ್ ಮತ್ತು ಫ್ರಾನ್ಸಿನ ಪ್ರೇರಣೆಯಿಂದ ತುರ್ಕಿ ಸುಲ್ತಾನನು ಇಸ್ಮಾಯೀಲನನ್ನು ತೆಗೆದುಹಾಕಿ, ಅವನ ಮಗನನ್ನು ಅಧಿಕಾರಕ್ಕೆ ನೇಮಿಸಿದನು.

ಇಸ್ಮಾಯೀಲನ ಕಾಲದಲ್ಲೂ ಒಳದಂಗೆಗಳ ಮತ್ತು ಹೊರ ಒತ್ತಡಗಳ ತೊಂದರೆ ತಪ್ಪಲಿಲ್ಲ. ಸೈನಿಕರು ಅರಬಿ ಪಾಷನೇ ಮೊದಲಾದ ದಳನಾಯಕರ ಕೈಕೆಳಗೆ ದಂಗೆಯೆದ್ದರು. ಕೊನೆಗೆ ಇದರ ಫಲವಾಗಿ ಖೆದೀವ್ ಮಂತ್ರಿಮಂಡಲವನ್ನು ಬದಲಾಯಿಸಿದನು. ಸರ್ಕಾರದ ಆಜ್ಞೆಯಂತೆ ಅರಬಿ ಪಾಷನು ಕೈರೊ ಬಿಟ್ಟು ಹೊರಟುಹೋಗಿದ್ದರೂ ಮತ್ತೆ ಅವನೇ ಮುಖ್ಯ ಮಂತ್ರಿಯಾಗಿ ನೇಮಕನಾದನು. ಆದರೆ, ರಾಷ್ಟ್ರೀಯ ಪಕ್ಷದ ಈ ಮಂತ್ರಿಮಂಡಲವನ್ನು ಬ್ರಿಟನ್ ಮತ್ತು ಫ್ರಾನ್ಸ್ ಸಹಿಸದೆ ಅದು ರಾಜಿನಾಮೆ ಕೊಡುವಂತೆ ಮಾಡಿದುವು. ಆ ಮಂತ್ರಿಮಂಡಲಿ ರಾಜಿನಾಮೆ ಕೊಟ್ಟಮೇಲೆ ಮತ್ತೆ ಯಾವ ಮಂತ್ರಿಯೂ ಮಂತ್ರಿಮಂಡಲಿ ಕಟ್ಟಲು ಮುಂದೆ ಬರಲಿಲ್ಲ. ಈ ಮಧ್ಯೆ, ಖೆದೀವನ ಮೇಲೆ ಯಾವ ವಿಘಾತದ ಕ್ರಮವನ್ನೂ ಜರುಗಿಸುವುದಿಲ್ಲವೆಂದು ಬಾಯಲ್ಲಿ ಹೇಳುತ್ತಿದ್ದರೂ, ಅಲೆಗ್ಸಾಂಡ್ರಿಯದ ಬಳಿ ಬ್ರಿಟಿಷ್ ಯುದ್ಧನೌಕೆಗಳು ಸುಳಿದಾಡುತ್ತಿದ್ದುವು. ಇದನ್ನು ಕಂಡು ಜನರು ಮಸಗಿ ದಂಗೆಯೆದ್ದರು. ಇದರಲ್ಲಿ ಅನೇಕ ಯೂರೋಪಿಯನ್ನರೂ ಈಜಿಪ್ಟಿನವರೂ ಕೊಲೆಯಾದರು. ಇಂಗ್ಲಿಷರು ಅಲೆಗ್ಸಾಂಡ್ರಿಯವನ್ನು ಮುತ್ತಿ, ಅರಬಿ ಪಾಷನನ್ನು ಸೆರೆಹಿಡಿದು ಸಿಲೋನಿಗೆ ಗಡೀಪಾರು ಮಾಡಿದರು. ಹೀಗೆ ಸೈನಿಕರ ಅಸಮಾಧಾನದಿಂದ ಎದ್ದ ರಾಷ್ಟ್ರೀಯ ಚಳವಳಿ ಕೊನೆಗೆ ಬ್ರಿಟಿಷರ ಆಕ್ರಮಣದಲ್ಲಿ ಕೊನೆಗೊಂಡಿತು.

ಇಲ್ಲಿಂದ ಈಜಿಪ್ಟ್ ಚರಿತ್ರೆಯಲ್ಲಿ ಖೆದೀವ್ ಆಳಿಕೆ ಹೆಸರಿನದು ಮಾತ್ರವಾಯಿತು; ತುರ್ಕಿಯ ಸ್ವಾಮಿತ್ವ ಅದಕ್ಕಿಂತಲೂ ನಾಮ ಮಾತ್ರವಾಯಿತು. ನಿಜವಾದ ಪ್ರಭುತ್ವ ಗ್ರೇಟ್ ಬ್ರಿಟನ್ನಿನದಾಯಿತು. ೨ನೆಯ ಅಬ್ಬಾಸನನ್ನು ಕ್ರಿ. ಶ. ೧೯೧೪ರಲ್ಲಿ ಗಡೀಪಾರು ಮಾಡಿದರು. ಹೊಸ ಈಜಿಪ್ಟಿನಲ್ಲಿ ಲಾರ್ಡ್ ಕ್ರೋಮರ್ ಕಾರ್ಯಕರ್ತನಾದನು. (೧೮೮೩-೧೯೦೭) ಕ್ರಿ. ಶ. ೧೯೦೪ರಲ್ಲಿ ಮೊರಾಕೊವಿನಲ್ಲಿ ಫ್ರಾನ್ಸಿಗೆ

ಸಂಪೂರ್ಣ ಅವಕಾಶ ಕೊಟ್ಟು, ಇಂಗ್ಲಿಷರು ಈಜಿಪ್ಟನ್ನು ಅನನ್ಯರಾಗಿ ಆಕ್ರಮಿಸಿಕೊಂಡರು. ಲಾರ್ಡ್ ಕಿಚನರ್ ಮಹಾ ಯುದ್ಧದ ವರೆಗೆ (೧೯೧೧-೧೯೧೪) ಆಡಳಿತ ನಡಸಿದನು. ಹೀಗೆ ಬ್ರಿಟಿಷರು ಈಜಿಪ್ಟನ್ನು ರಕ್ಷಿತದೇಶವನ್ನಾಗಿ (ಪ್ರೊಟೆಕ್ಟೊರೇಟ್) ಮಾಡಿಕೊಂಡು ತಾವೇ ನಿಜವಾಗಿ ಆಳುವುದಕ್ಕೆ ಮೊದಲು ಮಾಡಿ, ಹೆಸರಿಗೆಮಾತ್ರ ಇಸ್ಮಾಯಿಲ್ ಪಾಷನ ಮಗ ಹುಸೇನ್ ಕಾಮಿಲ್ ಪಾಷನನ್ನು ರಾಜನನ್ನಾಗಿ ಮಾಡಿದರು. ಕ್ರಿ. ಶ. ೧೯೧೭ರಲ್ಲಿ ಹುಸೇನ್ ಸತ್ತು ಫುವಾದ್ ದೊರೆ ಅಧಿಕಾರಕ್ಕೆ ಬಂದನು. ಇವನು ಕ್ರಿ. ಶ. ೧೯೩೬ರಲ್ಲಿ ಗತಿಸಿ, ಇವನ ಮಗ ಫಾರೂಕ್ ದೊರೆಯಾದನು.

ಕ್ರಿ. ಶ. ೧೯೧೪ರ ಮಹಾ ಯುದ್ಧದಲ್ಲಿ ಈಜಿಪ್ಟ್ ಬ್ರಿಟಿಷ್ ಸೈನ್ಯಾಧಿಕಾರಿಗಳ ಕೈಕೆಳಗಿತ್ತು. ಯುದ್ಧವು ಸ್ವಾತಂತ್ರ್ಯಕ್ಕಾಗಿ ಎಂಬುದೂ, ಎಲ್ಲರಿಗೂ ಸ್ವಯಂ ನಿರ್ಣಯವೆಂಬ ಪ್ರೆಸಿಡೆಂಟ್ ವಿಲ್ಸನ್ನಿನ ಭರವಸೆಯೂ ರಾಷ್ಟ್ರಭಾವನೆಯನ್ನು ಬಲಗೊಳಿಸಿ ಮತ್ತೆ ಚಳವಳಿಗೆ ಆರಂಭವಾಯಿತು. ಕೊನೆಗೆ ಬ್ರಿಟಿಷರು ರಕ್ಷಿತದೇಶ (ಪ್ರೊಟೆಕ್ಟೊರೇಟ್) ಎಂಬ ಹೆಸರನ್ನು ತೆಗೆದುಹಾಕಿ, ರಕ್ಷಣೆ, ಹೊರ ಆಡಳಿತ ಮೊದಲಾದ ಕೆಲವು ವಿಷಯಗಳ ಹೊರತು ಈಜಿಪ್ಟನ್ನು ಸ್ವತಂತ್ರ ಸಂಸ್ಥಾನವನ್ನಾಗಿ ಒಪ್ಪಿಕೊಂಡರು. ಇದರ ಪರಿಣಾಮವಾಗಿ ಕ್ರಿ. ಶ. ೧೯೨೩ರಲ್ಲಿ ಹೊಸ ರಾಜ್ಯವ್ಯವಸ್ಥೆ ದೊರೆತು ಒಂದು ವ್ಯವಸ್ಥಾ ಬದ್ಧ ರಾಜಪ್ರಭುತ್ವ ನೆಲೆಗೊಂಡಿತು. ಸುಡಾನ್ ಪ್ರಶ್ನೆ ಹಾಗೆಯೇ ಉಳಿಯಿತು.

ಈಜಿಪ್ಟಿನಲ್ಲಿ ನೇಕಡ ೯೩ರಷ್ಟು ಜನ ಅರಬ್ಬೀ ಭಾಷೆಯನ್ನು ಆಡುತ್ತಾರೆ.

## ಇತರ ಮುಸ್ಲಿಂ ಸಂಸ್ಥಾನಗಳು

ಆಲ್‌ಬೇನಿಯ, ಇರಾಕ್, ಹೆಜಾಸ್ ಮತ್ತು ನೆಜ್‌ಡ್ ಅಥವಾ ಸೌದೀಯ ರಾಜ್ಯ, ಯಮನ್, ಹಸ್ರಮೌತ್, ಉಮ್ಮಾನ್, ಕೊವೀರ್, ಮೊರಾಕೊ, ಅಲ್ಜೀರಿಯ, ಟ್ಯೂನಿಸ್, ಮೊದಲಾದ ಮುಸ್ಲಿಂ ದೇಶಗಳ ವಿಚಾರವಾಗಿ ಬರೆಯಲು ಇಲ್ಲಿ ಅವಕಾಶವಿಲ್ಲವಾಗಿ ಕೈಬಿಟ್ಟಿದೆ. ಇವು

ಗಳಲ್ಲದೆ ಇಂಗ್ಲೆಂಡ್, ಫ್ರಾನ್ಸ್, ಹಾಲೆಂಡ್, ರಷ್ಯ, ಅಮೇರಿಕ, ಮಧ್ಯ ಆಫ್ರಿಕ, ಇಂಡಿಯ ಮೊದಲಾದ ಸರ್ಕಾರಗಳ ನೇರ ರಕ್ಷಣೆಗೊಳಪಟ್ಟಿರುವ ಸಣ್ಣದೊಡ್ಡ ಮುಸ್ಲಿಂ ಸಂಸ್ಥಾನಗಳು ಹಲವಿವೆ.

## ಮುಸ್ಲಿಮರ ಕೈಕೆಳಗಿನ ಇಂಡಿಯ

ಇಸ್ಲಾಂ ಪೂರ್ವದಿಂದಲೂ ಅರಬರೂ ಪಾರಸಿಕರೂ ವ್ಯಾಪಾರವೇ ಮೊದಲಾದ ವ್ಯವಹಾರಗಳ ಮೂಲಕ ಭಾರತೀಯರೊಡನೆ ಸಂಸರ್ಗ ವಿಟ್ಟುಕೊಂಡಿದ್ದರು. ಏಳನೆಯ ಶತಮಾನದ ಆದಿಯಲ್ಲಿ ಉಬೆಯ್‌ದುಲ್ಲ ಎಂಬ ಮುಸ್ಲಿಂ ಅರಬ ದಳನಾಯಕನೊಬ್ಬನು ಇಂಡಿಯಕ್ಕೆ ದಂಡೆತ್ತಿ ಬಂದು ಸೋತು ಕೊಲೆಯಾದನು. ಅವನಂತೆಯೇ ಬಂದ ಬದೆಯ್‌ಲಿಗೂ ಅದೇ ಗತಿಯಾಯಿತು. ತರುವಾಯ ಕಾಸಿಮ್ಮನ ಮಗ ಇಪ್ಪತ್ತು ವರ್ಷದ ಯುವಕ ಮೊಹಮ್ಮದ್ ೬೦೦೦ ಸೈನಿಕರೊಡನೆ ಕ್ರಿ. ಶ. ೭೧೨ರಲ್ಲಿ ಸಿಂಧುವನ್ನು ಆಕ್ರಮಿಸಿ, ಮೂರು ವರ್ಷಗಳಲ್ಲಿ ಒಟ್ಟು ಪ್ರಾಂತವನ್ನೇ ಕೈಕೆಳಗೆ ತಂದುಕೊಂಡನು. ಮೊದಮೊದಲು ಉಗ್ರನಾಗಿದ್ದರೂ ಬರುಬರುತ ತಾಳ್ಮೆ ವ್ಯೆತ್ರಿಗಳನ್ನು ತೋರಿಸಿದನು. ಆದರೆ, ಕಲೀಫನು ಅವನನ್ನು ಹಿಂದಕ್ಕೆ ಕರಸಿ, ಅವಮಾನಿಸಿ ಸೆರೆಯಿಟ್ಟು ಕೊಲ್ಲಿಸಿದನು. ಸಿಂಧೂ ಪ್ರಾಂತ ಕ್ರಿ. ಶ. ೮೭೧ರ ವರೆಗೆ ಕಲೀಫನ ಅಧಿಕಾರದಲ್ಲೇ ಇತ್ತು. ಆದರೆ, ಆಡಳಿತ ಬಹುಪಾಲು ಹಿಂದುಗಳ ಮತ್ತು ಇಸ್ಲಾಂ ಮತಾಂತರರಾದ ಹಿಂದುಗಳ ಕೈಯಲ್ಲೇ ಇತ್ತು. ಈ ಕಾಲದಲ್ಲಿ ಕೆಲವು ಹಿಂದೂ ಗ್ರಂಥಗಳು ಅರಬ್ಬೀ ಭಾಷೆಗೆ ಭಾಷಾಂತರವಾದುವು. ಆದರೂ ಘಸ್ನಿ ಮಹಮೂದನ ದಂಡಯಾತ್ರೆಗೆ ಮುಂಚೆ ಇಸ್ಲಾಂ ಪ್ರಭಾವ ಇಂಡಿಯದ ಮೇಲೆ ಅಷ್ಟೇನೂ ಹೆಚ್ಚಾಗಿ ಬಿದ್ದಂತೆ ಕಾಣಲಿಲ್ಲ.

ಘಸ್ನಿ ಮಹಮೂದನ ದಂಡಯಾತ್ರೆಗಳು, ತರುವಾಯ ಘೋರಿ ಮಹಮೂದನು ಬಂದು ಹಿಂದೂ ಅರಸರ ಒಳ ಹೋರಾಟದ ನೆರವಿನಿಂದ ಪೃಥ್ವೀರಾಜನನ್ನು ಸೋಲಿಸಿದ್ದು, ಅವನನಂತರ ಗುಲಾಮಿ ಸಂತತಿ ಆಳಿದ್ದು, ಈ ಗುಲಾಮಿ ಸಂತತಿಯ ಕಾಲದಲ್ಲಿ ದಾಳಿಯಿಟ್ಟ ಮೊಗಲರ ಛಂಗಿಸ್‌ಖಾನನನ್ನು ತಡೆದೋಡಿಸಿದ್ದು, ಈ ಸಂತತಿಯನಂತರ

ಖಿಲ್ಜಿಗಳೂ ತೊಗಲಕರೂ ಆಳಿದ್ದು. ತರುವಾಯ ಬಹಮನೀ ರಾಜ್ಯ ಕಟ್ಟಿ ಒಡೆದದ್ದು, ಕೊನೆಯ ಲೋದಿದೊರೆ ಸುಲ್ತಾನ್ ಇಬ್ರಾಹೀಮನನ್ನು ಕ್ರಿ. ಶ. ೧೫೨೬ರಲ್ಲಿ ಮೊಗಲಾಯ ಬಾಬರ್ ಸೋಲಿಸಿ ಮೊದಲನೆಯ ಮೊಗಲಾಯ ಚಕ್ರವರ್ತಿಯಾದದ್ದು. ಅಕ್ಬರ್ ಔರಂಗಜೇಬ್ ಮೊದಲಾದ ಪ್ರಸಿದ್ಧ ಮೊಗಲಾಯ ಚಕ್ರವರ್ತಿಗಳ ಆಳಿಕೆ, ಔರಂಗಜೇಬನ ನಂತರ ರಾಜ್ಯ ಒಡೆದು ಕೊನೆಗೆ ನಾಮಮಾತ್ರ ಚಕ್ರವರ್ತಿಯಾಗಿ ಉಳಿದಿದ್ದ ಬಹಾದೂರ್‌ಷಹನನ್ನು ಇಂಗ್ಲೀಷರು ಹಿಡಿಸಿದ್ದು—ಇವೆಲ್ಲಾ ಹಿಂದೂ ದೇಶದ ಚರಿತ್ರೆಯನ್ನು ಓದಿದವರಿಗೆಲ್ಲರಿಗೂ ತಿಳಿದ ವಿಷಯವೇ ಆಗಿದೆ.

ಸಣ್ಣ ಪುಟ್ಟ ಮುಸ್ಲಿಂ ರಾಜ್ಯಗಳು ಸದಾ ಹೋರಾಡುತ್ತಲೇ ಇದ್ದು, ಎಲ್ಲೆಲ್ಲೂ ಅಶಾಂತಿ ಅನಾಯಕತೆಗಳು ನೆಲಸಿ, ಪ್ರಜೆಗಳಿಗೆ ತೊಂದರೆಯೇ ಹೆಚ್ಚಾಗಿತ್ತು. ಆದರೆ, ಈ ಕೇಡಿನ ಮಧ್ಯದಲ್ಲಿ ಒಳ್ಳೆಯದೂ ಇತ್ತು. ಅದೇನೆಂದರೆ, ಈ ರಾಜ್ಯಗಳ ಪರಸ್ಪರ ಸ್ಪರ್ಧೆಯಲ್ಲಿ ಶಿಲ್ಪ, ಕಲೆ, ಮೊದಲಾದ ನಾಗರಿಕ ವ್ಯವಸಾಯಗಳು ಚೆನ್ನಾಗಿ ನಡೆದುವು. ಅದರಲ್ಲೂ ಮೊದಲನೆಯ ಆರು ಮೊಗಲಾಯ ಚಕ್ರವರ್ತಿಗಳ ಆಳಿಕೆ ಇಂಡಿಯಾದ ಮುಸ್ಲಿಂ ಆಳಿಕೆಯ ಹೆಮ್ಮೆಯಾಗಿದೆ.

ಇಂಡಿಯಾದಲ್ಲಿ ಮುಸ್ಲಿಮರ ಆಳಿಕೆಯನ್ನು ಸ್ಥೂಲವಾಗಿ ಮೂರು ಭಾಗ ಮಾಡಬಹುದು. ಮೊದಲನೆಯದು, ಸಿಂಧು ಮತ್ತು ಪಂಜಾಬ್ ಪ್ರಾಂತಗಳ ಅರಬರ ಆಳಿಕೆ. ಈ ಕಾಲದಲ್ಲಿ ಮುಸ್ಲಿಂ ಪ್ರಭಾವ ಜನರ ಮೇಲೆ ಅಷ್ಟೇನೂ ಹೆಚ್ಚಾಗಿ ಬಿದ್ದಂತೆ ಕಾಣಲಿಲ್ಲ. ಎರಡನೆಯದನ್ನು ತುರ್ಕಿ ಇಂಡಿಯನ್ ಆಳಿಕೆಯೆಂದು ಕರೆಯಬಹುದು. ಇದು ಮೂರು ಶತಮಾನಗಳ ಕಾಲ ನಡೆಯಿತು. ಈ ಕಾಲದ ರಾಜರು ಸಾಮಾನ್ಯವಾಗಿ ಸಾಹಸಿಗಳಾದ ಸೇನಾನಿಗಳಾಗಿದ್ದು, ರಾಜ್ಯಾಡಳಿತದಲ್ಲಿ ಪಾರಸಿಕ ಪದ್ಧತಿಯನ್ನೂ (ಅದನ್ನು ಸ್ಥಳೀಯ ಪರಿಸ್ಥಿತಿಗೆ ಕೊಂಚ ಮಾರ್ಪಡಿಸಿ ಕೊಂಡು), ಸೈನ್ಯ ವ್ಯವಸ್ಥೆಯಲ್ಲಿ ತುರ್ಕಿ ಪದ್ಧತಿಯನ್ನೂ ಅನುಕರಿಸಿದರು. ರಾಜ ನಿರಂಕುಶ, ಅವನಿಟ್ಟಿದ್ದೇ ಕಟ್ಟಳೆ, ಅವನ ಇಚ್ಛೆಯೇ ನ್ಯಾಯ, ಈ ರೀತಿ ಇತ್ತು. ಒಂದು ವೇಳೆ ರಾಜನೇನಾದರೂ ದುರ್ಬಲನಾಗಿದ್ದದ್ದೇ

ಆದರೆ ಮಂತ್ರಿಗಳು, ಆಸ್ಥಾನದ ಮೆಚ್ಚಿನವರು, ಅಂತಃಪುರದ ಸ್ತ್ರೀಯರು ಮೊದಲಾದವರ ಕೈ ಬೊಂಬೆಯಾಗಿರುತ್ತಿದ್ದನು. ದೊಡ್ಡ ಅಧಿಕಾರಗಳೆಲ್ಲ ಪರ್ಷಿಯ ಮತ್ತು ಮಧ್ಯ ಏಷ್ಯದಿಂದ ಬಂದ ಮುಸ್ಲಿಮರ ಕೈಕೆಳಗಿತ್ತು. ಕೆಳದರ್ಜೆಯ ಹುದ್ದೆಗಳು ಮಾತ್ರ ಇಂಡಿಯದ ಮುಸ್ಲಿಮರ ಮತ್ತು ಹಿಂದೂಗಳ ಕೈಗೆ ಸಿಕ್ಕುತ್ತಿದ್ದುವು. ಆದರೆ, ಕೊನೆಕೊನೆಗೆ ಇವರ ಪ್ರಭಾವವೇ ಹೆಚ್ಚಿಕೊಂಡಿತು. ದೆಹಲಿಯಲ್ಲಿ ಒಮ್ಮೆ ಒಬ್ಬ ಹಿಂದುವು ಆಳಿದ್ದೂ, ದಖನ್ನಿನಲ್ಲಿ ಒಬ್ಬ ಬ್ರಾಹ್ಮಣ ಮುಖ್ಯ ಮಂತ್ರಿಯಾದದ್ದೂ ಉಂಟು.

ಈ ಕಾಲದ ಆಡಳಿತದಲ್ಲಿ ಪೌರ (ಮುಲ್ಕಿ) ಮತ್ತು ಸೈನ್ಯ ವಿಭಾಗಗಳು ನಿಷ್ಕೃಷ್ಟವಾಗಿ ಬೇರ್ಪಟ್ಟಿರಲಿಲ್ಲ. ಒಂದು ಪ್ರಾಂತದ ಮುಲ್ಕಿ ಮುಖ್ಯಾಧಿಕಾರಿಯೇ ಸೈನ್ಯಾಧಿಕಾರಿಯೂ ಆಗಿದ್ದನು. ಇವನಿಗೆ ನಾಯಿಬ್ ಎಂದು ಹೆಸರು. ಮಂತ್ರಿಗೆ ವಜೀರ್ ಎಂದೂ, ಮುಖ್ಯ ನ್ಯಾಯಾಧಿಪತಿಗೆ ಸದರ್‌ಎಜಹಾನ್ ಎಂದೂ ಹೆಸರಿತ್ತು. ಸಾಮಾನ್ಯವಾಗಿ ಮುಖ್ಯವಿಷಯಗಳಲ್ಲೆಲ್ಲ ಚಕ್ರವರ್ತಿ ಈ ಅಧಿಕಾರಿಗಳೊಡನೆ ಆಪ್ತಮಂತ್ರಣ ನಡಸುತ್ತಿದ್ದನು. ಪ್ರಾಂತಗಳ ಮತ್ತು ಮಂತ್ರಿಗಳ ಸಂಖ್ಯೆ ರಾಜ್ಯ ವಿಸ್ತಾರವನ್ನೂ ಆಡಳಿತ ಖಾತೆಗಳನ್ನೂ, ರಾಜೇಚ್ಛೆಯನ್ನೂ ಅವಲಂಬಿಸಿತ್ತು. ಒಳ್ಳೆಯ ಆಡಳಿತಗಾರನೆಂದು ಹೆಸರುಪಡೆದ ಷೇರ್‌ಷಹನ ಕಾಲದಲ್ಲಿ ಒಟ್ಟು ರಾಜ್ಯ ಪರ್ಗಣಗಳಾಗಿ ವಿಭಾಗವಾಗಿ, ಪ್ರತಿಯೊಂದು ಪರ್ಗಣಕ್ಕೂ ಒಬ್ಬ ಅಮೀರನೂ, ಅವನಿಗೆ ಸಹಾಯಕರಾಗಿ ಒಬ್ಬ ಕೋಶಾಧಿಕಾರಿ (ಫೋತದಾರ್), ಒಬ್ಬ ಕಾರ್ಯದರ್ಶಿ ಮತ್ತು ಒಬ್ಬ ಸೇನಾ-ಪೊಲೀಸ್ ಅಧಿಕಾರಿ (ಸಿಕ್‌ದಾರ್) ಇವರೂ ಇದ್ದರು. ಹಲವು ಪರ್ಗಣಗಳು ಸೇರಿ ಒಂದು ಸರ್ಕಾರ್ ಆಗುತ್ತಿತ್ತು.

ರಾಜ್ಯದಲ್ಲಿ ಒಂದು ನೆಲೆಯಾದ ಸೈನ್ಯವಿರಲಿಲ್ಲ. ಶ್ರೀಮಂತ ಮನೆತನದವರು ರಾಜನಿಗೆ ಯುದ್ಧ ಕಾಲದಲ್ಲಿ ಅವರವರಿಗೆ ಗೊತ್ತಾದ ಸಂಖ್ಯೆಯ ಸೈನ್ಯವನ್ನು ಒದಗಿಸಬೇಕಾಗಿತ್ತು. ಇದಕ್ಕಾಗಿ ಅವರಿಗೆ ಜಹಗೀರಿಯ ರೂಪದಲ್ಲೋ ಹಣದ ರೂಪದಲ್ಲೋ ರಾಜ ಸಹಾಯವಿತ್ತು.

ದೊಡ್ಡ ಪಟ್ಟಣಗಳಲ್ಲಿ ಕಾಸಿಗಳು (ನ್ಯಾಯಾಧಿಪತಿಗಳು) ನಿಯು ಕ್ತರಾಗಿದ್ದರು. ಇವರು ಮುಸ್ಲಿಂ ನ್ಯಾಯದಪ್ರಕಾರ ತೀರ್ಪು ಕೊಡ ಬೇಕಾಗಿತ್ತು. ಮುಸ್ಲಿಂ ಇತರ ವಿಷಯದಲ್ಲಿ ಮುಲ್ಕಿ ವ್ಯವಹಾರ ದಲ್ಲಿ ಹಿಂದೂ ಪಂಡಿತರ ಮತ್ತು ಧರ್ಮಾಧಿಕಾರಿಗಳ ಸಲಹೆ ಸಹಾಯ ಗಳನ್ನೂ ತೆಗೆದುಕೊಳ್ಳುತ್ತಿತ್ತು. ಹಳ್ಳಿಗಳಲ್ಲಿ ಪಂಚಾಯತಿ ಪದ್ಧತಿ ಇತ್ತು. ಆದರೂ ತತ್ವತಃ ರಾಜನೇ ಮೂಲ ನ್ಯಾಯಾಧಿಕಾರಿಯಾ ಗಿದ್ದು, ಪ್ರಜೆಗಳಿಗೆ ರಾಜನಲ್ಲಿ ನೇರವಾಗಿ ಮೊರೆಯಿಡುವ ಹಕ್ಕಿತ್ತು.

ಭೂಮಿಯನ್ನು ಅಳೆದು ಮೋಜಣಿಮಾಡಿ ಕಂದಾಯ ನಿಗದಿ ಮಾಡಿ ಅದನ್ನು ಬೆಳಸಿನ ರೂಪದಲ್ಲಿಯೋ ದುಡ್ಡಿನ ರೂಪದಲ್ಲಿಯೋ ವಸೂಲು ಮಾಡುತ್ತಿದ್ದರು. ಈ ಕಂದಾಯ ಕಾಲಾನುಸಾರ ಹೆಚ್ಚು ಕಡಮೆಯಾಗುತ್ತ, ಅಲ್ಲಾವುದ್ದೀನನ ಕಾಲದಲ್ಲಿ ಬೆಳೆದದ್ದರ ಅರ್ಧ ದಷ್ಟು, ಷೇರ್‌ಷಹನ ಕಾಲದಲ್ಲಿ ಕಾಲುಭಾಗದಷ್ಟು ಇತ್ತು. ಕಂದಾಯ ವಸೂಲಿಗೆ 'ಆಮಿಲ್' ಎಂಬ ಅಧಿಕಾರಿಗಳಿದ್ದರು.

ಈ ಕಾಲದ ಮುಸ್ಲಿಂ ಸಮಾಜ ಎರಡು ತೆರದ ಮುಸ್ಲಿಮರಿಂದ ಕೂಡಿತ್ತು. (೧) ಮಧ್ಯ ಏಷ್ಯ, ಪರ್ಷಿಯ, ಅಫ್ಘಾನಿಸ್ಥಾನಗಳಿಂದ ಬಂದವರು. (೨) ಇಂಡಿಯದ ಮುಸ್ಲಿಮರು. ಎರಡನೆಯವರದು ಮಿಶ್ರ ರಕ್ತ. (ದೊರೆ ಮನೆತನಗಳಲ್ಲೂ ಇದೇರೀತಿ ಇತ್ತು. ಉದಾಹರಣೆಗೆ—ಫಿರೂಜ್‌ಷಾವಿನ ತಾಯಿ ರಾಣಾಮಲ್ ಭಟ್ಟನ ಮಗಳು; ಅಲ್ಲಾ ವುದ್ದೀನನೂ ಅವನ ಮಗನೂ ರಜಪೂತ ಸ್ತ್ರೀಯರನ್ನು ಮದುವೆಯಾ ಗಿದ್ದರು). ಇವರ ವೇಷ, ಭಾಷೆ, ಆಚಾರ, ವ್ಯವಹಾರ—ಎಲ್ಲ ಹಿಂದೂ ಗಳಂತೆಯೇ ಇತ್ತು. ಇವರಲ್ಲಿ ಎಷ್ಟೋಜನ ಹಿಂದೂ ಹೆಸರುಗಳನ್ನಿಟ್ಟು ಕೊಂಡು ಹಿಂದೂ ದೇವತೆಗಳನ್ನು ಪೂಜಿಸುತ್ತಿದ್ದದ್ದೂ ಉಂಟು. (ಇಂಥ ಪೂಜೆಯೊಂದಕ್ಕೆ ಅವಕಾಶಕೊಟ್ಟನೆಂದು ಒಮ್ಮೆ ಬ್ರಾಹ್ಮಣ ಪೂಜಾರಿ ಯೊಬ್ಬನನ್ನು ಫಿರೂಜ್‌ಷ ಗಲ್ಲಿಗೆ ಹಾಕಿಸಿದನಂತೆ). ಹಿಂದೂ ಸಾಧು ಗಳ ಮತ್ತು ಸಂನ್ಯಾಸಿಗಳ ಸ್ಥಾನವನ್ನು ತೆಗೆದುಕೊಂಡಿದ್ದ ಸೂಫಿ ಪೀರ್ ಗಳು ಹಿಂದೂ ಮತ್ತು ಇಸ್ಲಾಂ ತತ್ವಗಳ ಸಮನ್ವಯ ಸಮಾಧಾನ ಗಳಿಗೆ ಕಾರಣರಾಗಿದ್ದರು. ಅಲ್ಲದೆ ಅಲ್‌ಬೆರೂನಿ, ಹಸನ್, ದೆಹ್‌ಲವಿ,

ಅಮೀರ್ ಖುಸ್ರೋ ಮೊದಲಾದ ಹಲವು ಇಸ್ಲಾಂ ವಿದ್ವಾಂಸರು ಸಂಸ್ಕೃತವನ್ನೂ ಇತರ ದೇಶಭಾಷೆಗಳನ್ನೂ ಕಲಿತು ಶಾಸ್ತ್ರಗಳನ್ನು ಓದಿ ಈ ಸಮನ್ವಯ ಕೆಲಸದಲ್ಲಿ ನೆರವಾಗಿದ್ದರು. ಅಮೀರ್ ಖುಸ್ರೋ ತನ್ನ ಪರ್ಷಿಯನ್ ಕಾವ್ಯಗಳಲ್ಲಿ ಅನೇಕ ಕಥಾ ನಾಯಕರ ಹೆಸರುಗಳನ್ನೂ ಕಥಾ ಭಾಗಗಳನ್ನೂ ಭಾರತೀಯರಿಂದ ತೆಗೆದುಕೊಂಡಿದ್ದಾನೆ. ಇಂಥ ಸಂಸರ್ಗ ಸಂಬಂಧಗಳು ಹಿಂದೂ ಮುಸ್ಲಿಮರ ಶಾಂತಿ ಸೌಹಾರ್ದ ತಾಳ್ಮೆಗಳಿಗೆ ಸಹಾಯಕವಾಗಿದ್ದುವು.

ಮುಸ್ಲಿಂ ಆಳಿಕೆಯ ಮೂರನೆಯ ಕಾಲ ಮೊಗಲಾಯ ಆಳಿಕೆಯು ಮೊದಲಿನಿಂದ (ಕ್ರಿ. ಶ. ೧೫೨೬) ಕೊನೆಯ ದೊರೆ ಪದಚ್ಯುತನಾಗಿ ಬರ್ಮಾಕ್ಕೆ ಗಡೀಪಾರಾದದ್ದರ ವರೆಗೆ (ಕ್ರಿ. ಶ. ೧೮೫೭) ನೀಡುತ್ತದೆ. ಈ ಮೊಗಲಾಯರ ಆಡಳಿತ ಒಟ್ಟಿನಲ್ಲಿ ತುರ್ಕಿ-ಮೊಗಲರ ಸ್ವಂತ ಪದ್ಧತಿಯನ್ನು ಅವಲಂಬಿಸಿ, ಪರ್ಷಿಯ ಮತ್ತು ಇಂಡಿಯ ಸಂಪರ್ಕಗಳಿಂದ ಕೊಂಚ ಮಾರ್ಪಟ್ಟಿತ್ತು. ಸರ್ಕಾರದ ಬಲವೂ ಪ್ರಜೆಗಳ ನೆಮ್ಮದಿಯೂ ದೊರೆಯ ಆಡಳಿತ ಶಕ್ತಿಗಿಂತ ಯುದ್ಧ ದಕ್ಷತೆಯನ್ನೇ ಹೆಚ್ಚಾಗಿ ಅವಲಂಬಿಸಿದ್ದುವು. ಈಗಿನಂತೆ ಪ್ರಜಾನ್ಯಾಯ ಸಮಾಜನ್ಯಾಯಗಳ ವ್ಯವಸ್ಥೆಯಾಗಲಿ, ಜನಾಂಗದ ಹಕ್ಕು ಬಾಧ್ಯತೆಗಳ ವ್ಯವಸ್ಥೆಯಾಗಲಿ ತಿಳಿದಿರಲಿಲ್ಲ. ಒಳಗೆ ದೇಶಾಭಿವೃದ್ಧಿ ಕಾರ್ಯಗಳಿಗಾಗಲಿ, ಹೊರಗೆ ದಾಳಿ ರಾಜ್ಯ ವಿಸ್ತಾರಗಳಿಗಾಗಲಿ ಸಹಾಯಕವಾದ ಸುವ್ಯವಸ್ಥಿತ ರಾಜ್ಯಭಾರಕ್ರಮವಿರಲಿಲ್ಲ. ಶ್ರೀಮಂತ ಮನೆತನದವರನ್ನು ವಿಧೇಯರನ್ನಾಗಿಟ್ಟುಕೊಂಡು ರಾಜ ರಾಜ್ಯವಾಳುತ್ತಿದ್ದದ್ದು ಪ್ರಜೆಗಳ ನೆಮ್ಮದಿಗಾಗಿ ಅಲ್ಲ; ಆದರೆ, ತನ್ನ ಹಿತಕ್ಕೆ ಮತ್ತು ಅವರು ತನ್ನ ಕೈ ತಪ್ಪಿ ಮೀರದಿರಲೆಂದು. ಸರ್ಕಾರದ ಬಲಾಬಲಗಳು ರಾಜನ ಬಲಾಬಲಗಳನ್ನು ಅವಲಂಬಿಸಿ ಯಾವಾಗಲೂ ಅಪಾಯಭಯವೇ ಇತ್ತು. ಅರಸು ಮನೆತನಗಳು ಒಂದೇ ಸಮನೆ ಎದ್ದುರುಳಿದ್ದಕ್ಕೂ, ಸಾಮ್ರಾಜ್ಯಗಳು ಕಟ್ಟಿ ಕಳಚಿದ್ದಕ್ಕೂ ಇಂಥ ಅವ್ಯವಸ್ಥೆಯೇ ಕಾರಣ. ಒಟ್ಟಿನಲ್ಲಿ ಮುಸ್ಲಿಂ ಆಳಿಕೆ ಒಬ್ಬನ ಶಕ್ತಿ ಸಾಮರ್ಥ್ಯಗಳನ್ನು ನೆಮ್ಮಿಕೊಂಡಿತ್ತೇ ಹೊರತು, ಈಗಿನ ರಾಜ್ಯಗಳಂತೆ ಒಟ್ಟು ಜನತಾಶಕ್ತಿಯನ್ನಲ್ಲ. ಇದರಿಂದಲೇ ಮೊಗಲ್

ದೊರೆಗಳಲ್ಲಿ ಹಲವರು ಯಾರನ್ನೂ ನಂಬದೆ ಕೆಳೆಯನ್ನು ಕೂಡ ಹಗೆಯಾಗಿ ತಿಳಿದು ನೆಚ್ಚದೆ, ಸಿಂಹಾಸನ ಕಿರೀಟ ರಾಜವೈಭವಗಳ ಹೊರವೇಷ ಹೊತ್ತು ಒಳಗೆ ಅಶಾಂತಿಯಲ್ಲಿ ತಮ್ಮ ಬದುಕನ್ನೆಲ್ಲಾ ಭೀತಿ ಕಳವಳಗಳಲ್ಲೇ ಕಳೆಯುತ್ತಿದ್ದರು. ಅವರು ಒಮ್ಮೆ ಮಾನವರಂತೆಯೂ, ಮತ್ತೊಮ್ಮೆ ಪಶುಗಳಂತೆಯೂ ವರ್ತಿಸುತ್ತಿದ್ದದ್ದಕ್ಕೂ ಇದೇ ಕಾರಣ.

ಶ್ರೀಮಂತ ಮನೆತನದವರ ಮತ್ತು ಮಂತ್ರಿಗಳ ಬಾಳೂ ಬಹು ಕಡಿದಾಗಿತ್ತು. ಯಾರ ಮೇಲೇ ಆಗಲಿ ರಾಜನ ಗುಮಾನಿ ಕಾವಲುಗಳು ತಪ್ಪಿದ್ದಲ್ಲ. ತನ್ನ ಅಪನಂಬಿಕೆಗೆ ಗುರಿಯಾದವನನ್ನು ಕೊಂದು ಆಸ್ತಿಯನ್ನು ಸರ್ಕಾರಕ್ಕೆ ಸೇರಿಸಿಕೊಳ್ಳುತ್ತಿದ್ದದ್ದು ಅಷ್ಟೇನೂ ಅಪರೂಪದ್ದಾಗಿರಲಿಲ್ಲ. ಆದರೆ ಇಂಡಿಯಾದ ಮೊಗಲರು ಈ ವಿಷಯದಲ್ಲಿ ಇತರ ಕಡೆಯ ಮುಸ್ಲಿಂ ರಾಜರಷ್ಟು ನಿರ್ದಯರಾಗಿರಲಿಲ್ಲ.

ಮೊದಲನೆಯ ಏಳು ಮೊಗಲ್ ಚಕ್ರವರ್ತಿಗಳು ಯುದ್ಧ ವೀರರಾಗಿದ್ದರು. ಆದರೆ ಅಷ್ಟೇನೂ ಒಳ್ಳೆಯ ಆಡಳಿತಗಾರರಾಗಿರಲಿಲ್ಲ. ಸೈನ್ಯ ನಡಸಿ ಸೈನ್ಯದಲ್ಲೇ ಬಹುಪಾಲು ಜೀವನ ನಡಸುತ್ತಿದ್ದ ಅಕ್ಬರ್, ಔರಂಗಜ್ಹೇಬ್ ಮೊದಲಾದವರು ಸಿಂಹಾಸನವನ್ನು ಉಳಿಸಿಕೊಂಡರು. ಅಂತಃಪುರದ, ದರ್ಬಾರಿನ, ಮರೆತಗಳಿಗೆ ಮನ ಸೋತವರು ಬಿದ್ದರು.* ಕೊನೆಕೊನೆಗೆ ರಾಜ್ಯದಲ್ಲಿ ಅನಾಯಕತೆಗಿಟ್ಟುಕೊಂಡು ದಂಗೆಗಳು ಎದ್ದುವು. ಉತ್ತರದಲ್ಲಿ ಸಿಕ್ಕರು, ದಕ್ಷಿಣದಲ್ಲಿ ಮಹರಾಷ್ಟ್ರರು, ಈ ನಡುವೆ ಯೂರೋಪಿನ ಜನಾಂಗಗಳ ಆರ್ಥಿಕ ಮತ್ತು ವ್ಯಾಪಾರದಾಳಿ, ಅಲ್ಲದೆ ಪರ್ಶಿಯನ್ನರ ಮತ್ತು ಆಫ್ಘನ್ನರ ದಾಳಿ ಇವೆಲ್ಲವೂ ಸೇರಿ ಮೊದಲೇ ತತ್ತರಿಸುತ್ತಿದ್ದ ಮೊಗಲ್ ಬಲ ನೆಲಕ್ಕುರುಳಿತು.

---

*ಅಕ್ಬರ್, ಷಾಜಹಾನ್, ಔರಂಗಜೇಬ್ ಮೊದಲಾದವರಿಗೆ ನಿದ್ದೆಗೂ ಸಾಕಷ್ಟು ಅವಕಾಶವಿರಲಿಲ್ಲ. ಎದ್ದೊಡನೆಯೇ ಪ್ರಜೆಗಳಿಗೆ ದರ್ಶನಕೊಟ್ಟು ದರ್ಬಾರ್ ನಡಸಿ, ಅನೇಕ ವ್ಯವಹಾರಗಳಲ್ಲಿ ಪ್ರತ್ಯಕ್ಷ ತಾವೇ ನ್ಯಾಯ ಸಲ್ಲಿಸಿ, ನಟ್ಟಿರುಳವರೆಗೂ ರಾಜ್ಯಕ್ಕಾಗಿ ದುಡಿಯುತ್ತಿದ್ದರು. ಇದಕ್ಕೆ ವ್ಯತಿರಿಕ್ತವಾಗಿ ಮುಹಮ್ಮದ್ ಷಾ ತಿಂಗಳುಗಟ್ಟಳೆ ಅಂತಃಪುರವನ್ನು ಬಿಟ್ಟು ಹೊರಗೆ ಬರುತ್ತಲೇ ಇರಲಿಲ್ಲ. ಪರ್ಶಿಯದ ನಾದಿರ್ ಷಾವಿನ ಭಯಂಕರ ಪತ್ರವನ್ನು ಅವನಿಗೆ ಕೊಟ್ಟಾಗ ಮುಗುಳ್ನಗೆ ನಕ್ಕು ಆ ಕಾಗದವನ್ನು ತನ್ನ ಮುಂದಿದ್ದ ಕಳ್ಳುಬಟ್ಟಲಿನಲ್ಲಿ ಅದ್ದಿ ಬಿಸುಟನಂತೆ.

ಮೊಗಲರ ಆಡಳಿತದಲ್ಲಿ, ಒಟ್ಟು ಸಾಮ್ರಾಜ್ಯ ಸೂಬ (ಪ್ರಾಂತ) ಗಳಾಗಿಯೂ, ಇವು ಸರ್ಕಾರಗಳಾಗಿಯೂ, ಇವು ಪರ್ಗಣಗಳಾಗಿಯೂ, ಇವು ದಸ್ತೂರ್‌ಗಳಾಗಿಯೂ ಭಾಗವಾಗಿದ್ದುವು. ಸೂಬಕ್ಕೆ ಸೂಬದಾರ್ ಅಧಿಕಾರಿಯಾಗಿದ್ದನು. ಇವನ ಸಹಾಯಕ್ಕೆ ಹಣಕಾಸಿನ ಅಧಿಕಾರಿಯಾಗಿದ್ದ ಒಬ್ಬ ದಿವಾನನೂ ಒಬ್ಬ ಕೋಶಾಧಿಕಾರಿಯೂ ಇದ್ದರು. ನ್ಯಾಯಖಾತೆ ಖಾಜಿಗಳ ಕೈಕೆಳಗಿದ್ದಿತು. ಮುಖ್ಯ ಪಟ್ಟಣಗಳಲ್ಲಿ ಕೊತ್ವಾಲ್ ಎಂಬ ಸೇನಾ-ಪೋಲೀಸ್ ಅಧಿಕಾರಿ ಇದ್ದನು. ಸಣ್ಣ ಪಟ್ಟಣಗಳಲ್ಲಿಯೂ ಹಳ್ಳಿಗಳಲ್ಲಿಯೂ ಮೊಕದ್ದಮ್ ಎಂಬ ಅಧಿಕಾರಿ ಪೋಲೀಸ್ ಕೆಲಸ, ಕಂದಾಯ ವಸೂಲು ಮಾಡುವುದು, ಮೊದಲಾದವನ್ನು ನೋಡಿಕೊಳ್ಳುತ್ತಿದ್ದನು. ಇವರೇ ಅಲ್ಲದೆ ಮುನ್‌ಸಿಫ್, ತಹಸೀಲ್‌ದಾರ್, ಕಾರ್ಕೂನ್, ಪೋತ್‌ದಾರ್ ಮೊದಲಾದ ಅಧಿಕಾರಿಗಳೂ ಇದ್ದರು. ಮೇಲೆ ಹೇಳಿರುವಂತೆ ಪ್ರಾಂತಾಧಿಕಾರಿಗಳಾದ ಸೂಬದಾರರ ಬಲಾಬಲಗಳು ಕೇಂದ್ರ ಸರ್ಕಾರದ ಬಲಾಬಲಗಳನ್ನವಲಂಬಿಸಿ, ಬಲಿಷ್ಠರಾದ ಅಕ್ಬರ್, ಷಾಜಹಾನ್, ಮೊದಲಾದವರ ಕಾಲದಲ್ಲಿ ಸೂಬಾಧಿಕಾರಿಗಳಾಗಿಯೂ, ಸಡಿಲಬಿಟ್ಟಿದ್ದ ಮುಹಮ್ಮದ್‌ಷಾ ಅಂಥವರ ಕಾಲದಲ್ಲಿ ಅರೆಸ್ವತಂತ್ರ ನವಾಬರಾಗಿಯೂ, ನಿಸ್ಸತ್ವರಾಗಿದ್ದ ಕೊನೆಕೊನೆಯ ಚಕ್ರವರ್ತಿಗಳ ಕಾಲದಲ್ಲಿ ಸ್ವತಂತ್ರ ದೊರೆಗಳಾಗಿಯೂ ಪರಿಣಮಿಸಿದರು.

ಸೈನ್ಯ ಕುದುರೆಬಲ, ಕಾಲ್ಬಲ, ಫಿರಂಗಿಬಲಗಳಿಂದ ಕೂಡಿ, ಕುದುರೆಬಲವೇ ಮುಖ್ಯಬಲವಾಗಿತ್ತು. ಸೈನ್ಯಾಧಿಕಾರಿಗಳಿಗೆ ಮನ್‌ಸಬ್‌ದಾರ್ ಎಂದು ಹೆಸರಿತ್ತು. ಇವರಲ್ಲಿ ಹತ್ತೊಡೆಯನಿಂದ ಸಾವಿರೊಡೆಯರ ವರೆಗೂ ಇದ್ದರು. ಈ ಸಾವಿರೊಡೆಯರು ದೊಡ್ಡ ಮನೆತನದವರೂ ಅರಸ ಮನೆತನದವರೂ ಆಗಿರುತ್ತಿದ್ದರು. ಪ್ರತಿಯೊಬ್ಬ ಮನ್‌ಸಬ್‌ದಾರನೂ ಒಂದು ಗೊತ್ತಾದ ಸೈನ್ಯವನ್ನು ಒದಗಿಸಬೇಕೆಂಬ ಒಪ್ಪಂದವಿತ್ತು. ಆದರೆ, ಇದರಲ್ಲಿ ಎಷ್ಟೋ ಮೋಸಗಳು ನಡೆಯುತ್ತಿದ್ದುವು. ಮನ್‌ಸಬ್‌ದಾರರಿಗೆ ಸಂಬಳ ತಿಂಗಳಿಗೆ ೫೦೦೦—೩೦,೦೦೦ ರೂಪಾಯಿಗಳ ವರೆಗಿದ್ದಿತು. ಇವರಿಗೆ ಸಂಬಳ

ಜಹಗೀರು ರೂಪದಲ್ಲಿಯೂ ದ್ರವ್ಯರೂಪದಲ್ಲಿಯೂ ಇತ್ತು. ಈ ಮನ್ ಸುಬ್‌ದಾರರು ಹಿಂದೆಯೇ ಹೇಳಿದಂತೆ ಸೇನಾನಿಗಳು ಮಾತ್ರವಲ್ಲದೆ ಮುಲ್ಕಿ ಆಡಳಿತದ ಮತ್ತು ನ್ಯಾಯಖಾತೆಯ ಮುಖ್ಯಾಧಿಕಾರಿಗಳೂ ಆಗಿದ್ದರು. ಹಾಗೆಯೇ ಅಬುಲ್‌ಫಜಲ್, ಬೀರ್‌ಬಲ್ ಮೊದಲಾದ ಮುಲ್ಕಿ ಅಧಿಕಾರಿಗಳು ಸೇನಾನಿಗಳಾಗಿ ಸೈನ್ಯ ನಡಸಿರುವುದೂ ಉಂಟು. ದೊಡ್ಡದೊಡ್ಡ ಜಹಗೀರುದಾರರು ಕೇಂದ್ರ ಸರ್ಕಾರ ನಿರ್ಬಲಗೊಂಡಾಗ ಸ್ವತಂತ್ರರಾಗಿಬಿಡುತ್ತಿದ್ದರು.

ಮೊಗಲರ ಸೈನ್ಯ ಹಲವು ತೆರನಾಗಿತ್ತು. (೧) ಅನಿಯತಬಲ: ಇದು ಆಯಾ ಜಮೀನುದಾರರ ಅಥವಾ ಸಾಮಂತರಾಜರ ಅಧೀನ ದಲ್ಲಿದ್ದು, ಯುದ್ಧ ಕಾಲದಲ್ಲಿ ಮಾತ್ರ ಕೇಂದ್ರ ಸರ್ಕಾರದಿಂದ ಸಂಬಳ ಪಡೆಯುತ್ತಿತ್ತು. (೨) ದಖೀಲೀ: ಇದಕ್ಕೆ ಸಂಬಳವೇನೊ ಸರ್ಕಾರ ದಿಂದ ಬರುತ್ತಿದ್ದರೂ ಇದು ಮನ್‌ಸುಬ್‌ದಾರರ ಅಧೀನದಲ್ಲಿರುತ್ತಿತ್ತು. (೩) ಮನ್‌ಸುಬ್‌ದಾರರು ತಮ್ಮ ದರ್ಜೆಗನುಸಾರವಾಗಿ ಒದಗಿಸುತ್ತಿದ್ದ ಬಲ. (೪) ಅಹದಿಗಳು ಎಂಬ ಸ್ವಯಂಸೇವಕರ ಬಲ: ಇವರಿಗೆ ಸಾಧಾರಣ ಸಿಪಾಯಿಗಳಿಗಿಂತಲೂ ಹೆಚ್ಚು ಸಂಬಳ ದೊರೆಯುತ್ತಿತ್ತು. (೫) ಜನಾನ ಕಾವಲಿಗಾಗಿ ಹೆಂಗಸರ ಪಡೆ. ಸೈನಿಕರಿಗೆ ಒಂದು ಕ್ಲುಪ್ತ ವಾದ ಶಿಕ್ಷಣ ದಳಜೀವನ ಒಂದೂ ಇರಲಿಲ್ಲ. ಪ್ರತಿಯೊಬ್ಬನೂ ತನಗೆ ತೋರುವ ರೀತಿಯಲ್ಲಿ ಕುಸ್ತಿ, ಕತ್ತಿವರಿಸೆ, ಶಸ್ತ್ರಾಭ್ಯಾಸ ಮೊದಲಾದವು ಗಳಲ್ಲಿ ಶಿಕ್ಷಣ ಪಡೆದುಕೊಳ್ಳಬೇಕಾಗಿತ್ತು. ಇದರಿಂದ ಸುಶಿಕ್ಷಿತ ಸುಸಂಘಟಿತ ಸುಸಜ್ಜಿತ ಸೈನ್ಯವಿಲ್ಲದೆ ಹೋಗಿ ಅನೇಕ ವೇಳೆ ಯುದ್ಧ ದಲ್ಲಿ ನಾಯಕನ ಸಾವಿನಿಂದ ಇಲ್ಲ, ಓಟದಿಂದ, ಸೈನ್ಯ ದಿಕ್ಕೆಟ್ಟು ಚೆದರು ತ್ತಿತ್ತು. ಕಟ್ಟರಿಯದ ಇಂಥ ಬೆರಕೆಯ ಸೈನ್ಯಕ್ಕೆ ಹಲವು ವೇಳೆ ಕಳದ ಹೋರಾಟಕ್ಕಿಂತ ಊರಿನ ಸೂರೆ ಚೆನ್ನಾಗಿ ತಿಳಿದಿತ್ತು. ಈ ಅವ್ಯವಸ್ಥೆಯ ಜೊತೆಗೆ ಸೇನಾನಿಗಳಲ್ಲಿ ಒಗ್ಗಟ್ಟು, ಒಮ್ಮನಸ್ಸು, ರಾಜಭಕ್ತಿ, ದೇಶ ಭಕ್ತಿ—ಇವೊಂದೂ ಇಲ್ಲದ್ದು ಮಾತ್ರವಲ್ಲದೆ ಇವುಗಳಿಗೆ ಬದಲು ಸ್ವಾರ್ಥೋದ್ದೇಶ ತುಂಬಿ ಪ್ರತಿಯೊಬ್ಬರೂ ತಮ್ಮ ಸಮಯ ನೋಡಿ ಕೊಂಡಿರುತ್ತಿದ್ದರು. ಔರಂಗಸ್ಸೇಬನ ಕಾಲದಲ್ಲಿ ಇಂಡಿಯಕ್ಕೆ ಬಂದಿದ್ದ

ಯೂರೋಪ್ ಪ್ರವಾಸಿಯೊಬ್ಬನು. ಮುಪ್ಪತ್ತು ಸಾವಿರ ಸುಶಿಕ್ಷಿತ ಯೂರೋಪು ಸೈನಿಕರು ಮೊಗಲ ಸಾಮ್ರಾಜ್ಯವನ್ನೆಲ್ಲ ಗೆದ್ದು ಕೈಗೆ ಹಾಕಿಕೊಳ್ಳಬಹುದೆಂದು ಹೇಳಿದ ಮಾತು ಅಷ್ಟೇನೂ ತಪ್ಪಲ್ಲ.

ಸೈನಿಕರು ಆನೆ, ಒಂಟೆ, ಕುದುರೆ, ಎತ್ತು—ಮೊದಲಾದವನ್ನು ವಾಹನಗಳನ್ನಾಗಿ ಉಪಯೋಗಿಸುತ್ತಿದ್ದರು. ಯುದ್ಧ ಕಾಲದಲ್ಲಿ ದವಸ ಧಾನ್ಯಗಳು ಸಿಕ್ಕದೆ ಹೋದರೆ ಊರುಗಳನ್ನು ಕೊಳ್ಳೆ ಹೊಡೆಯುವುದಕ್ಕೂ ಅನುಮತಿ ಇತ್ತು. ಆದರೆ, ಒಮ್ಮೊಮ್ಮೆ ಕಾರ್ಯಾನಂತರ ಕೊಳ್ಳೆಗೆ ಗುರಿಯಾಗಿದ್ದ ಊರಿನವರಿಗೆ ನಷ್ಟ ಪರಿಹಾರವನ್ನು ಕಟ್ಟಿಕೊಡುತ್ತಿದ್ದದ್ದೂ ಉಂಟು. ಸೇನೆಯು ಬೀಡೆಂದರೆ ಅದು ಒಂದು ನಡೆಪಟ್ಟಣವೇ ಆಗಿತ್ತು. ರಾಜನು ಸ್ವತಃ ಸೈನ್ಯದೊಡನೆ ಹೋಗುತ್ತಿದ್ದನು. ಅವನ ಹಿಂದೆ ಹೆಂಗಸರು, ಜ್ಯೋತಿಷರು, ಊಳಿಗದವರು — ಮೊದಲಾದ ಪರಿವಾರದವರೆಲ್ಲ ಹೋಗುತ್ತಿದ್ದರು. ಪಾಳಯ ಹಲವು ಮೈಲಿ ಪಸರಿಸಿರುತ್ತಿತ್ತು.

ಯುದ್ಧಕಾಲದಲ್ಲಿ ಗೂಢಚಾರರ ಸಂಖ್ಯೆ ಬಹಳವಾಗಿ ಹೆಚ್ಚುತ್ತಿತ್ತು. ಒಮ್ಮೆ ಇವರ ಸಂಖ್ಯೆ ೪೦೦೦ ಕ್ಕೆ ಏರಿತ್ತು. ಇವರು ಶಾಂತಿ ಕಾಲದಲ್ಲೂ ಬಹಳ ಚುರುಕಿನಿಂದ ಕೆಲಸ ಮಾಡುತ್ತಿದ್ದರು. ಇವರಿಗೆ ಹರ್‌ಕಾರರು (ಹರಿಕಾರರು) ಎಂದು ಹೆಸರಿತ್ತು. ಇವರು ರಾಜ್ಯದ ಎಲ್ಲ ಭಾಗಗಳಲ್ಲೂ ಮೂಲೆಮೂಲೆಗಳಲ್ಲೂ ಹರಡಿಕೊಂಡಿದ್ದು ಗುಟ್ಟಿನ ಸುದ್ದಿಯನ್ನು ಒಯ್ಯುತ್ತಿದ್ದರು.

ಅರಬರನ್ನು ಬಿಟ್ಟರೆ ಸಾಮಾನ್ಯವಾಗಿ ಮುಸ್ಲಿಮರಿಗೆ ಸಮುದ್ರದ ಅನುಭವ ಏನೂ ಇರಲಿಲ್ಲವೆನ್ನಬಹುದು. ಬೆಟ್ಟಗುಡ್ಡಗಳಿಂದ ಸುತ್ತುವರಿದಿದ್ದ ಮಧ್ಯ ಏಷ್ಯದಿಂದ ಇಂಡಿಯಕ್ಕೆ ಬಂದ ಈ ಮುಸ್ಲಿಮರಿಗೆ ಹೊರದಾಳಿಯಿಂದ ಕರೆನಾಡನ್ನು ಕಾಪಾಡಿಕೊಳ್ಳುವ ಯೋಚನೆಯೇ ಮೂಡಲಿಲ್ಲ. ಬಿಜಾಪುರ ಗೋಲ್ಕೊಂಡ ಮೊದಲಾದ ದಕ್ಷಿಣ ಸಂಸ್ಥಾನಗಳು ವ್ಯಾಪಾರ ಮತ್ತು ಮೆಕ್ಕಾ ಯಾತ್ರೆಯ ಸೌಕರ್ಯ ದೃಷ್ಟಿಯಿಂದ ಹಡಗುಗಳನ್ನು ಕಟ್ಟಿಸಿ ಉಪಯೋಗಿಸಲು ಅಲ್ಪಸ್ವಲ್ಪ ಪ್ರಯತ್ನಮಾಡಿದರೂ ನೌಕಾಬಲದ ಏರ್ಪಾಡಿನ ಕಡೆಗೆ ಅವರ ಗಮನ ಹೋಗಲಿಲ್ಲ.

೧೭-೧೮ ನೆಯ ಶತಮಾನಗಳಲ್ಲಿ ತಮ್ಮ ಸ್ಥಾನಮಾನಗಳು ಪೋರ್ಚುಗೀಸರೇ ಮೊದಲಾದ ಯೂರೋಪು ಬಲಗಳೊಡನೆ ಸ್ಪರ್ಧಿಸುವುದರ ಮೇಲೆ ನಿಂತಿದ್ದ ಮೊಗಲರು ಕೂಡ ಈ ವಿಷಯದಲ್ಲಿ ಹೆಚ್ಚು ಆಸಕ್ತಿ ತೋರಿಸಿಲ್ಲ. ಅಕ್ಬರನ ಕಾಲದಲ್ಲಿ ಮೀರ್‌ಬಹರ್ ಎಂಬ ನೌಕಾ ಖಾತೆ ಒಂದಿದ್ದರೂ, ಅವನ ಸಾಧನಗಳೆಲ್ಲ ನದಿಯ ದೋಣಿಗಳು ಮಾತ್ರವಾಗಿದ್ದುವು. ಅವನ ತರುವಾಯ ಬಂದ ಅರಸರು ಅಬಿಸೀನಿಯದ ಸಿದ್ದಿಗಳಿಗೂ ಪೋರ್ಚುಗೀಸರಿಗೂ ರಾಜಾಶ್ರಯವಿತ್ತು, ಅವರ ನೌಕೆಗಳಿಗೆ ಸಹಾಯದ್ರವ್ಯ ಕೊಡುತ್ತಿದ್ದರು. ಬಲಿಷ್ಠವಾದ ನೌಕಾಸೈನ್ಯವಿಲ್ಲದ್ದೇ ಮುಸ್ಲಿಂ ಆಳಿಕೆಯ ದೊಡ್ಡ ದೌರ್ಬಲ್ಯವಾಗಿ, ಹೊರಗಿನವರು ದೇಶವನ್ನು ಆಕ್ರಮಿಸಿಕೊಳ್ಳುವುದಕ್ಕೆ ದಾರಿ ಮಾಡಿಕೊಟ್ಟಿತು. ಮೈಸೂರಿನ ಟಿಪ್ಪೂಸುಲ್ತಾನ್ ಒಂದು ನೌಕಾಖಾತೆಯನ್ನು ಏರ್ಪಡಿಸಿ, ಕ್ಯಾಲಿಕಟ್ ಮತ್ತು ಮಂಗಳೂರಿನಲ್ಲಿ ಹಲವು ಹಡಗುಗಳನ್ನಿಟ್ಟುಕೊಂಡಿದ್ದನು. ಇದಕ್ಕಾಗಿ ಅವನಿಗೆ ರಾಜ್ಯದ ಹುಟ್ಟುವಳಿಯ ಕಾಲುಭಾಗ ವೆಚ್ಚವಾಗುತ್ತಿತ್ತು. ಇಂಗ್ಲಿಷ್ ವರ್ತಕರ ಹಿತಕ್ಕೆ ವ್ಯತಿರಿಕ್ತವಾಗಿದ್ದ ಈ ಏರ್ಪಾಡಿನಿಂದ ಕೊನೆಗೆ ಟಿಪ್ಪೂಸುಲ್ತಾನಿನ ಮೂಲಕ್ಕೆ ಬಂತು.

## ಕಂದಾಯ ಮತ್ತು ಹಣ ಕಾಸು

ಮೊಗಲರ ಆರ್ಥಿಕ ಸಚಿವನಾಗಿದ್ದ ರಾಜಾ ತೋದರಮಲ್ಲನು ಮುಜಫ್ಫರ್‌ಖಾನ್ ಎಂಬ ಪಾರಸಿಕನ ಸಹಾಯದಿಂದ ವ್ಯವಸಾಯ ಭೂಮಿಗಳನ್ನೆಲ್ಲ ಅಳೆದು, ನೆಲದ ಉತ್ಕೃಷ್ಟತೆಯ ಅನುಸಾರವಾಗಿ ಬೇರೆ ಬೇರೆ ದರ್ಜೆಯವುಗಳಾಗಿ ವಿಂಗಡಿಸಿ ಅವವುಗಳಿಗೆ ಅನುಗುಣವಾದ ಕಂದಾಯ ಹಾಕಿದನು. ಸಾಮಾನ್ಯವಾಗಿ ಕಂದಾಯ ಬೆಳಸಿನ ಮೂರನೆಯ ಒಂದು ಭಾಗವಾಗಿರುತ್ತಿತ್ತು. ಅಲ್ಲದೆ ಕಂದಾಯ ಈ ರೀತಿ ನಿಗದಿಯಾದ ಮೇಲೆ ಹಲವು ಸಣ್ಣಪುಟ್ಟ ತೆರಿಗೆಗಳು ಹೋದುವು. ಅಕ್ಬರನ ಕಾಲದಲ್ಲಿ ಅವನ ೧೫ ಸೂಬಗಳಿಂದ ೧೭ ಕೋಟಿ ರೂಪಾಯಿಗಳಿಗೆ ಮೀರಿ ಕಂದಾಯ ಬರುತ್ತಿತ್ತು. ಷಹಜಹಾನ್, ಔರಂಗಜೇಬರ ಕಾಲದಲ್ಲಿ ಇದು ಇನ್ನೂ ಹೆಚ್ಚಿತು. ಕಂದಾಯವನ್ನು ಹಣದ ರೂಪ

ದಲ್ಲಿಯೂ ಬೆಳಸಿನ ರೂಪದಲ್ಲಿಯೂ ಕಂತುಗಳಲ್ಲಿಯೂ ಕೊಡಬಹುದಾಗಿತ್ತು. ಬೇಸಾಯಕ್ಕಾಗಿ ಬಡ ರೈತರಿಗೆ ಸಾಲಕೊಟ್ಟು ಸುಲಭವಾದ ಕಂತುಗಳಲ್ಲಿ ಹಿಂದಕ್ಕೆ ಪಡೆಯುವ ಏರ್ಪಾಡಿತ್ತು.

ಕಂದಾಯದ ಖಾತೆಯಲ್ಲಿ ಹಲವು ಅಧಿಕಾರಿಗಳಿದ್ದರು. (೧) **ಕಾರ್ಕುನ್:** ಬೆಳೆಯ ಲೆಕ್ಕಪತ್ರಗಳನ್ನು ತಯಾರಿಸುವುದು ಇವನ ಕೆಲಸವಾಗಿತ್ತು. (೨) **ಕಾನೂನ್‌ಗೊ (ದಕ್ಷಿಣದಲ್ಲಿ, ದೇಶಪಾಂಡೆ):** ಒಂದು ಗ್ರಾಮದಿಂದ ಬರಬೇಕಾದ ಕಂದಾಯ ವಿವರ, ಅಲ್ಲಿಯ ಜಮೀನುಗಳ ಅಡವು, ಸಾಗಿಗೆ—ಮೊದಲಾದ ವಿವರಗಳನ್ನೊಳಗೊಂಡ ಕಡತಗಳನ್ನು ಇಡುವ ಕೆಲಸ ಇವನದಾಗಿತ್ತು. (೩) **ಪಟ್ವಾರಿ ಅಥವಾ ಮೊಖದ್ದಮ್:** ಇವನೇ ಗ್ರಾಮಾಧಿಕಾರಿ. (೪) **ಸದರ್ ಅಥವಾ ಮುಖ್ಯ ಕಾನೂನ್‌ಗೋ:** ಇವನು ಒಂದು ಪ್ರಾಂತದ ಎಲ್ಲ ಕಾನೂನ್‌ಗೊಗಳ ಲೆಕ್ಕಪತ್ರಗಳನ್ನೂ ಶೇಖರಿಸಿ ಕೇಂದ್ರ ಸರ್ಕಾರಕ್ಕೆ ಕಳುಹಿಸುತ್ತಿದ್ದನು. ಇವರಲ್ಲದೆ ಶೇಕ್‌ದಾರ್, ಅಮೀನ್, ಮುತ್ಸದ್ದಿ, ಫೋತದಾರ್—ಮೊದಲಾದವರು ಇದ್ದರು.

ಭೂಕಂದಾಯವಲ್ಲದೆ ಇತರ ಆದಾಯಗಳೂ ಇದ್ದುವು. (೧) **ಕರೆಸುಂಕ:** ಹೊರಗಿನಿಂದ ಬಂದ ಸರಕಿನ ಮೇಲೆ ಸೇಕಡ ಎರಡೂವರೆ ಸುಂಕ ಹಾಕುತ್ತಿತ್ತು. ಷಾ ಬಂದರ್ ಎಂಬ ಒಬ್ಬ ಅಧಿಕಾರಿ ಇದಕ್ಕಾಗಿ ನಿಯಮಿತನಾಗಿದ್ದನು. (೨) **ನಜರ್:** ರಾಜದರ್ಶನಕ್ಕೆ ಬಂದವರೂ, ವಿಶೇಷ ಸಂದರ್ಭಗಳಲ್ಲಿ ಸಾಮಂತರಾಜರೂ ಶ್ರೀಮಂತರೂ ಅಧಿಕಾರಿಗಳೂ ಈ ಕಾಣಿಕೆ ಒಪ್ಪಿಸಬೇಕಾಗಿತ್ತು. ಒಮ್ಮೊಮ್ಮೆ ಇದರಿಂದ ರಾಜಬೊಕ್ಕಸಕ್ಕೆ ಬಹು ಹಣ ಬರುತ್ತಿತ್ತು. ಈ ಪದ್ಧತಿ ಹೈದರಾಬಾದ್ ಮೊದಲಾದ ಸಂಸ್ಥಾನಗಳಲ್ಲಿ ಈಗಲೂ ನಡೆಯುತ್ತಿದೆ. (೩) ರಾಜ್ಯದ ದೊಡ್ಡ ಅಧಿಕಾರಿಗಳು ಸತ್ತರೆ, ಚಕ್ರವರ್ತಿಗಳು ಕೆಲವುವೇಳೆ ಅವರ ಆಸ್ತಿಯನ್ನು ಅರಮನೆಗೆ ಸೇರಿಸಿಕೊಂಡುಬಿಡುತ್ತಿದ್ದರು. (೪) ಹಿಂದುಗಳ ಮೇಲೆ ತಲೆಗಂದಾಯ: ಇದನ್ನು ಕೆಲವು ವೇಳೆ ಹೆಚ್ಚಾಗಿಯೂ ಕೆಲವು ವೇಳೆ ಕಡಮೆಯಾಗಿಯೂ, ಒಮ್ಮೆ ತೊಂದರೆಕೊಟ್ಟೂ, ಒಮ್ಮೆ ಸಾದುವಾಗಿಯೂ ವಸೂಲುಮಾಡುತ್ತಿದ್ದರು. ಕೆಲವು ರಾಜರು ತೆಗೆದು

ಹಾಕಿದ್ದನ್ನು ಮತ್ತೆ ಕೆಲವರು ಹಾಕುತ್ತಿದ್ದರು. ಅಕ್ಬರ್ ತೆಗೆದು ಹಾಕಿದ್ದ ಈ ತಲೆಗಂದಾಯವನ್ನು ಔರಂಗಜೇಬ್ ಮತ್ತೆ ಹಾಕಿದನು. ಈ ಒಂದರಿಂದಲೇ ಸುಮಾರು ನಾಲ್ಕು ಕೋಟಿ ರೂಪಾಯಿ ಆದಾಯ ಬಿತ್ತು. ಈ ತೆರಿಗೆ ೩ ರಿಂದ ೧೪ ರೂಪಾಯಿಗಳ ವರೆಗೂ ಆಯಾ ವ್ಯಕ್ತಿಗೆ ಅನುಸಾರವಾಗಿತ್ತು. ಹೆಂಗಸರು, ಮುದುಕರು, ಗುಲಾಮರು, ಕುಂಟ ಕುರುಡರು—ಮೊದಲಾದವರು ಇದನ್ನು ಕೊಡಬೇಕಾಗಿರಲಿಲ್ಲ.

ನಾಣ್ಯ ಚಲಾವಣೆ: ಅಕ್ಬರನು ಅಬ್ದುಸ್ ಸಮದ್ ಎಂಬ ಪಾರಸಿಕ ಕಲೆಗಾರನನ್ನು ಟಂಕಸಾಲೆಯ ಪುನರ್ವ್ಯವಸ್ಥೆ ಮಾಡುವುದಕ್ಕಾಗಿ ನಿಯಮಿಸಿ ಅವನ ಸಹಾಯಕ್ಕಾಗಿ ದರೋಗ, ಸರಾಫ್ಘ, ಖಜಾನಿಜಿ,—ಮೊದಲಾದ ನೌಕರರನ್ನು ಕೊಟ್ಟು ಲಾಹೋರ್, ಡೆಲ್ಲಿ, ಕಾಬೂಲ್, ಅಹಮದಾಬಾದ್, ಪಾಟ್ನ, ಸೂರತ್—ಮೊದಲಾದ ಕೇಂದ್ರಪಟ್ಟಣಗಳಲ್ಲಿ ಟಂಕಸಾಲೆಯಿಟ್ಟು ತಾಮ್ರ, ಬೆಳ್ಳಿ, ಚಿನ್ನಗಳ ನಾಣ್ಯ ಹೊಡಸಿದನು. ಅಕ್ಬರ್ ಮತ್ತು ಜಹಾಂಗೀರರ ಕೆಲವು ನಾಣ್ಯಗಳ ಹೊರತು, ಮೊಗಲ್ ನಾಣ್ಯಗಳ ಮೇಲೆ ಮನುಷ್ಯ ಚಿತ್ರ ಯಾವುದೂ ಇಲ್ಲ.

ಖರ್ಚು: ಖರ್ಚಿನ ವಿಷಯದಲ್ಲಿ ಕ್ರಮ ಕಟ್ಟುಪಾಡು ಏನೂ ಇರಲಿಲ್ಲ. ಬಹುಪಾಲು ಚಕ್ರವರ್ತಿಯ ಇಷ್ಟವನ್ನೂ ರಾಜ್ಯ ಪರಿಸ್ಥಿತಿಯನ್ನೂ ಅನುಸರಿಸಿ ಹಣ ಖರ್ಚಾಗುತ್ತಿತ್ತು.

ಮನ್‌ಸುಬ್‌ದಾರರ ಮತ್ತು ಇತರ ಅಧಿಕಾರಿಗಳ ಸಂಬಳ, ಸಿವಿಲ್ತ್ತಾಧಿಕಾರಿಗಳ ಸಂಬಳ, ಮದ್‌ರಸ(ವಿದ್ಯಾಶಾಲೆ)ಗಳಿಗೂ ಮೌಲ್ವಿಗಳಿಗೂ ಪಂಡಿತರು ಕವಿಗಳು ಮೊದಲಾದವರಿಗೂ ಕೊಡುವ ಸಹಾಯ ದ್ರವ್ಯ ಬಹುಮಾನಗಳು, ಸಾರ್ವಜನಿಕ ಕೆಲಸಗಳಿಗಾಗಿ ಹಣ—ಇವೇ ಮೊದಲಾದ ರೀತಿಯಲ್ಲಿ ಸರ್ಕಾರದ ಹಣ ವೆಚ್ಚವಾಗುತ್ತಿದ್ದರೂ ಸೈನ್ಯ, ದಾಳಿ, ರಾಜನ ಸ್ವಂತ ಖರ್ಚು, ಅಂತಃಪುರದ ಖರ್ಚು—ಇವುಗಳೇ ಆದಾಯದ ಹೆಚ್ಚಿನ ಪಾಲನ್ನು ನುಂಗಿಬಿಡುತ್ತಿದ್ದುವು.

• ಹೈದರ್ ಅಲಿ ಮತ್ತು ಟಿಪ್ಪೂ ಸುಲ್ತಾನ್ ಅವರು ಮೈಸೂರಿನಲ್ಲಿ ಸೂಬಗಳನ್ನೂ ಜಿಲ್ಲಾಗಳನ್ನೂ ಏರ್ಪಡಿಸಿ, ವ್ಯಾಪಾರಕ್ಕೆ ಗಮನಕೊಟ್ಟು,

ಫಿರಂಗಿ ಕಾರ್ಖಾನೆಯನ್ನು ನಡೆಸಿ, ಸೈನ್ಯವನ್ನು ಶಿಸ್ತಿಗೆ ತಂದು, ಗಂಧದ ಮರದ ಮಾರಾಟಕ್ಕೆ ಏರ್ಪಾಡು ಮಾಡಿ, ರಾಜ್ಯಭಾರವನ್ನು ಶಿಸ್ತಿನಿಂದ ನಡೆಸಿದರು. ಇದು ಮೊಗಲಾಯಿ ಶಿಸ್ತಿಗೆ ಒಳ್ಳೆಯ ಉದಾಹರಣೆ.

ಅಧ್ಯಾಯ ೫

## ಮುಸ್ಲಿಂ ಸಾಹಿತ್ಯ ಚರಿತ್ರೆ

ಇಸ್ಲಾಂ ಸಾಹಿತ್ಯವನ್ನು ಅರಬ್ಬಿ, ಪರ್ಷಿಯನ್, ತುರ್ಕಿ ಮತ್ತು ಇಂಡಿಯನ್ ಎಂದು ನಾಲ್ಕು ಭಾಗಗಳಾಗಿ ವಿಂಗಡಿಸಿ ಪ್ರಸ್ತಾವಿಸ ಬಹುದು.

### ಅರಬ್ಬಿ ಸಾಹಿತ್ಯ

ಅರಬ್ಬಿ ಭಾಷೆಯಲ್ಲಿಯ ಅತ್ಯಂತ ಪ್ರಾಚೀನ ಗದ್ಯವೆಂದರೆ, ದಕ್ಷಿಣ ಅರೇಬಿಯದಲ್ಲಿ ಸಿಕ್ಕಿರುವ ಕ್ರಿ. ಪೂ. ೩ ಅಥವಾ ೪ನೆಯ ಶತ ಮಾನದ ಕೆಲವು ದಾಖಲೆಗಳು. ಆದರೂ ಅರಬ್ಬಿ ಭಾಷೆಯ ಪ್ರೌಢ ಕಾಲ ರಸೂಲ್ ಮೊಹಮ್ಮದರಿಗೆ ಒಂದು ಶತಮಾನದ ಹಿಂದಿನಿಂದ ಆರಂಭವಾಗುತ್ತದೆ. ಅದಕ್ಕೆ ಮೊದಲು ಸಾಹಿತ್ಯವಿದ್ದಿರಬಹುದಾದರೂ ನಮಗೆ ಯಾವ ದಾಖಲೆಯೂ ದೊರೆತಿಲ್ಲ. ಇಸ್ಲಾಂ ಪೂರ್ವದ ಅರಬ್ಬಿ ಕವಿಗಳು ವರ್ಷಂಪ್ರತಿ ನಡೆಯುತ್ತಿದ್ದ ಜಾತ್ರೆಯೇ ಮೊದಲಾದ ಉತ್ಸವ ಕಾಲಗಳಲ್ಲಿ ಒಂದೆಡೆ ಕೂಡುತ್ತಿದ್ದರು. ಈ ಜಾತ್ರೆಗಳಲ್ಲಿ ವ್ಯಾಪಾರವೇ ಮೊದಲಾದ ಕೆಲಸಗಳು ನಡೆಯುತ್ತಿದ್ದದ್ದು ಮಾತ್ರವಲ್ಲದೆ ಕವಿಗಳು ತಮ್ಮ ಕವನಗಳನ್ನು ಹಾಡುತ್ತಿದ್ದರು. ಜನರಿಗೆ ಬಹು ಮೆಚ್ಚಿಗೆಯಾಗಿ ಮೊದಲನೆಯ ಸ್ಥಾನ ಪಡೆದ ಕವನವನ್ನು ಚಿನ್ನದಲ್ಲಿ ಕೆತ್ತಿ ಮೆಕ್ಕಾ ದೇವ ಸ್ಥಾನದ ಗೋಡೆಯ ಮೇಲೆ ತಗುಲ ಹಾಕುತ್ತಿದ್ದರು. ಇದೇ ಕವಿಗೆ ದೊರೆಯುತ್ತಿದ್ದ ಬಹು ದೊಡ್ಡ ಗೌರವ. ಇಂಥ ಬಹುಮಾನ ಪಡೆದ ಕವನಗಳು (ಮುಅಲ್ಲಕಾತ್-ತೂಗಹಾಕಿದವು) ಬಹು ಸ್ವಲ್ಪವೇ. ಇವುಗಳನ್ನು ರಚಿಸಿದವರಲ್ಲಿ ಈಗ ನಮಗೆ ತಿಳಿದುಬಂದಿರುವವರು— ಇಮ್ರಾ ಉಲ್ ಕೈಸ್, ತೆಫ್ರಾರ್, ಕುಲ್‌ಸುಮ್ ಮಗ ಅಮ್‌ರ್, ಸುಹೇಯ್‌ರ್, ಹಾರಿಸ್, ಅಂತರಹ್ ಮತ್ತು ಲಬೀದ್. ಪ್ರಥಮ ಸ್ಥಾನ ವನ್ನು ಪಡೆಯದಿದ್ದರೂ ಉತ್ತಮವೆಂದು ಪರಿಗಣಿತವಾಗಿ ಜನರ ಮೆಚ್ಚಿಗೆಯನ್ನು ಪಡೆದ ಕವನಗಳು ಎಷ್ಟೋ ಇವೆ. ಕವಿಗಳು ಮಾತ್ರ

ವಲ್ಲದೆ ಅನೇಕ ಕವಯಿತ್ರಿಗಳೂ ಇದ್ದು ಅವರಲ್ಲಿ ಖಾನ್‌ಸಾ ಎಂಬವಳು ಹೆಸರುಗೊಂಡಿದ್ದಾಳೆ.

ಕಾವ್ಯವಸ್ತು ಬಹುತರವಾಗಿ ಮರಳುಗಾಡಿನ ಬಾಳನ್ನು ಕುರಿತದ್ದಾಗಿ—ಒಂಟೆ, ಕುದುರೆಗಳು, ಬಿರುಗಾಳಿ ಮಳೆ, ಬುಡಕಟ್ಟಿನ ಬದುಕು, ದಂಡು, ದಾಳಿ, ಕೊಳ್ಳೆ, ಸಾಹಸ, ವೀರ್ಯ, ಪ್ರೇಮ, ವಿರಹ, ಸ್ವಾಮಿಭಕ್ತಿ, ದಾನಸ್ತುತಿ, ಆತಿಥ್ಯ—ಇವೇ ಮೊದಲಾದವಾಗಿದ್ದುವು. ಹೇಡಿತನ. ನೀಚತನ, ಅಂಗಹೀನತೆಗಳನ್ನು ಹಾಸ್ಯಮಾಡುತ್ತಿದ್ದರು. ಇಸ್ಲಾಂ ಪೂರ್ವದ ಕವಿಗಳನ್ನು ಅಲ್‌ಜಾಹಿಲೀಯ(ಅಜ್ಞಾನ)ದವರೆಂದೂ, ಇಸ್ಲಾಮಿಗೆ ಮೊದಲು ಹುಟ್ಟಿದ, ಆದರೆ, ಇಸ್ಲಾಂ ಮತವನ್ನು ಸ್ವೀಕರಿಸಿದ ಕವಿಗಳನ್ನು ಮೊಖಜ್ರಮ್ ಅಮಿಾನದವರೆಂದೂ ಕರೆಯುತ್ತಾರೆ. ಈ ಎರಡನೆಯವರಲ್ಲಿ ಸಾಬಿತ್ ಬಿನ ಹಸನ್ನನೂ ಲಬೀದನೂ ಹೆಸರಾಗಿದ್ದಾರೆ.

ಮಹಮ್ಮದನು ಕಾವ್ಯ ಗುಣವನ್ನು ಮೆಚ್ಚಿದರೂ ತನ್ನ ಕಾಲದ ಕವಿಗಳ ಜೀವನವನ್ನಾಗಲಿ ಕಾವ್ಯಗಳ ವಸ್ತುವನ್ನಾಗಲಿ ಒಪ್ಪಲಿಲ್ಲ. ಅದರಲ್ಲೂ ಕುರಾನ್ ಕೂಡ ಒಂದು (ಬರಿಯ) ಕಾವ್ಯವೆಂದು ಹೇಳುವುದು ಅವನಿಗೆ ಎಳ್ಳಷ್ಟೂ ಒಪ್ಪಲಿಲ್ಲ. ಕುರಾನಿನಲ್ಲಿ ಕವಿಗಳ ವಿಷಯವಾಗಿ ಈ ಕೆಳಗೆ ಕಂಡ ವಾಕ್ಯಗಳಿವೆ. "ಇನ್ನು ಕವಿಗಳ ವಿಷಯ: ಅವರನ್ನು ಅನುಸರಿಸಿ ಹೋಗುವವರು ದುರ್ಮಾರ್ಗಕ್ಕೆ ಬೀಳುತ್ತಾರೆ. ಅವರಿಗೆ ಜೀವನದಲ್ಲಿ ಗೊತ್ತಾದ ಗುರಿಯಿಲ್ಲದೆ ಮನಬಂದಂತೆ ಅಲೆದು, ಭ್ರಾಂತರಾಗಿ ನೆಲೆಯಿಲ್ಲದೆ ಸಿಕ್ಕಿದ ಕಣಿವೆಯನ್ನು ಹಾಯುವುದನ್ನು ನೀನೇ ಕಂಡಿಲ್ಲವೇ? ಇನ್ನು ಅವರ ಕಾವ್ಯ ವಿಷಯವೋ! ತಾವು ಸ್ವತಃ ಆಚರಿಸದ್ದನ್ನು ಅವರು ಹೇಳುತ್ತಾರೆ.". ಇದರಿಂದ ಕವಿಯ ಕಾವ್ಯವಾಣಿಗೂ ಕವಿಯ ಜೀವನಕ್ಕೂ ಎಷ್ಟು ಅಂತರವಿರುತ್ತೆಂಬುದನ್ನು ಕುರಾನ್ ಮನುಷ್ಯನಿಗೆ ಎಚ್ಚರಿಸಿ ಹೇಳಿ, ಅದು ಅವನನ್ನು ಮೇಲಕ್ಕೆತ್ತುವ ಒಂದು ದೊಡ್ಡ ಗುರಿಯಿಂದಲೇ ಹೊರಟಿತೆಂಬುದು ಗೊತ್ತಾಗುತ್ತದೆ. ಒಂದು ಮಾನವಭಾವನಾಶಕ್ತಿಯಿಂದ ಆದದ್ದು; ಮತ್ತೊಂದು ದಿವ್ಯದರ್ಶನ ಲಬ್ಧವಾದದ್ದು. ಮಹಮ್ಮದನ ಆಸ್ಥಾನ ಕವಿಯಾಗಿದ್ದ ಸಾಬಿತನ

ಮಗ ಹಸನ್ ಇಸ್ಲಾಂ ಮತವನ್ನು ಶ್ಲಾಘಿಸಿಯೂ ಮಹಮ್ಮದನನ್ನು ಸ್ತುತಿಸಿಯೂ ಹಲವು ಕವನಗಳನ್ನು ಕಟ್ಟಿದ್ದಾನೆ.

ಇಸ್ಲಾಂ ನೆಲೆಗೊಂಡ ಮೇಲೆ ಮೊದಲಾಗುವ ಅರಬ್ಬಿ ಸಾಹಿತ್ಯ ಮೂರು ಕಾಲದ್ದಾಗಿ ವಿಭಾಗವಾಗುತ್ತದೆ. ಮೊದಲನೆಯದು ಇಸ್ಲಾಂ ಆರಂಭದಿಂದ ಅಲಿಯ ಮರಣದವರೆಗೆ. ಈ ಕಾಲದಲ್ಲಿ ಹಲವು ಕವಿಗಳೂ ಕವಿಯಿತ್ರಿಗಳೂ ಇರುವರಾದರೂ, ಕುರಾನ್ ಜನರ ಮನಸ್ಸನ್ನು ಬಹುವಾಗಿ ಆಕರ್ಷಿಸಿ ಸಾಮಾನ್ಯ ಕಾವ್ಯದ ಕಡೆಗೆ ಗಮನ ಅಷ್ಟಾಗಿ ಹೋಗಲಿಲ್ಲ. ಅಲ್ಲದೆ ಮೊದಲನೆಯ ನಾಲ್ಕು ಕಲೀಫ಼ರ ಕಾಲದಲ್ಲಿ ಹೊರದಾಳಿ ಒಳ ಆಡಳಿತಗಳಲ್ಲಿಯೇ ಹೆಚ್ಚುಕಾಲ ಕಳೆದು ಹೋಗುತಿದ್ದದ್ದರಿಂದ ಸಾಮಾನ್ಯ ಸಾಹಿತ್ಯದ ಕಡೆಗೆ ದೃಷ್ಟಿ ಅಷ್ಟಾಗಿ ಬೀಳಲೂ ಇಲ್ಲ. ಭಗವದ್ ವಾಣಿಯಾದ ಕುರಾನ್ ಭಾಷೆಯಲ್ಲಿ ಪರಿಶುದ್ಧವೂ ಶೈಲಿಯಲ್ಲಿ ಪರಮ ಸುಂದರವೂ ಆಗಿದ್ದು ಮಾನವ ಪ್ರತಿಭೆಯಿಂದ ಮಾತ್ರ ಆದ ಯಾವುದೂ ಅದಕ್ಕೆ ಸಮತೂಗದೆಂಬ ಭಾವನೆ ಜನರಲ್ಲಿ ನೆಲಸಿತ್ತು. ಇಂದಿಗೂ ಕುರಾನ್ ಅರಬ್ಬಿ ಭಾಷೆಯಲ್ಲಿ ಅನನ್ಯ ಸಾಧಾರಣ ಕಾವ್ಯವಾಗಿ ಉಳಿದಿದೆ. ಅದು ಮೊದಲನೆಯ ಕಲೀಫ಼ ಅಬೂಬಕ್‌ರ್‌ನ ಕಾಲದಲ್ಲಿ ಮೊದಲನೆಯ ಸಲ ಸಂಕಲಿತವಾಗಿ, ತರುವಾಯ ಮೂರನೆಯ ಕಲೀಫ಼ ಉಸ್ಮಾನನ ಕಾಲದಲ್ಲಿ ಪುನಸ್ಸಂಕಲಿತವಾಗಿ ಆ ರೂಪದಲ್ಲೇ ಇಂದಿಗೂ ಉಳಿದುಕೊಂಡು ಬಂದಿದೆ. ಕುರಾನಿನ ಶೈಲಿ ಪ್ರಾಸಬದ್ಧವಾದ ಗದ್ಯಪದ್ಯ ಮಿಶ್ರಶೈಲಿ. ಅಧ್ಯಾಯ ವಿಂಗಡಿಕೆಯಲ್ಲಿ ಕಾಲಾನುಸರಣೆಯಿಲ್ಲ. ಒಂದೇ ಅಧ್ಯಾಯದಲ್ಲಿ ಭಿನ್ನಕಾಲಿಕ ಭಾಗಗಳು ಅಡಕವಾಗಿವೆ. ಒಟ್ಟಿನಲ್ಲಿ ಮೊದಮೊದಲ ಅಧ್ಯಾಯ(ಸುರಾ)ಗಳಲ್ಲಿ ವಾಕ್ಯಗಳು ಚಿಕ್ಕವಾಗಿಯೂ, ಭಾಷೆ ಅಡಕವಾಗಿಯೂ ಭಾವೋತ್ತೇಜಕವಾಗಿಯೂ ವೀರ್ಯವತ್ತಾಗಿಯೂ ಇವೆ. ಅವುಗಳಲ್ಲಿ ಪ್ರಕೃತಿಯ ಸೌಂದರ್ಯ, ಲೀಲೆ, ಘನತೆ ಮೊದಲಾದವನ್ನೂ ಪಾಪ, ಪುಣ್ಯ, ನರಕ, ಸ್ವರ್ಗಗಳನ್ನೂ ಕುರಿತು ಹೇಳಿದೆ. ತರುವಾಯ ಬರುವ ಅಧ್ಯಾಯಗಳು ಲಂಬಿಸಿ ಬೆಳೆದು ನ್ಯಾಯ, ಕಟ್ಟಳೆ, ಪ್ರವಾದಿಗಳ ಪುರಾಣ, ಇತರ ಮುಸ್ಲಿಂ ನೀತಿ ವಿಷಯಗಳು, ಮೊದಲಾದವನ್ನು ಒಳಗೊಂಡು ಗದ್ಯ

ಪ್ರಾಯವಾಗಿದೆ. ಕುರಾನ್ ವಚನಗಳನ್ನು ಬಾಯಲ್ಲಿ ಹಾಡುವುದಕ್ಕೆ ಉಪಯೋಗಿಸುತ್ತಿದ್ದುದರಿಂದ ಅದರ ಬಂಧ ನೇರವಾಗಿ, ಕೇಳಿದೊಡನೆ ಅರ್ಥ ಸ್ಫುರಿಸಿ ಮನಮುಟ್ಟುವಂತಿದೆ.

## ಉಮಯ್ಯರ ಕಾಲ

ಖಿಲಾಫತ್ತಿನ ಮೊದಲನೆಯ ಮುವ್ವತ್ತು ವರ್ಷಗಳಲ್ಲಿ ಅರಬರು ಸಿರಿಯ, ಪ್ಯಾಲೆಸ್ಟೈನ್, ಇರಾನ್, ಈಜಿಪ್ಟ್ ಮೊದಲಾದ ಪ್ರದೇಶಗಳನ್ನು ಗೆದ್ದು ಅಲ್ಲಿ ನೆಲಸಿದ್ದಲ್ಲದೆ, ಆ ದೇಶಗಳ ಸಂಪತ್ತನ್ನು ಅರೇಬಿಯಕ್ಕೆ ತಂದುಹಾಕಿಕೊಂಡು ದರಿದ್ರ ಅರಬರು ಐಶ್ವರ್ಯವಂತರಾದರು. ಇದರಿಂದ ದೇಶದಲ್ಲಿ ಕೊಂಚಮಟ್ಟಿಗೆ ನೆಮ್ಮದಿ ನೆಲಸಿ ಸಾಹಿತ್ಯದ ಕಡೆಗೆ ಗಮನಹೋಗಲು ಅನುಕೂಲಿಸಿತು. ಅಲಿ ತಾನು ಕಲೀಫನಾಗುವುದಕ್ಕೆ ಮೊದಲು ಮಹಮ್ಮದ್ದಿಗೂ ಮೊದಲನೆಯ ಎರಡು ಕಲೀಫರಿಗೂ ಮುಖ್ಯಮಂತ್ರಣಗಾರನಾಗಿದ್ದು ದೇವತಾಶಾಸ್ತ್ರ ವಿಷಯಗಳು, ದಾರ್ಶನಿಕ ಸಮಸ್ಯೆಗಳು— ಇವೇ ಮೊದಲಾದವುಗಳ ಪರಿಶೀಲನೆಯಲ್ಲಿ ತೊಡಗಿದ್ದನು. ಅವನು ಒಳ್ಳೆಯ ವಾಗ್ಮಿಯಾಗಿದ್ದದ್ದು ಮಾತ್ರವಲ್ಲದೆ ಉತ್ತಮ ಕವಿಯೂ ಆಗಿದ್ದನು. ಅಲಿಯದೆಂದು ಹೇಳುವ ಸಯ್ಯದ್ ರಸ್ಸಿ ಎಂಬವನು ಸಂಗ್ರಹಿಸಿದ ಕವನಗಳು, ಭಾಷಣಗಳು, ಪತ್ರಗಳು ಮತ್ತು ವಚನಗಳು ಅರಬ್ಬಿ ಸಾಹಿತ್ಯದ ಮೇಲ್ಮಾದರಿಯವೆಂದು ಎಣಿಕೆಯಾಗಿದೆ. ಅಲಿಯ ತರುವಾಯ ಬಂದ ಮೋಆವಿಯನು ರಾಜಕೀಯ ಆಡಳಿತವೇ ಮೊದಲಾದ ವಿಷಯಗಳಲ್ಲಿ ನಿರತನಾಗಿದ್ದರೂ ವಿದ್ಯಾಸಾಹಿತ್ಯಗಳಿಗೆ ಆಶ್ರಯದಾತನಾಗಿ ಉತ್ತೇಜನ ಕೊಟ್ಟನು. ಇವನ ಕಾಲದಲ್ಲಿ ಮುಸ್ಲಿಂ ಪೂರ್ವದ ಶೈಲಿ ಮತ್ತೆ ಕಾವ್ಯದಲ್ಲಿ ಕಾಣಿಸಿಕೊಂಡು ಮರಳುಗಾಡಿನ ಜೀವನದ ಸರಳತೆ ಹೊಗಳಿಕೆಗೆ ಪಾತ್ರವಾಯಿತು. ಮೋಆವಿಯನಿಗೆ ಐತಿಹಾಸಿಕ ಮತ್ತು ಪೌರಾಣಿಕ ಕಥೆಗಳಲ್ಲಿ ಬಹು ಅಭಿರುಚಿಯಿತ್ತು. ಷಾರ್ಯನ ಮಗ ಅಬೀದ್ ಎಂಬ ವೃದ್ಧ ಕಥೆಗಾರನನ್ನು ಯಮನ್ ಪ್ರಾಂತದಿಂದ ತನ್ನ ಆಸ್ಥಾನಕ್ಕೆ ಕರಸಿ ಅವನು ಹೇಳಿದ ಕಥೆಗಳನ್ನು ಕೇಳಿ ಸಂತೋಷಪಟ್ಟು ಅವನ್ನು ಅವನ

ಕೈಯಿಂದಲೇ ಬರಸಿದನು. ಇದೇ ಮೊದಲನೆಯ ಐತಿಹಾಸಿಕ ಗ್ರಂಥ. ಮೋಆವಿಯನ ಮೊಮ್ಮಗ ಖಾಲಿದನು ರಸತಂತ್ರದ ಮೇಲೆ ಹಲವು ಗ್ರಂಥಗಳನ್ನು ಬರೆದದ್ದಲ್ಲದೆ ಇಸ್ಪ್ರಿಫ್ಲಾನೂಸ್ ಎಂಬವನಿಂದ ತರ್ಕಶಾಸ್ತ್ರ ವನ್ನು ಅರಬ್ಬಿಭಾಷೆಗೆ ಭಾಷಾಂತರಿಸಿದನು. ಇಬ್ನ್ ಕಲ್ ಬಿ(ಸ.ಕ್ರಿ.ಶ. ೭೬೩), ಅವನ ಮಗ ಹಿಷಾಂ (ಸ. ಕ್ರಿ. ಶ. ೮೧೯) ಮೊದಲಾದವರು ಅರಬ ಬುಡಕಟ್ಟುಗಳ ವಂಶಾನುಚರಿತೆಯನ್ನು ಬರೆದರು. ಇಬ್ನ್ ಇಸ್ಹಾಕ್ (ಸ. ಕ್ರಿ. ಶ. ೭೬೭), ಇಬ್ನ್‌ಒಕ್‌ಬ (ಸ. ಕ್ರಿ. ಶ. ೭೫೮) ಎಂಬವರು ಮಹಮ್ಮದನ ಜೀವನ ಚರಿತ್ರೆಯನ್ನು ಬರೆದರು. ಇಬ್ನ್ ಮಿಕ್‌ನಾಫ್ಟ್ (ಸ. ಕ್ರಿ. ಶ. ೭೪೮) ಮೊದಲನೆಯ ಕಲೀಫನ ಕಾಲದಿಂದ ಕ್ರಿ. ಶ. ೭೪೩ ರ ವರೆಗಿನ ಚರಿತ್ರೆಯನ್ನು ಬರೆದಿದ್ದಾನೆ. ಈ ಕಾಲದ ಕವಿಗಳು ಮರಳುಗಾಡಿನ ಜೀವನದ ಸರಳ ಭಾವಗಳನ್ನು ಉಳಿಸಿಕೊಂಡು ಬಂದಿದ್ದರೂ, ಕಾವ್ಯವಸ್ತು ಹಳೆಯ ವಿಷಯಗಳನ್ನು ಮಾತ್ರವೇ ಕುರಿತದ್ದಾಗಿರದೆ, ಕಾವ್ಯಪ್ರಪಂಚ ವಿಸ್ತಾರವಾಗುತ್ತ ಬಂದು ಇಸ್ಲಾಂ ತತ್ತ್ವಗಳು ಕಲೀಫರ ಪ್ರಶಂಸೆಗಳು ಮೊದಲಾದ ಹೊಸ ವಿಷಯಗಳ ಮೇಲೂ ಕಾವ್ಯಗಳು ಹುಟ್ಟಿದುವು.

ಮೋಆವಿಯನ ಮರಣಾನಂತರ ಕುರಾಯಿಷ್ ಮನೆತನದವರು ಖಿಲಾಫತ್ ತಮಗೆ ಸಲ್ಲಬೇಕೆಂದು ವಾದಹೂಡಿದರು. ಅಧಿಕಾರದಲ್ಲಿದ್ದವರು ಉಮಯ್ಯರು. ಇವರ ಮೇಲೆ ಹಾಷಿಮಿಯರೂ ಸ್ಸುಬೈರಿಯರೂ ಪ್ರತಿಸ್ಪರ್ಧಿಸಿ ಎದುರಾಳಿಗಳಾಗಿ ನಿಂತರು. ಕವಿಗಳು ಒಬ್ಬೊಬ್ಬರು ಒಬ್ಬೊಬ್ಬರ ಪಕ್ಷವನ್ನು ವಹಿಸಿ ತಮ್ಮ ಕಾವ್ಯಶಕ್ತಿಯನ್ನು ತಮ್ಮ ಮೆಚ್ಚಿಗೆಗೆ ಪಾತ್ರರಾದ ಮನೆತನದವರ ಗುಣಪ್ರಶಂಸೆಯಲ್ಲಿ ವಿನಿಯೋಗಿಸಿರುತ್ತಾರೆ. ಈ ಕಾಲದಲ್ಲಿ ಪ್ರಣಯ ಕಾವ್ಯಗಳೂ ಅನೇಕ ಹುಟ್ಟಿವೆ. ಉದಾಹರಣೆಗೆ ಇಬ್ನ್ ಅಬೂ ರಬೀಯ ಎಂಬ ಕವಿ ಅರಸು ಮಗಳೊಬ್ಬಳ ಸೌಂದರ್ಯವನ್ನು ವರ್ಣಿಸಿ ಕವನ ಕಟ್ಟಿದ್ದಾನೆ. ಲೈಲಾ ಎಂಬವಳು ತನ್ನ ಪ್ರೇಮಿಯಾದ ತೂಬನನ್ನು ಕುರಿತು ಕವನ ಕಟ್ಟಿ ಹಾಡಿದ್ದಾಳೆ.

## ಅಬ್ಬಾಸಿಯರ ಕಾಲ

ಈ ಕಾಲವನ್ನು ಅರಬ್ಬಿ ಸಾಹಿತ್ಯದಲ್ಲಿ ಸ್ವರ್ಣಯುಗವೆನ್ನ ಬಹುದು. ಉಮಯ್ಯರ ಕಾಲದಲ್ಲಿ ನೆಲವನ್ನುತ್ತು ಬಿತ್ತಿದ ಬೀಜ ಮೊಳೆತು ಬೆಳೆದು ಹಣ್ಣು ಬಿಟ್ಟದ್ದು ಈ ಕಾಲದಲ್ಲಿ. ಉಮಯ್ಯರ ಕಾಲದಲ್ಲಿ ಶೈಲಿಭಾವಗಳಲ್ಲಿ ಅರಬ ಪ್ರಭಾವ ಮೂಡಿ ಕಾಣುತ್ತಿತ್ತು. ಆದರೆ ಅಬ್ಬಾಸಿಯರ ಕಾಲದಲ್ಲಿ ಇರಾನಿಯನ್ ಪ್ರಭಾವವೇ ಹೆಚ್ಚಾಗಿ ಬಿದ್ದು ಅರಬ, ಯಹೂದ್ಯ, ಅರಾಮಿಕ್, ಸಿರಿಯನ್ ಮೊದಲಾದ ಸೆಮಿಟಿಕ್ ಸಂಸ್ಕೃತಿಯೂ ಪಾರಸಿಕ, ಹಿಂದೂ, ಗ್ರೀಕ್ ಮೊದಲಾದ ಆರ್ಯ ಸಂಸ್ಕೃತಿಯೂ ಬೆರೆತು, ಇಸ್ಲಾಂ ತತ್ತ್ವಗಳನ್ನು ಆಧಾರ ಮಾಡಿ ಕೊಂಡು ಒಂದು ಹೊಸ ಸಂಸ್ಕೃತಿ ರೂಪುಗೊಂಡಿತು. ಅಬ್ಬಾಸಿದ್ ಮನೆತನದ ಮೊದಲನೆಯ ಖಲೀಫರೂ ಸ್ವತಃ ವಿದ್ವಾಂಸರಾಗಿದ್ದು ವಿದ್ಯಾಸಾಹಿತ್ಯಗಳಿಗೆ ಆಶ್ರಯದಾತರಾಗಿದ್ದರು. 'ಜ್ಞಾನಮಂದಿರ' ವೊಂದನ್ನು ಸ್ಥಾಪಿಸಿ ಅನೇಕ ವಿದ್ವಾಂಸರನ್ನೂ ಕವಿಗಳನ್ನೂ ಕರಸಿ ನೇಮಿಸಿ ಸಿರಿಯನ್, ಇರಾನಿ, ಹಿಂದೂ ಮೊದಲಾದ ಭಾಷೆಗಳಿಂದ ಗ್ರಂಥಗಳನ್ನು ಅರಬ್ಬಿಗೆ ಭಾಷಾಂತರ ಮಾಡಿಸಿದರು. ಬಹು ದೂರ ದೇಶಗಳಿಂದ ಅನೇಕ ವಿದ್ವಾಂಸರೂ ಕವಿಗಳೂ ಬಾಗ್ದಾದಿನಲ್ಲಿ ಬಂದು ನೆರೆಯುತ್ತಿದ್ದರು. ಖಲೀಫನ ಅಧ್ಯಕ್ಷತೆಯಲ್ಲಿ ಸಭೆ ಸೇರಿ ದೇವತಾಶಾಸ್ತ್ರ, ದರ್ಶನ ಮೊದಲಾದ ವಿಷಯಗಳ ಮೇಲೆ ಮುಸ್ಲಿಮರಲ್ಲೇ ಬೇರೆಬೇರೆ ಪಕ್ಷದವರಿಗೂ, ಮುಸ್ಲಿಮರಿಗೂ ಮುಸ್ಲಿಮೇತರರಿಗೂ, ಚರ್ಚೆಗಳು ನಡೆದು ಭಿನ್ನಾಭಿಪ್ರಾಯಗಳ ಪ್ರದರ್ಶನ ಪ್ರತಿಪಾದನೆಗಳಿಗೆ ಸಂಪೂರ್ಣ ಅವಕಾಶವೂ ಸ್ವಾತಂತ್ರ್ಯವೂ ಸಿಕ್ಕಿ ಜ್ಞಾನಾಭಿವೃದ್ಧಿಗೂ ಜ್ಞಾನ ಪ್ರಸಾರ ವಿಸ್ತಾರಗಳಿಗೂ ಅವಕಾಶವಾಯಿತು.

ಅಬ್ಬಾಸಿಯರ ಇಳಿಗಾಲದಲ್ಲಿ, ಇರಾನಿನಲ್ಲಿ ಖಲೀಫನ ನಾಮ ಮಾತ್ರ ಸ್ವಾಮಿತ್ವದಲ್ಲಿ ಸಾಮಾನ್, ಘಸ್ನ, ಬುವೈಹಿ, ದಯಲಮಿ, ಹಮದಾನಿ, ಮೊದಲಾದ ಹಲವು ಸಣ್ಣ ದೊಡ್ಡ ಮನೆತನದ ಸಂಸ್ಥಾನ ಗಳು ಹುಟ್ಟಿಕೊಂಡುವು. ಇವು ತಮ್ಮ ತಮ್ಮ ಆಸ್ಥಾನಗಳಲ್ಲಿ ಅನೇಕ ಕವಿಗಳನ್ನೂ ಪಂಡಿತರನ್ನೂ ಇಟ್ಟುಕೊಂಡು ಒಂದನ್ನೊಂದು ಮೀರಿಸಲು

ಪ್ರಯತ್ನಪಟ್ಟಿದ್ದರಿಂದ ಸಾಹಿತ್ಯಾಭಿವೃದ್ಧಿಗೆ ಅವಕಾಶವಾಯಿತು. ಉಮಯ್ಯರ ಕಾಲದಲ್ಲಿ ಉಳಿದುಕೊಂಡು ಬಂದಿದ್ದ ಅರಬಸಾಹಿತ್ಯದ ಹಳೆಯ ಶೈಲಿ, ವಿಶಾಲದೃಷ್ಟಿಯು ಅಬ್ಬಾಸಿಯರ ಕಾಲದಲ್ಲಿ ಉಳಿದು ಕೊಂಡು ಬರಲಿಲ್ಲ. ಕಾವ್ಯಪ್ರಪಂಚ ವಿಸ್ತಾರಹೊಂದಿ ಜೀವನದ ನಾನಾ ಮುಖಗಳು, ಗತಿಗಳು, ಭಾವಗಳು—ಆಸ್ಥಾನದ ವೈಭವ, ದಾತಾರನ ಔದಾರ್ಯ, ಪ್ರೇಮಿಗಳ ಪ್ರಣಯ, ಮದ್ಯ, ಸ್ತ್ರೀ—ಇವೇ ಮೊದಲಾದ ಜೀವನದ ಸಮಸ್ತ ಅನುಭವಗಳೂ ಕಾವ್ಯವಸ್ತುಗಳಾದುವು. ಹೊಸ ಹೊಸ ರೂಪಕಗಳೂ ಉಪಮೆಗಳೂ ಅಲಂಕಾರಗಳೂ ಹುಟ್ಟಿಕೊಂಡುವು. ಅಧ್ಯಾತ್ಮ ವಿಷಯಗಳೂ ದರ್ಶನತತ್ವಗಳೂ ಸರಳಕಾವ್ಯವನ್ನು ಹೊಕ್ಕುವು.

ಈ ಕಾಲದ ಕವಿಗಳಲ್ಲಿ ಇರಾನಿಯನ್, ಸ್ಪಾನಿಷ್, ಆಫ್ರಿಕನ್ ಮೊದಲಾದವರು ಹಲವರಿದ್ದಾರೆ. ಎಲ್ಲರ ಅಥವಾ ಒಬ್ಬೊಬ್ಬರಮೂ ವಿಸ್ತಾರವಾದ ಪ್ರಸ್ತಾಪಕ್ಕೆ ಇಲ್ಲಿ ಎಡೆಯಿಲ್ಲವಾಗಿ ಮುಖ್ಯರಾದವರಲ್ಲಿ ಕೆಲವರನ್ನು ಮಾತ್ರ ಕುರಿತು ಹೇಳುತ್ತದೆ.

(೧) ಅಬೂನುವಾಸ್: (ಸತ್ತದ್ದು—ಕ್ರಿ. ಶ. ೮೧೦) ಇರಾನಿನ ದಕ್ಷಿಣ ಪರ್ಷಿಯದ ಅಹ್‌ವಾಸ್ಸಿನಲ್ಲಿ ಹುಟ್ಟಿದವನು; ತಾಯಿ ಪರ್ಷಿಯನ್ನಳು; ಇವನು ಬಸ್ರಾದಲ್ಲಿ ವಿದ್ಯಾಭ್ಯಾಸ ಮಾಡಿದನು. ಇವನು ಭಾವಗೀತೆಯ ಕವಿ. ಇವನ ದಿವಾನ್ ಎಂದರೆ ಕಾವ್ಯಸಂಗ್ರಹಗಳಲ್ಲಿ ಪ್ರೇಮ, ಮದ್ಯ, ಬೇಟೆ, ಮೊದಲಾದ ವಿಷಯಗಳನ್ನು ಕುರಿತ ಪ್ರಶಂಸೆ, ವಿಡಂಬನೆ, ಹಾಸ್ಯ ಮೊದಲಾದ ರೂಪದ ಕಾವ್ಯಗಳು ಹಲವಿವೆ. ಇವನು ಹರೂನಿನ ಸಮಕಾಲಿಕನಾಗಿದ್ದನು.

(೨) ಅಬ್ದುಲ್ ಅತಾಹಿಯ ಇಸ್ಮಾಯಿಲ್ (ಕ್ರಿ. ಶ. ೭೪೮-೮೨೮): ಇವನು ಅನಸ್ಸಾ ಬುಡಕಟ್ಟಿನ ಅರಬ. ಹೆಜಾಸ್ಸಿನಲ್ಲಿ ಹುಟ್ಟಿ ಕೂಫ್ಹದಲ್ಲಿ ವಾಸಿಸುತ್ತಿದ್ದನು. ಇವನ ಶೈಲಿ ಸುಲಭ, ಭಾವ ನಿರಾಶಾ ದೃಷ್ಟಿ. ಅರಬನಾಗಿದ್ದರೂ ಇವನು ಪರ್ಷಿಯನ್ ಮಾನಿಯ ತತ್ತ್ವಗಳನ್ನು ನಂಬಿದ್ದನು.

(೩) ಇಯಾಸಿನ ಮಗ ಮೂತಿ: ಇವನು ಪ್ಯಾಲೆಸ್ಟೈನಿನವನು. ಅಬೂ ನುವಾಸಿನಂತೆ ಇವನೂ ಪ್ರೇಮ, ಮದ್ಯ ಮೊದಲಾದವನ್ನು ಕುರಿತು ಬರೆದಿದ್ದಾನೆ.

(೪) ಹುಸೇನನ ಮಗ ಅಹಮ್ಮದ್ ಮುತನಬ್ಬಿ (ಕ್ರಿ. ಶ. ೯೧೬-೯೬೫): ಕೂಫಾದಲ್ಲಿ ಹುಟ್ಟಿ ಬೆಳೆದವನು. ಅರಬ ಉತ್ಕೃಷ್ಟ ಕವಿಗಳಲ್ಲಿ ಒಬ್ಬನೆಂದು ಎಣಿಕೆಯಾಗಿದ್ದಾನೆ. ಆದರೆ ಇವನ ಶೈಲಿ ಅತಿ ವಾಗಾಡಂಬರದ್ದೂ ಅತ್ಯಲಂಕಾರಪೂರಿತವೂ ಆದದ್ದೆಂದು ಕೆಲವರ ಅಭಿಪ್ರಾಯ. ಇವನ ಕಾವ್ಯಗಳಿಗೆ ನಲವತ್ತು ಮಂದಿಗಳಿಗೆ ಮೇಲ್ಪಟ್ಟು ವ್ಯಾಖ್ಯಾನ ಟೀಕೆಗಳನ್ನು ಬರೆದಿದ್ದಾರೆ. ಇವನು ಹಮದಾನಿ ಮನೆತನದ ಸೈಫುದ್ ದೌಲ ದೊರೆಯ ಆಸ್ಥಾನದಲ್ಲಿ ಒಂಬತ್ತು ವರ್ಷಗಳಿದ್ದನು. ಕೆಲವು ಕಾಲ ಈಜಿಪ್ಟಿನಲ್ಲಿದ್ದು ತರುವಾಯ ಷಿರಾಸ್ಸಿನಲ್ಲಿ ಅಸ್ಸದುದ್ ದೌಲನ ಆಸ್ಥಾನದಲ್ಲಿದ್ದನು. ಬಗ್‌ದಾದಿಗೆ ಹಿಂದಿರುಗುತ್ತಿದ್ದಾಗ ದಾರಿಯಲ್ಲಿ ಇವನು ಕೊಲೆಯಾದನು.

(೫) ಅಬುಲ್ ಉಲಾಅಲ್‌ಮೋಅರ್ರಿ (ಕ್ರಿ. ಶ. ೯೭೩): ಇವನು ಸಿರಿಯುದವನು. ಚಿಕ್ಕಂದಿನಲ್ಲೇ ಕಣ್ಣು ಕಳೆದುಕೊಂಡರೂ ಕಾವ್ಯ, ದರ್ಶನ, ಪುರಾಣ ಮೊದಲಾದವುಗಳನ್ನು ವ್ಯಾಸಂಗಮಾಡಿ ಅವುಗಳ ಮೇಲೆ ವ್ಯಾಖ್ಯಾನ ಕೊಡುತ್ತಿದ್ದನು. ಉಮರ್‌ಖಯಾಮಿಗೆ ನಲವತ್ತು ವರ್ಷಕ್ಕೆ ಮುಂಚೆಯೇ ಹುಟ್ಟಿದ ಇವನು ಹಲವು ತೆರದಲ್ಲಿ ಪರ್ಷಿಯದ ಉಮರ್‌ಖಯಾಮನನ್ನು ಹೋಲುತ್ತಾನೆ. ಇಬ್ಬರೂ ಸ್ವಲ್ಪ ವರಮಾನದಿಂದ ತೃಪ್ತರಾಗಿದ್ದವರು; ಜೀವನ ವಿಷಯದಲ್ಲಿ ನಿರಾಶಾದೃಷ್ಟಿಯುವರಾದರೂ ದೊಡ್ಡ ನೀತಿಜ್ಞರು. ಆದರೆ, ಜನಕ್ಕೆ ಮಾತ್ರ ಇವರಿಬ್ಬರೂ ಸ್ವೇಚ್ಛಾಭಾವಿಗಳು (ಫ್ರೀ ಥಿಂಕರ್ಸ್) ಲೋಕವಾದಿಗಳು ಎಂಬ ಸಂದೇಹವಿತ್ತು. ಇವರಿಬ್ಬರೂ ವಿಧಿಯನ್ನು ನಂಬಿದ್ದರು; ಜೀವನದ ರಹಸ್ಯ ಮಾನವ ಬುದ್ಧಿಗೆ ಮೀರಿದ್ದೆಂದು ತಿಳಿದಿದ್ದರು. ಅಬುಲ್ ಉಲಾಲನು ತನ್ನ ಜೀವಮಾನವನ್ನೆಲ್ಲ—ಬ್ರಹ್ಮಚಾರಿಯಾಗಿ ಸಂನ್ಯಾಸಿಯಂತೆಯೇ ಕಳೆದನು. ಅವನಿಗೆ ಪುನರುತ್ಥಾನದಲ್ಲಿ ನಂಬಿಕೆಯಿರಲಿಲ್ಲ. ಮತ ಮನುಷ್ಯ ಮಾಡಿದ್ದು; ಆದ್ದರಿಂದ ನಂಬಿಕೆಯಿಂದಲೇ ಒಬ್ಬರು

ಮೇಲೂ ಅಲ್ಲ ಕೀಳೂ ಅಲ್ಲ ಎಂಬುದೇ ಇವನ ಅಭಿಪ್ರಾಯ. ತನ್ನ ಕೃತಿಗಳಲ್ಲಿ ತನ್ನ ಕಾಲದ ಸಮಾಜಪರಿಸ್ಥಿತಿಯನ್ನು ವರ್ಣನೆ ಮಾಡಿದ್ದಾನೆ. ಉಮರ್‌ಖಯಾಮಿನಂತೆ ಇವನೂ ರಾಜಕೀಯದಲ್ಲಿ ಕೈಹಾಕಿಲ್ಲ.

ಈಜಿಪ್ಟಿನ ಇಸಾಕ್ ಮಗ ರಷೀದ್ (೮೫೦) ; ಸ್ಪೈನ್ನಿನ ಇಬ್ನ್ ಸ್ಲಯದೂನ್ ಮತ್ತು ಹಾನೀ ಮಗ ಮಹಮ್ಮದ್ (೯೭೩) ; ಬಗ್‌ದಾದಿನ ಕಲೀಫ಼್ ಅಲ್‌ಮೋತಸ್ಸಿನ ಮಗ ಅಬ್ದುಲ್ಲ; ಇಬ್ನ್ ಕುಷಾಜಿಮ್ ಮಹ್‌ಮೂದ್ (೯೬೧) ಫ಼ರೀದನ ಮಗ ಉಮರ್ (೧೧೮೧-೧೨೩೫) ಮೊದಲಾದ ಇನ್ನೂ ಹಲವು ಕವಿಗಳು ಇದ್ದಾರೆ.

ಈ ಕಾಲದಲ್ಲಿ ಪ್ರಾಸಬದ್ಧ ಗದ್ಯ ಬಹಳ ಮೆಚ್ಚಿಗೆಯಾಗಿ, ಆ ಶೈಲಿಯಲ್ಲಿ ಅನೇಕ ಕೃತಿಗಳು ಬರೆದಿವೆ. ಇಬ್ನೇ ನಬಾತನ (ಕ್ರಿ. ಶ. ೯೩೮-೧೦೦೫) ಉಪದೇಶಗಳೂ ಹಮ್‌ದಾನಿನ ಬದ್‌ರುಸ್ಲ್‌ಸ್ಲಮಾನಿನ ಮಕಾಮಾತ್ ಅಥವಾ ಲಘುನ್ಯಾಸಗಳೂ ಈ ಶೈಲಿಯವು. ಈ ಲಘುನ್ಯಾಸಗಳಲ್ಲಿ ಅವನ ಕಥಾನಾಯಕನು ಊರಿಂದೂರಿಗೆ ತಿರುಗುತ್ತ ಜನಗಳಿಗೆ ಉಪದೇಶಿಸುತ್ತ ಹೋಗುತ್ತಿರುವಂತೆ ಹೇಳಿದೆ. ಈ ನ್ಯಾಸಗಳು ಅರ್ಧ ನಾಟಕರೂಪದವೂ ಅರ್ಧ ಕಾದಂಬರಿರೂಪದವೂ ಆಗಿ, ಬಹು ಆಡಂಬರದ ಮತ್ತು ಜಟಿಲ ಭಾಷೆಯಲ್ಲಿ ಬರೆದಿವೆ. ಈ ಬದ್‌ರುಸ್ಲ್ ಸ್ಲಮಾನನ್ನೇ ಅನುಕರಿಸಿ ಬರೆದ ಮಹಮ್ಮದ್ ಕಾಸಿಮ್ ಅಲ್‌ಹರೀರಿ (ಕ್ರಿ. ಶ. ೧೦೫೪-೧೧೨೨) ಬರೆದ ಪುಸ್ತಕ ಮೂಲವನ್ನು ಮೀರಿಸಿ ಅರಬ್ಬಿ ಸಾಹಿತ್ಯದ ಉತ್ಕೃಷ್ಟಕಾವ್ಯಗಳಲ್ಲಿ ಒಂದೆಂದು ಪರಿಗಣಿತವಾಗಿದೆ.

ಅರಬ್ಬಿ ಸಾಹಿತ್ಯದ ಆಧುನಿಕ ಕಾಲ ಈಜಿಪ್ಟಿಗೆ ನೆಪೋಲಿಯನ್ ದಾಳಿಯಿಟ್ಟು, ಬ್ರಿಟಿಷರು ಆಕ್ರಮಿಸಿಕೊಂಡಂದಿನಿಂದ ಪ್ರಾರಂಭವಾಗುತ್ತದೆ. ಈ ಕಾಲದಲ್ಲಿ ಮೊದಮೊದಲು ಪ್ರಾಚೀನಶೈಲಿ ಮತ್ತೆ ಬಳಕೆಗೆ ಬಂತು. ಯಸ್ಲಿಜಿ ಎಂದು ಕರೆಯುವ, ಅಬ್ದುಲ್ಲನ ಮಗ ನಾಸಿಫ಼್ (೧೮೦೦-೧೮೭೧) ಈ ಕಾಲದವರಲ್ಲಿ ಪ್ರಸಿದ್ಧ ಕವಿ. ಬಹಳ ಬೇಗ ಯೂರೋಪ್ ಸಾಹಿತ್ಯದ ಪ್ರಭಾವ ಅರಬ್ಬಿ ಸಾಹಿತ್ಯದ ಮೇಲೆ ಬಿತ್ತು. ಇದರ ಪರಿಣಾಮವಾಗಿ ಹೊಸ ಹೊಸ ಛಂದಸ್ಸುಗಳು ಹುಟ್ಟಿಕೊಂಡವು ; ಪ್ರಾಸದ ಪ್ರಾಧಾನ್ಯ ಕಡಮೆಯಾಯಿತು ; ಕೆಲವುವೇಳೆ ಸಂಪೂರ್ಣವಾಗಿ

ಪ್ರಾಸ ಬಿಟ್ಟೇಹೋಯಿತು. ಕಾದಂಬರಿಗಳೂ, ನಾಟಕಗಳೂ,—ರುದ್ರ ನಾಟಕಗಳು ಕೂಡ,—ಸಣ್ಣ ಕತೆಗಳೂ, ಸಾಹಿತ್ಯವಿಮರ್ಶೆಗಳೂ ಬಳಕೆಗೆ ಬಂದುವು. ಸಾಮಾನ್ಯವಾಗಿ ಷೇಕ್ಸ್ಪಿಯರ್, ಅಲೆಕ್ಸಾಂಡರ್ ಡ್ಯೂಮಾ, ವಿಕ್ಟರ್ ಹ್ಯೂಗೊ ಮೊದಲಾದ ಪಾಶ್ಚಾತ್ಯ ಕವಿಗಳ ಅನುವಾದ ಅನುಕರಣಗಳೇ ಹೆಚ್ಚೆನ್ನಬಹುದು. ಈಚೀಚೆಗೆ ಪರಿಶೋಧನೆ, ನಿಘಂಟು, ಭಾಷಾ ಚರಿತ್ರೆ, ಭಾಷಾ ಶಾಸ್ತ್ರ ಮೊದಲಾದ ವಿಷಯಗಳಲ್ಲಿ ಬಹಳ ಕೆಲಸ ನಡೆದಿದೆ.

## ತುರ್ಕೀ ಸಾಹಿತ್ಯ

ತುರ್ಕೀ ಭಾಷೆ ಯೂರಲ್ ಅಲ್ಟೈಕ್ ಭಾಷಾ ವರ್ಗಕ್ಕೆ ಸೇರಿದ್ದು. ಇದರಲ್ಲಿ ಹಲವು ಪ್ರಾಂತ ಭೇದಗಳಿವೆ. ತುರ್ಕೀ ಭಾಷೆಯನ್ನಾಡುವ ಹೆಚ್ಚು ಪಾಲು ಜನರು ರಷ್ಯ ಮತ್ತು ಪೂರ್ವ ಚೀನದಲ್ಲಿದ್ದಾರೆ. ಇರಾನ್, ಈಜಿಪ್ಟ್, ಇಂಡಿಯ, ಮೊದಲಾದ ದೇಶಗಳಲ್ಲಿಯ ಮುಸ್ಲಿಮರಂತೆ ತುರ್ಕೀ ಮುಸ್ಲಿಮರೂ ಅರಬ್ಬೀ ಲಿಪಿಯನ್ನೇ ಉಪಯೋಗಿಸುತ್ತಿದ್ದರು. ಅರಬೀತರ ಭಾಷೆಗಳಿಗೆ ಅರಬಲಿಪಿ ಹೊಂದದಿದ್ದರೂ, ಅರಬ ಭಾಷೆಯಲ್ಲಿರುವ ಕುರಾನ್ ಮತ್ತು ಇತರ ಧರ್ಮ ಗ್ರಂಥಗಳನ್ನು ಓದುವುದಕ್ಕೆ ಅನುಕೂಲಿಸುವುದರಿಂದ ಆ ಲಿಪಿಯನ್ನೇ ಸ್ವಭಾಷೆಗೂ ಉಪಯೋಗಿಸುತ್ತಿದ್ದರು.

ಕಿಲಾಫತ್ ಬಿದ್ದನಂತರ ತುರ್ಕಿಯ ಸೆಲ್‍ಜೂಕರು ಇರಾನನ್ನು ಗೆದ್ದು ದೊಡ್ಡ ಸಾಮ್ರಾಜ್ಯ ಕಟ್ಟಿದರು. ಅಲ್ಲದೆ ಇರಾನ್ ಸಂಸ್ಕೃತಿಯನ್ನು ಹೀರಿಕೊಂಡು ಪರ್ಷಿಯನ್ ಭಾಷೆಯನ್ನು ಹೊಂದಿಸಿ ಬಳಸಿಕೊಂಡರು. ಉಸ್ಮಾನ್ಲಿ-ತುರ್ಕರು ಇರಾನಿನ ಈ ಸೆಲ್‍ಜೂಕರ ಮರೆಹೊಕ್ಕು ಅಲ್ಲಿ ನೆಲಸಿ, ಅವರಿಂದ ತುರ್ಕೀ-ಇರಾನಿಯನ್ ಸಂಸ್ಕೃತಿಯನ್ನು ಪಡೆದರು. ಈಗಿನ ತುರ್ಕಿ ಪ್ರಾಚೀನ ಇರಾನಿಗಳು, ಗ್ರೀಕರು, ರೋಮನರು, ಇನ್ನೂ ಹಲವು ಸೆಮಿಟಿಕ್ ಜನಾಂಗಗಳು, ಸೆಲ್‍ಜೂಕ್ ತುರ್ಕರು, ಉಸ್ಮಾನ್ಲಿ ತುರ್ಕರು—ಇವರೇ ಮೊದಲಾದ ಜನತೆಗಳ ಸಂಕರವಾಗಿದೆ. ಕಮಾಲ್ ಪಾಷಾ ಪಕ್ಷದವರು, ಉಡುಪು, ಆಚಾರ ವ್ಯವಹಾರ, ಸಮಾಜ ವ್ಯವಹಾರ, ಎಲ್ಲದರಲ್ಲೂ ಎಲ್ಲರಲ್ಲೂ ಏಕತೆ

ಯನ್ನು ತಂದು ತುರ್ಕಿಯನ್ನು ಒಂದು ಜನತೆಯನ್ನಾಗಿ ಮಾಡಲು ಪ್ರಯತ್ನಿಸಿ ಅದನ್ನು ಸಾಧಿಸಿದ್ದಾರೆ.

ತುರ್ಕೀ ಸಾಹಿತ್ಯವನ್ನು ಮೂರು ಕಾಲವಾಗಿ ವಿಭಾಗಿಸಬಹುದು. ಮೊದಲನೆಯ ಕಾಲ ಆಟೊಮನ್ ಸಾಮ್ರಾಜ್ಯದ ಆರಂಭದಿಂದ (ಕ್ರಿ.ಶ. ೧೩೦೦) ಸುಲ್ತಾನ್ ಮಹ್ಮೂದನ (ಕ್ರಿ.ಶ. ೧೮೦೮-೩೯) ಆಳಿಕೆಯ ವರೆಗಿನದು. ಪರ್ಷಿಯನ್-ತುರ್ಕಿ ಎಂದು ಕರೆಯಬಹುದಾದ ಈ ನಿಡುಗಾಲದಲ್ಲಿ ಪರ್ಷಿಯನ್ ಪ್ರಭಾವವೇ ಹೆಚ್ಚಾಗಿದೆ. ಒಟ್ಟಿನಲ್ಲಿ, ಆಟೊಮನ್ ರಾಜರು ವಿದ್ಯೆಗೆ ಆಶ್ರಯದಾತರಾಗಿದ್ದದ್ದು ಮಾತ್ರವಲ್ಲದೆ, ಹಲವರು ತಾವೇ ಪರ್ಷಿಯನ್‌ನಲ್ಲಿ ಬರಹಗಾರರೂ ಆಗಿದ್ದರು. ಉದಾಹರಣೆಗೆ, ಸುಲ್ತಾನ್ ಸಲೀಮನು ಒಳ್ಳೆಯ ಪರ್ಷಿಯನ್ ಪಂಡಿತನೂ ಕವಿಯೂ ಆಗಿದ್ದು ಅನೇಕ ಕಾವ್ಯಗಳನ್ನು ಬರೆದಿದ್ದಾನೆ. ಈ ಕಾಲದ ತುರ್ಕೀ ಕವಿಗಳು ಮತ್ತು ಗ್ರಂಥಕರ್ತರು ಶೈಲಿಯಲ್ಲಿ ಮಾತ್ರವಲ್ಲದೆ ಕಾವ್ಯ ವಸ್ತುವಿನಲ್ಲೂ ಪರ್ಷಿಯನ್ ಅನುಕರಣೆ ಮಾಡಿ, ತಮ್ಮ ಕಥೆಗಳನ್ನೂ ಕಥಾನಾಯಕರನ್ನೂ ಇರಾನ್ ಪುರಾಣಗಳಿಂದ ತೆಗೆದುಕೊಂಡಿದ್ದಾರೆ. ತುರ್ಕಿ ಮಾತುಗಳಿಗಿಂತ ಅರಬ್ಬಿ ಪರ್ಷಿಯನ್ ಮಾತುಗಳೇ ಹೆಚ್ಚಾಗಿರುವ ಎಷ್ಟೋ ಗ್ರಂಥಗಳು ತುರ್ಕೀ ಭಾಷೆಯಲ್ಲಿವೆ. ಪ್ರತಿಯೊಂದು ಪರ್ಷಿಯನ್ ರೀತಿ ನೀತಿಯೂ—ಒಳ್ಳೆಯದಾಗಲಿ ಕೆಟ್ಟದಾಗಲಿ—ತುರ್ಕೀ ಸಾಹಿತ್ಯದಲ್ಲಿ ಅನುಕರಣವಾಗಿ ಸೇರಿಕೊಂಡು ಬಂತು. ಈ ಪರ್ಷಿಯನ್ ಸಂಸ್ಕೃತಿಯ ಒಳಹರಿತ ಹೊಂದಿಕೆಗಳಿಗೆ ಮೊದಲಿಂದಲೂ ಅನುಕೂಲ ಪರಿಸ್ಥಿತಿಯೇ ಇತ್ತು. ಸೆಲ್‌ಜೂಕಿಯರ ಆಸ್ಥಾನದ ಬಾಗಿಲು ಪರ್ಷಿಯನ್ ವಿದ್ವಾಂಸರಿಗೂ ಕವಿಗಳಿಗೂ ಎಂದೂ ತೆರೆದಿತ್ತು. ಪರ್ಷಿಯಕ್ಕೆ ಮೊಗಲರು ದಾಳಿಯಿಟ್ಟಾಗ, ಈ ಆಸ್ಥಾನವನ್ನು ಮರೆಹೊಕ್ಕ ಅನೇಕ ವಿದ್ವಾಂಸರು ಮತ್ತು ಕವಿಗಳಲ್ಲಿ ಉತ್ತಮೋತ್ತಮ ಕವಿಯಾದ ಜಲಾಲುದ್ದೀನನ ತಂದೆಯೂ ಒಬ್ಬನಾಗಿದ್ದನು. ಇರಾನಿನ ಸೂಫೀ ತತ್ವವನ್ನೊಳಗೊಂಡ ಪ್ರಸಿದ್ಧ 'ಮಸ್ನವಿ' ಗ್ರಂಥಕರ್ತನಾದ ಈ ಜಲಾಲುದ್ದೀನನನ್ನು ರೂಮಿ ಎಂದು ಕರೆಯುತ್ತಿದ್ದರು. (ಪರ್ಷಿಯನ್ನರು ಏಷ್ಯಾಮೈನರಿಗೆ ರೂಮ್

ಎಂದು ಹೆಸರಿಟ್ಟಿದ್ದರು). ರೂಮಿ ಮೌಲ್ವಿ ಪಂಗಡದ ಸೂಫೀ ಮತ ಪ್ರವರ್ತಕನು. ತುರ್ಕಿಯ ಅನುಭಾವಿ ಸಾಹಿತ್ಯ (ಮಿಸ್ಟಿಕ್ ಸಾಹಿತ್ಯ) ಈ ರೂಮಿಯ ಅಭಿಪ್ರಾಯಗಳಿಂದ ತುಂಬಿದೆ.

ಜಲಾಲುದ್ದೀನ್ ರೂಮಿಯ ಮಗ ಸುಲ್ತಾನ್ ವಲೆದ್ದನೂ; ಪರ್ಶಿಯದ ಖುಸ್ರೋವನ್ನು ನಾಯಕನನ್ನಾಗಿಯೂ ಅವನ ಮೆಚ್ಚಿನ ರಾಣಿ ಶಿರೀನಳನ್ನು ನಾಯಕಿಯನ್ನಾಗಿಯೂ ಮಾಡಿ ಪ್ರಣಯಕಾವ್ಯ ವನ್ನು ಬರೆದಿರುವ ಕೆರ್ಮಿಯಾನಿನ ಷೆಯ್‌ಖಿಯೂ; ಮುಹಮ್ಮದನ ಜೀವನ ಚರಿತ್ರೆಯನ್ನು ಪದ್ಯದಲ್ಲಿ ಬರೆದಿರುವ ಎಸ್ಲೀಬಿಫ಼ಾಲು; ನಲ ವತ್ತು ವಜೀರರ ಚರಿತ್ರೆಯನ್ನು ಬರೆದಿರುವ ಷೆಯ್‌ಖ್‌ಜ಼ಾದ; ಫ಼ಿರೊ ದೌಸಿಯನ್ನನುಕರಿಸಿ, ಜ಼ುಲೈಖ ಮತ್ತು ಯೂಸುಫ಼ರ ಪ್ರೇಮಕಥೆ ಯನ್ನು ಬರೆದಿರುವ ಕಸಾಲ್‌ಪಾಷಾಜ಼ದ; ಮಜ್‌ನೂನ್ ಮತ್ತು ಲೈಲಿ ಯವರ ಪ್ರೇಮವನ್ನು ಹಾಡಿರುವ, ಉತ್ತಮೋತ್ತಮ ತುರ್ಕೀ ಕವಿಗಳು ನಾಲ್ವರಲ್ಲಿ ಒಬ್ಬನೆಂದು ಹೆಸರುಗೊಂಡಿರುವ ಫ಼ುಜ಼ೂಲಿ (ಇವನು ಇರಾನಿ ನಲ್ಲಿ ಹುಟ್ಟಿ, ಮೊದಲು ಬಗ್‌ದಾದಿನಲ್ಲಿದ್ದು, ಕೊನೆಗೆ ತುರ್ಕಿಯಲ್ಲಿ ಬಂದು ನೆಲಸಿದನು) ಇವರು ಈ ಕಾಲದ ಹೆಸರಾದ ಕವಿಗಳು; ಮಿಹ್ರಿ ಮತ್ತು ಜ಼ೈನಬ್ ಈ ಕಾಲದ ಹೆಸರಾದ ಕವಯಿತ್ರಿಯರು.

ತಾಸ್ನಿರಾತ್ (ಚಿನ್ನಹಗಳು) ಎಂಬ ಗ್ರಂಥವನ್ನು ಬರೆದ, ಮುಹಮ್ಮದಿನ ವಜೀರನಾಗಿದ್ದ ಸಿನಾನ್‌ಪಾಷಾ; ಸಂಸ್ಕೃತದ ಪಂಚ ತಂತ್ರವೇ ಪಹ್ಲವಿಗೂ ಪಹ್ಲವಿಯಿಂದ ಅರಬ್ಬಿಗೂ ಅನುವಾದವಾಗಿದ್ದ "ಅನ್ವರಿ-ಎ-ಸುಹೈಲಿ" ಎಂಬ ಗ್ರಂಥವನ್ನು "ಹುಮಾಯೂನ್ ನಾಮ" ಎಂಬ ಹೆಸರಿನಿಂದ ಭಾಷಾಂತರಿಸಿ, ಸುಲ್ತಾನ್ ಸುಲೇಮಾನಿಗೆ (ಕ್ರಿ.ಶ. ೧೫೨೦-೬೬) ಅರ್ಪಿಸಿದ ಅಲಿ-ಚಲೇಬಿ; ಮೊದಲಿನಿಂದ ಸುಲ್ತಾನ್ ಸಲೀಮನ ವರೆಗೆ (ಕ್ರಿ. ಶ. ೧೫೧೨-೨೦) ಆಟೊಮನ್ ವಂಶದ ಚರಿತ್ರೆ ಯನ್ನು 'ತಾಜ್ ಉತ್ ತವಾರೀಖ್' ಎಂಬ ಹೆಸರಿನಿಂದ ಬರೆದ ಸಯದು ದ್ದೀನ್; ಇವನ್ನೇ ಕ್ರಿ. ಶ. ೧೬೫೯ ರ ವರೆಗೆ ಮುಂದುವರಿಸಿದ ನೈಮ; ಪ್ರಸಿದ್ಧ ಸಾಧುಗಳ ಜೀವನ ಚರಿತ್ರೆಯನ್ನು ಬರೆದ ತಾಷ್‌ಕೊಪ್ರಿ ಜ಼ಾದ ಮತ್ತು ಅತಾಉಲ್ಲ; ಭೂಗೋಳ, ಚರಿತ್ರೆ, ಜೀವನಚರಿತ್ರೆ ಮೊದಲಾದ

ವಿಷಯಗಳ ಮೇಲೆ ಬರೆದಿರುವ ಹಾಜಿ ಕಲೀಫ್ಲ; (ಯೂರೋಪಿಯನ್ ಲೇಖಕರು ಇವನನ್ನು ಅನೇಕ ವೇಳೆ ಉದ್ಧರಿಸುತ್ತಾರೆ). ಮಹಮ್ಮದನ ಜೀವನ ಚರಿತ್ರೆಯನ್ನು ಬರೆದಿರುವ ವೆಯ್‌ಸೀ; ಅರಬ ನಿಘಂಟನ್ನು ಭಾಷಾಂತರಿಸಿದ ಆಸಿಮ್, ಇವರು ಈ ಕಾಲದ ಪ್ರಸಿದ್ಧ ಗದ್ಯಲೇಖಕರು.

ಎರಡನೆಯ ಕಾಲ: ಇದು ಸುಲ್ತಾನ್ ಮಹಮ್ಮದನ ಆಳಿಕೆಯಿಂದ (ಕ್ರಿ. ಶ. ೧೮೦೮–೩೯) ಕ್ರಿ. ಶ. ೧೯೧೪ ರ ವರೆಗೆ ನಡೆಯುತ್ತದೆ. ಈ ಕಾಲ ಕಿರಿದಾಗಿದ್ದರೂ ಬಹು ಮುಖ್ಯವಾದ್ದು. ಈ ಕಾಲದ ತುರ್ಕೀ ಸಾಹಿತ್ಯದಲ್ಲಿ ಯೂರೋಪ್ ಅನುಕರಣದಿಂದ ಒಂದು ಹೊಸ ಕಳೆ ಮೂಡಿತು. ಅನೇಕ ವಿಷಯಗಳ ಮೇಲೆ ಫ್ರೆಂಚಿನಿಂದ ಗ್ರಂಥಗಳ ಭಾಷಾಂತರವಾದುವು. ಹಿಂದಿನ ಬರಹಗಾರರು ಪರ್ಷಿಯನ್ ಅನುಕರಿಸಿದಂತೆ ಈ ಕಾಲದವರು ರೀತಿ, ನೀತಿ, ಶೈಲಿ, ವಸ್ತು ಎಲ್ಲದರಲ್ಲಿಯೂ ಫ್ರೆಂಚರನ್ನು ಅನುಕರಿಸಿದರು. ನಾಸಾಇ (ಹು. ಕ್ರಿ. ಶ. ೧೮೨೬) ತಸ್‌ವೀರ್ ಏ ಅಫ್ಕಾರ್ ಎಂಬ ವೃತ್ತಪತ್ರಿಕೆಯನ್ನು ಸಂಪಾದಿಸಿ, ಯೂರೋಪ್ ಸಂಸ್ಕೃತಿಯು ಒಳಹರಿತಕ್ಕೆ ಮೂಲಕಾರಣನಾದನು. ಇವನು ಲ್ಯಾಮರ್ ಟೈನ್, ಅರ್ನೆಸ್ಟ್ ರೆನಾನ್, ಡಿಸೇಸ್ಲೆ ಮೊದಲಾದ ಫ್ರೆಂಚ್ ಬರಹಗಾರರನ್ನು ಸಂದರ್ಶಿಸಿದ್ದನು. ಇವನು ಕವಿಯ ಮದುವೆ ಎಂಬ ನಾಟಕವನ್ನು ಬರೆದು ಆ ಕಾಲದ ತುರ್ಕಿಯ ಮದುವೆಯ ಸಂಪ್ರದಾಯಗಳ ಮೇಲೆ ಟೀಕೆ ಮಾಡಿದ್ದಾನೆ.

ಅಬ್ದುಲ್ಲ ಜೌದತ್ (೧೮೬೯–೧೯೩೨) ಹಲವು ಸ್ವತಂತ್ರಗ್ರಂಥಗಳನ್ನು ರಚಿಸಿ ಭಾಷಾಂತರಗಳನ್ನು ಮಾಡಿ ಆಧುನಿಕ ತುರ್ಕಿ ಸಾಹಿತ್ಯ ನಿರ್ಮಾಣಕ್ಕೆ ಕಾರಣರಾದವರಲ್ಲಿ ಒಬ್ಬನಾಗಿದ್ದಾನೆ. ಇವನು ಉಮರ್ ಖಯಾಮ್ ಮೊದಲಾದ ಇರಾನಿಯನ್ ಕಾವ್ಯಗಳನ್ನಲ್ಲದೆ ಷೇಕ್ಸ್‌ಪಿಯರ್ ನಾಟಕಗಳೇ ಮೊದಲಾದ ಪಾಶ್ಚಾತ್ಯ ಗ್ರಂಥಗಳನ್ನೂ ಭಾಷಾಂತರಿಸಿದ್ದಾನೆ. ಇವನು ಪತ್ರಿಕಾ ಸಂಪಾದಕನೂ, "ಸಂಘಟನ ಮತ್ತು ಪ್ರಗತಿ" ಎಂಬ ರಾಜಕೀಯ ಪಕ್ಷ ಚಾಲಕನೂ ಆಗಿದ್ದನು.

ನಾಮೆಕ್ ಕಮಾಲ್ (ಹು. ಕ್ರಿ. ಶ. ೧೮೪೦) ಸುಲ್ತಾನ್ ಅಬ್ದುಲ್ ಅಸ್ಸೀಸ್ ಮತ್ತು ಅಬ್ದುಲ್ ಹಮೀದರ ಕಾಲದವನು. ಇವನನ್ನು ತುರ್ಕೀ

ಸಾಹಿತ್ಯದಲ್ಲಿ ನವೀನಶೈಲಿಯ ಸೃಷ್ಟಿಕರ್ತನೆನ್ನಬಹುದು. ಇವನಿಗೆ ತಾಯ್ನುಡಿಯ ಜತೆಗೆ ಪರ್ಷಿಯನ್, ಅರಬ್ಬಿ, ಮತ್ತು ಫ್ರೆಂಚ್ ಭಾಷೆಗಳು ಬರುತ್ತಿದ್ದುವು. ೧೪ನೆಯ ವಯಸ್ಸಿಗೇ ಕವನಗಳನ್ನು ಬರೆಯುವುದಕ್ಕಾರಂಭಿಸಿದ್ದನು. ಷಿನಾಸಾಇಯೊಡನೆ ಆದ ಸಂಪರ್ಕದಿಂದ ಅವನ ಪ್ರಭಾವಕ್ಕೊಳಗಾಗಿ, ಪಾಶ್ಚಾತ್ಯಸಂಸ್ಕೃತಿ ಸಾಹಿತ್ಯಗಳಲ್ಲಿ ಪ್ರೇಮಿಯಾದನು. ತುರ್ಕಿಯ ಸಾರಸ್ವತ ಸಾಮಾಜಿಕ ಮತ್ತು ರಾಜಕೀಯ ಕ್ರಾಂತಿ ಚಳವಳಿಗೆ ಕಾರಣರಾಗಿದ್ದವರಲ್ಲಿ ಇವನೂ ಒಬ್ಬನು. ಷಿನಸ್ಸಿ ಕಾನ್‌ಸ್ಟಾಂಟಿನೋಪಲಿನಿಂದ ತಲೆಮರೆಸಿಕೊಂಡಿದ್ದಾಗ ಇವನೇ ಅವನ ವೃತ್ತಪತ್ರಿಕೆಯ ಸಂಪಾದಕನಾಗಿದ್ದನು. ಇವನ ರಾಜಕೀಯ ಚಳವಳಿಗಳಿಂದ ಸರ್ಕಾರಕ್ಕೆ ಸಂಶಯ ಹುಟ್ಟಿ, ಕೊನೆಗೆ ತನ್ನ ಕೆಲವು ಮಿತ್ರರೊಡನೆ ಇವನು ಕ್ರಿ. ಶ. ೧೮೬೭ರಲ್ಲಿ ತುರ್ಕಿಯನ್ನು ಬಿಡಬೇಕಾಯಿತು. ಕೆಲವು ಕಾಲ ಲಂಡನ್ನಿನಲ್ಲಿ ಮುಖ್-ಬೀರ್ ಎಂಬ ಪತ್ರಿಕೆಯನ್ನು ಹೊರಡಿಸುತ್ತಿದ್ದು, ತರುವಾಯ ಪ್ಯಾರಿಸ್ಸಿನಲ್ಲಿ ಹುರ್ರೀಯತ್ (ಸ್ವಾತಂತ್ರ್ಯ) ಎಂಬ ಪತ್ರಿಕೆಯನ್ನು ಹೊರಡಿಸುತ್ತಿದ್ದು, ಕೊನೆಗೆ ಕಾನ್‌ಸ್ಟಾಂಟಿನೋಪಲಿಗೆ ಮರಳಿ 'ಇಬ್ರತ್' ಎಂಬ ಹೊಸ ಪತ್ರಿಕೆಯೊಂದನ್ನು ಹೊರಡಿಸಲಾರಂಭಿಸಿದನು. ಈ ಮಧ್ಯೆ ಅನೇಕ ಫ್ರೆಂಚ್ ಗ್ರಂಥಗಳನ್ನು ಭಾಷಾಂತರಿಸಿದ್ದನು. ಇವನ ಪ್ರಖ್ಯಾತವಾದ 'ವತನ್' (ತಾಯ್ನಾಡು) ಎಂಬ ನಾಟಕ ಜನರಿಗೆ ಬಹು ಮೆಚ್ಚಿಗೆಯಾದರೂ ಸರ್ಕಾರಕ್ಕೆ ಬೇರೆ ತೋರಿ ಇವನು ಸೈಪ್ರಸ್ಸಿಗೆ ಗಡೀಪಾರಾದನು. ಅನೇಕ ನಾಟಕಕಾದಂಬರಿಗಳಲ್ಲದೆ ಚರಿತ್ರೆ, ಜೀವನ ಚರಿತ್ರೆ, ಇಸ್ಲಾಂ ಧರ್ಮ, ಮೊದಲಾದ ಹಲವು ವಿಷಯಗಳ ಮೇಲೆ ಬರೆದಿದ್ದಾನೆ. ಇವನು ಗದ್ಯಲೇಖಕರಿಗೆ ಮಾದರಿಯಾಗಿದ್ದಾನೆ.

ಈ ನಾಮೆಕ್ ಕಮಾಲನ ಸ್ನೇಹಿತರಲ್ಲಿ ಒಬ್ಬನಾಗಿದ್ದ ಅಬ್ದುಲ್ ಹಕ್ ಹಮಿದ್ (ಹು. ಕ್ರಿ. ಶ. ೧೮೫೨) ಕಾನ್‌ಸ್ಟಾಂಟಿನೋಪಲ್ ಮತ್ತು ಪ್ಯಾರಿಸ್ಸಿನಲ್ಲಿ ವ್ಯಾಸಂಗ ಮಾಡಿದವನು. ತುರ್ಕಿಯ ಪರವಾಗಿ ಯೂರೋಪ್ ರಾಜ್ಯಗಳು, ಪರ್ಷಿಯ, ಇಂಡಿಯಗಳಲ್ಲಿ ರಾಜ್ಯಪ್ರತಿನಿಧಿ (ಕಾನ್ಸಲ್) ಆಗಿದ್ದನು. ಯೂರೋಪ್ ಪದ್ಧತಿಯನ್ನು ಅನುಸರಿಸಿದ ಆದಿ ಕವಿಗಳಲ್ಲಿ ಇವನೂ ಒಬ್ಬನಾಗಿದ್ದನು. ತುರ್ಕೀ ಸಾಹಿತ್ಯದಲ್ಲಿ

ಇವನು ನವೀನ ಮಾರ್ಗಪ್ರವರ್ತಕನೆಂದು ಹೆಸರುಗೊಂಡಿದ್ದಾನೆ. ಅನೇಕ ಕಾದಂಬರಿಗಳನ್ನೂ ಇವನು ಬರೆದಿದ್ದಾನೆ.

ಇವರಲ್ಲದೆ ಸಸ್ಲಾಯಿಬೇ ಎಂಬ ಕಾದಂಬರಿಕಾರನೂ; ಅಹಮದ್ ಜೌದತ್ ಎಂಬ ಚರಿತ್ರಕಾರನೂ; ಅಹ್ಮದ್ ವಾಫ್ಲಿಕ್ ಎಂಬ ನಿಘಂಟುಕಾರನೂ; ಪ್ರಪಂಚ ಚರಿತ್ರೆಯನ್ನು ಆರು ಸಂಪುಟಗಳಲ್ಲಿ ಬರೆದಿರುವ ಮಸೂದ್‌ಬೇ ಎಂಬ ರಷ್ಯನ್-ತುರ್ಕನೂ; ತುರ್ಕೀ ಸಾಹಿತ್ಯಚರಿತ್ರೆಯನ್ನು ಬರೆದಿರುವ ಅಬೂಸ್ಲಿಯಾತೌಫ್ಲೀಕ್ ಎಂಬುವನೂ; ಫ್ರೆಂಚಿನಿಂದ ಅನೇಕ ಭಾಷಾಂತರಗಳನ್ನೂ, ಸಂಸ್ಕೃತ ಸಾಹಿತ್ಯದ ಮೇಲೆ ಒಂದು ಗ್ರಂಥವನ್ನೂ, ಅಲ್ಲದೆ ಕೆಲವು ಸ್ವತಂತ್ರ ಗ್ರಂಥಗಳನ್ನೂ ರಚಿಸಿರುವ ಬಾಲಿದ್‌ಸ್ಲಿಯಾ ಎಂಬ ಕಾದಂಬರಿಕಾರನೂ; ಅಲ್ಲದೆ ಇನ್ನೂ ಹಲವು ಗ್ರಂಥಕರ್ತರೂ ಈ ಕಾಲದಲ್ಲಿ ಹೆಸರಾದವರು.

ಸುಲ್ತಾನ್ ಅಬ್ದುಲ್ ಹಮೀದನು ತುರ್ಕಿಗೆ ಒಂದು ರಾಜ್ಯವ್ಯವಸ್ಥೆಯನ್ನು ಕೊಟ್ಟಮೇಲೆ, ತಮ್ಮ ಒಳಬಗೆಯನ್ನು ಉಸಿರಿ ಅಭಿಪ್ರಾಯವನ್ನು ಹೊರಗೆಡವಲು ಅಂಜಿ ನಾಡಿನಲ್ಲೊ ಹೊರಗೊ ಅಡಗಿಕೊಂಡಿದ್ದ ಮಹಮ್ಮದ್ ರೌಫ್, ಸುಲೇಮಾನ್ ನಸೀಫ್, ಅಹ್ಮದ್ ಹಿಕ್ಮತ್, ಹಸನ್‌ಸೀರತ್, ಸುಲೇಮಾನ್ ನಸೀಬ್, ಹುಸೇನ್ ರಹ್ಮಿ, ಅಹ್ಮದ್ ವಸೀಮ್, ಮೊದಲಾದ ಹಲವು ಕವಿಗಳೂ ಗ್ರಂಥಕರ್ತರೂ ತುರ್ಕಿಗೆ ಮರಳಿ ಬಂದು ನೆಲಸಿದರು. ಸುಲ್ತಾನ್ ಹಮೀದನ ಆಳಿಕೆ ತುರ್ಕಿಯಲ್ಲಿ ಸುವ್ಯವಸ್ಥಿತ ರಾಜ್ಯಭಾರಕ್ಕೇ ಅಲ್ಲದೆ ಮತ್ತೆರಡು ಪ್ರಸಿದ್ಧ ಚಳವಳಿಗಳಿಗೂ ಹೆಸರಾಗಿದೆ. ಇವು 'ಅಖಂಡ (ಪ್ಯಾನ್) ಇಸ್ಲಾಂ' ಮತ್ತು 'ಅಖಂಡ (ಪ್ಯಾನ್) ತುರ್ಕಿ' ಚಳವಳಿಗಳು. ಅಖಂಡ ಇಸ್ಲಾಂ ಚಳವಳಿ ಇರಾನಿನ ಪರ್ಷಿಯದವರು, ಈಜಿಪ್ಟಿನವರು, ಅರಬರು, ಅಫ್ಘನರೇ ಮೊದಲಾದ ಇಸ್ಲಾಂ ಜನತೆಗಳಿಗೆಲ್ಲರಿಗೂ ಅನ್ವಯಿಸುತ್ತದೆ. ಆದರೆ, ಅಖಂಡ ತುರ್ಕಿ ಚಳವಳಿ ತುರ್ಕಿ ಜನತೆಗಳಿಗೆ ಮಾತ್ರ. ಈ ಚಳವಳಿಗಳ ತತ್ವಗಳ ಪ್ರಚಾರಣೆಗಾಗಿ ಅನೇಕ ಕವಿಗಳೂ ಬರಹಗಾರರೂ ಕೈಕಟ್ಟಿ ನಿಂತರು. ಸ್ಲಿಯಾಕಿಯೂಕ್ ಆಲ್ಪ್, ಉಮರ್‌ಸೈಫುದ್ದೀನ್ ಮೊದಲಾದವರು 'ತುರ್ಕ್‌ಯೆರ್ದು'

ಎಂಬ ಸಂಘವನ್ನು ಸ್ಥಾಪಿಸಿ ಈ ವಿಷಯವಾಗಿ ಕೆಲಸ ನಡಸಿದರು. ಈ ಪಕ್ಷದವರು ಈಗಲೂ ಬಲಿಷ್ಠರಾಗಿದ್ದಾರೆ. ಕಮಾಲ್‌ಪಾಷಾ ಪಕ್ಷದವರನ್ನು ಇವರ ಪ್ರತಿನಿಧಿಗಳೆನ್ನಬಹುದು. ಈ ಸಂಘವಲ್ಲದೆ ಸಾಹಿತ್ಯದಲ್ಲಿ ಯೂರೋಪಿಯನ್ ಶೈಲಿಯ ಅನುಸರಣೆ ಅನುಕರಣೆಗಳಿಗಾಗಿ 'ಫಜ್‌ರೇ ಅಲಿ' (ಉದಯಪ್ರಭಾತ) ಎಂಬ ಮತ್ತೊಂದು ಸಂಘ ಹುಟ್ಟಿಕೊಂಡಿತು. ಇದರ ಫಲವಾಗಿ ಖಾಲೆದಾ ಅದೀಬ್ ಖಾನುಮ್ ಎಂಬ ಗ್ರಂಥಕರ್ತಳೂ, ರಿಷಾದ್‌ನೂರಿ ಎಂಬ ನಾಟಕಕಾರನೂ, ಆಥಮ್ ಇಸ್ಮತ್ ಎಂಬ ಕಾದಂಬರಿಕಾರನೂ, ಇನ್ನೂ ಅನೇಕ ಚರಿತ್ರಕಾರರೂ ಬರಹಗಾರರೂ ಈ ಕಾಲದಲ್ಲಾದರು.

ಪೂರನೆಯ ಕಾಲ: ಇದು ಕಮಾಲ್ ಪಾಷಾವಿನ ಚಳವಳಿಯ ಫಲವಾಗಿ ತುರ್ಕಿಯಲ್ಲಿ 'ರಿಪಬ್ಲಿಕ್' ಪ್ರಜಾಧಿಕಾರ ಸ್ಥಾಪನೆಯಾದಂದಿನಿಂದ ಮೊದಲಾಗುತ್ತದೆ. ಈ ಚಳವಳಿಯ ಮತ್ತು ಪ್ರಜಾಧಿಕಾರ ಸ್ಥಾಪನೆಯ ಮುಖ್ಯ ಉದ್ದೇಶ—ಏಷ್ಯಾ ಮೈನರಿನ ಹಲವು ಕುಲದ ಜನರನ್ನು ತುರ್ಕಿ ಭಾಷೆಯನ್ನಾಡುವ ಒಂದು ಜನಾಂಗವನ್ನಾಗಿ ಮಾಡುವುದು; ಆಡಳಿತದಲ್ಲಾಗಲಿ, ಸಮಾಜ ಜೀವನದಲ್ಲಾಗಲಿ, ಯಾವ ರೀತಿಯ ಭೇದ ವ್ಯತ್ಯಾಸಗಳೂ ಕಾಣದಂತೆ ಸಂಪೂರ್ಣವಾಗಿ ಯೂರೋಪಿಯನ್ನರಾಗಿ ಮಾಡುವುದು; ಮತ್ತು, ಮತಧರ್ಮ ವಿಷಯದಲ್ಲಿ ಉದಾಸೀನರಾಗಿದ್ದು ತುರ್ಕಿಯ ಪ್ರಗತಿಗೆ ಸಾಧಕವಾದದ್ದನ್ನು ಮಾತ್ರ ಉಳಿಸಿಕೊಂಡು ಉಳಿದುವನ್ನು ಬಿಟ್ಟುಬಿಡುವುದು. ಇವರು ಅರಬ್ಬೀ ಲಿಪಿಯನ್ನು ಬಿಟ್ಟು ಬಿಟ್ಟು ರೋಮನ್ ಲಿಪಿಯನ್ನು ಕೆಲವು ಮಾರ್ಪಾಟು ಮಾಡಿಕೊಂಡು ಉಪಯೋಗಿಸುತ್ತಿದ್ದಾರೆ. ಅರಬ್ಬಿ, ಪರ್ಷಿಯನ್, ಮೊದಲಾದ ಪರಭಾಷಾ ಶಬ್ದಗಳನ್ನು ಕಡಮೆ ಮಾಡಿ ತುರ್ಕಿ ಭಾಷೆಯನ್ನು ಪರಿಶುದ್ಧಗೊಳಿಸುವುದಕ್ಕೆ ಪ್ರಯತ್ನ ನಡೆಯುತ್ತಿದೆ. ಎಲ್ಲ ಶಾಸ್ತ್ರಗಳಲ್ಲೂ ಕಲೆಗಳಲ್ಲೂ ಪರಭಾಷೆಗಳಿಂದ ಗ್ರಂಥಗಳು ಭಾಷಾಂತರವಾಗುತ್ತಿವೆ. ಹಲವು ಬಗೆಯ ಪತ್ರಿಕೆಗಳು ಬೆಳೆಯುತ್ತಿವೆ. ಒಟ್ಟಿನಲ್ಲಿ ಕಮಾಲ್‌ಪಾಷಾ ರಾಜ್ಯ, ಸರ್ಕಾರ, ಸಮಾಜ, ಭಾಷೆ, ಧರ್ಮಗಳನ್ನು ಸಂಪೂರ್ಣವಾಗಿ ಮಾರ್ಪಡಿಸಿ ಬಿಟ್ಟಿದ್ದಾನೆ.

## ಪರ್ಷಿಯನ್ ಸಾಹಿತ್ಯ

ಪರ್ಷಿಯನ್ ಸಾಹಿತ್ಯವನ್ನು ಇಸ್ಲಾಂ ಪೂರ್ವದ್ದು, ಇಸ್ಲಾಂ ತರುವಾಯದ್ದು ಎಂದು ಸ್ಥೂಲವಾಗಿ ಎರಡು ಭಾಗ ಮಾಡಬಹುದು. ಇಸ್ಲಾಂ ಪೂರ್ವದ್ದನ್ನು ಅವೆಸ್ತನ್, ಅಖೀಮಾನಿಯನ್, ಪಹ್ಲವಿ, ಎಂದು ಮೂರು ಒಳಭಾಗಗಳನ್ನಾಗಿ ಮಾಡಬಹುದು. ಅವೆಸ್ತನ್ ಭಾಷೆ ಹಿಂದೂ ವೇದಗಳ ಭಾಷೆಯನ್ನು ಬಹುಮಟ್ಟಿಗೆ ಹೋಲುತ್ತದೆ. ಆದರ ಪುರಾತನ ಗಾಥಗಳು ಋಗ್ವೇದದ ಕಾಲಕ್ಕೇ ರಚಿತವಾದವು. ಅಖೀಮಾನಿಯನ್ ಕಾಲದಲ್ಲಿ ಕೈರಸ್, ಡೇರಿಯಸ್, ಕ್ಸರ್‌ಕ್ಸೀಸ್, ಅರ್ತಾಕ್ಸರ್‌ಸೆಸ್—ಮೊದಲಾದವರ ಶಾಸನಗಳು ಸಿಕ್ಕುತ್ತವೆ. ಇವು ಬೆಣೆಯಾಕಾರದ (ಕ್ಯೂನಿಫಾರಮ್) ಲಿಪಿಯಲ್ಲಿದ್ದು, ಆಯಾ ದೊರೆಗಳ ವಿಜಯಯಾತ್ರೆಗಳನ್ನೂ, ಸಾಧಿಸಿದ ಮಹತ್ಕಾರ್ಯಗಳನ್ನೂ ಹೇಳುತ್ತವೆ. ಮೂರನೆಯದಾದ ಪಲ್ಹವಿಕಾಲ ಕ್ರಿ. ಪೂ. ೩೦೦ ರಿಂದ ಕ್ರಿ. ಶ. ೯೦೦ ರ ವರೆಗಿದೆ. ಪಲ್ಹವಿ ಭಾಷೆ ಅರಾಮಿಕ್ ಲಿಪಿಯಲ್ಲಿ ಬರೆದಿರುತ್ತದೆ. ಪಲ್ಹವಿ ಪುರಾತನ ಪರ್ಷಿಯನ್ ಭಾಷೆಯ ಒಂದು ಮಾರ್ಪಟ್ಟ ರೂಪ. ಇದರ ವ್ಯಾಕರಣ ಬಹು ಸುಲಭರೂಪದ್ದು. ಇದರಲ್ಲಿ ಅನೇಕ ಅರಾಮಿಕ್ ಮಾತುಗಳು ಸೇರಿಕೊಂಡಿವೆ. ಅವೆಸ್ತನ್ ಮತ್ತು ಅಖೀಮಾನಿಯನ್—ಈ ಎರಡು ಕಾಲಕ್ಕಿಂತಲೂ ಪಲ್ಹವಿಕಾಲದಲ್ಲಿ ಸಾಹಿತ್ಯ ಬಹು ಹೆಚ್ಚಾಗಿ ಬೆಳೆದಿದೆ. ಇದರಲ್ಲಿ ಮತಧರ್ಮ, ಆಧ್ಯಾತ್ಮಿಕ ವಿಷಯ, ಚರಿತ್ರೆ, ಕಾದಂಬರಿ, ಮೊದಲಾದ ಹಲವು ವಿಷಯಗಳ ಮೇಲೆ ಗ್ರಂಥಗಳಿವೆ. ಈ ಪಲ್ಹವಿ ಹತ್ತನೆಯ ಶತಮಾನದವರೆಗೂ ಮುಸ್ಲಿಂ ಮತೀಯರಲ್ಲದ ಪರ್ಷಿಯನ್ನರಿಗೆ ಧರ್ಮಸಾಹಿತ್ಯವನ್ನು ಒದಗಿಸಿಕೊಡುತ್ತಿತ್ತು.

ಉಮಯ್ಯಾದ್ ಆಳಿಕೆಯ ಅಂತ್ಯದ ವೇಳೆಗೆ ಬಹು ಮಂದಿ ಪರ್ಷಿಯನ್ನರು ಇಸ್ಲಾಂ ಧರ್ಮ ಸ್ವೀಕರಿಸಿದ್ದರು. ಇವರು ಅರಬ್ಬಿ ಹೆಸರುಗಳನ್ನು ಇಟ್ಟುಕೊಂಡದ್ದಲ್ಲದೆ, ಅರಬ್ಬಿ ನುಡಿಯನ್ನು ಕಲಿತು ವ್ಯವಹಾರದಲ್ಲೂ ಅದನ್ನೇ ಬಳಸತೊಡಗಿದರು. ಏಳನೆಯ ಶತಮಾನದ ವೇಳೆಗೆಯೇ ಸ್ಸಿಯಾದ್ ಎಂಬ ಪಾರಸಿಕನೊಬ್ಬನು ಅರಬ್ಬಿ ಭಾಷೆಯಲ್ಲಿ ಹೆಸರು ಪಡೆದ ಕವಿಯಾಗಿದ್ದನು. ಹಮ್ಮಾದ್ ಎಂಬ ಮತ್ತೊಬ್ಬ

ಪಾರಸಿಕನು ಮುಸ್ಲಿಂ ಪೂರ್ವದ ಅರಬ ಕವನಗಳ ಸಂಗ್ರಹವೊಂದನ್ನು ಮಾಡಿರುವುದಲ್ಲದೆ, ಪುರಾಣಗಳನ್ನೂ ಅರಬ ಬುಡಕಟ್ಟುಗಳ ಚರಿತ್ರೆಯನ್ನೂ ಸಂಗ್ರಹಿಸಿದ್ದಾನೆ. ಹೀಗೆ ಅರಬ್ಬಿ ಭಾಷೆಯಲ್ಲಿ ಪ್ರಸಿದ್ಧ ಕವಿಗಳು, ಪಂಡಿತರು, ದಾರ್ಶನಿಕರು, ಮೊದಲಾದವರಲ್ಲಿ ಪರ್ಷಿಯನ್ನರು ಹಲವರಿದ್ದಾರೆ.

ಈ ನಡುವೆ ಪರ್ಷಿಯನ್ ಭಾಷೆ ಅದರ ಜನರಿಂದ ವ್ಯವಹಾರ ತಪ್ಪಿದ್ದರೂ ನಿರ್ನಾಮವಾಗಲಿಲ್ಲ. ಹತ್ತನೆಯ ಶತಮಾನದ ಕೊನೆಯ ವೇಳೆಗೆ ಇರಾನ್ ದೇಶ ಅರಬ ನೊಗವನ್ನು ಕಳಚಿಕೊಂಡು ಸ್ವತಂತ್ರವಾಗಿ, ಶುದ್ಧ ಇರಾನಿ ದೊರೆಗಳನ್ನೊ ಇರಾನೀಯರಾಗಿ ಮಾರಿದ್ದ ತುರ್ಕಿ ದೊರೆಗಳನ್ನೊ ನೇಮಕ ಮಾಡಿಕೊಂಡಿತು. ಈ ರಾಜರು ಬಗ್‌ದಾದಿನ ಕಲೀಫನ ನಾಮ ಮಾತ್ರ ಅಧೀನದಲ್ಲಿದ್ದರು.

ಈ ದೇಶೀಯ ಅರಸುಮನೆತನಗಳು ಮತ್ತೆ ಪರ್ಷಿಯನ್ ಭಾಷೆಗೆ ಉತ್ತೇಜನ ಕೊಟ್ಟು, ಪುರಾತನ ಪ್ರೌಢ ಪರ್ಷಿಯನ್ ಸಾಹಿತ್ಯವನ್ನು ಪುನರುಜ್ಜೀವನಗೊಳಿಸಿದುವು. ಈ ನವ ಪರ್ಷಿಯನ್ ಅರಬ್ಬಿ ಲಿಪಿಯಲ್ಲಿದ್ದು ಕೊಂಚಮಟ್ಟಿಗೆ ಉರ್ದುವನ್ನು ಹೋಲುತ್ತದೆ. ಪರ್ಷಿಯದ ಉರ್ದು ಎನ್ನಬಹುದಾದ ಇದು ಬಹುಬೇಗ ಮುಖ್ಯ ಭಾಷೆಯಾಗಿ ಬೆಳೆದು ಕೊನೆಗೆ ಅರಬ್ಬಿ ಭಾಷೆಯನ್ನು ಮೀರಿಸಿ ಪೂರ್ವದೇಶದ ಇಸ್ಲಾಂ ಪ್ರದೇಶಗಳ ಸಾಮಾನ್ಯ ಭಾಷೆಯಾಯಿತು. ಉರ್ದು ಹೇಗೆ ಪರ್ಷಿಯನ್ ಮತ್ತು ಅರಬ್ಬಿ ಮಿಶ್ರವಾಗಿ ಸಂಸ್ಕೃತದ ಮರಿ ಎನ್ನಬಹುದೋ, ಹಾಗೆಯೇ ಪರ್ಷಿಯನ್ ಅರಬ್ಬಿ ಮತ್ತು ತುರ್ಕಿ ಮಿಶ್ರವಾಗಿ ಪಲ್ಲವಿಯ ಮರಿ ಎನ್ನಬಹುದು. ರೂದಕೀ ಎಂಬವನು ಪುರಾತನ ಪ್ರೌಢ ಪರ್ಷಿಯನ್ ಸಾಹಿತ್ಯದ ಮೊದಲನೆಯ ಪ್ರಸಿದ್ಧ ಕವಿ. ಇವನು ಸಾಮಾನಿ ಮನೆತನದ ದೊರೆ ನಸರಿನ (ಕ್ರಿ. ಶ. ೯೧೩-೯೪೩) ಆಸ್ಥಾನದಲ್ಲಿದ್ದನು. ಇವನು ಅನೇಕ ಗಾಥಗಳನ್ನೂ ಮಸ್ನವಿಗಳನ್ನೂ ವೃತ್ತಗಳನ್ನೂ ರಚಿಸಿದ್ದಾನೆ. ದಕೀಕಿ ಈ ಕಾಲದ ಮತ್ತೊಬ್ಬ ಪ್ರಸಿದ್ಧ ಕವಿ.

ಘಜ್ನಿ ಮಹಮೂದಿನ ಆಸ್ಥಾನದಲ್ಲಿ ಫಿರ್ದೌಸಿಯೇ ಮೊದಲಾದ ಹಲವು ಪ್ರಸಿದ್ಧ ಕವಿಗಳಿದ್ದರು. ಫಿರ್ದೌಸಿ ಷಾನಾಮಾ ಎಂಬ ಪ್ರಸಿದ್ಧ

ಪರ್ಷಿಯನ್ ಮಹಾಕಾವ್ಯವನ್ನು ಬರೆದಿದ್ದಾನೆ. ಇದರಲ್ಲಿ ಸುಮಾರು ೬೦ ಸಾವಿರ ಶ್ಲೋಕಗಳಿದ್ದು, ಇದು ಇರಾನ್ ಮತ, ಧರ್ಮ, ನೀತಿ, ಸಮಾಜ, ಆಚಾರ, ನಡೆ, ನುಡಿ, ಮೊದಲಾದ ವಿಷಯಗಳನ್ನು ತಿಳಿಸುತ್ತದೆ. ಇದರಲ್ಲಿ ಪುರಾತನ ಪೌರಾಣಿಕ ಕಥೆಗಳೂ ಐತಿಹಾಸಿಕ ಸಂಗತಿಗಳೂ ಬೆರೆತುಹೋಗಿವೆ. ಇಂಡಿಯದಲ್ಲಿ ಮಹಾಭಾರತಕ್ಕಿರುವ ಸ್ಥಾನ ಇರಾನಿನಲ್ಲಿ ಈ ಷಾನಾಮಾಕ್ಕೆ ಇದ್ದು, ಫಿರ್ದೌಸಿ ಸುಪ್ರಸಿದ್ಧ ಕವಿವರ್ಯರಲ್ಲಿ ಗಣ್ಯನಾಗಿದ್ದಾನೆ. ಹಲವು ಕವಿಗಳು ಇವನನ್ನು ಅನುಕರಿಸಹೋಗಿ, ಷಾನಾಮಾದ ನಾಯಕನಾದ ರುಸ್ತುಮನನ್ನೂ ಅವನ ಮನೆತನವನ್ನೂ ಎತ್ತಿಕೊಂಡು ಹಾಡಿದ್ದರೂ, ಕಾವ್ಯ ರಚಿಸಿದ್ದರೂ, ಒಬ್ಬರೂ ಇವನ ಮಟ್ಟಕ್ಕೆ ಏರುವುದಿಲ್ಲ.

ಕ್ರಿ. ಶ. ೧೦೩೭ರಲ್ಲಿ ಸೆಲ್‌ಜೂಕಿ ಮನೆತನದವರು ಮತ್ತೆ ಒಂದು ದೊಡ್ಡ ಪರ್ಷಿಯನ್ ಸಾಮ್ರಾಜ್ಯವನ್ನು ಕಟ್ಟಿ, ಪರ್ಷಿಯನ್ ಭಾಷೆ ಸಾಹಿತ್ಯಗಳಿಗೆ ಉದಾರ ಆಶ್ರಯ ಕೊಟ್ಟರು. ಇವರ ಆಳಿಕೆಯಲ್ಲಿ ಪರ್ಷಿಯದ ಸುಪ್ರಸಿದ್ಧ ಕವಿಗಳೂ ದೇವತಾ ಶಾಸ್ತ್ರಜ್ಞರೂ ಸೂಫಿಗಳೂ ಆಗಿಹೋದರು. ಇವರಲ್ಲಿ ಅದೀಬ್ ಸಾಬೆರ್, ಮೊಅಸ್ಸೀ, ರಷೀದ್‌ವತ್ವಾತ್, ಅಬ್ದುಲ್ ವಾಸೆಜಬಲಿ, ಅನ್ವರಿ, ಖಾಕಾನಿ, ಮೊದಲಾದವರು ಹೆಸರಾದವರು. ಸುಸ್ಲಾನಿ ಪ್ರಸಿದ್ಧ ವಿಡಂಬನ ಮತ್ತು ಅಣಕವಾಡಿನ ಕವಿ. ಇಸ್ಫಹಾನಿನ ಕಮಾಲುದ್ದೀನ್ ಕವಿಗೆ 'ಭಾವಬ್ರಹ್ಮ' ಎಂಬ ಬಿರುದು ಇತ್ತು. ಈ ಕಾಲದ ಕೊನೆಯ ಪ್ರಸಿದ್ಧ ಕವಿ ನಿಸ್ತಾಮಿ (ಕ್ರಿ.ಶ. ೧೧೪೩–೧೨೦೩). ಇವನು ಉತ್ತಮ ಭಾವಗೀತೆಗಳನ್ನೂ ಕಾವ್ಯಗಳನ್ನೂ ಬರೆದಿದ್ದಾನೆ. ಪ್ರೌಢಿಮೆಯಲ್ಲೂ, ಜನರ ಮೆಚ್ಚಿಗೆಯಲ್ಲೂ ಇವನ ಕೃತಿಗಳು ಫಿರ್ದೌಸಿಯ ಷಾನಾಮಾಕ್ಕೆ ಎರಡನೆಯವಾಗಿವೆ. ಇವನು ಮಾನವನ ರಾಗಗಳನ್ನು ಭಾವ ಚೆನ್ನಾಗಿ ಚಿತ್ರಿಸಿದ್ದಾನೆ. ಅರಬರಲ್ಲಿ 'ಪ್ರಣಯಿ' ಎಂದು ಹೆಸರಾಗಿರುವ ಮಜ್‌ನುವೂ ಪರ್ಷಿಯದ ಸಸಾನಿಯನ್ ದೊರೆಗಳೂ ಇವನ ಕಥಾನಾಯಕರು. ಷಾನಾಮಾದಂತೆಯೇ ಇವನ ಕೃತಿಗಳನ್ನೂ ಅನೇಕರು ಅನುಕರಿಸ ಹೋಗಿದ್ದರೂ ಒಬ್ಬರೂ ಜಯಶೀಲರಾಗಿಲ್ಲ.

ಸೆಲ್‌ಜೂಕಿಯರ ಆಳಿಕೆಯಲ್ಲಿ ಜನರು ಅನುಭವಿಸಿದ ಏಳಿಗೆ ನೆಮ್ಮದಿಗಳು ಬಹುಕಾಲ ನಿಲ್ಲಲಿಲ್ಲ. ಮೊಗಲರು ಪಶ್ಚಿಮ ಏಷ್ಯದ ಮತ್ತು ಪೂರ್ವಯೂರೋಪಿನ ಪ್ರದೇಶಗಳನ್ನೆಲ್ಲ ಕೊಳ್ಳೆಹೊಡೆದು ಹಾಳುಮಾಡಿ ನಾಗರಿಕತೆಯನ್ನು ನಿರ್ನಾಮಮಾಡಿದರು. ಇರಾನ್ ನಾಗರಿಕತೆಯ ತೊಟ್ಟಿಲೂ, ಮುಸ್ಲಿಂ ದಾರ್ಶನಿಕರ, ದೇವತಾ ಶಾಸ್ತ್ರಜ್ಞರ ಮತ್ತು ಕವಿಗಳ ನೆಲೆವೀಡೂ ಆಗಿದ್ದ ಪೂರ್ವ ಇರಾನೆಲ್ಲ ಪಾಳುಗೆಡೆದು ನೆಲಸಮ ವಾಯಿತು. ಈಗಲೂ ಈ ಪ್ರದೇಶಕ್ಕೆ ತುರ್ಕೀಸ್ಥಾನ್ ಎಂದು ಹೆಸರಿರು ವುದರಿಂದಲೇ ಆ ಜನರು ಮತ್ತೆ ತಲೆಯೆತ್ತಲಿಲ್ಲವೆಂಬುದು ಗೊತ್ತಾಗು ತ್ತದೆ. ಈ ಮೊಗಲ ದಾಳಿಗರ ಮೊದಲಿಗನಾದ ಛಂಗೀಸ್‌ಖಾನ್ ತೀರಿದರೂ ಅವನು ಕೈ ಹಚ್ಚಿದ ಕ್ರೂರ ನಾಶಕೃತ್ಯ ತೀರದೆ, ಅವನ ತರುವಾಯ ಬಂದವರೂ ಅದನ್ನು ಮುಂದುವರಿಸಿ, ಕೊನೆಗೆ ಇರಾನಿ ನಲ್ಲಿ ಒಂದು ರಾಜ್ಯಕಟ್ಟಿ ನೆಲಸಿದರು. ಇದೇ ರೀತಿ ಛಂಗೀಸ್ಸನ ವಂಶ ದವರು ಚೀನ, ಮಧ್ಯ ಏಷ್ಯ, ಮೊದಲಾದ ಪ್ರದೇಶಗಳಲ್ಲಿಯೂ ರಾಜ್ಯ ಕಟ್ಟಿದರು. ಇದರಿಂದ ಚೀನ ಮತ್ತು ಇರಾನಿಗೆ ವ್ಯಾಪಾರ ಸಂಬಂಧ ಏರ್ಪಟ್ಟಿದ್ದಲ್ಲದೆ ಒಂದು ದೇಶದಿಂದ ಮತ್ತೊಂದು ದೇಶಕ್ಕೆ ಕಲೆಗಾರರೂ ಕವಿಗಳೂ ಹೋಗಿಬರುತ್ತಿದ್ದರು. ಅಲ್ಲದೆ, ಇರಾನಿನಲ್ಲಿ ನೆಲಸಿದ ಮೊಗಲ್ ಅರಸರು ಅದೃಷ್ಟವಶಾತ್ ತಮ್ಮ ಪ್ರಜೆಗಳ ಧರ್ಮವನ್ನೇ ತಾವೂ ಸ್ವೀಕರಿಸಿ, ಕಲೆ ಸಾಹಿತ್ಯಗಳಿಗೆ ಉತ್ತೇಜನ ಕೊಟ್ಟರು. ಇದರಿಂದ ಈ ಮೊಗಲರ ಕಾಲದ ಪರ್ಷಿಯನ್ ಸಾಹಿತ್ಯ ಮತ್ತು ಕಲೆಗಳಲ್ಲಿ 'ಪಾರಸಿ-ಚೀನ' ಶೈಲಿ ಬೆಳೆಯಿತು. ಈ ಕಾಲದಲ್ಲಿ ಅನೇಕ ಗ್ರಂಥ ಕರ್ತರೂ, ಜೀವನ ಚರಿತ್ರಕಾರರೂ, ಸೂಫಿ ಕವಿಗಳೂ (ಜಲಾಲ್ ಉದ್ದೀನ್ ರೂಮಿ ಎಂಬ ಪ್ರಸಿದ್ಧ ಸೂಫಿ ಕವಿ ಈ ಕಾಲದವನು) ನೀತಿ ಜ್ಞರೂ, ತತ್ತ್ವಜ್ಞರೂ ಆಗಿಹೋದರು. ಅಲ್ಲದೆ ಬಹ್‌ಸ್ಸಾದ್ ಮತ್ತು ಅವನ ಶಿಷ್ಯ ಮಿರಾಕ್ ಎಂಬ ಪ್ರಸಿದ್ಧ ಕಲೆಗಾರರೂ ಇದ್ದರು. ಇವರ ಕಲಾರೀತಿ ಸ. ಮಾರು ಮೂರು ಶತಮಾನಗಳವರೆಗೆ ಇರಾನಿನಲ್ಲಿ ಮಾತ್ರ ವಲ್ಲದೆ ಇಂಡಿಯಾದಲ್ಲೂ ನಡೆದು ಬಂತು.

ಇರಾನಿನಲ್ಲಿ ಮೊಗಲರ ಆಳಿಕೆ ಕ್ರಿ. ಶ. ೧೫೦೨ರಲ್ಲಿ ಕೊನೆಗೊಂಡು, ಮತ್ತೆ ಸಫವಿ ಎಂಬ ದೇಶೀಯ ಸಂತತಿಯೊಂದು ಆಳತೊಡಗಿತು. ಈ ಸಫವಿ ಮನೆತನದ ಪೂರ್ವಿಕನೊಬ್ಬನಾದ ಷೆಯ್ಕ್‌ಸಫೀ ಉದ್ದೀನ್ ಒಬ್ಬ ಸೂಫಿ ಸಾಧುವಾಗಿದ್ದವನು. ಹೀಗೆ ಈ ಸಫವಿ ದೊರೆಗಳು, ತಮ್ಮ ಪೂರ್ವಿಕರು ಸೂಫಿಗಳಾಗಿದ್ದರೂ ತಾವು ಅವರಿಗೆ ಉತ್ತೇಜನ ಕೊಡದೆ ಸೂಫಿಗಳನ್ನೂ ಸುನ್ನಿಗಳನ್ನೂ ಅಡಗಿಸಿ, ಮತ್ತೆಲ್ಲಿಯೂ ಆಶ್ರಯ ದೊರಕದಿದ್ದ ಷಿಯಾ ಪಂಗಡದವರಿಗೆ ಉತ್ತೇಜನ ಕೊಟ್ಟರು. ಇದರಿಂದ ಇವರ ಕಾಲದಲ್ಲಿ ಷಿಯಾ ಮತ ತತ್ವದ ಅನೇಕ ಗ್ರಂಥಗಳು ಹುಟ್ಟಿದುವು. ಈ ಸಫವಿ ಸಂತತಿಯಾದ ಮೇಲೆ ಅಫ್ಷಾರ್ ಮತ್ತು ಕಾಜಾರ್ ಸಂತತಿಗಳು ಬಂದುವು. ಕಾಜಾರ್ ದೊರೆಗಳು ಅನೇಕ ಕವಿಗಳಿಗೆ ಆಶ್ರಯದಾತರಾಗಿದ್ದದ್ದೇ ಅಲ್ಲದೆ ಸ್ವತಃ ಕವಿಗಳೂ ಆಗಿದ್ದರು. ಈ ಕಾಲದಲ್ಲಿ ಅನೇಕ ಕವಿಗಳಿದ್ದರೂ ಫಿರ್ದೌಸಿ, ಖಯಾಮ್, ನಿಸಾಮಿ, ರೂಮಿ, ಮೊದಲಾದ ಪ್ರಸಿದ್ಧ ಪರ್ಷಿಯನ್ ಕವಿಗಳ ಮಟ್ಟಕ್ಕೆ ಬರುವವರು ಒಬ್ಬರೂ ಇಲ್ಲ. ಈ ಕಾಲದ ಕೊನೆಯ ವೇಳೆಗೆ ಪರ್ಷಿಯನ್ ಭಾಷೆಯಲ್ಲಿ ನಾಟಕ ರಚನೆಗೆ ಪ್ರಾರಂಭವಾಯಿತು. ಇದರ ಮೂಲವನ್ನು ಸಫವಿದ್ ಕಾಲದಲ್ಲಿ ಪ್ರಾರಂಭವಾದ ಮೊಹರ‍್ರಮ್ ಉತ್ಸವದಲ್ಲಿ ಕಾಣಬಹುದು. ಯೂರೋಪ್‌ಸಾಹಿತ್ಯಗಳ ಪ್ರಭಾವದಿಂದ ನಾಟಕವು ಸಾಹಿತ್ಯದ ಒಂದು ಪ್ರತ್ಯೇಕಭಾಗವಾಗಿ ಬೆಳೆದು ಬಂತು. ಆಧುನಿಕ ಇರಾನಿನಲ್ಲಿ ಮೊದಲನೆಯ ನಾಟಕ ಕ್ರಿ. ಶ. ೧೮೬೯ರಲ್ಲಿ ಭಾಷಾಂತರಿಸಿದ 'ಲೇ ಮಿಸಾಂತ್ರೋಪ್' ಎಂಬ ಫ್ರೆಂಚ್ ನಾಟಕ. ಇದಾದಮೇಲೆ ಇನ್ನೂ ಅನೇಕ ಭಾಷಾಂತರ ನಾಟಕಗಳೂ, ಸ್ವತಂತ್ರ ನಾಟಕಗಳೂ ಆದುವು. ಈ ಕಾಜರ ನಾಲ್ಕನೆಯ ದೊರೆ ನಸಿರುದ್ದೀನನ ಕಾಲದಲ್ಲಿ (ಕಿರೀಟಧಾರಣೆ ಕ್ರಿ. ಶ. ೧೮೪೮) ಬಾಬಿ ಮತ್ತು ಬಹಾಯಿ ಎಂಬ ಪಂಗಡಗಳು ಹುಟ್ಟಿ ಪರ್ಷಿಯದ ನವೀಕರಣಕ್ಕೆ ಆರಂಭವಾಯಿತು. ಜನರು ಯೂರೋಪ್ ದೇಶಗಳಿಗೆ ಹೋಗಿ ಬಂದು, ಸ್ವಾತಂತ್ರ್ಯ, ರಾಜ್ಯವ್ಯವಸ್ಥೆ, ಮೊದಲಾದ ವಿಷಯಗಳನ್ನು ಅರಿತುಕೊಂಡು, ಚಳವಳಿಗೆ ಆರಂಭಿಸಿ ಕೊನೆಗೆ ನಸಿರುದ್ದೀನನನ್ನು ಕೊಂದುಹಾಕಿದರು. ಇವನ ನಂತರ ಬಂದ ಮುಸಫ್ಫರ್

ಉದ್ದೀನನ ಕಾಲದಲ್ಲಿ ರಾಜ್ಯದಲ್ಲಿ ಮತ್ತಷ್ಟು ಕ್ರಾಂತಿಗಿಟ್ಟುಕೊಂಡಿತು. ಈ ಕಾಲದ ಸಾಹಿತ್ಯದಲ್ಲಿ ದೇಶಾಭಿಮಾನ ಮತ್ತು ಕ್ರಾಂತಿಭಾವಗಳು ಕಂಡುಬರುತ್ತವೆ. ಅಲ್ಲದೆ ಈ ಸಾಹಿತ್ಯದ ಮುಖ್ಯ ಲಕ್ಷಣಗಳೆಂದರೆ— ಭಾಷೆಯ ಸರಳತೆ; ಪೂರ್ವಕಾಲದ ಉಪಮಾದಿಗಳಿಲ್ಲದಿರುವುದು; ಯೂರೋಪ್ ಭಾಷೆಗಳ, ಮುಖ್ಯವಾಗಿ ಫ್ರೆಂಚ್ ಭಾಷೆಯ, ಪದಗಳ ಉಪಯೋಗ; ರಾಷ್ಟ್ರೀಯ ಭಾವನೆ, ಮೊದಲಾದವು.

## ಇಂಡಿಯದಲ್ಲಿ ಪರ್ಷಿಯನ್ ಸಾಹಿತ್ಯ

ಪರ್ಷಿಯದಲ್ಲೇ ಅಲ್ಲದೆ ಇತರ ದೇಶಗಳಲ್ಲೂ ಪರ್ಷಿಯನ್ ಸಾಹಿತ್ಯ ಬೆಳೆದು ಬಂತು. ಇವುಗಳಲ್ಲಿ ಇಂಡಿಯ ಒಂದು. ಇಂಡಿಯವನ್ನು ಪರ್ಷಿಯನ್ ಸಾಹಿತ್ಯಕ್ಕೆ ಎರಡನೆಯ ತವರು ಎನ್ನಬಹುದು. ನಮಗೆ ತಿಳಿದುಬಂದಿರುವ ಅತ್ಯಂತ ಪ್ರಾಚೀನ ಇಂಡಿಯದ ಪರ್ಷಿಯನ್ ಗ್ರಂಥ ಕರ್ತನು ಅಬೂರೈಹಾನ್ ಅಲ್ಬೇರೂನಿ. ಇವನು ಸಂಸ್ಕೃತವನ್ನು ಅಭ್ಯಾಸ ಮಾಡಿ ಇಂಡಿಯಾ ಚರಿತ್ರೆಯನ್ನು ಬರೆದಿದ್ದಾನೆ. ಇದರಲ್ಲಿ ಹಿಂದೂ ದರ್ಶನಗಳು, ಜ್ಯೋತಿಷಶಾಸ್ತ್ರವೇ ಮೊದಲಾದ ವಿಚಾರಗಳು ಸೇರಿವೆ. ಅಬೂಸಾಲೆಹ್ ಪುರಾತನ ಹಿಂದೂ ಗ್ರಂಥಗಳನ್ನು ಪರ್ಷಿಯನ್ನಿಗೆ ಭಾಷಾಂತರ ಮಾಡಿದನು. ಇವಲ್ಲದೆ ಮಹಮ್ಮದ್ ಪೈಗಂಬರನ ವಿಷಯ ವಾಗಿಯೂ, ಹಲವು ರಾಜರ ಮತ್ತು ರಾಜಸಂತತಿಗಳ ವಿಷಯವಾಗಿಯೂ ಪರ್ಷಿಯನ್‌ನಲ್ಲಿ ಗ್ರಂಥಗಳು ಬೆಳೆದುವು. 'ಉಚ್'ನಲ್ಲಿಯ ಫ಼ೀರೂಸಿ ಕಾಲೇಜಿನ ಮತ್ತು ಡೆಲ್ಲಿಯಲ್ಲಿಯ ನಾಸರಿಯ ಕಾಲೇಜಿನ ಮುಖ್ಯಾಧ್ಯಾ ಪಕನಾದ ಉಸ್ಮಾನ್ ಇಪ್ಪತ್ತುಮೂರು ಸಂಪುಟಗಳನ್ನೊಳಗೊಂಡ 'ತಬಕಾತೆನಾಸಿರಿ' ಎಂಬ ವಿಸ್ತಾರ ಗ್ರಂಥವನ್ನು ಬರೆದಿದ್ದಾನೆ. ಮಧ್ಯ ಮತ್ತು ಪಶ್ಚಿಮ ಏಷ್ಯದ ಇಸ್ಲಾಂ ಮತ್ತು ಇಸ್ಲಾಂ ಪೂರ್ವದ ಚರಿತ್ರೆ ಯನ್ನು ವಿವರಿಸುವ ಈ ಗ್ರಂಥದಲ್ಲಿ ಸುಮಾರು ನಾಲ್ಕು ಅಧ್ಯಾಯಗಳು ಇಂಡಿಯವನ್ನು ಕುರಿತದ್ದಾಗಿವೆ.

ಅಕ್ಬರನ ಪ್ರಖ್ಯಾತ ಮಂತ್ರಿಯಾದ ಅಬುಲ್‌ಫ಼ಜ಼ಲನು 'ಅಕ್ಬರ್ ನಾಮಾ' ಮತ್ತು 'ಅಯಿನ್-ಎ-ಅಕ್ಬರೀ' ಎಂಬ ಎರಡು ದೊಡ್ಡ ಗ್ರಂಥ ಗಳನ್ನು ಬರೆದಿದ್ದಾನೆ. ಇವು ಅಲಂಕಾರಗರ್ಭಿತವಾಗಿ ಅತಿಶಯೋ

ಕ್ತಿಯು ಶೈಲಿಯಲ್ಲಿವೆ. ಇವನ ಸೋದರ ಫೈಸ್ಸೀ ನಳದಮಯಂತಿ ಕಥೆ, ಮಹಾಭಾರತ ಮೊದಲಾದವನ್ನು ಪರ್ಷಿಯನ್‌ನಲ್ಲಿ ಬರೆದಿದ್ದಾನೆ. ಪರ್ಷಿಯದಿಂದ ಬಂದು ಇಂಡಿಯದಲ್ಲಿ ನೆಲಸಿದ ಕವಿಗಳೂ, ಪರ್ಷಿಯನ್ ಕಲಿತ ಇಂಡಿಯದ ಮುಸ್ಲಿಂ ಮತ್ತು ಹಿಂದೂ ಕವಿಗಳೂ ಹಲವರಿದ್ದಾರೆ. ಇವರ ವಿಷಯವನ್ನೆಲ್ಲ ಹೇಳುವುದಕ್ಕೆ ಸ್ಥಳವಿಲ್ಲ.

ರಾಜರ ಚರಿತ್ರೆಗಳನ್ನು ಕವಿಗಳು ಬರೆದಿರುವುದಲ್ಲದೆ, ಕೆಲವು ರಾಜರು ತಮ್ಮ ಜೀವನ ಚರಿತ್ರೆಯನ್ನು ತಾವೇ ಬರೆದಿಟ್ಟಿದ್ದಾರೆ. ಬಾಬರ್ ಚಕ್ರವರ್ತಿಯ ಆತ್ಮಕಥೆ ಯೂರೋಪಿನಲ್ಲೆಲ್ಲ ಹೆಸರಾಗಿದೆ. ಮೂಲ ತುರ್ಕಿಯಲ್ಲಿದ್ದ ಈ ಗ್ರಂಥ ಅಬ್ದುರ್ ರಹೀಮ್‌ಖಾನ್ ಖಿನನ್ ಎಂಬವನಿಂದ ಪರ್ಷಿಯನ್ನಿಗೆ ಭಾಷಾಂತರವಾಗಿದೆ. ಜಹಾಂಗೀರನೂ ತನ್ನ ಆತ್ಮಕಥೆಯನ್ನು ಬರೆದಿಟ್ಟಿದಾನೆ.

ಈಗಿನ ಇಂಡಿಯದ ಪರ್ಷಿಯನ್ ಕವಿಗಳಲ್ಲಿ ಇಂಗ್ಲಿಷ್ ವಿದ್ಯಾವಂತನೂ ದೊಡ್ಡ ದಾರ್ಶನಿಕನೂ ಆದ ಕಾಶ್ಮೀರದ ಸರ್ ಮಹಮ್ಮದ್ ಇಕ್‌ಬಾಲನ ಹೆಸರು ಪ್ರಸಿದ್ಧವಾದ್ದು.

## ಉರ್ದು ಮತ್ತು ಹಿಂದಿ ಸಾಹಿತ್ಯ

ಈಗಿನ ಉರ್ದು ಮತ್ತು ಹಿಂದಿ ಇವೆರಡೂ ಸಂಯುಕ್ತ ಪ್ರಾಂತಗಳಲ್ಲಿ ಪ್ರಚಾರದಲ್ಲಿದ್ದ ಒಂದು ಪ್ರಾಚೀನ ಹಿಂದಿಯ ಬೇರೆಬೇರೆ ರೂಪಗಳೆನ್ನಬಹುದು. ಆದರೂ, ಹಿಂದುಗಳು ಹಿಂದಿಯನ್ನೂ ಮುಸ್ಲಿಮರು ಉರ್ದುವನ್ನೂ ಬೇರೆ ಬೇರೆಯಾಗಿ ಬೆಳಸಿಕೊಂಡು ಬಂದರು. ಬರಹದಲ್ಲಿ ಒಂದು ಸಂಸ್ಕೃತದಿಂದಲೂ ಮತ್ತೊಂದು ಪರ್ಷಿಯನ್ ಮತ್ತು ಅರಬ್ಬಿಗಳಿಂದಲೂ ಪುಷ್ಟಿಗೊಂಡಿವೆ. ಮಾತನಾಡುವ ಉರ್ದು ಇಂಡಿಯದ ಬೇರೆ ಬೇರೆ ಭಾಗಗಳಲ್ಲಿ ಬೇರೆ ಬೇರೆ ತೆರನಾಗಿದೆ. ಶುದ್ಧ ಉರ್ದು ಸಂಯುಕ್ತಪ್ರಾಂತಗಳಲ್ಲೂ ಡೆಲ್ಲಿಯ ಸುತ್ತುಮುತ್ತಲೂ ಪ್ರಚಾರದಲ್ಲಿದೆ ಎನ್ನಬಹುದು. ದಖನಿ ಉರ್ದು ಮರಾಠಿ ಮತ್ತು ದ್ರಾವಿಡ ಭಾಷೆಗಳು ಬೆರಕೆಯಾದ್ದು. ಮುಸ್ಲಿಂ ಆಳಿಕೆಯಲ್ಲಿ ಪರ್ಷಿಯನ್ ಸಂಸ್ಕಾರಹೊಂದಿದ ಹಿಂದಿಯೇ ಉರ್ದು. ಉರ್ದುಭಾಷೆ ಹುಟ್ಟುವುದಕ್ಕೆ ಮುಸ್ಲಿಮರಿಗಿಂತ ಹಿಂದುಗಳೇ ಹೆಚ್ಚು ಕಾರಣವೆನ್ನಬಹುದು. ಮೊಗಲರು,

ಆಫ್‌ಘನರು, ಪರ್ಷಿಯನ್ ಶ್ರೀಮಂತರು—ಇವರೇ ಮೊದಲಾದ ಮುಸ್ಲಿಮರು ಪರ್ಷಿಯನ್ ಭಾಷೆಯಲ್ಲೇ ವ್ಯವಹಾರ ನಡಸುತ್ತಿದ್ದು, ಅವರ ಕೈಕೆಳಗೆ ಕೆಲಸಮಾಡುತ್ತಿದ್ದ ಹಿಂದುಗಳು ತಾವೂ ಪರ್ಷಿಯನ್ ಕಲಿತುಕೊಂಡರು. ಆದರೆ, ತಮ್ಮ ಪರ್ಷಿಯನ್ನಿಗೆ ಮಾತೃಭಾಷೆಯಾದ ಹಿಂದಿಯನ್ನೂ ಬೆರಸುತ್ತಿದ್ದರು. ಈ ಮಿಶ್ರಣಭಾಷೆಯೇ ಉರ್ದು ವಾಯಿತು. ಕಾಲಕ್ರಮದಲ್ಲಿ ಮುಸ್ಲಿಮರು ಕೂಡ ಹಿಂದುಗಳ ಕೂಡ ತಮ್ಮ ವ್ಯವಹಾರದಲ್ಲಿ ಈ ಉರ್ದುವನ್ನೇ ಉಪಯೋಗಿಸತೊಡಗಿದರು. ಬರುಬರುತ ಪರ್ಷಿಯ ಮತ್ತು ಅಫ್ಘಾನೀಸ್ಥಾನದ ಸಂಸರ್ಗ ನಿಂತು ಹೋಗಿ, ಮೊಗಲರು ತಮ್ಮ ಉನ್ನತಿ ಕಳೆದುಕೊಂಡು, ಪರ್ಷಿಯನ್ ಪ್ರಾಬಲ್ಯ ಕಡಮೆಯಾಗಿ ಉರ್ದು ಪ್ರಬಲಿಸಿತು. (ಬಹುಶಃ ಕೊನೆಯ ಮೊಗಲ್ ಚಕ್ರವರ್ತಿಯೇ ಉರ್ದುವಿನಲ್ಲಿ ವ್ಯವಹಾರ ನಡಸುವುದಕ್ಕೆ ಮೊದಲಿಗನು). ಇದರ ಜತೆಗೆ ಇಂಗ್ಲಿಷರೂ ರಾಜಭಾಷೆಯಾಗಿದ್ದ ಪರ್ಷಿಯನ್ನನ್ನು ಓಡಿಸುವುದಕ್ಕೆ ತಾತ್ಕಾಲಿಕವಾಗಿ ಉರ್ದುವಿಗೆ ಉತ್ತೇಜನ ಕೊಟ್ಟರು. ಕಾಲಕ್ರಮದಲ್ಲಿ ಈ ಉರ್ದುವೂ ಹೋಗಿ ಇಂಗ್ಲಿಷ್ ಬಂದು ನೆಲಸಲು ಹಿಂದುಗಳು ತಮ್ಮ ಮಾತೃಭಾಷೆಯ ಜತೆಗೆ ಪರ್ಷಿಯನ್ನಿಗೆ ಬದಲು ಇಂಗ್ಲಿಷನ್ನು ಕಲಿಯಲಾರಂಭಿಸಿದರು. ಆದರೆ, ಮುಸ್ಲಿಮರು ಇಂಗ್ಲಿಷನ್ನು ಹಿಂದುಗಳಷ್ಟು ಬೇಗನೆ ತೆಗೆದುಕೊಳ್ಳದೆ ಪರ್ಷಿಯನ್ ಮತ್ತು ಅರಬ್ಬಿ ಭಾಷೆಗಳಲ್ಲೇ ನಿರತರಾದರು. ಇದರಿಂದ ಈ ಕಾಲದ ಉರ್ದು ಹೆಚ್ಚು ಹೆಚ್ಚಾಗಿ ಪರ್ಷಿಯನ್ ಸಂಸ್ಕಾರಕ್ಕೆ ಒಳಪಟ್ಟು ಹಿಂದಿಗೂ ಉರ್ದುವಿಗೂ ಇದ್ದ ಅಂತರ ಮತ್ತೂ ಹೆಚ್ಚಾಯಿತು. ಹೀಗೆ, ಉರ್ದು ಹಿಂದುಗಳಿಂದಲೇ ಹುಟ್ಟಿ ಹಿಂದು ಮುಸ್ಲಿಮರಿಂದ ಬೆಳೆದು ಬಂದಿದ್ದರೂ, ಕಾಲಕ್ರಮದಲ್ಲಿ ಮುಸ್ಲಿಮರೇ ಅದರಲ್ಲಿ ಹೆಚ್ಚು ವ್ಯವಸಾಯಮಾಡಿ ೧೮–೧೯ನೆಯ ಶತಮಾನಗಳಲ್ಲಿ ಅನೇಕ ಪ್ರಸಿದ್ಧ ಮುಸ್ಲಿಂ ಕವಿಗಳು ಉರ್ದುಭಾಷೆಯಲ್ಲಿ ಆದರು. ಹಿಂದಿಯನ್ನು ಹಿಂದುಗಳು ಬೆಳಸಿಕೊಂಡು ಬಂದರು. ಆದರೂ, ಹಿಂದಿಯಲ್ಲಿ ಪರ್ಷಿಯನ್ ಶಬ್ದಗಳೂ ಸಂಸ್ಕಾರವೂ ಇಲ್ಲದೆ ಇಲ್ಲ. ಪೃಥ್ವೀರಾಜನ ಆಸ್ಥಾನ ಕವಿಯಾದ ಚಂದ್ ಬರ್ದೈ ಇವನ 'ಪೃಥ್ವೀರಾಜ್ ರಾಯ್‌ಸಾ' ಎಂಬ

ಹಿಂದೀ ಕಾವ್ಯದಲ್ಲಿ ಹಲವು ಪರ್ಷಿಯನ್ ಶಬ್ದಗಳಿವೆ. ಹೀಗೆಯೇ ಜಾಯಿಸ್ ಎಂಬವನು ಕ್ರಿ. ಶ. ೧೫೪೦ರಲ್ಲಿ ಬರೆದ, ಚಿತ್ತೂರಿನ ರಾಣಿ ಪದ್ಮಾವತಿಯ ವಿಷಯವಾದ 'ಪದ್ಮಾವತ್' ಎಂಬ ಹಿಂದೀ ಕಾವ್ಯದಲ್ಲಿ ಹಲವು ಪರ್ಷಿಯನ್ ಶಬ್ದಗಳಿವೆ. ಪ್ರಸಿದ್ಧ ಹಿಂದೀ ಕವಿಗಳಾದ ಕಬೀರ್ ಮತ್ತು ತುಳಸೀದಾಸರು ಕೂಡ ತಮ್ಮ ಕಾವ್ಯ ಕವನಗಳಲ್ಲಿ ಎಷ್ಟೋ ಪರ್ಷಿಯನ್ ಶಬ್ದಗಳನ್ನು ಬಳಸಿದ್ದಾರೆ.

ಕಬೀರನ ಹಾಡುಗಳೂ ತುಳಸೀದಾಸನ ರಾಮಾಯಣವೂ ರಮಾನಂದನ ಕೀರ್ತನೆಗಳೂ ಲೋಕಪ್ರಸಿದ್ಧವಾಗಿವೆ. ಇವರಲ್ಲದೆ ಕೃಷ್ಣದಾಸ್, ಪರಮಾನಂದದಾಸ್, ಕುರುಡ ಸೂರದಾಸ್ ಮೊದಲಾದ ಉತ್ತಮ ಕವಿಗಳು ಹಿಂದಿಯಲ್ಲಿ ಆಗಿದ್ದಾರೆ. ಅಕ್ಬರ್, ಔರಂಗಜ್ಜೇಬ್—ಮೊದಲಾದವರ ಆಸ್ಥಾನದಲ್ಲಿ ಹಲವರು ಹಿಂದೀ ಕವಿಗಳಿದ್ದರು. ನವಾಜ್ ಎಂಬ ಹಿಂದೀ ಕವಿ ಫರುಖ್‌ಸಿಯಾರ್ ಚಕ್ರವರ್ತಿಯ (ಕ್ರಿ. ಶ. ೧೭೧೩-೧೯) ಅಪ್ಪಣೆ ಮೇರೆ ಶಾಕುಂತಲ ನಾಟಕವನ್ನು ಉರ್ದುವಿಗೆ ಭಾಷಾಂತರಿಸಿದನು.

ಹಿಂದು ಕವಿಗಳು ಪರ್ಷಿಯನ್ ಮತ್ತು ಅರಬ್ಬಿ ಶಬ್ದಗಳನ್ನೂ ಭಾಷಾಮರ್ಯಾದೆಗಳನ್ನೂ ತಮ್ಮ ಭಾಷೆಯಲ್ಲಿ ಉಪಯೋಗಿಸುತ್ತಿದ್ದಾಗ, ಇಂಡಿಯದಲ್ಲಿ ನೆಲಸಿದ ಪರ್ಷಿಯನ್ನರು ಹಿಂದಿ ಮಾತುಗಳನ್ನೂ ಮರ್ಯಾದೆಗಳನ್ನೂ ತಮ್ಮ ಭಾಷೆಯಲ್ಲಿ ಬಳಸುತ್ತ ಬಂದರು. ಆದರೂ, ಉರ್ದು ಕವಿಗಳು ವಸ್ತು, ವೃತ್ತ, ಶೈಲಿ, ಅಲಂಕಾರ ಮೊದಲಾದವುಗಳಲ್ಲೆಲ್ಲ ಪರ್ಷಿಯನ್ನನ್ನೂ, ಅದಕ್ಕೂ ಮೂಲವಾದ ಅರಬ್ಬೀ ಸಾಹಿತ್ಯವನ್ನೂ ಅನುಕರಿಸುತ್ತ ಬಂದರು.

ದಕ್ಷಿಣದಲ್ಲಿ ಬಿಜಾಪುರವೇ ಮೊದಲಾದ ಬಹಮನೀ ರಾಜ್ಯಗಳು ಕ್ರಮೇಣ ಪರ್ಷಿಯನ್ನನ್ನು ತೆಗೆದುಹಾಕಿ ಹಿಂದಿಗೆ ಉತ್ತೇಜನಕೊಡುತ್ತ ಬಂದುವು. ಈ ದಕ್ಷಿಣದ ಹಿಂದಿಯಲ್ಲಿ ಕೊಂಕಣಿ ಮತ್ತು ಇತರ ದಕ್ಷಿಣ ಭಾಷೆಗಳ ಬೆರಕೆ ಕೊಂಚ ಇದೆ. ಈ ದಕ್ಷಿಣ ಹಿಂದಿಯಲ್ಲಿ ಅನೇಕ ಕವಿಗಳು ಭಾಷಾಂತರ ಮಾಡಿರುವುದೇ ಅಲ್ಲದೆ ಸ್ವತಂತ್ರಕಾವ್ಯಗಳನ್ನೂ ರಚಿಸಿರುತ್ತಾರೆ. ಇಬ್ನೆನಿಷಾತಿ ಸಂಸ್ಕೃತದ ಶುಕಸಪ್ತತಿಯನ್ನು 'ತೋತಿ

ನಾಮ"* ಎಂಬ ಹೆಸರಿನಿಂದಲೂ, 'ಬಸಾತಿನ್' ಎಂಬ ಪರ್ಷಿಯನ್ ಕಾವ್ಯವನ್ನು 'ಫೂಲ್‌ಬನ್' ಎಂಬ ಹೆಸರಿನಿಂದಲೂ ಅನುವಾದಿಸಿದ್ದಾನೆ. ತಹ್‌ಸೀನ್‌ಉದ್ದೀನ್ ಕಾಮರೂಪ ಮತ್ತು ಕಲ ಎಂಬ ಕಥೆಯನ್ನನುಸರಿಸಿ ಪದ್ಯಕಟ್ಟಿರುತ್ತಾನೆ. ೧೭ನೆಯ ಶತಮಾನದ ಕೊನೆಯಲ್ಲಿ ಬಿಜಾಪುರ ಮತ್ತು ಗೋಲ್ಕಂಡ ರಾಜ್ಯಗಳು ಉರುಳಿಹೋಗಲು, ತಮ್ಮ ಆಶ್ರಯದಾತರನ್ನು ಕಳೆದುಕೊಂಡ ದಕ್ಷಿಣ ಹಿಂದೀ ಕವಿಗಳು ಉತ್ತರಕ್ಕೆ ಹೋಗಿ ಡೆಲ್ಲಿಯಲ್ಲಿ ನೆಲಸಿದರು. ಹೀಗೆ ಡೆಲ್ಲಿಯಲ್ಲಿ ಆರಂಭವಾದ ಹಿಂದಿ ಮತ್ತು ಉರ್ದು ಕವಿಗಳಲ್ಲಿ ಆಬ್ರು, ಹಾತಿಮ್, ಮಸ್‌ಹರ್, ನಾಜಿ, ತಾಬಾನ್—ಮೊದಲಾದವರು ಪರ್ಷಿಯನ್ ಶೈಲಿಯನ್ನನುಸರಿಸಿ ಪರ್ಷಿಯನ್ನಿಂದ ಅನೇಕ ಭಾಷಾಂತರಗಳನ್ನು ಮಾಡಿದರು. ಇವರ ನಂತರ ಉರ್ದು ಸಾಹಿತ್ಯದಲ್ಲಿ ಪ್ರಸಿದ್ಧ ಕವಿಗಳೆನಿಸಿಕೊಂಡ ಸೂಫಿ ಕವಿ ಮೀರ್ ದರ್ದ್, ಭಾವಗೀತಾ ಕವಿ ಮೀರ್ ತಕಿ ಮೀರ್ ಮೊದಲಾದವರು ಆಗಿಹೋದರು. ಮೀರ್ ತಕಿ ಮೀರಿನ ಪ್ರಗಾಥಗಳು ಉರ್ದು ಸಾಹಿತ್ಯ ರತ್ನಗಳಲ್ಲಿ ಪರಿಗಣಿತವಾಗಿವೆ.

ನಾದಿರ್‌ಷಾವಿನ ದಂಗೆ, ಮಹರಾಷ್ಟ್ರರ ಏಳಿಗೆ—ಮೊದಲಾದ ಕಾರಣಗಳಿಂದ ಡೆಲ್ಲಿ ರಾಜ್ಯದ ಪ್ರಾಬಲ್ಯ ಕುಗ್ಗಿ, ಡೆಲ್ಲಿಯಲ್ಲಿ ಬದುಕಿಗೇ ತೊಂದರೆಯಾಗಲು ಕವಿಗಳು ಆರೆಬರೆ ಸ್ವತಂತ್ರ ನವಾಬರ ಆಳಿಕೆಯಲ್ಲಿದ್ದ ಲಕ್ನೋಕ್ಕೆ ಹೋಗಿ ನೆಲಸಿದರು. ಈ ಲಕ್ನೋ ನವಾಬರು ಷಿಯಾಪಂಥೀಯರಾದ್ದರಿಂದ ಷಿಯಾ ಕವಿಗಳಿಗೆ ಉತ್ತೇಜನ ಸಿಕ್ಕಿ, ಆ ಸಂಬಂಧವಾದ ಕಾವ್ಯಗಳು ಹೆಚ್ಚಾಗಿ ಹುಟ್ಟಿದುವು. ಮಹಮ್ಮದ್ ಪೈಗಂಬರನ ಮೊಮ್ಮಗ ಹುಸೇನಿನ ದುರಂತ ಮರಣವನ್ನು ಕುರಿತು ಕವನಗಳು ವಿಶೇಷವಾಗಿ ರಚಿತವಾದುವು. ಇವನ್ನು ಬರೆದ ಕವಿಗಳಿಗೆ 'ಮರ್ಸಿಯಾ ಕವಿಗಳು' ಎಂದು ಹೆಸರು. ಇಂಡಿಯದಲ್ಲಿ ಕಟ್ಟಿದ ಈ 'ಚರಮಕವನ'ಗಳು, ಅದರಲ್ಲೂ ಅನಿಸ್ ಮತ್ತು ದಬೀರ್ ಎಂಬ ಕವಿಗಳಿಂದ ಕಟ್ಟಿದುವು, ಉಳಿದೆಲ್ಲಾ ಇಸ್ಲಾಂ ಭಾಷೆಗಳಲ್ಲಿ—ಪರ್ಷಿಯನ್

* ಇವನ್ನು ಭಾಷಾಂತರ ಮಾಡಿದವನು ಗವ್ವಾಸಿ ಎಂದೂ ಹೇಳುತ್ತಾರೆ.

ಅರಬ್ಬೀ ಭಾಷೆಗಳಲ್ಲೂ ಕೂಡ—ಇರುವ ಈ ವಿಷಯದ ಚರಮಕವನಗಳಿಗಿಂತ ಬಹು ಉತ್ಕೃಷ್ಟವೆಂದು ಪರಿಗಣಿತವಾಗಿವೆ. ಲಕ್ನೋವಿನ ೧೮-೧೯ನೆಯ ಶತಮಾನದ ಪೂರ್ವಾರ್ಧದ ಕವಿಗಳಲ್ಲಿ ಇನ್‌ಷಾ, ಜುರ್ರತ್, ಮುಸ್‌ಹಫ್ಫಿ, ಆತಷ್, ನಾಸಿಖ್—ಮೊದಲಾದವರನ್ನು ಹೆಸರಿಸಬಹುದು. ಒಟ್ಟಿನಲ್ಲಿ ಈ ಕವಿಗಳು ಭಾಷೆಯನ್ನು ಕೊಂಚಮಟ್ಟಿಗೆ ಸಂಸ್ಕರಿಸಿ ಉತ್ತಮಗೊಳಿಸಿದ್ದರೂ, ವಸ್ತು ಭಾವ ಅಲಂಕಾರಾದಿಗಳು ಹಳೆಯುವೇ.

ಕೊನೆಯ ಮೊಗಲ್ ಚಕ್ರವರ್ತಿ ಸಿರಾಜ್ ಉದ್ದೀನ್ ಬಹದೂರ್ ಷಹನ ನಾಮಮಾತ್ರ ಆಳಿಕೆಯಲ್ಲಿ ಮತ್ತೆ ಉರ್ದು ಸಾಹಿತ್ಯ ಕೊಂಚ ತಲೆಯೆತ್ತಿಕೊಂಡು ಡೆಲ್ಲಿಯಲ್ಲಿ ಗಾಲಿಬ್, ಮೋಮಿನ್, ಸ್ಹೌಕ್—ಎಂಬ ಮೂವರು ಪ್ರಸಿದ್ಧ ಕವಿಗಳು ಹುಟ್ಟಿಕೊಂಡು ಲಕ್ನೋ ಕವಿಗಳನ್ನು ಮೀರಿಸಿದರು. ಅಖ್ತರ್ ಎಂಬ ಲೇಖನ ನಾಮವನ್ನು ಇಟ್ಟುಕೊಂಡಿದ್ದ ಔಧಿನ ವಾಜಿದ್ ಆಲಿ ಷಾ ಎಂಬ ದೊರೆ ಲಕ್ನೋದಲ್ಲಿ ಉರ್ದು ನಾಟಕವನ್ನು ಮೊದಲು ತಂದವನೆಂದು ಪ್ರಸಿದ್ಧನಾಗಿದ್ದಾನೆ. ಇವನ ಅಪ್ಪಣೆಮೇರೆ ಬರೆದ ಮೊದಲನೆಯ ಉರ್ದು ನಾಟಕ 'ಇಂದರ್ ಸಭಾ' ಎಂಬುದು. ಇದನ್ನು ಅಮಾನತ್ ಎಂಬವನು ಯಾವುದೋ ಪುರಾತನ ಸಂಸ್ಕೃತ ಕಥೆಯಿಂದ ಎತ್ತಿ ಬರೆದನು. ಇದರ ಇಂದ್ರ ವೇದದ ಇಂದ್ರ. ಇದರಲ್ಲಿ ರಾಣಿಯಾದ ಸಬ್ಜ್‌ಪರಿ ಫಲವತ್ತತೆಗೂ, ಅವಳ ಪ್ರಣಯಿ ಗುಲ್‌ಫಾಮ್ ಹೂವಿಗೂ ಸಂಕೇತವಾಗಿದ್ದಾರೆ. ಕಾಲಾದೇವ್ ಅಥವಾ ರಾತ್ರಿ ಈ ಪ್ರೇಮಿಗಳಿಗೆ ನೆರವಾಗುತ್ತದೆ. ಲಾಲ್‌ದೇವ್ ಅಥವಾ ಹಗಲು ಇವರ ಪ್ರೇಮವನ್ನು ಬಯಲುಮಾಡುತ್ತದೆ. ಕೊನೆಯಲ್ಲಿ ಪ್ರೇಮಿಗಳು ಒಂದುಗೂಡಿ ನಾಟಕ ಹರ್ಷದಲ್ಲಿ ಮುಕ್ತಾಯವಾಗುತ್ತದೆ.

ಡೆಲ್ಲಿ ಮತ್ತು ಲಕ್ನೊ ರಾಜ್ಯಗಳು ಹಾಳಾಗಲು ಉರ್ದು ಕವಿಗಳಿಗೆ ರಾಮ್‌ಪುರ್, ಹೈದರಾಬಾದ್—ಮೊದಲಾದ ಸಣ್ಣಪುಟ್ಟ ಸಂಸ್ಥಾನಗಳೇ ಆಶ್ರಯವಾದುವು. ಅಲ್ಲದೆ, ಪರ್ಷಿಯನ್ನನ್ನು ಓಡಿಸುವುದರಲ್ಲಿ ಉದ್ಯುಕ್ತರಾಗಿದ್ದ ಬ್ರಿಟಿಷ್ ಅಧಿಕಾರಿಗಳಿಂದಲೂ ಉರ್ದುವಿಗೆ ಕೊಂಚ ಸಹಾಯ ಸಿಕ್ಕಿತು. ಈ ಕಾಲದಲ್ಲಿ ಹಿತೋಪದೇಶ, ಪಂಚತಂತ್ರ, ಶಾಕುಂತಲ—ಮೊದಲಾದ ಪ್ರಸಿದ್ಧ ಸಂಸ್ಕೃತ ಕೃತಿಗಳು ಉರ್ದುವಿಗೆ

ಭಾಷಾಂತರವಾದದ್ದಲ್ಲದೆ, ಅರಬ್ಬಿ ಮುಂತಾದ ಭಾಷೆಗಳಿಂದ ಭಾಷಾಂತರಗಳೂ ಸ್ವತಂತ್ರ ಕಾವ್ಯಗಳೂ ಬಂದುವು. ೧೯ನೆಯ ಶತಮಾನದ ಕೊನೆಯಲ್ಲಿ ಪಾಶ್ಚಾತ್ಯ ಸಂಸ್ಕೃತಿ ನಾಗರಿಕತೆಗಳ ಪ್ರಭಾವದಿಂದ ರಾಜರ ಮತ್ತು ಶ್ರೀಮಂತರ ಆಶ್ರಯ ಕೋರುವುದನ್ನು ಬಿಟ್ಟು ಕವಿಗಳು ಜನ ಮೆಚ್ಚಿಗೆಯನ್ನು ಸಂಪಾದಿಸಲು ಆರಂಭಿಸಿದರು. ಮೊದಲು ಪಾಶ್ಚಾತ್ಯ ಅನುಕರಣೆಗೆ ಆರಂಭವಾಗಿ ಅನೇಕ ಭಾಷಾಂತರಗಳೂ ಅನುಕರಣಗಳೂ ಆದುವು. ಅಲಿಘರ್ ಮುಸ್ಲಿಂ ಸಂಸ್ಕೃತಿಯ ಮತ್ತು ವಿದ್ಯೆಯ ಕೇಂದ್ರವಾಯಿತು. ಅನೇಕ ಕವಿಗಳೂ, ಜೀವನ ಚರಿತ್ರಕಾರರೂ, ಕಾದಂಬರಿಕಾರರೂ, ಕುರಾನ್ ವ್ಯಾಖ್ಯಾನಕಾರರೂ ಈ ಕಾಲದಲ್ಲಿ ಆದರು. ಮುಸ್ಲಿಮರು ಹಿಂದುಗಳು ಎಂಬ ಭೇದವಿಲ್ಲದೆ ಇಬ್ಬರೂ ಉರ್ದು ಸಾಹಿತ್ಯಕ್ಕಾಗಿ ಕೆಲಸಮಾಡಿದ್ದಾರೆ. ಪ್ರಸಿದ್ಧ ಕಾದಂಬರಿಕಾರನಾದ ಪಂಡಿತ ರತನ್ ನಾಥ್ ಸರಷಾರ್, ಬಂಗಾಲಿಯಿಂದ ಉರ್ದುವಿಗೆ ಅನೇಕ ಕಾದಂಬರಿಗಳನ್ನು ಭಾಷಾಂತರಿಸಿದ ಜ್ವಾಲಾ ಪ್ರಸಾದ ಬರ್ಕ್, ಸಂಸ್ಕೃತ, ಪರ್ಷಿಯನ್ ಮತ್ತು ಅರಬ್ಬಿಗಳಲ್ಲಿ ಪಂಡಿತನಾಗಿದ್ದ ಗಿರ್ಧಾರಿ ಪ್ರಸಾದ್ ಬರ್ಕ್ (ಇವನು ಭಾಗವತವನ್ನು ಉರ್ದುವಿನಲ್ಲಿ ಪದ್ಯರೂಪದಲ್ಲಿ ಬರೆದಿದ್ದಾನೆ) — ಮೊದಲಾದವರನ್ನು ಹಿಂದೂ ಉರ್ದು ಸಾಹಿತಿಗಳಲ್ಲಿ ಹೆಸರಿಸಬಹುದು. ಈಗಿನ ಪ್ರಸಿದ್ಧ ಉರ್ದು ಬರಹಗಾರರಲ್ಲಿ ಸರ್ ಮಹಮ್ಮದ್ ಇಕ್‌ಬಾಲರನ್ನೂ ಅವರಿಗಿಂತ ಕೊಂಚ ಮೊದಲಿನ ಸಯದ್ ಅಕ್ಬರ್ ಹುಸೇನರನ್ನೂ ಹೇಳಬಹುದು.*

ಈಗ ಉಸ್ಮಾನಿಯ ವಿಶ್ವವಿದ್ಯಾನಿಲಯ ಉರ್ದುವಿಗೆ ಕೇಂದ್ರಸ್ಥಾನವೂ ಬಲಸ್ಥಾನವೂ ಆಗಿದೆ. ಇದರಲ್ಲಿ ಶಿಕ್ಷಣ ಎಲ್ಲ ತರಗತಿಗಳಲ್ಲೂ, ಎಲ್ಲ ಶಾಸ್ತ್ರಗಳಲ್ಲೂ ಉರ್ದು ಮೂಲಕವೇ ನಡೆಯುತ್ತದೆ. ಪಾಶ್ಚಾತ್ಯ ಭಾಷೆಗಳಿಂದಲೂ ಅರಬ್ಬೀ ಪರ್ಷಿಯನ್ ಭಾಷೆಗಳಿಂದಲೂ ಗ್ರಂಥಗಳನ್ನು ಭಾಷಾಂತರ ಮಾಡುವುದಕ್ಕಾಗಿ ಒಂದು ಪ್ರತ್ಯೇಕ ಇಲಾಖೆಯನ್ನೇ ಏರ್ಪಡಿಸಿದೆ.

* ಈಚೆಗೆ ಇವರಿಬ್ಬರೂ ಕಾಲವಶರಾದರು.

## ಅಧ್ಯಾಯ ೬

## ಶಾಸ್ತ್ರ, ಕಲೆ, ವಿದ್ಯಾಭ್ಯಾಸ

ಇಸ್ಲಾಂ ಪೂರ್ವದಲ್ಲೂ ಆರಂಭದಲ್ಲೂ ಓದು ಬರಹ ಅರಿತಿದ್ದವರು ಅತಿವಿರಳ. ಆಗಿನ ಅರಬ್ಬಿ ವಿದ್ಯೆಯೆಲ್ಲಾ ಹಾಡು, ಕಥೆ, ಅಲ್ಪ ಸ್ವಲ್ಪ ಜ್ಯೋತಿಷ ಇವುಗಳಲ್ಲೇ ಮುಗಿದಿತ್ತು. ಶಿಕ್ಷಣಕ್ಕಾಗಿ ಏರ್ಪಟ್ಟ ಸಂಸ್ಥೆಗಳು ಯಾವುವೂ ಇರಲಿಲ್ಲ. ಜಾತ್ರೆಗಳ ಕಾಲದಲ್ಲಿ ಕವಿಗಳೂ ಹಾಡುಗಾರರೂ ತಮ್ಮ ತಮ್ಮ ಕವನಗಳನ್ನೂ ಹಾಡುಗಳನ್ನೂ ಓದಿ ಹಾಡುತ್ತಿದ್ದರು. ಇವುಗಳಲ್ಲಿ ಅರಬ ಪುರಾಣ ಕಥೆಗಳೇ ಅಲ್ಲದೆ, ರುಸ್ತುಮ್‌ನೇ ಮೊದಲಾದ ವೀರ ಪುರುಷರ ಚರಿತ್ರೆಯನ್ನೊಳಗೊಂಡ ಇರಾನ್ ಪುರಾಣಗಳೇ ಮೊದಲಾದವನ್ನೂ ಹೇಳುತ್ತಿದ್ದರು. ಮುಹಮ್ಮದ್ ಕಾರಣಾಂತರಗಳಿಂದ ಕವಿಗಳಿಗೆ ಉತ್ತೇಜನ ಕೊಡದೆ ಜಾತ್ರೆಗಳಲ್ಲಿ ಈ ನೆರವಿಯನ್ನು ತೆಗೆದು ಹಾಕಿದರೂ, ಜ್ಞಾನಾರ್ಜನೆ ಮಾಡುವಂತೆ ಎಲ್ಲರಿಗೂ ಉಪದೇಶಿಸಿದ್ದಾನೆ. "ಏಬ್ರಹಮ್ಮನ ಮಕ್ಕಳಿಗೆ ನಾವು ಜ್ಞಾನವನ್ನೂ ಗ್ರಂಥವನ್ನೂ ಕೊಟ್ಟಿದ್ದೇವೆ" (ಕುರಾನ್) ಜ್ಞಾನಾರ್ಜನೆ ಪ್ರತಿಯೊಬ್ಬ ಮುಸ್ಲಿಮನಿಗೂ—ಹೆಂಗಸಿಗೂ ಗಂಡಸಿಗೂ—ಕರ್ತವ್ಯವೆಂದೂ, ಜ್ಞಾನವನ್ನು ಅದು ಚೀನಾದಲ್ಲಿದ್ದರೂ ಸಾಧಿಸಿ ಪಡೆಯಬೇಕೆಂದೂ ಮುಹಮ್ಮದ್ ಹೇಳುತ್ತಿದ್ದನು.

ಮೇಲೆಯೇ ಹೇಳಿರುವಂತೆ ಮೆಕ್ಕಾ ಅಥವಾ ಮದೀನದಲ್ಲಿ ಯಾವ ತರದ ವಿದ್ಯಾಶಾಲೆಯೂ ಇರಲಿಲ್ಲ. ಜನರು ವಿದ್ಯಾರ್ಜನೆಗಾಗಿ ಸಿರಿಯ, ಪರ್ಷಿಯ, ಮೆಸೊಪೊಟೇಮಿಯಗಳಿಗೆ ಹೋಗಿ ಅಲ್ಲಿಯ ಪ್ರಸಿದ್ಧ ವಿದ್ಯಾಪೀಠಗಳಲ್ಲಿ ಓದಿ ಬರುತ್ತಿದ್ದರು. ಮುಸ್ಲಿಮರು ಮನೆ ಮಕ್ಕಳುಗಳನ್ನು ಬಿಟ್ಟು ದೇಶಾಂತರಕ್ಕೆ ಹೋಗಿ, ಮುಹಮ್ಮದನ ಮಾತಿನ ಮೇಲೆ ಮುಸ್ಲಿಂ ಇತರರ ಕೈಕೆಳಗೆ ವಿದ್ಯಾಭ್ಯಾಸಮಾಡಿ ಬರುತ್ತಿದ್ದರು. ಎರಡನೆಯ ಕಲೀಫನು ಕೂಫ, ಬಸ್ರ, ದಮಾಸ್ಕಸ್—ಮೊದಲಾದೆಡೆಗಳ ಮಸೀದಿಗಳಲ್ಲಿ ಕೆಲವು ಉಪನ್ಯಾಸಕರನ್ನು ನೇಮಿಸಿದನು. ಇವರಿಗೆ ಕಾಸ್ ಅಥವಾ ಕಥಕರು ಎಂದು ಹೆಸರು. ಇವರು ಹಿಂದಿನ ಪುರಾಣ ಕಥೆಗಳನ್ನು

ಬಿಟ್ಟು ಕುರಾನನ್ನೂ ಮಹಮ್ಮದನ ವಿಷಯವಾಗಿ ಹೇಳಿ ಕೇಳಿದ ಸಂಗತಿಗಳನ್ನೂ ಹೇಳುತ್ತಿದ್ದರು. ಹೀಗೆ ಮಸೀದಿ ಪೂಜಾಲಯವೇ ಅಲ್ಲದೆ ವಿದ್ಯಾಲಯವೂ ಆಗಹತ್ತಿತು. ಈ ಉಪನ್ಯಾಸಕರೇ ಕ್ರಮೇಣ ಹೆಚ್ಚಿ ಮುಂದಿನ ಮಸೀದಿ—ಮದ್ರಸ (ಪಾಠಶಾಲೆ)ಗಳಿಗೆ ಬೀಜಭೂತ ರಾದರು.. ಉಮಯ್ಯರ ಆಳಿಕೆಯ ಅಂತ್ಯದ ವೇಳೆಗೆ ಮುಸ್ಲಿಮರು ಚರಿತ್ರೆ, ಭೂಗೋಳ, ಜ್ಯೋತಿಷ, ದರ್ಶನ, ದೇವತಾಶಾಸ್ತ್ರ ಮೊದಲಾ ದುವನ್ನು ಅಭ್ಯಾಸಮಾಡಿದ್ದರು.

ಅಬ್ಬಾಸಿಯರ ಆಳಿಕೆ ಮುಸ್ಲಿಂ ವಿದ್ಯೆಯ ಸ್ವರ್ಣಯುಗವೆನ್ನ ಬಹುದು. ಈ ವೇಳೆಗೆ ಮಸೀದಿಗಳು, ದರ್ಶನ, ದೇವತಾಶಾಸ್ತ್ರ— ಮೊದಲಾದ ಧಾರ್ಮಿಕ ವಿದ್ಯೆಗಳಿಗೇ ಅಲ್ಲದೆ ಇತರ ಕಲಾಶಾಸ್ತ್ರಗಳ ಅಭ್ಯಾಸಕ್ಕೂ ಮನೆಯಾಯಿತು. ಬಸ್ರಾ ಮತ್ತು ಕೂಫ಼ಗಳು ಪ್ರಸಿದ್ಧ ಜ್ಞಾನಕೇಂದ್ರಗಳಾಗಿ ಬಗ್‌ದಾದನ್ನು ಮೀರಿಸಿದುವು. ನಾನಾ ವಿಷಯಗಳಮೇಲೆ ಉಪನ್ಯಾಸ ಕೇಳಲು ಪ್ರತಿದಿನವೂ ಕೈರೊ ಮಸೀದಿಗೆ ೫,೦೦೦ ಜನರ ಮೇಲೆ ಬರುತ್ತಿದ್ದರೆಂದು, ಪ್ರಸಿದ್ಧ ಕವಿಯೂ ಯಾತ್ರಿ ಕನೂ ಆದ ನಾಸಿರ್ ಖುಸ್ರೊ (೧೧ನೆಯ ಶ.ಮಾ.) ಬರೆದಿದ್ದಾನೆ. ಶಿಕ್ಷಣ ಸಾಮಾನ್ಯವಾಗಿ ಪ್ರಶ್ನೋತ್ತರರೂಪದ ಉಪನ್ಯಾಸ ಚರ್ಚೆಗಳ ಮೂಲಕ ನಡೆಯುತ್ತಿತ್ತು. ಎಲ್ಲರೂ ಯಾವ ಅಡಚಣೆಯೂ ಇಲ್ಲದೆ ಇವುಗಳಲ್ಲಿ ಭಾಗವಹಿಸಬಹುದಾಗಿತ್ತು. ಪ್ರಸಿದ್ಧ ಉಪನ್ಯಾಸಕನು ನೂರಾರು ಶಿಷ್ಯ ರನ್ನೂ ಸಾವಿರಾರು ಶ್ರೋತೃಗಳನ್ನೂ ಆಕರ್ಷಿಸುತ್ತಿದ್ದನು. ಅಬ್ಬಾಸಿ ಖಲೀಫರು ಅನೇಕ ವೇಳೆ ತಾವೂ ಚರ್ಚೆಗಳಲ್ಲಿ ಭಾಗ ವಹಿಸುತ್ತಿದ್ದರು. ಈ ವಿಧವಾದ ಜ್ಞಾನಪ್ರಸಾರವೇ ಅಲ್ಲದೆ, ಸರಿಯಾದ ವಿದ್ಯಾಶಾಲೆಗ ಳನ್ನೂ ಏರ್ಪಡಿಸಿ ಸಾಹಿತ್ಯ, ಭಾಷೆ, ವ್ಯಾಕರಣ, ಅಲಂಕಾರ, ಜ್ಯೋತಿಷ, ಗಣಿತ—ಮೊದಲಾದ ಶಾಸ್ತ್ರಗಳ ಶಿಕ್ಷಣಕ್ಕೆ ಅನುಕೂಲಪಡಿಸಿದರು. ಈಗಿನಂತೆ ವ್ಯವಸ್ಥೆಯಾದ ಪಾಠಪ್ರವಚನಕ್ರಮ, ಬೋಧ್ಯ ವಿಷಯ ಕ್ರಮ—ಯಾವುದೂ ಇರಲಿಲ್ಲ. ಪ್ರತಿಯೊಬ್ಬ ಗುರುವೂ ಅವನವನ ದಾರಿಯನ್ನು ಹಿಡಿದುಕೊಂಡು ಹೋಗುತ್ತಿದ್ದನು. ಮಸೀದಿಗಳು, ಪವಿತ್ರಸ್ಥಳಗಳು—ಇವೇ ಅಲ್ಲದೆ ಇತರ ಸ್ಥಳಗಳಲ್ಲೂ ಧನಿಕರ ಸಹಾಯ

ದಿಂದ ವಿದ್ಯಾಶಾಲೆಗಳು ಹುಟ್ಟಿಕೊಂಡುವು. ಕೆಲವು ವೇಳೆ ಗುರುವಿನ ಮನೆಯೇ ಒಂದು ವಿದ್ಯಾಶಾಲೆಯಾಗುತ್ತಿತ್ತು. ಮಸೀದಿ, ಪವಿತ್ರ ಸ್ಥಳ, ವೈದ್ಯಶಾಲೆ—ಮೊದಲಾದುವುಗಳಿಗೆ ರಾಜರೂ ಶ್ರೀಮಂತರೂ ಬಿಟ್ಟ ದತ್ತಿಗಳಿಂದ ಅಧ್ಯಾಪಕರಿಗೂ ವಿದ್ಯಾರ್ಥಿಗಳಿಗೂ ಸಹಾಯಸಿಕ್ಕುತ್ತಿತ್ತು. ಕೆಲವು ವೇಳೆ ರಾಜಕೋಶದಿಂದಲೂ ಸಹಾಯ ದೊರಕುತ್ತಿತ್ತು. ಶಿಷ್ಯನು ಗುರುವಿನಲ್ಲಿ ವಿದ್ಯೆ ಓದಿ ಅವನಿಂದ ಯೋಗ್ಯತಾಪತ್ರ ಪಡೆಯುವ ಏರ್ಪಾಡೂ ಇತ್ತು. ಅನೇಕವೇಳೆ ಶಿಷ್ಯನು ಗುರುವಿನ ಮನೆಯವ ನೊಬ್ಬನಂತೆ ಗುರುವಿಗಾಗಿ ದುಡಿಯುತ್ತಿದ್ದನು. ಮಸೀದಿಗಳಲ್ಲಿ ಗುರು ಶಿಷ್ಯರ ವಾಸಕ್ಕಾಗಿ ಪ್ರತ್ಯೇಕ ಭಾಗಗಳಿದ್ದುವು. ಬಹುಕಾಲ ಮುಸ್ಲಿ ಮರಿಗೆ ಎಲ್ಲಾ ಶಾಸ್ತ್ರಜ್ಞಾನಗಳಿಗೂ ಕುರಾನ್ ಗ್ರಂಥವೇ ಮೂಲಾ ಧಾರವೂ, ಅರಬ್ಬಿ ಭಾಷೆಯೇ ಸಾಧನವೂ ಆಗಿದ್ದುವು. ಪರ್ಷಿಯನ್ ಭಾಷೆಯ ಉಪಯೋಗ ಕಾವ್ಯ, ಚರಿತ್ರೆ, ಅಲಂಕಾರ—ಮೊದಲಾದು ವುಗಳಿಗೆ ಮಾತ್ರ ಅಡಕವಾಗಿತ್ತು. ೧೮ನೆಯ ಶತಮಾನದ ವರೆಗೆ ಶಾಸ್ತ್ರ, ದರ್ಶನ, ಶಾಸ್ತ್ರ, ದೇವತಾಶಾಸ್ತ್ರ ಮೊದಲಾದ ಎಲ್ಲ ವಿಷಯಗಳಲ್ಲೂಮುಸ್ಲಿ ಮರಿಗೆ ಅರಬ್ಬಿ ಭಾಷೆಯೇ ಏಕಮಾತ್ರ ಸಾಧನವಾಗಿತ್ತು. ಈಗಲೂಕೂಡ ಈ ವಿಷಯಗಳಲ್ಲಿ ಅತ್ಯುತ್ತಮ ಗ್ರಂಥಗಳು ದೊರೆಯುವುದು ಆ ಭಾಷೆ ಯಲ್ಲಿಯೇ. ಅಲ್ಲದೆ ೮ನೆಯ ಶತಮಾನದ ಮಧ್ಯದಿಂದ ೧೨ನೆಯ ಶತಮಾನದ ಮಧ್ಯದ ವರೆಗೆ ಮಧ್ಯ ಮತ್ತು ಪಶ್ಚಿಮ ಏಷ್ಯದ ಮುಸ್ಲಿಮ ರಿಗೆ ಮಾತ್ರವಲ್ಲದೆ ದಕ್ಷಿಣ ಯೂರೋಪಿನ ಕ್ರೈಸ್ತರಿಗೆ ಕೂಡ ಅರಬ್ಬಿ ಭಾಷೆಯೇ ಶಾಸ್ತ್ರ ಭಾಷೆಯಾಗಿತ್ತು. ಈ ೪೦೦ ವರ್ಷಗಳು ಮುಸ್ಲಿಂ ವಿದ್ವಾಂಸರು ಪ್ರಪಂಚಕ್ಕೆ ನಾಗರಿಕತೆ ಸಂಸ್ಕೃತಿಗಳನ್ನು ಬೆಳಗಿ ದರು.

ಕಲೀಫ಼ ಹಾರೂನ್ ಅಲ್ ರಷೀದನ (ಕಲೀಫ಼ ಪಟ್ಟ ಕ್ರಿ. ಶ. ೭೮೬ರಲ್ಲಿ) ಕಾಲದಲ್ಲಿಯೂ ಅವನ ಮಗನ ಕಾಲದಲ್ಲಿಯೂ ಅನೇಕ ವಿದ್ಯಾಶಾಲೆಗಳು ತೆರೆದವಷ್ಟೇ ಅಲ್ಲದೆ ವಿಶ್ವವಿದ್ಯಾಪೀಠವೂ ಖಗೋಳ ಶಾಲೆಯೂ ಹಲವು ಪುಸ್ತಕ ಭಂಡಾರಗಳೂ ಸ್ಥಾಪನೆಯಾದುವು. ಅನೇಕ ವಿದ್ಯಾಶಾಲೆಗಳಲ್ಲಿ ಮುಸ್ಲಿಮರೂ ಮುಸ್ಲಿಮೇತರರೂ ಒಟ್ಟಿಗೆ ಓದು

ತ್ತಿದ್ದುದು ಮಾತ್ರವಲ್ಲದೆ, ಜಾತಿ ಮತ ಭೇದಗಳಿಲ್ಲದೆ ಪಂಡಿತರು ರಾಜ ಮಾನ್ಯರಾಗಿ ಆಶ್ರಯ ಪಡೆಯುತ್ತಿದ್ದರು. ಪಂಡಿತರಿಗೆ ಆಶ್ರಯ ಕೊಡುವುದು, ಶಾಸ್ತ್ರ, ಧರ್ಮ ಮೊದಲಾದ ವಿಷಯಗಳಲ್ಲಿ ಚರ್ಚಾ ಸಭೆಗಳನ್ನು ಏರ್ಪಡಿಸುವುದು, ಪುಸ್ತಕ ಭಂಡಾರಗಳನ್ನು ಸ್ಥಾಪಿಸಿ ಪುಸ್ತಕಗಳನ್ನು ಸಂಗ್ರಹಿಸುವುದು—ಇವೇ ಮೊದಲಾದ್ದುವು ರಾಜರಿಗೂ, ಮಂತ್ರಿಗಳಿಗೂ, ಶ್ರೀಮಂತರಿಗೂ ಒಂದು ಗೌರವದ ಪದ್ಧತಿಯಾಗಿತ್ತೆಂದು ಹೇಳಬಹುದು.

ಅಬ್ಬಾಸಿ, ಫಾತಿಮಿ, ಮತ್ತು ಸ್ಪೈಯ್‌ನಿನ ಉಮಯ್ಯ ರಾಜ್ಯಗಳ ಪ್ರಧಾನ ಪಟ್ಟಣಗಳಲ್ಲೆಲ್ಲ ಪುಸ್ತಕಭಂಡಾರಗಳು ಸ್ಥಾಪನೆಯಾಗಿದ್ದುವು. ಭಂಡಾರಾಧಿಕಾರಿ ದೊಡ್ಡ ಪಂಡಿತನೂ ಕಾರ್ಯದಕ್ಷನೂ ಆಗಿರುತ್ತಿದ್ದನು. ಪ್ರಸಿದ್ಧ ದಾರ್ಶನಿಕನಾದ ಅವಿಸಿನನು ಸಾಮಾನಿ ರಾಜನ ಪುಸ್ತಕಭಂಡಾರಿಯಾಗಿಯೂ, ಚರಿತ್ರಕಾರನೂ ದಾರ್ಶನಿಕನೂ ಆದ ಇಬ್‌ನೆ ಮಸ್ಕು ವೈಹನು ರಯ್ ಪಟ್ಟಣದ ವಜೀರ್ ಫಜ್ಲನ ಭಂಡಾರಿಯಾಗಿಯೂ ಇದ್ದನು. (ಹೆಂಗಸರನ್ನೂ ಭಂಡಾರದ ಸೇವಾಧಿಕಾರಿಗಳಾಗಿ ನೇಮಿಸುತ್ತಿತ್ತು.) ಆದರೆ, ದುರ್ದೈವದಿಂದ ಈ ಭಂಡಾರಗಳು ಒಂದೂ ಉಳಿಯದೆ ಎಲ್ಲವೂ ನಾಶವಾಗಿಹೋದುವು. ಸೆಲ್‌ಜೂಕಿನ ತೊಘ್‌ರೆಲ್ ಬೇಗಿನ ಸೈನಿಕರು ವಜೀರ್ ಷಹಪೂರನ ದೊಡ್ಡ ಭಂಡಾರವನ್ನು ಹಾಳುಮಾಡಿದರು. ಸುಲ್ತಾನ್ ಮಹಮೂದನೂ ಅವನ ನಂತರ ಬಂದವರೂ ಬಹುಕಷ್ಟದಿಂದ ಗ್ರಂಥಗಳನ್ನು ಶೇಖರಿಸಿದ್ದ ಘಜ್ನದ ಭಂಡಾರವನ್ನು ಘೋರ್‌ದೇಶದ ಸುಲ್ತಾನ್ ಹುಸೇನನು ಸುಟ್ಟು ಹಾಕಿದನು. ಛಂಗಿಸ್‌ಖಾನನು ಬಲ್ಕ್, ಬುಖಾರ, ಮರ್ವ್, ರಯ್, ಬಗ್ದಾದ್—ಮೊದಲಾದೆಡೆಗಳ ಪ್ರಸಿದ್ಧ ಭಂಡಾರಗಳನ್ನು ಹಾಳುಮಾಡಿದನು. ಅಲ್ಲದೆ, ನಾಗರಿಕತೆಯ ಕುರುಹೇ ಉಳಿಯದಂತೆ ಹಾವಳಿ ಮಾಡಿಬಿಟ್ಟನು. ಇದರ ಜೊತೆಗೆ ಪ್ಯಾಲೆಸ್ಟೈನ್ ಮತ್ತು ಸಿರಿಯಕ್ಕೆ ದಾಳಿಯಿಟ್ಟ ಯೂರೋಪ್ ದೊರೆಗಳು ತ್ರಿಪೋಲಿಸ್ಸಿನಲ್ಲಿದ್ದ ಪ್ರಸಿದ್ಧ ಪುಸ್ತಕ ಭಂಡಾರವನ್ನು ಸುಟ್ಟುಹಾಕಿದರು. ಈ ಭಂಡಾರದಲ್ಲಿ ಮೂವತ್ತುಲಕ್ಷ ಪುಸ್ತಕಗಳು (ಕುರಾನ್ ಪ್ರತಿಗಳೇ ೫೦,೦೦೦) ಇದ್ದುವೆಂದು ಪ್ರತೀತಿ

ಯುಂಟು. ಹೀಗೆ ಶತ್ರುಗಳು ಉದ್ದೇಶಪೂರ್ವಕವಾಗಿ ನಾಶಮಾಡಿದ್ದಲ್ಲದೆ ನೋಡಿಕೊಳ್ಳುವರಿಲ್ಲದೆ ಎಷ್ಟೋ ಭಂಡಾರಗಳು ಗೆದ್ದಲ ಪಾಲಾದುವು.

## ಕೆಲವು ಪ್ರಸಿದ್ಧ ಪುಸ್ತಕ ಭಂಡಾರಗಳು

(೧) ಮುನಜ್ಜಿಮ್ ಎಂದು ಪ್ರಸಿದ್ಧನಾಗಿರುವ ಯಾಹ್ಯನ ಮಗ ಅಲಿ ಜ್ಯೋತಿಷಶಾಸ್ತ್ರ ಸಂಬಂಧವಾದ ದೊಡ್ಡ ಪುಸ್ತಕಭಂಡಾರವೊಂದನ್ನು ಇಟ್ಟುಕೊಂಡಿದ್ದನು. (೨) ಜಾಫ್ಗರ್ ಮೂಸಲಿನಲ್ಲಿ ಒಂದು ವಿದ್ಯಾಸಂಸ್ಥೆಯನ್ನು ತೆರೆದು ಅದಕ್ಕೆ ಸೇರಿದಂತೆ ಒಂದು ಪುಸ್ತಕಭಂಡಾರವನ್ನು ಏರ್ಪಡಿಸಿದ್ದನು. (೩) ಪರ್ಷಿಯಾ ದೊರೆ ಅಸ್ಸದುದ್ ದೌಲನು (ಕ್ರಿ. ಶ. ೯೪೯–೯೪) ಖಜ್ಸೀನತುಲ್‌ಕುತಬ್ ಎಂಬ ದೊಡ್ಡ ಪುಸ್ತಕ ಭಂಡಾರವೊಂದನ್ನು ಷಿರಾಸ್ಸಿನಲ್ಲಿ ಸ್ಥಾಪಿಸಿದ್ದನು. ಈ ಭಂಡಾರ ಅದರಲ್ಲಿದ್ದ ಪುಸ್ತಕಸಂಖ್ಯೆಗೆ ಮಾತ್ರವಲ್ಲದೆ ಕಟ್ಟಡ, ಪೀಠವ್ಯವಸ್ಥೆ, ಅಚ್ಚುಕಟ್ಟು—ಮೊದಲಾದುವುಗಳಿಗೂ ಹೆಸರಾಗಿತ್ತು. ಉದ್ಯಾನವನಗಳಿಂದ ಸುತ್ತುವರಿದು ಗೋಪುರಗಳಿಂದ ಕಂಗೊಳಿಸುತ್ತಿದ್ದ ಆ ಕಟ್ಟಡದಲ್ಲಿ ೩೬೦ ಕಕ್ಷಗಳಿದ್ದುವು. ಪುಸ್ತಕಗಳನ್ನು ಅಲಮಾರಿನ ಅಂತಸ್ತುಗಳಲ್ಲಿ ಜೋಡಿಸಿಟ್ಟು, ಒಂದು ಪುಸ್ತಕ ಪಟ್ಟಿಯನ್ನೂ ತಯಾರಿಸಿದ್ದರು. (೪) ಬುವೈಹಿದ್ ವಜೀರನಾದ ಷಹಪೂರನು (ಕ್ರಿ.ಶ. ೧೨೦೫) ಬಗ್‌ದಾದಿನಲ್ಲಿ ಒಂದು ಲಕ್ಷ ಪುಸ್ತಕಗಳಿಗೆ ಮೇಲ್ಪಟ್ಟ ಭಂಡಾರವೊಂದನ್ನು ಏರ್ಪಡಿಸಿದ್ದನು. (೫) ಇಬ್‌ನೇ ಸನ್‌ವಾರ್ ಬಸ್ರಾದಲ್ಲಿ ಒಂದು ಭಂಡಾರವನ್ನೂ ರಮ್‌ಹುರ್‌ಮುಜ್‌ನಲ್ಲಿ ಒಂದು ಭಂಡಾರವನ್ನೂ ಸ್ಥಾಪಿಸಿದ್ದನು. (೬) ರಯ್ ಪಟ್ಟಣದ ಭಂಡಾರದಲ್ಲಿ ೪೦೦ ಒಂಟೆ ಹೊರೆ ಪುಸ್ತಕಗಳಿದ್ದುವಂತೆ. (೭) ಕೈರೊ ಪುಸ್ತಕ ಭಂಡಾರ ವ್ಯವಸ್ಥೆಗೆ ತಿಂಗಳೊಂದಕ್ಕೆ ೧,೦೦೦ ಚಿನ್ನದ ದೀನಾರಗಳು ಮುಟ್ಟುತ್ತಿದ್ದುವಂತೆ. (೮) ಸ್ಪೈಯ್‌ನಿನ ಕಾರ್ಡೋವಾ ಪುಸ್ತಕಭಂಡಾರದಲ್ಲಿ ೪ ಲಕ್ಷ ಪುಸ್ತಕಗಳಿದ್ದು, ಒಂದು ಕಟ್ಟಡದಿಂದ ಮತ್ತೊಂದು ಕಟ್ಟಡಕ್ಕೆ ಸಾಗಿಸಲು ಆರು ತಿಂಗಳು ಹಿಡಿಯಿತಂತೆ.

## ವಿದ್ಯಾಶಾಲೆಗಳು

ವಿದ್ಯಾಶಾಲೆಗಳಲ್ಲಿ ಮೂರು ತರ ಇದ್ದುವು. ಅವು ಕಲೀಫರ ಅಥವಾ ರಾಜರ ಆಶ್ರಯದಲ್ಲಿ ಸರ್ಕಾರದ ಖಜಾನೆಯ ಖರ್ಚಿನಿಂದ ನಡೆಯುತ್ತಿದ್ದುವು; ಶ್ರೀಮಂತರ ಆಶ್ರಯದಲ್ಲಿ ನಡೆಯುತ್ತಿದ್ದುವು; ಗುರುಗಳ ಸ್ವಂತ ಏರ್ಪಾಡಿನಿಂದ ನಡೆಯುತ್ತಿದ್ದುವು.—ಈ ಮೂರು ತರದ ವಿದ್ಯಾಶಾಲೆಗಳಿಗೂ 'ಮದ್ರಸ' ಎಂದು ಹೆಸರಿತ್ತು. ಸಾಮ್ರಾಜ್ಯದ ದೊಡ್ಡ ದೊಡ್ಡ ಕೇಂದ್ರಗಳಲ್ಲೆಲ್ಲ ಹಲವು ವಿದ್ಯಾಶಾಲೆಗಳೂ, ಪ್ರೌಢ ವಿದ್ಯಾಶಾಲೆಗಳೂ, ವಿಶ್ವವಿದ್ಯಾಪೀಠಗಳೂ ಇದ್ದುವು; ನೀಷಾಪುರ್, ಸಮರ್‌ಕಂದ್, ಕೈರೋ, ಬಾಲ್ಕ್, ದಮಾಸ್ಕಸ್, ಬಗ್‌ದಾದ್, ಫೆಸ್ಸ್, ಸೆವಿಲ್, ಗ್ರಾನಡ, ಕಾರ್ಡೋವ, ಸಿರಿಯದ ಮತ್ತು ಈಜಿಪ್ಟಿನ ಹಲವು ಕೇಂದ್ರಗಳು — ಈ ಸ್ಥಳಗಳಲ್ಲಿ ಪ್ರೌಢ ವಿದ್ಯಾಪೀಠಗಳಿದ್ದುವು. ಚಿಕ್ಕ ವಯಸ್ಸಿನ ಹುಡುಗ ಹುಡುಗಿಯರು ಒಟ್ಟಿಗೆ ಓದುತ್ತಿದ್ದರು. ಸಾಮಾನ್ಯವಾಗಿ ಹೆಂಗಸರು ಕುರಾನ್ ಓದುವುದು, ಮತಧರ್ಮ ವಿಷಯವಾಗಿ ಸ್ವಲ್ಪ ಜ್ಞಾನ ಪಡೆಯುವುದು, ಇಷ್ಟೇ ಆಗಿದ್ದರೂ ಅವಕಾಶ ಇಷ್ಟಗಳಿದ್ದವರು ತಮ್ಮ ಓದನ್ನು ಮುಂದುವರಿಸಿ ದೇವತಾ ಶಾಸ್ತ್ರವೇ ಮೊದಲಾದ ಇತರ ಪ್ರೌಢ ವಿಷಯಗಳಲ್ಲಿಯೂ ಪಾರಂಗತರಾಗುತ್ತಿದ್ದದ್ದೂ, ಅಧ್ಯಾಪಕರಾಗಿ ನೇಮಕವಾಗುತ್ತಿದ್ದದ್ದೂ ಉಂಟು. ಪಾಠ ಕುರಾನಿನಿಂದ ಆರಂಭವಾಗಿ ಅರಬ್ಬೀ ಸಾಹಿತ್ಯ ಮತ್ತು ವ್ಯಾಕರಣಗಳಿಗೆ ಹೋಗುತ್ತಿತ್ತು. ವಿದ್ಯಾರ್ಥಿಗಳು ಜ್ಞಾನಾರ್ಜನೆಗಾಗಿ ದೇಶಸಂಚಾರ ಮಾಡುತ್ತಿದ್ದರು. ಅಲ್ಲದೆ, ವಿದ್ಯಾರ್ಥಿಗಳು ಅಧ್ಯಾಪಕರು ಹೋದೆಡೆಗೆಲ್ಲ ಅವರ ಹಿಂದೆಯೇ ಅನುಸರಿಸಿ ಹೋಗಿ ವಿದ್ಯೆ ಕಲಿಯುತ್ತಿದ್ದರು. ಅಲ್ಲದೆ, ವಿದ್ಯಾರ್ಥಿಗಳು ಅಧ್ಯಾಪಕರನ್ನು ಶಿಷ್ಯರು ಗುರುಗಳನ್ನು ಶುಶ್ರೂಷೆಮಾಡುವಂತೆ ಶುಶ್ರೂಷೆ ಮಾಡುತ್ತಿದ್ದರು. ವಿದ್ಯಾರ್ಥಿಗಳಿಗೂ ಅಧ್ಯಾಪಕರಿಗೂ ಪರಸ್ಪರ ಭಕ್ತಿವಾತ್ಸಲ್ಯಗಳಿರುತ್ತಿದ್ದುವು. ಕೆಲವು ಪ್ರಸಿದ್ಧ ಅಧ್ಯಾಪಕರು ವಿದ್ಯಾರ್ಥಿಗಳಲ್ಲೇ ಅಲ್ಲದೆ ಜನರಲ್ಲೆಲ್ಲ ಪ್ರಖ್ಯಾತರಾಗಿ, ಅವರ ಮೆಚ್ಚಿಗೆ ಅನುರಾಗಗಳನ್ನು ಸಂಪಾದಿಸಿದ್ದರು. ಉದಾಹರಣೆಗೆ:—ನೀಷಾಪುರಿನ ನಿಸಾಮಿಯ ವಿದ್ಯಾಪೀಠದ ಪ್ರಸಿದ್ಧ

ಪಂಡಿತನಾಗಿದ್ದ ಇಮಾಮ್ ಉಲ್ ಹರಮೈನನು ಸತ್ತಾಗ (ಕ್ರಿ. ಶ. ೧೦೮೫), ಸರ್ವಜನರೂ ಸಂತಾಪವನ್ನು ಸೂಚಿಸಿ, ವರ್ತಕರು ಅಂಗಡಿಗಳನ್ನು ಮುಚ್ಚಿದರು. ವಿದ್ಯಾರ್ಥಿಗಳು ಸಂತಾಪಸೂಚನೆಗಾಗಿ ಮಸೀದಿಯಲ್ಲಿಯ ಉಪನ್ಯಾಸ ವೇದಿಕೆಯನ್ನು ಉರುಳಿಸಿ, ತಮ್ಮ ಲೇಖನಿಗಳನ್ನು ಮುರಿದು, ಮಸಿಕುಡಿಕೆಗಳನ್ನು ಬಿಸಾಡಿದರು.

ಇಸ್ಲಾಂ ಪೂರ್ವದ ಜ್ಞಾನವೆಲ್ಲ ಮೊದಲೇ ತಿಳಿಸಿದಂತೆ ಕಾವ್ಯ, ಬುಡಕಟ್ಟಿನ ಚರಿತ್ರೆ, ಸ್ವಪ್ನ, ಶಕುನ, ಜ್ಯೋತಿಷ—ಇವುಗಳಲ್ಲೇ ಪರ್ಯವಸಾನಗೊಂಡಿತ್ತು. ಇದೂ ಕೂಡ ಪುರಾಣರೂಪದಲ್ಲಿ ಪದ್ಯಗಳಲ್ಲಿತ್ತು. ಕ್ರಮೇಣ ಇಸ್ಲಾಂ ಮತದ ಮೊದಮೊದಲಿನಲ್ಲಿ ಬೇರೆ ಭಾಷೆಗಳಿಂದ ಶಾಸ್ತ್ರ ಗ್ರಂಥಗಳು ಅರಬ್ಬಿಗೆ ಭಾಷಾಂತರವಾದುವು. ಕ್ರಮೇಣ ಭಾಷಾಂತರ ಕಾಲ ಕಳೆದು ಸ್ವತಂತ್ರ ವ್ಯಾಸಂಗಕ್ಕೂ ಗ್ರಂಥರಚನೆಗೂ ಆರಂಭವಾಯಿತು. ಪ್ರಾಚೀನ ಮುಸ್ಲಿಂ ಪದ್ಧತಿಯಲ್ಲಿ ವಿದ್ಯಾ ವಿಷಯಗಳನ್ನು ಮುಸ್ಲಿಮರೇ ಬೆಳಸಿಕೊಂಡುಬಂದುದನ್ನು ಒಂದು ಗುಂಪಾಗಿಯೂ, ಇತರರಿಂದ ಕಲಿತುದನ್ನು ಒಂದು ಗುಂಪಾಗಿಯೂ, ವಿಂಗಡಿಸುತ್ತಿದ್ದರು. ಮೊದಲನೆಯ ಗುಂಪಿನಲ್ಲಿ ಕುರಾನ್ ಅದರ ಮೇಲಿನ ಟೀಕೆ ವ್ಯಾಖ್ಯಾನಗಳು, ಮಹಮ್ಮದನ ವಿಷಯವಾದ ಐತಿಹ್ಯಗಳು, ನ್ಯಾಯಶಾಸ್ತ್ರ (ಕಟ್ಟಳೆ), ಅರಬ್ಬೀ ಸಾಹಿತ್ಯ, ಅಲಂಕಾರ, ಛಂದಸ್ಸು, ವ್ಯಾಕರಣ ಮೊದಲಾದುವೂ; ಎರಡನೆಯ ಗುಂಪಿನಲ್ಲಿ ದರ್ಶನ, ಖಗೋಳಶಾಸ್ತ್ರ, ಜ್ಯೋತಿಷ, ಜ್ಯಾಮಿತಿ, ವೈದ್ಯ, ರಸತಂತ್ರ, ಭೂಗೋಳ, ಗಣಿತ, ಖನಿಜ ಶಾಸ್ತ್ರ, ಚರಿತ್ರೆ, ಸಂಗೀತ—ಮೊದಲಾದುವೂ ಸೇರುತ್ತಿದ್ದುವು.

**ಚರಿತ್ರೆ.** ಚರಿತ್ರೆ ಮತ್ತು ಜೀವನ ಚರಿತ್ರೆಗಳು ಉಮಯ್ಯರ ಕಾಲಕ್ಕೇ ಬರೆಯಲಾರಂಭಿಸಿದರೂ ಅವು ಸರಿಯಾಗಿ ಬೆಳೆದದ್ದು ಅಬ್ಬಾಸಿಯರ ಕಾಲದಲ್ಲಿ. ಕಷ್ಫುಸ್ಸ್ಗುನುನ್ ಎಂಬ ಗ್ರಂಥದಲ್ಲಿ ೧೩೦೦ ಚರಿತ್ರಗ್ರಂಥಗಳ ಪಟ್ಟಿಯನ್ನು ಕೊಟ್ಟಿದೆ. ಇವುಗಳಲ್ಲಿ ಪರ್ಷಿಯದ ಕಬರಿಸ್ಥಾನದ ಜರೀರ್ (ಸ. ಕ್ರಿ. ಶ. ೯೩೩) ಬರೆದ ಚರಿತ್ರೆಯೂ, ಅಬೂಮರರುವಾನ್ (ಕ್ರಿ.ಶ.೧೦೭೫) ಅರುವತ್ತು ಸಂಪುಟಗಳಲ್ಲಿ ಬರೆದ ಅಲ್‌ಮತೀನ್ ಎಂಬ ಸ್ಪೈಯ್‌ನ್ ಚರಿತ್ರೆಯೂ, ಹಮದಾನಿ ಬರೆದ

ದಕ್ಷಿಣ ಅರೇಬಿಯ ಚರಿತ್ರೆಯೂ, ಇಬ್ನ್ ಮುಕಪ್ಪನು ಪಲ್ಲವಿಯಿಂದ ಅರಬ್ಬಿಗೆ ಭಾಷಾಂತರಿಸಿದ ಪರ್ಷಿಯನ್ ಚರಿತ್ರೆಯ ಅನೇಕ ಗ್ರಂಥಗಳೂ, ಇಸ್ಫಹಾನಿನ ಅಬುಲ್ಫರಜ್ (ಕ್ರಿ.ಶ.೯೬೭) ೨೧ ಸಂಪುಟಗಳಲ್ಲಿ ಪದ್ಯರೂಪದಲ್ಲಿ ಬರೆದ ಅರಬ್ಬೀ ಸಾಹಿತ್ಯ ಚರಿತ್ರೆಯಾದ ಅಘಾನಿ ಗ್ರಂಥವೂ, ಅನಸಾಬ್-ಏ-ಅಷ್ರಾಫ್ ಎಂಬ ಶ್ರೀಮಂತರ ವಂಶ ಚರಿತ್ರೆಯೂ, ಮುಖ್ಯವಾದುವು. ಇವಲ್ಲದೆ ಇಬ್ನ್-ಏ-ಖಲ್ಲೀಕಾನ್ ಎಂಬ ಪರ್ಷಿಯನ್ನನು ಬರೆದ ಪ್ರಸಿದ್ಧವಾದ ಜೀವನಚರಿತ್ರ ನಿಘಂಟೂ, ಈಜಿಪ್ಟಿನ ಇಬ್ನ್ ಉಲ್ ಕಿಫ್ತಿ ಬರೆದ ದಾರ್ಶನಿಕರ ಮತ್ತು ಶಾಸ್ತ್ರಕಾರರ ಚರಿತ್ರೆಯೂ ಇಬ್ನ್-ಏ-ಅಬೀ ಉಸೈಬಿಯನ (ಕ್ರಿ.ಶ.೧೨೭೦) ವೈದ್ಯರ ಚರಿತ್ರೆಯೂ, ಸ್ಪೇಯ್ನಿನ ಮಹಮ್ಮದ್ ಅಬೂ ಅಬ್ದುಲ್ಲನ ಶಾಸ್ತ್ರನಿಘಂಟೂ ಹೆಸರಾಗಿವೆ.

**ಭೂಗೋಳ.** ಆ ಕಾಲದಲ್ಲಿದ್ದ ಗ್ರೀಕ್ ಮತ್ತು ಇರಾನಿ ಜ್ಞಾನಕ್ಕಿಂತ ಮುಸ್ಲಿಮರು ಭೂಗೋಳ ವಿಷಯದಲ್ಲಿ ಬಹಳ ಮುಂದುವರಿದಿದ್ದರು. ಯೂರೋಪಿನವರು ಭೂಮಿ ಚಪ್ಪಟೆಯಾಗಿರುತ್ತೆಂದು ಇನ್ನೂ ನಂಬಿಕೊಂಡಿದ್ದಾಗಲೇ, ಮುಸ್ಲಿಂ ಭೂಗೋಳಶಾಸ್ತ್ರಜ್ಞರು ಭೂಗೋಳದ ಸುತ್ತಳತೆಯನ್ನು ಕಂಡುಹಿಡಿದಿದ್ದರು. ಕಲೀಫ್ ಮಾಮೂನನು ಅನೇಕ ಭೂಗೋಳ ಶಾಸ್ತ್ರಜ್ಞರನ್ನು ನೇಮಿಸಿಕೊಂಡಿದ್ದನು. ಟಾಲೆಮಿಯ ಕೃತಿಗಳು ಅರಬ್ಬಿಗೆ ಭಾಷಾಂತರವಾದದ್ದಲ್ಲದೆ ಖಾರಸ್ಮಿ ಮೊದಲಾದವರು ಸ್ವತಂತ್ರವಾಗಿ ಹೊಸ ವಿಷಯಗಳನ್ನು ಕಂಡುಹಿಡಿದರು. ಮಾಮೂನಿನ ಅಪ್ಪಣೆಯ ಮೇಲೆ ಮೂಸಾವಿನ ಮಗ ಮಹಮ್ಮದ್ ಭೂಮಿಯನ್ನು ಅಳೆದನು. ಭೂಮಿಯನ್ನು ಏಳು ಖಂಡಗಳಾಗಿ ವಿಭಾಗಿಸಿ ತೋರಿಸುವ ಒಂದು ಭೂಪಟವೂ ತಯಾರಾಯಿತು. ಅರಬ್ಬಿ ಭಾಷೆಯಲ್ಲಿ ಪ್ರಾಚೀನತಮ ಭೂಗೋಳಶಾಸ್ತ್ರ ಇಬನ್ ಖುರ್ದಬೆಹ್ (ಕ್ರಿ.ಶ.೮೫೦)ಎಂಬ ಪರ್ಷಿಯನ್ನನು ಬರೆದ 'ಮಸಾಲಿಕ್ ವಲ್ ಮಮಾಲಿಕ್' ಎಂಬುದು. ಅಬೂ ಇಸ್ತಖ್ರೀ ಎಂಬ ಪರ್ಷಿಯನ್ನನೂ ಮಸಾಲಿಕ್ ಉಲ್ ಮಮಾಲಿಕ್ ಎಂಬ ಅಂಥದೇ ಒಂದು ಗ್ರಂಥವನ್ನು ಬರೆದಿದ್ದಾನೆ. ಪ್ಯಾಲೆಸ್ಟೈನಿನ ಅಲ್ಮುಕದ್ದಸೀ (ಕ್ರಿ. ಶ. ೮೫೬) ತನ್ನ ವಿಶ್ವಕೋಶದಲ್ಲಿ ತಾನು ೨೦

ವರ್ಷಗಳು ಸಂಚಾರಮಾಡಿದ ನಾನಾ ಮುಸ್ಲಿಂ ದೇಶಗಳ ವಿವರಣೆಯನ್ನು ಕೊಟ್ಟಿದ್ದಾನೆ. ಗ್ರೀಕ್ ಸಂತತಿಯಲ್ಲಿ ಹುಟ್ಟಿದ ಅಬ್ದುಲ್ಲನ ಮಗ ಯಾಕೂತ್ (ಕ್ರಿ.ಶ. ೧೧೭೯-೧೨೨೯) ಮೊಜ್ಮಾ ಉಲ್ ಬುಲ್ದಾನ್ ಎಂಬ ಪ್ರಸಿದ್ಧವಾದ ಭೂಗೋಳ ನಿಘಂಟನ್ನು ಆರು ಸಂಪುಟಗಳಲ್ಲಿ ಸಂಗ್ರಹಿಸಿದ್ದಾನೆ. 'ಹೊನ್ನ ಹಸುರು ಬಯಲು' (ಮೆಡೋಸ್ ಆಫ್ ಗೋಲ್ಡ್) ಎಂಬ ಗ್ರಂಥದ ಕರ್ತೃವಾದ ಮಸೂದಿ (ಸ. ಕ್ರಿ. ಶ. ೯೫೭) ಅರಬ್ಬಿ ಪ್ಲಿನಿ ಎಂದು ಹೆಸರುಗೊಂಡಿದ್ದಾನೆ. ಇದ್ರೀಸಿ ಎಂಬ ಪ್ರಸಿದ್ಧ ಭೂಗೋಳ ಶಾಸ್ತ್ರಜ್ಞನು ಸಿಸಿಲಿ ರಾಜನಿಗಾಗಿ ಬೆಳ್ಳಿಯ ಭೂಗೋಳಕವೊಂದನ್ನು ನಿರ್ಮಿಸಿದನಂತೆ.

**ಪ್ರಕೃತಿಶಾಸ್ತ್ರಗಳು.** ಸಸ್ಯಶಾಸ್ತ್ರ ವ್ಯಾಸಂಗಕ್ಕಾಗಿ ಕಾರ್ಡೋವ, ಫೆಜ್, ಕೈರೊ, ಬಗ್‌ದಾದ್—ಮೊದಲಾದೆಡೆಗಳಲ್ಲಿ ಪರೀಕ್ಷೆಯ ತೋಟಗಳನ್ನು ಬೆಳಸಿದ್ದರು. ಮುಸ್ಲಿಮರು ವೈದ್ಯದಲ್ಲಿ ಉಪಯೋಗವಾಗುವ ಹಲವು ಗಿಡ ಬೇರುಗಳನ್ನು ಕಂಡು ಹಿಡಿದಿದ್ದಾರೆ. ಪ್ರಸಿದ್ಧ ವಿದ್ವಾಂಸನಾದ ಅಲ್ಬೇರೂನಿ (ಕ್ರಿ.ಶ. ೯೭೩-೧೦೪೮) ಇತರ ವಿಷಯಗಳೊಂದಿಗೆ ಸಸ್ಯ ಶಾಸ್ತ್ರ, ರಸಾಯನ ಶಾಸ್ತ್ರಗಳನ್ನು ವ್ಯಾಸಂಗ ಮಾಡುವುದಕ್ಕಾಗಿ ಇಂಡಿಯದಲ್ಲಿ ೪೦ ವರ್ಷಗಳು ನೆಲಸಿದ್ದನು. ಇಬ್‌ನ್ ಉಲ್ ಬೈತಾರ್ (ಸ.ಕ್ರಿ.ಶ. ೧೨೪೮) ಒಬ್ಬ ಪ್ರಸಿದ್ಧ ಮುಸ್ಲಿಂ ಸಸ್ಯಶಾಸ್ತ್ರಜ್ಞ.

'ಪರಿಶುದ್ಧತಾ ಸೋದರರು' (ಬ್ರೆದ್ರನ್ ಆಫ್ ಪ್ಯೂರಿಟಿ) ಎಂಬ ೫೨ ಭಾಗಗಳುಳ್ಳ ವಿಶ್ವಕೋಶದಲ್ಲಿ ೧೭ ಭಾಗಗಳು ಪ್ರಕೃತಿ ಶಾಸ್ತ್ರಕ್ಕೆ ಸಂಬಂಧಿಸಿವೆ. ಮೇಲೆ ಹೇಳಿದ ಅಲ್ಬೇರೂನಿ ಸಂಸ್ಕೃತವನ್ನು ಕಲಿತು ಇಂಡಿಯದ ಚರಿತ್ರೆ, ದರ್ಶನ—ಮೊದಲಾದುವುಗಳ ಮೇಲೆ ಬರೆದಿರುವುದಲ್ಲದೆ ಭೌತಶಾಸ್ತ್ರ, ಭೂಗೋಳಶಾಸ್ತ್ರ, ಖಗೋಳಶಾಸ್ತ್ರ, ಗಣಿತಶಾಸ್ತ್ರ—ಮೊದಲಾದ ವಿಷಯಗಳ ಮೇಲೂ ಅಮೂಲ್ಯ ಗ್ರಂಥಗಳನ್ನು ರಚಿಸಿದ್ದಾನೆ. ಅವನ ಭೌತಶಾಸ್ತ್ರದಲ್ಲಿ ೧೮ ರತ್ನಗಳ ಪರಸ್ಪರ ಹೋಲಿಕೆಯು ಮತ್ತು ಲೋಹಗಳ ಭಾರವನ್ನು ಕೊಟ್ಟಿದೆ. ಕೈರೊವಿನ ಷಹಾಬುದ್ದೀನ್-ತಿಫಾಷಿ (ಕ್ರಿ. ಶ. ೧೧೫೪) ಜ್ಞಾನರತ್ನ ಕುಸುಮ (ಫ್ಲವರ್ಸ್ ಆಫ್ ದಿ ನಾಲೆಜ್ ಸ್ಟೋನ್) ಎಂಬ ತನ್ನ ಗ್ರಂಥದಲ್ಲಿ ಅನೇಕ ರತ್ನಗಳ ವಿಷಯ

ವನ್ನು ಬರೆದಿದ್ದಾನೆ. ಪ್ರಸಿದ್ಧ ಇರಾನಿ ಪರ್ಷಿಯನ್ ಕವಿಯಾದ ಉಮರ್ ಖಯಾಮ್ ಖನಿಜಗಳ ಮತ್ತು ರಸಾಯನ ವಿಶ್ಲೇಷಣದ ಮೇಲೆ ಬರೆದಿದ್ದಾನೆ. ಹಯ್ಯನ್ ಮಗ ಜಾಬಿರ್ (ಕ್ರಿ.ಶ. ೭೭೬) ಒಟ್ಟು ೨೭ ಗ್ರಂಥಗಳನ್ನು ಬರೆದಿದ್ದಾನೆ. ಇವನು ಸಲ್ಫ್ಯೂರಿಕ್ ಮತ್ತು ಸೈಟ್ರಿಕ್ ಆಮ್ಲಗಳನ್ನೂ ರಾಜಾಮ್ಲವನ್ನೂ (ಆಕ್ವ ರೀಜಿಯ) ಕಂಡು ಹಿಡಿದು, ರಸಾಯನಶಾಸ್ತ್ರದ ಮೇಲೆ ಗ್ರಂಥಗಳನ್ನು ಬರೆದಿದ್ದಾನೆ. ಇವನ ಹೆಸರು ಯೂರೋಪಿಯನ್ನರಲ್ಲಿ ಗೆಬರ್ ಎಂದು ರೂಪಾಂತರ ಹೊಂದಿ, ಇವನ ಕೃತಿಗಳು ಯೂರೋಪ್ ಭಾಷೆಗಳಿಗೆ ಭಾಷಾಂತರವಾಗಿವೆ. ಆದರೆ, ಅರಬರೇ ತಮ್ಮ ರಸ ತಂತ್ರವನ್ನು ಪರ್ಷಿಯನ್ ಮತ್ತು ಗ್ರೀಕ್ ಆಕರಗಳಿಂದ ಮೊದಲು ಕಲಿತುಕೊಂಡರು. ಜಾಬಿರನು ಲೆಡ್ ಕಾರ್ಬೊನೇಟ್ ತಯಾರಿಕೆ, ಆರ್ಸೆನಿಕ್, ಮತ್ತು ಆ್ಯಂಟಿಮನಿಗಳನ್ನು ಅವುಗಳ ಗಂಧಕ ಸಂಯುಕ್ತಗಳಿಂದ ಬೇರ್ಪಡಿಸುವುದು, ಉಕ್ಕು ತಯಾರಿಕೆ, ಬಟ್ಟೆ ಮತ್ತು ಚರ್ಮಗಳಿಗೆ ಬಣ್ಣ ಹಾಕುವುದು, ದ್ರಾಕ್ಷಾಮ್ಲದಿಂದ ಅಸೆಟಿಕ್‌ಆಮ್ಲ ಇಳಿಸುವುದು—ಇವೇ ಮೊದಲಾದ ವಿಷಯಗಳನ್ನು ಕಂಡು ಹಿಡಿದಿದ್ದನು. ಅಲ್ಲದೆ, ಈ ಜಾಬಿರನೂ ಇಬ್‌ನ್‌ಮೂಸಾ ಎಂಬ ಮತ್ತೊಬ್ಬನೂ ಗೋಳ ತ್ರಿಕೋನ ಮಿತಿಯ ಮೇಲೆ (ಸ್ಫೆರಿಕಲ್ ಟ್ರಿಗ್ನಾಮೆಟ್ರಿ) ಸ್ವತಂತ್ರ ಗ್ರಂಥಗಳನ್ನು ಬರೆದಿದ್ದಾರೆ.

ಜಸ್ಸರಿ (ಕ್ರಿ.ಶ. ೧೨೦೬) ಗತಿಶಾಸ್ತ್ರ (ಮೆಕ್ಯಾನಿಕ್ಸ್) ಮತ್ತು ಗಡಿಯಾರಗಳ ಮೇಲೆ ಒಂದು ಅಮೂಲ್ಯ ಗ್ರಂಥವನ್ನು ಬರೆದಿದ್ದಾನೆ. ರಿಸ್‌ವಾನ್ (ಕ್ರಿ.ಶ. ೧೨೦೩) ತನ್ನ ತಂದೆ ಮಾಡಿದ್ದ ನೀರು ಗಡಿಯಾರದ ವಿವರಣೆಯನ್ನು ಕೊಟ್ಟಿದ್ದಾನೆ.

ಇವೇ ಅಲ್ಲದೆ, ಸಸ್ಯಶಾಸ್ತ್ರ, ಪ್ರಾಣಿಶಾಸ್ತ್ರ, ರತ್ನಶಾಸ್ತ್ರ—ಮೊದಲಾದುವುಗಳ ಮೇಲೆ ಹಲವು ಗ್ರಂಥಗಳಿವೆ.

**ಖಗೋಳಶಾಸ್ತ್ರ ಮತ್ತು ಜ್ಯೋತಿಷಶಾಸ್ತ್ರ.** ಅರಬ್ಬೀ ಭಾಷೆಯಲ್ಲಿ ಅತ್ಯುತ್ತಮವಾದ ಶಾಸ್ತ್ರ ಗ್ರಂಥಗಳು ಹಲವಿದ್ದರೂ ಖಗೋಳಶಾಸ್ತ್ರ ಮತ್ತು ಜ್ಯೋತಿಷಶಾಸ್ತ್ರದವು ಬಹು ಮುಖ್ಯವಾದುವು. ಖಗೋಳಶಾಸ್ತ್ರದ ಅಭ್ಯಾಸಕ್ಕೆ ಗಣಿತ ಅತ್ಯಾವಶ್ಯಕವಾದ್ದರಿಂದ ಖಗೋಳ

ಶಾಸ್ತ್ರಜ್ಞರೆಲ್ಲರೂ ಗಣಿತಶಾಸ್ತ್ರಜ್ಞರೂ ಆಗಿದ್ದರು. ಅಲ್ಲದೆ, ಅವರಲ್ಲಿ ಹಲವರು ಜ್ಯೋತಿಷ್ಕರೂ ಆಗಿದ್ದರು.

ಇಬ್ರಾಹಿಮ್ ಆಲ್‌ಫಜ್ಜರಿ (ಸ. ಕ್ರಿ. ಶ. ೭೭೮) ಮುಸ್ಲಿಮರಲ್ಲಿ ಮೊಟ್ಟಮೊದಲು ಗ್ರಹೋನ್ನತಿ ಮಾಪಕವನ್ನು (ಆ್ಯಸ್ಟ್ರೊಲೇಬ್) ನಿರ್ಮಿಸಿದನು. ಇವನ ಮಗನೂ (ಸ. ಕ್ರಿ. ಶ. ೮೦೬) ಮತ್ತೊಬ್ಬ ಯಾಕೂಬನೂ ಅರಬರಲ್ಲಿ ಮೊಟ್ಟಮೊದಲು ಹಿಂದೂ ಅಂಕೆಗಳನ್ನು ಪರಿಚಯಮಾಡಿಕೊಂಡರು. ನೌಬಖ್ತ್ ಎಂಬ ಪ್ರಸಿದ್ಧ ಜ್ಯೋತಿಷ್ಕನ ಸಹೋದ್ಯೋಗಿಯಾಗಿದ್ದ ಮಾಷಾಲ್ಲನು (ಕ್ರಿ.ಶ.೮೧೫) ಖಗೋಳಶಾಸ್ತ್ರ ಮತ್ತು ಜ್ಯೋತಿಷಶಾಸ್ತ್ರಗಳಮೇಲೆ ಹಲವು ಪುಸ್ತಕಗಳನ್ನು ಬರೆದಿದ್ದಾನೆ. ನೌಬಖ್ತ್ ವಾಸ್ತು ಶಿಲ್ಪಿಯೂ ಆಗಿದ್ದನು. ಇವನ ಮಗ ಫಜ್ಲನು ಕಲೀಫ಼ ಹಾರೂನ್ ಆಲ್ ರಷೀದಿಗೆ ಪುಸ್ತಕ ಭಂಡಾರಿಯಾಗಿದ್ದು, ಖಗೋಳಶಾಸ್ತ್ರದ ಹಲವು ಗ್ರಂಥಗಳನ್ನು ಪರ್ಷಿಯನ್ನಿಂದ ಅರಬ್ಬಿಗೆ ಭಾಷಾಂತರಿಸಿದನು. ಅಬ್ದುಲ್ಲ ಖಾ ರಿಜ್ಮಿ (ಕ್ರಿ.ಶ. ೮೫೦) ಮುಸ್ಲಿಂ ಗಣಿತಜ್ಞರಲ್ಲಿ ಮೊದಲಿಗನು. ಇವನ ಲೇಖನ ನಾಮದಿಂದಲೇ ಅಲ್ಗೊರಿಥ್ಮ್ ಎಂಬ ಪದ ಬಂದಿರುವುದು. ಇವನು ಹಿಂದೂ ಸಿದ್ಧಾಂತವನ್ನು ಭಾಷಾಂತರಿಸಿದ್ದಲ್ಲದೆ, ಟಾಲೆಮಿಯ ಗಣನ ಪಟ್ಟಿಗಳನ್ನು ತಿದ್ದಿ ಪರಿಷ್ಕರಿಸಿದನು. ಪರ್ಷಿಯದ ಅಬೂ ಸಯದ್ ಜ಼ರೀರ್ ಜ್ಯಾಮಿತಿ ನಕ್ಷಾನಿರ್ಮಾಣದ ಮೇಲೂ ಮಧ್ಯಾಹ್ನ ರೇಖೆಯನ್ನು ಎಳೆಯುವುದರ ಮೇಲೂ ಬರೆದಿದ್ದಾನೆ. ಲ್ಯಾಟಿನ್ನಿಗೆ ಭಾಷಾಂತರವಾಗಿರುವ ಖಾರಿಜ್ಮಿಯ (ಸ.ಕ್ರಿ.ಶ. ೮೫೦) ಖಗೋಳದ ಮತ್ತು ತ್ರಿಕೋನ ಮಿತಿಯ ಗಣನ ಪಟ್ಟಿಗಳಲ್ಲಿ ಸ್ಪರ್ಶಜ್ಯಾ (ಟ್ಯಾಂಜೆಂಟ್) ಗಣನೆಗಳಿವೆ. ಪರ್ಷಿಯದ ಅಹಮದ್ (ಸ.ಕ್ರಿ.ಶ. ೮೩೫ ಅಥವಾ ೮೬೫) ಜುಂದೆಷಾಪುರದ ಖಗೋಳ ಶಾಲೆಯಲ್ಲಿ ಪರೀಕ್ಷೆಗಳನ್ನು ನಡಸಿ ಮುಸ್ತಮಿಲ್ ಎಂಬ ಗಣನ ಪಟ್ಟಿಯನ್ನು ತಯಾರಿಸಿದನು. ಹಸೀಬನ ಮಗ ಹಬಾಷ್ (ಕ್ರಿ. ಶ. ೭೭೦–೮೭೦) ಹಿಂದೂ ರೀತಿಯಲ್ಲಿ ಹಲವು ಗಣನ ಪಟ್ಟಿಗಳನ್ನು ತಯಾರಿಸಿದ್ದಾನೆ. ಈಸಾನ ಮಗ ಅಲಿ (ಸ.ಕ್ರಿ.ಶ. ೮೩೦) ಅಬೀಮುನ್‌ಸೂರಿನ ಮಗ ಯಾಹ್ಯ (ಸ.ಕ್ರಿ.ಶ. ೮೩೧), ಮುಂತಾದ

ವರೂ ಹಲವು ಗ್ರಂಥಗಳನ್ನೂ ಗಣನ ಪಟ್ಟಿಗಳನ್ನೂ ರಚಿಸಿದ್ದಾರೆ. ಆಲ್ಫರ್‌ಗಾನಿ ಎಂದು ವ್ಯವಹೃತನಾಗಿರುವ, ಮುಹಮ್ಮದ್ ಮಗ ಅಹಮದ್ ಅಲ್‌ಮಾಮೂನ್ ಕಿಲಾಫತ್ತಿನ ಕಾಲದಲ್ಲಿದ್ದ ಖಗೋಳ ಶಾಸ್ತ್ರಜ್ಞರಲ್ಲಿ ಶ್ರೇಷ್ಠನಾದವನು. ಯೂರೋಪಿನವರಲ್ಲಿ ಅಲ್‌ಫ್ರಫ ನೂಸ್ ಎಂಬ ಹೆಸರಿಂದ ಪ್ರಸಿದ್ಧನಾಗಿರುವ ಈ ಆಲ್ಫರ್‌ಗಾನಿಯ 'ಖಗೋಳಶಾಸ್ತ್ರದ ಮೂಲಪಾಠಗಳು' ಲ್ಯಾಟಿನ್ನಿಗೆ ಭಾಷಾಂತರ ವಾಗಿದೆ. ತಬರಿಸ್ಥಾನಿನ ಫರ್ರುಖಾನ್ ಮಗ ಉಮರನು (ಸ.ಕ್ರಿ.ಶ.೮೧೫) ಪರ್ಷಿಯನ್ನಿಂದ ಗ್ರಂಥಗಳನ್ನು ಭಾಷಾಂತರಿಸಿರುವುದಲ್ಲದೆ ಖಗೋಳ ಶಾಸ್ತ್ರ ಮತ್ತು ಜ್ಯೋತಿಷಶಾಸ್ತ್ರ ವಿಷಯವಾಗಿ ಸ್ವತಂತ್ರ ಗ್ರಂಥಗಳನ್ನೂ ಬರೆದಿದ್ದಾನೆ. ಇವನ ಮಗ ಮಹಮೂದನೂ ಪ್ರಸಿದ್ಧ ಜ್ಯೋತಿಷ್ಕ ನಾಗಿದ್ದನು. ನೈರಿಸ್ಥಿ (ಸ.ಕ್ರಿ.ಶ. ೯೨೨) ಖಗೋಳ ಗಣನ ಪಟ್ಟಿ ಗಳನ್ನು ತಯಾರಿಸಿರುವುದಲ್ಲದೆ, ವಾಯುಶಾಸ್ತ್ರ ವಿಚಾರದ ಗ್ರಂಥವನ್ನು ಬರೆದಿದ್ದಾನೆ. ಗೋಳಗ್ರಹೋನ್ನತಿ ಮಾಪಕದ (ಸ್ಫೇರಿಕಲ್ ಆ್ಯಸ್ಟ್ರೊ ಲೇಬ್) ಮೇಲಿನ ಇವನ ಗ್ರಂಥ ಅತ್ಯುತ್ತಮವಾದ್ದೆಂದು ಎಣಿಕೆ ಯಾಗಿದೆ. ಆಲ್ಬತ್ತಾನಿ ಎಂದು ವ್ಯವಹೃತನಾಗಿರುವ, ಜರೀರ್ ಮಗ ಮಹಮ್ಮದನು (ಕ್ರಿ.ಶ. ೮೫೮–೯೨೯) ಮುಸ್ಲಿಂ ಪ್ರಸಿದ್ಧ ಖಗೋಳ ಶಾಸ್ತ್ರಜ್ಞರಲ್ಲೊಬ್ಬನು. ಇವನು ಯೂರೋಪಿನಲ್ಲಿ ಆಲ್ಬಟೆಗ್‌ನಸ್ ಎಂಬ ಹೆಸರಿನಿಂದ ಪ್ರಸಿದ್ಧನಾಗಿ, ಇವನ ಕೃತಿಗಳು ಲ್ಯಾಟಿನ್ನಿಗೆ ಭಾಷಾಂತರ ವಾಗಿವೆ. ಹೀಗೆಯೇ ಅಬೂಬಕ್‌ರ್ (ಇವನ ಲ್ಯಾಟಿನ್ ಹೆಸರು ಆಲ್ಬುಬತೆರ್) ಎಂಬ ಪರ್ಷಿಯನ್ ಜ್ಯೋತಿಷ್ಕನ ಕೃತಿಗಳೂ ಲ್ಯಾಟಿನ್ನಿಗೆ ಪರಿವರ್ತನವಾಗಿವೆ. ಅಲ್‌ಖುಜಂದಿ (ಸ.ಕ್ರಿ.ಶ. ೧೦೦೦) ಖಗೋಳ ಪರೀಕ್ಷೆಗಳನ್ನು ನಡಸಿ, ವಿಷುವ ವೃತ್ತಕ್ಕೂ ಕ್ರಾಂತಿವೃತ್ತಕ್ಕೂ ಇರುವ ಓಲನ್ನು (ಆಬ್ಲಿಕ್ವಿಟಿ ಆಫ್ ದಿ ಎಕ್ಲಿಪ್‌ಟಿಕ್) ನಿಷ್ಕರ್ಷಿಸಿದನು. ಸ್ಪೈಯ್‌ನಿ ನಲ್ಲಿಯ ಕಾರ್ಡೋವದ ಪ್ರಸಿದ್ಧ ಖಗೋಳಶಾಸ್ತ್ರಜ್ಞನಾದ ಜ಼ರ್ಕಾಲಿ (ಕ್ರಿ.ಶ. ೧೦೨೯–೮೯) ಒಂದು ಗ್ರಹೋನ್ನತಿ ಮಾಪಕವನ್ನು ನಿರ್ಮಿಸಿ ಆ ವಿಷಯವಾಗಿ ಒಂದು ಗ್ರಂಥವನ್ನು ಬರೆದಿದ್ದಾನೆ. ಅಲ್ಲದೆ, ನಕ್ಷತ್ರ ಗಳಿಗೆ ಸಂಬಂಧಿಸಿದಂತೆ ಮಂದೋಚ್ಚ ಚಲನೆಯನ್ನು (ಆ್ಯಪೊಗೀ)

ಪ್ರತಿಪಾದಿಸಿದ್ದಾನೆ. ಇವನ ಗ್ರಹಗತಿಗಳ ಗಣನಪಟ್ಟಿ ಲ್ಯಾಟಿನ್ನಿಗೆ ಭಾಷಾಂತರವಾಗಿದೆ. ಯುರೋಪಿನಲ್ಲೆಲ್ಲ ಪರ್ಷಿಯುವ ಶ್ರೇಷ್ಠ ಕವಿಯೆಂದು ಪ್ರಸಿದ್ಧನಾಗಿರುವ ಉಮರ್‌ಖಯ್ಯಾಮನು (ಕ್ರಿ.ಶ. ೧೦೪೮–೧೧೩೧) ತನ್ನ ತವರು ನಾಡಿನಲ್ಲಿ ಕವಿಗಿಂತ ಹೆಚ್ಚಾಗಿ ಖಗೋಳ ಮತ್ತು ಗಣಿತಶಾಸ್ತ್ರಜ್ಞನೆಂದು ಪ್ರಸಿದ್ಧನಾಗಿದ್ದಾನೆ. ಇವನು ತ್ರಿಘಾತ ಸಮೀಕರಣಗಳಲ್ಲಿ ೧೩ ವಿಧಗಳನ್ನು ಹೇಳಿದ್ದಾನೆ. ಹಳೆಯ ಪರ್ಷಿಯನ್ ಪಂಚಾಂಗವನ್ನು ಪರಿಷ್ಕರಿಸಿ, ಅದನ್ನು ಗ್ರಿಗೋರಿಯನ್ ಪಂಚಾಂಗಕ್ಕಿಂತಲೂ ಹೆಚ್ಚು ನಿಷ್ಕೃಷ್ಟವಾಗಿಮಾಡಿದನು. ಮಂಗೋಲರ ಕಾಲದ ಪರ್ಷಿಯದ ಪ್ರಸಿದ್ಧ ಖಗೋಳಶಾಸ್ತ್ರಜ್ಞನೂ ದಾರ್ಶನಿಕನೂ ಆದ ನಸ್‌ರುದ್ದೀನ್‌ತೂಸಿ (ಸ.ಕ್ರಿ.ಶ. ೧೨೭೪) ಮರಾಘ ಎಂಬಲ್ಲಿ ತನ್ನ ಸ್ವಂತ ಖಗೋಳಶಾಲೆಯಲ್ಲಿ ಪರೀಕ್ಷೆ ನಡಸಿ ಗಣನ ಪಟ್ಟಿಗಳನ್ನು ತಯಾರಿಸಿದ್ದಾನೆ.

ಮುಸ್ಲಿಂ ಖಗೋಳಶಾಸ್ತ್ರಜ್ಞರು ಮಧ್ಯಾಹ್ನ ರೇಖೆ, ಕ್ರಾಂತಿ ವೃತ್ತ, ಮತ್ತು ಅಯನಾಂತ ಅಥವಾ ಯಾಮ್ಯೋತ್ತರ ವೃತ್ತಗಳನ್ನು ಸೂಚಿಸುವ ಮೂರು ಬಳೆಗಳಿಂದ ಕೂಡಿದ ಖಗೋಳಾಕೃತಿಯನ್ನು (ಆರ್ಮಿಲರಿ ಸ್ಫಿಯರ್) ರಚಿಸಿ ಪರಿಷ್ಕರಿಸಿದ್ದರು. ಹಾಗೆಯೇ ಟಾಲೆಮಿಯ ಗೋಳವನ್ನೂ ಪರಿಷ್ಕರಿಸಿ ಉತ್ತಮಗೊಳಿಸಿದರು. ಕ್ರಿ. ಶ. ೧೪೨೦ರಲ್ಲಿ ತೈಮೂರಿನ ಮಮ್ಮಗ ಉಲುಗ್ ಬೇಗಿನ ಅಪ್ಪಣೆಯಿಂದ ಸಮರ್‌ಕಂದಿನಲ್ಲಿ ಕಟ್ಟಿದ ಖಗೋಳ ಶಾಲೆಯೊಂದು ಕ್ರಿ. ಶ. ೧೯೦೦ರಲ್ಲಿ ನಡಸಿದ ಭೂಶೋಧನೆಯಿಂದ ಹೊರಪಟ್ಟಿತು. ಇವನ ಅಪ್ಪಣೆಯಂತೆ ರಚಿಸಿದ ಸ್ಲಿಜ್-ಏ-ಉಲುಗ್ ಬೇಗ್ ಎಂಬ ಪಂಚಾಂಗವನ್ನು ಅಕ್ಬರನು ಸಂಸ್ಕೃತಕ್ಕೆ ಪರಿವರ್ತನ ಮಾಡಿಸಿದನು. ಇಂಡಿಯದಲ್ಲಿ ಮಹಮದ್ ಷಹನ ಆಳಿಕೆಯಲ್ಲಿ (ಕ್ರಿ.ಶ. ೧೭೧೯–೪೮) ಡೆಲ್ಲಿಯಲ್ಲಿ ನಜ್‌ಮುದ್ದೀನ್ ಒಂದು ಖಗೋಳ ಶಾಲೆಯನ್ನು ಕಟ್ಟಿಸಿದನು. ರಾಜಾ ಜಯಸಿಂಗ್ ಕಾಶಿ ಮತ್ತು ಜಯಪುರಗಳಲ್ಲಿ ಖಗೋಳ ಶಾಲೆಗಳನ್ನು ಏರ್ಪಡಿಸಿದ್ದಲ್ಲದೆ, ಖಗೋಳ ಶಾಸ್ತ್ರ ವಿಷಯದ ಅನೇಕ ಗ್ರಂಥಗಳನ್ನು ಅರಬ್ಬಿಯಿಂದ ಸಂಸ್ಕೃತಕ್ಕೆ ಭಾಷಾಂತರ ಮಾಡಿಸಿದನು.

ಖಗೋಳ ಶಾಲೆಗಳ ನಿರ್ಮಾಣವನ್ನು ಯೂರೋಪಿನವರು ಮೊದಲು ಮುಸ್ಲಿಮರಿಂದ ಕಲಿತರು. ಮೊಟ್ಟಮೊದಲಿನ ಖಗೋಳ ಶಾಲೆಗಳು ಕಲೀಫ಼ಮಾಮೂನ್ ಅಪ್ಪಣೆಯ ಮೇಲೆ ಡಮಾಸ್ಕಸ್ಸಿನಲ್ಲಿ ಕ್ರಿ.ಶ. ೮೩೦ರಲ್ಲೂ, ಬಗ್‌ದಾದಿನ ಷಾಮಷಿಯದಲ್ಲಿ ಕ್ರಿ.ಶ. ೮೩೭ ರಲ್ಲೂ ಕಟ್ಟಿದುವು. ಅಲ್‌ಫ಼ರ್‌ಗಾನಿ, ಅಬ್ಬಾಸ್ ಜೌಹರಿ, ಅಲಿ ಮಗ ಸೈದ್, ಮತ್ತು ಖಾಲಿದ್ ಎಂಬವರು ಆ ಖಗೋಳ ಶಾಲೆಗಳ ನಿಯಂತ್ರಕರಾಗಿದ್ದರು. ಅಸ್ಸದುದ್ದೌಲನ ಮಗ ಷರಫ಼ುದ್ದೀನನು ಬಗ್‌ದಾದಿನ ತನ್ನ ತೋಟದಲ್ಲಿ ಒಂದು ಖಗೋಳ ಶಾಲೆಯನ್ನು ಏರ್ಪಡಿಸಿಕೊಂಡಿದ್ದನು. ಈಜಿಪ್ಟ್, ಸಿರಿಯ, ಸ್ಪೈಯ್‌ನ್—ಮೊದಲಾದೆಡೆಗಳಲ್ಲೂ ಖಗೋಳ ಶಾಲೆಗಳಿದ್ದುವು. ಆದರೆ, ಎಲ್ಲವೂ ದುರ್ದೈವದಿಂದ ನಾಶವಾಗಿ ಹೋದುವು. ಸ್ಪೈಯ್‌ನ್‌ದೇಶದ ಸೆವಿಲ್‌ನಲ್ಲಿದ್ದ ಖಗೋಳ ಶಾಲೆಯನ್ನು ಕ್ರೈಸ್ತದಾಳಿಗರು ಧ್ವಂಸ ಮಾಡಿದರು.

ಜ್ಯೋತಿಷಶಾಸ್ತ್ರದ ಅಭ್ಯಾಸ ಮುಸ್ಲಿಮರಲ್ಲಿ ಮೊದಲಿಂದಲೂ ವಿಶೇಷವಾಗಿ ನಡೆಯುತ್ತಿದ್ದರೂ, ಕುರಾನ್ ಅವರ ವಿಷಯದಲ್ಲಿ ಹೀಗೆ ಹೇಳುತ್ತದೆ. " ಅವರು (ಜ್ಯೋತಿಷ್ಕರು) ಆಕಾಶಕ್ಕೆ ಹತ್ತಿ ಭವಿಷ್ಯದ್ ವ್ಯಾಪಾರಗಳ ವಿಷಯವಾಗಿ ಕೇಳಿಕೊಂಡು ಬರಲು ಏಣಿಹಾಕಿದೆಯೋ? ಹಾಗಿದ್ದರೆ, ಹಾಗೆ ನಂಬುವವರು ಸರಿಯಾದ ಪ್ರಮಾಣ ಕೊಡಲಿ." ಅವಿಸಿನ್ನ, ಇಬ್‌ನೆ ರುಷ್‌ದ್ ಮೊದಲಾದ ಅನೇಕ ದಾರ್ಶನಿಕರು ಜ್ಯೋತಿಷ ಶಾಸ್ತ್ರಾಧಾರವಾದದ್ದಲ್ಲವೆಂದು ಭವಿಷ್ಯ ಹೇಳುವುದನ್ನು ತಿರಸ್ಕರಿಸಿದ್ದಾರೆ. ನಾಲ್ಕನೆಯ ಕಲೀಫ಼ ಅಲಿ ಸಿರಿಯದ ಮೇಲೆ ದಂಡೆತ್ತಿ ಹೊರಟಿದ್ದಾಗ ಒಬ್ಬ ಇರಾನಿ ಜ್ಯೋತಿಷ್ಕನು ಮುಹೂರ್ತ ಸರಿಯಾಗಿಲ್ಲವೆಂದು ಹೇಳಲು, ಜೋಯಿಸರು. ಸುಳ್ಳಿಗರೆಂದು ಹೇಳಿ ಅವನ ನುಡಿಯನ್ನು ಕಡೆಗಣಿಸಿ ಹೊರಟೇಹೊರಟನು. ಆದರೂ, ಜ್ಯೋತಿಷ್ಕರಿಗೆ ಕಲೀಫ಼ರ, ದೊರೆಗಳ, ಚಕ್ರವರ್ತಿಗಳ ಆಸ್ಥಾನಗಳಲ್ಲಿ ಮನ್ನಣೆ ದೊರೆಯದೆ ಇರಲಿಲ್ಲ. ಮುಸ್ಲಿಂ ದೇವತಾ ಶಾಸ್ತ್ರಜ್ಞರು ಜ್ಯೋತಿಷವನ್ನು ವಿರೋಧಿಸುತ್ತಿದ್ದದ್ದು ಅದರಲ್ಲಿ ನಂಬಿಕೆ ಇಲ್ಲದಿರುವುದಕ್ಕಿಂತಲೂ ಹೆಚ್ಚಾಗಿ ಅಲ್ಲಾವಿನ ಅನನ್ಯ ಸಾಮಾನ್ಯ ಪ್ರಭುತ್ವಕ್ಕೆ ಭಂಗ ಬರುತ್ತೆಂಬ

ನಂಬಿಕೆಯಿಂದ. ನಕ್ಷತ್ರ, ಗ್ರಹ, ಮೊದಲಾದುವು ಮನುಷ್ಯನ ಜೀವನದ ಮೇಲೆ ಅಧಿಕಾರ ನಡಸುವುದೇ ಆದರೆ ಅಲ್ಲಾವಿನ ಅಪ್ರತಿಹತವೂ ಅದ್ವಿತೀಯವೂ ಆದ ಅಧಿಕಾರಕ್ಕೆ ಬಾಧಕ ಬರುತ್ತದೆಂದು ಅವರು ವಾದಿಸುತ್ತಿದ್ದರು.

**ಗಣಿತ ಮತ್ತು ತ್ರಿಕೋನಮಿತಿ.** ಹಿಂದೆ ಹೇಳಿರುವ ಖಗೋಳ ಶಾಸ್ತ್ರಜ್ಞರೆಲ್ಲರೂ ಹೆಚ್ಚು ಕಡಮೆ ಗಣಿತಶಾಸ್ತ್ರಜ್ಞರೂ ಆಗಿದ್ದರು. ಮುಸ್ಲಿಮರು ಹಿಂದುಗಳಿಂದ ಸೊನ್ನೆಯನ್ನು ('೦'ಯನ್ನು) ಕಲಿತು, ಯೂರೋಪಿಗೆ ಕೊಟ್ಟರು; ಬೀಜಗಣಿತವನ್ನು ಒಂದು ನಿಯತಶಾಸ್ತ್ರವಾಗಿ ವ್ಯವಸ್ಥೆಗೊಳಿಸಿದರು. ಕ್ಷೇತ್ರ ತ್ರಿಕೋನಮಿತಿಯ ಮತ್ತು ಗೋಳ ತ್ರಿಕೋನಮಿತಿಯ ವಿಷಯದಲ್ಲಿಯೂ ಮುಸ್ಲಿಮರು ವ್ಯಾಸಂಗನಡಸಿದ್ದಾರೆ. ಮೊದಮೊದಲು, ಮುಸ್ಲಿಮರು ತಮ್ಮ ಗಣಿತ, ಜ್ಯಾಮಿತಿ, ತ್ರಿಕೋನಮಿತಿ—ಮೊದಲಾದುವನ್ನು ಗ್ರೀಕ್, ಪರ್ಷಿಯನ್ ಮತ್ತು ಹಿಂದುಗಳ ಕಡೆಯಿಂದ ಕಲಿತುಕೊಂಡು, ಅಲ್ಲಿಯ ಗ್ರಂಥಗಳನ್ನು ಅರಬ್ಬಿಗೆ ಭಾಷಾಂತರಿಸಿದರು. ಆದರೆ, ಇದರ ಜೊತೆಗೆ ಸ್ವತಂತ್ರ ಕೆಲಸವನ್ನೂ ನಡಸುತ್ತ ಬಂದರು. ಯೂಸುಫ್ಫನ ಮಗ ಹಜ್ಜಾಜ್ ಯೂಕ್ಲಿಡಿನ ಮೊದಲನೆಯ ಆರು ಪುಸ್ತಕಗಳನ್ನು ಅರಬ್ಬಿಗೆ ಭಾಷಾಂತರಿಸಿದನು. ಬನೂಮುಸ್ ಸೋದರರು ಕೋನವನ್ನು ಮೂರು ಸಮಪಾಲು ಮಾಡುವುದರ ಮತ್ತು ಗೋಳವನ್ನು ಅಳೆಯುವುದರ ವಿಷಯವಾಗಿ ಬರೆದಿದ್ದಾರೆ. ಬೀಜಗಣಿತ ಗ್ರಂಥವನ್ನು ಬರೆದಿರುವ ಖಾರಿಸ್ಮಿಯ ಮೂಲಕ ಹಿಂದುಗಳ ಅಂಕಕ್ರಮ ಯೂರೋಪಿಗೆ ಮುಟ್ಟಿರಬಹುದೆಂದು ಹೇಳುತ್ತಾರೆ. ಪರ್ಷಿಯದ ಈಸನ ಮಗ ಮಹಮ್ಮದನು (ಸ.ಕ್ರಿ.ಶ. ೮೭೪ ಅಥವಾ ೮೮೪) ಸೂರ್ಯ ಮತ್ತು ಚಂದ್ರಗ್ರಹಣಗಳನ್ನೂ, ಗ್ರಹ ಸಂಯೋಗಗಳನ್ನೂ ಪರಿಶೀಲಿಸಿ ವ್ಯಾಸಂಗ ನಡಸಿರುವುದಲ್ಲದೆ, ಯೂಕ್ಲಿಡ್ ಮತ್ತು ಆರ್ಕಿಮಿಡೀಸ್ ಗ್ರಂಥಗಳ ಮೇಲೆ ವ್ಯಾಖ್ಯಾನ ಬರೆದಿದ್ದಾನೆ. ಹೀಗೆಯೇ ಈಜಿಪ್ಟಿನ ಯೂಸುಫ್ಫ ಮಗ ಅಹ್ಮದನು (ಸ.ಕ್ರಿ.ಶ. ೯೧೨) ಟಾಲೆಮಿಯ ಗ್ರಂಥಕ್ಕೆ ವ್ಯಾಖ್ಯಾನ ಬರೆದಿದ್ದಾನೆ. ಈಜಿಪ್ಟಿನ ಅಬೂಕಾಮಿಲ್‌ನು ಖಾರಿಸ್ಮಿಯ ಬೀಜಗಣಿತವನ್ನು ಮುಂದುವರಿಸಿ

ಬರೆದಿದ್ದಾನೆ. ಸಿನಾನ್ ಮಗ ಇಬ್ರಾಹಿಮ್ 'ಕಾನಿಕ್ಸ್' ವಿಚಾರದ ಮೊದಲನೆಯ ಪುಸ್ತಕದ ಮೇಲೆ ವ್ಯಾಖ್ಯಾನವನ್ನೂ, ಅಲ್ಮಜೆಸ್ಟ್, ಮೊದಲಾದ ಸ್ವತಂತ್ರ ಗ್ರಂಥಗಳನ್ನೂ ಬರೆದಿದ್ದಾನೆ. ಪರ್ಷಿಯದ ಅಬೂಜಾಫರ್ ಅಲ್‌ಖಾಜ್ಞಿನ್ನನು (ಸ.ಕ್ರಿ.ಶ. ೯೬೧ ಅಥವಾ ೯೭೧) ಯೂಕ್ಲಿಡಿನ ೧೦ನೆಯ ಪುಸ್ತಕಕ್ಕೆ ವ್ಯಾಖ್ಯಾನ ಬರೆದಿದ್ದಾನೆ. ಅಲ್ಲದೆ, ತ್ರಿಘಾತ ಸಮೀಕರಣವನ್ನು ಕಾನಿಕ್ ಸೆಕ್ಷನ್ ಮೂಲಕ ಪ್ರತಿಪಾದಿಸಿದ್ದಾನೆ. ಪರ್ಷಿಯದ ಕೂಹಿ (ಕ್ರಿ.ಶ. ೯೮೮) ಆರ್ಕಿಮಿಡೀಸ್ ಮತ್ತು ಅಪಲೋನಿಯಸ್ ಸಮಸ್ಯೆಗಳನ್ನು ವಿಚಾರಮಾಡಿದ್ದಾನೆ. ಸಿಜ್‌ಸ್ಸಿ ಅಥವಾ ಸೈಸ್ತಾನಿ (ಕ್ರಿ.ಶ. ೯೫೧-೧೦೨೪) ಕಾನಿಕ್ ಸೆಕ್ಷನ್ ಮತ್ತು ವೃತ್ತಗಳ ಪರಸ್ಪರ ಛೇದನ ವಿಷಯವಾಗಿ ವ್ಯಾಸಂಗ ನಡಸಿದ್ದಾನೆ. ಇರಾನಿನ ಅಬುಲ್ ವಫ್ಲನು (ಸ.ಕ್ರಿ.ಶ. ೯೯೮) ಮುಸ್ಲಿಂ ಪ್ರಸಿದ್ಧ ಗಣಿತಜ್ಞರಲ್ಲಿ ಒಬ್ಬನು. ಇವನು ಖಾರಿಸ್ಮಿ, ಡಿಯೋ ಫ್ಲಾಂಟಸ್ ಮತ್ತು ಯೂಕ್ಲಿಡ್ ಇವರ ಗ್ರಂಥಗಳ ಮೇಲೆ ವ್ಯಾಖ್ಯಾನಮಾಡಿದ್ದಾನೆ. ಇವನು ಟ್ಯಾಂಜೆಂಟ್, ಸೀಕೆಂಟ್, ಕೋಸಿಕೆಂಟ್‌ಗಳನ್ನು ವಿಚಾರಮಾಡಿ ಸೈನ್ ಮೊದಲಾದ ಆರು ತ್ರಿಕೋನಮಿತಿ ಪ್ರಮಾಣಗಳಿಗಿರುವ ಪರಸ್ಪರ ಸಂಬಂಧವನ್ನು ವ್ಯಕ್ತಪಡಿಸಿದನು. ಚರಿತ್ರಕಾರ, ದಾರ್ಶನಿಕ, ವಿಶ್ವಕೋಶಕಾರ ಮತ್ತು ನಾನಾ ಭಾಷಾ ವಿಶಾರದನೆಂದು ಪ್ರಖ್ಯಾತನಾಗಿರುವ ಪರ್ಷಿಯದ ಅಬೂರೈಹಾನ್ ಮಹಮ್ಮದ್ ಅಲ್ಬೀರೂನಿ (ಕ್ರಿ.ಶ. ೯೭೩-೧೦೪೮) ಗಣಿತ ಮತ್ತು ಖಗೋಳಶಾಸ್ತ್ರಗಳ ಮೇಲೂ ಗ್ರಂಥ ರಚಿಸಿದ್ದಾನೆ. ಪರ್ಷಿಯದ ಅವಿಸಿನ್ನ (ಕ್ರಿ.ಶ. ೯೮೦-೧೦೩೭) ಎಂಬ ದಾರ್ಶನಿಕನು ದೊಡ್ಡ ಗಣಿತಜ್ಞನೂ ಆಗಿದ್ದನು. ಅಲ್ಮರ್‌ನಾನಿ, ಅಬೂಸಲ್ಮ, ಮೊದಲಾದ ಸ್ಪೇಯ್‌ನ್ ಮುಸ್ಲಿಂ ಗಣಿತಜ್ಞರು ವಾಣಿಜ್ಯ ಗಣಿತ, ಸಂಖ್ಯಾತತ್ತ್ವ, ಜ್ಯಾಮಿತಿ—ಮೊದಲಾದುವುಗಳ ಮೇಲೆ ಬರೆದಿದ್ದಾರೆ. ಸ್ವಂತ ಖಗೋಳಶಾಲೆಯನ್ನು ಇಟ್ಟುಕೊಂಡಿದ್ದ ಈಜಿಪ್ಟಿನ ಇಬ್‌ನೆ ಯೂನುಸ್ ಗಣಿತ ಮತ್ತು ಖಗೋಳ ಶಾಸ್ತ್ರ ವಿಷಯದಲ್ಲಿ ಬಹು ಬೆಲೆಯುಳ್ಳ ವಿಷಯಗಳನ್ನು ಕಂಡು ಹಿಡಿದಿದ್ದಾನೆ. ಪರ್ಷಿಯದ ಲಬ್ಬಾನ್ ಮಗ ಕುಷ್ಯಾರ್ (ಕ್ರಿ.ಶ. ೯೧೭-೧೦೨೯) ಖಗೋಳ ಗಣನ

ಪಟ್ಟಿಗಳನ್ನು ತಯಾರಿಸಿರುವುದಲ್ಲದೆ ತ್ರಿಕೋನಮಿತಿ, ಗಣಿತ ಮೊದಲಾದ ವಿಷಯಗಳ ಮೇಲೂ ಬರೆದಿದ್ದಾನೆ. ಖುಜಂದಿನ ಇಬ್ನೆ ಹುಸನ್ 'ರ್ಯಾಷನಲ್ ಸಮಕೋನ ತ್ರಿಕೋನ'ದ ಮೇಲೆ ಬರೆದಿರುವ ಗ್ರಂಥದಿಂದ ಪ್ರಸಿದ್ಧನಾಗಿದ್ದಾನೆ. ಹುಸೇನ್ ಮಗ ಅಬೂಬಕರ್ ಮಹಮ್ಮದ್ (ಸ.ಕ್ರಿ.ಶ. ೧೦೨೯) ಅಂಕಗಣಿತ ಮತ್ತು ಬೀಜಗಣಿತದ ಮೇಲೆ ಗ್ರಂಥ ಬರೆದಿರುವುದಲ್ಲದೆ ವರ್ಗ (ದ್ವಿಘಾತ) ಸಮೀಕರಣ ಮೊದಲಾದುವುಗಳ ಮೇಲೆ ಬರೆದಿದ್ದಾನೆ. ಪ್ರಸಿದ್ಧ ಕವಿ ಉಮರ್ ಖಯ್ಯಾಮನೂ ಮೊದಲೇ ಹೇಳಿರುವಂತೆ ಅಂಕಗಣಿತ ಬೀಜಗಣಿತಗಳ ಮೇಲೆ ಹಲವು ಗ್ರಂಥಗಳನ್ನು ರಚಿಸಿದ್ದಾನೆ. ಸರಗೋಸದ ದೊರೆ ಯೂಸುಫ್ (ಕ್ರಿ.ಶ. ೧೦೮೧–೮೫), ಪರ್ಷಿಯದ ನಸೀರುದ್ದೀನ್ ತೂಸಿ, ಬಹಾವುದ್ದೀನ್ ಆಮೆಲಿ—ಮೊದಲಾದವರು ದೊಡ್ಡ ಗಣಿತಜ್ಞರಾಗಿದ್ದರು.

**ವೈದ್ಯಶಾಸ್ತ್ರ.** ಇಸ್ಲಾಂ ಪೂರ್ವದ ಅರಬ್ಬಿಯವರಿಗೆ ಹಲವು ಗಿಡ ಬೇರುಗಳ ಮತ್ತು ಶಿಲೆಗಳ ಔಷಧಗುಣ ತಿಳಿದಿತ್ತು. ಇಸ್ಲಾಮಿಗೆ ಕೊಂಚ ಮೊದಲಿದ್ದ ಕಾಲ್ಡನ ಮಗ ಹಾರಿಸ್ ನಮಗೆ ತಿಳಿದಿರುವ ಮಟ್ಟಿಗೆ ಮೊಟ್ಟ ಮೊದಲ ಅರಬ ವೈದ್ಯನು. ಇವನು ಪರ್ಷಿಯದಲ್ಲಿಯ ಜುಂದೆಷಹಪೂರಿನ ವಿದ್ಯಾಲಯದಲ್ಲಿ ದರ್ಶನ ಮತ್ತು ವೈದ್ಯವನ್ನು ವ್ಯಾಸಂಗಮಾಡಿದವನು. (ಜುಂದೇಷಹಪೂರ್ ವಿದ್ಯಾಲಯದಲ್ಲಿ ಇರಾನ್, ಸಿರಿಯ, ಗ್ರೀಸ್—ಮೊದಲಾದ ಪ್ರಾಂತಗಳ ಶಿಕ್ಷಕರೂ ವಿದ್ಯಾರ್ಥಿಗಳೂ ಇರುತ್ತಿದ್ದರು.) ಇವನ ತರುವಾಯ ಬಂದ ಅಲ್ಕಮನ ಮಗ ನಾಸಿರ್ ಜುಂದೇಷಹಪೂರಿನ ವಿದ್ಯಾಲಯದ ಶಿಷ್ಯನೇ. ಮಹಮ್ಮದ್ ಪೈಗಂಬರನು ತಾನೇ ತನ್ನ ಅನುಯಾಯಿಗಳಿಗೆ ವೈದ್ಯ ವಿಷಯದಲ್ಲಿ ಸಲಹೆ ಕೊಡುತ್ತಿದ್ದನಂತೆ. ಉಮಯ್ಯರ ಆಳಿಕೆಯಲ್ಲಿ ವೈದ್ಯಶಾಸ್ತ್ರಾಭ್ಯಾಸಕ್ಕೆ ಉತ್ತೇಜನ ಇತ್ತಾದರೂ, ಅರಬ್ಬಿವೈದ್ಯಶಾಸ್ತ್ರ ಸರಿಯಾಗಿ ಅಭಿವೃದ್ಧಿ ಹೊಂದಿದ್ದು ಅಬ್ಬಾಸಿಯರ ಆಳಿಕೆಯಲ್ಲಿ. ಆ ಕಾಲದಲ್ಲಿ ಜುಂದೇಷಹಪೂರಿನ ವಿದ್ಯಾಲಯದ ಜೊತೆಗೆ ಸಿರಿಯದಲ್ಲಿಯ ಹರ್ರಾನ್ ಎಂಬಲ್ಲೂ ಒಂದು ವಿದ್ಯಾಲಯವಿತ್ತು.

ಗ್ರೀಕ್ ಭಾಷೆಯಿಂದ ಸಿರಿಯನ್ ಮತ್ತು ಪಹ್ಲವಿ ಭಾಷೆಗಳಿಗೆ ಭಾಷಾಂತರಗಳು ಐದನೆಯ ಶತಮಾನಕ್ಕೇ (ಅಥವಾ ಇನ್ನೂ

ಮೊದಲೇ) ಆಗತೊಡಗಿದ್ದುವು. ಆರನೆಯ ಶತಮಾನದಲ್ಲಿ ಸೆರ್ಗಿಯಸ್ ಎಂಬವನು ಹಿಪ್ಪೊಕ್ರಿಟೀಸ್ ಮತ್ತು ಗಲೆನ್ ಎಂಬ ಗ್ರೀಕ್ ವೈದ್ಯರ ಗ್ರಂಥಗಳನ್ನು ಸಿರಿಯನ್ನಿಗೆ ಭಾಷಾಂತರಿಸಿದ್ದನು. ಆಬ್ಬಾಸಿ ಕಲೀಫರು ಜುಂದೀಷಹಪೂರ್ ಮತ್ತು ಹರ್‍ರಾನ್ ವಿದ್ಯಾಲಯಗಳ ವಿದ್ವಾಂಸರಿಂದ ವೈದ್ಯ ಗ್ರಂಥಗಳನ್ನು ಅರಬ್ಬಿಗೆ ಭಾಷಾಂತರ ಮಾಡಿಸಿದರು. ಅಲ್ಲದೆ, ಪರ್ಶಿಯನ್ ಮತ್ತು ಹಿಂದೂಗ್ರಂಥಗಳೂ ಹಲವು ಅರಬ್ಬಿಗೆ ಭಾಷಾಂತರ ವಾದುವು.

ಬಗ್‌ದಾದ್ ಮತ್ತು ಇತರ ಮುಖ್ಯ ಪಟ್ಟಣಗಳಲ್ಲಿ ಸರ್ಕಾರದ ಆಡಳಿತದಲ್ಲಿ ಸುವ್ಯವಸ್ಥಿತ ವೈದ್ಯಶಾಲೆಗಳು ನಡೆಯುತ್ತಿದ್ದುವು. ದೊಡ್ಡ ಪಟ್ಟಣಗಳಲ್ಲಿ ಹೆಂಗಸರಿಗೂ ಗಂಡಸರಿಗೂ ಪ್ರತ್ಯೇಕ ಶಾಖೆಗಳಿದ್ದ ಈ ಸುಸಜ್ಜಿತ ವೈದ್ಯ ಶಾಲೆಗಳ ಜೊತೆಗೆ ಹಲವು ಚರವೈದ್ಯ ಶಾಲೆಗಳೂ ಇದ್ದುವು. ವೈದ್ಯರೂ ಔಷಧ ವ್ಯಾಪಾರಿಗಳೂ (ಕ್ಷೌರಕರೂ ಕೂಡ) ಸರ್ಕಾರದ ಮೇಲ್ವಿಚಾರಣೆಗೆ ಒಳಪಟ್ಟಿದ್ದರು. ವೈದ್ಯರನ್ನು ಪರೀಕ್ಷಿಸಿ ಯೋಗ್ಯತಾಪತ್ರ ಕೊಡುವುದಕ್ಕಾಗಿ ಒಬ್ಬ ಅಧಿಕಾರಿಯೇ ಇದ್ದನು. ಹೀಗೆ ಯೋಗ್ಯತಾಪತ್ರ ಪಡೆದಿದ್ದವರು ಬಗ್‌ದಾದ್ ಒಂದರಲ್ಲೇ ಸುಮಾರು ೮೦೦ ಮಂದಿ ಇದ್ದರಂತೆ. ಅಲ್ಲದೆ, ನಾರು ಬೇರುಗಳನ್ನು ಪರೀಕ್ಷಿಸಿ ತೆಗೆದುಕೊಂಡು ಬರಲು ಯೂರೋಪ್, ಆಫ್ರಿಕ, ಏಷ್ಯಗಳ ನಾನಾ ಪ್ರದೇಶಗಳಿಗೆ ಆಗಾಗ್ಗೆ ಸಸ್ಯ ಶಾಸ್ತ್ರಜ್ಞರನ್ನು ಕಳುಹುತ್ತಿದ್ದರು.

ಇಸ್ಲಾಂ ವೈದ್ಯವನ್ನು ಸ್ಥೂಲವಾಗಿ ನಾಲ್ಕು ಕಾಲವಾಗಿ ಭಾಗಿಸಬಹುದು. ಮೊದಲನೆಯದು ಕ್ರಿ.ಶ. ೭೫೦ರಿಂದ ಕ್ರಿ.ಶ. ೯೦೦ರ ವರೆಗಿನ, ಮುಖ್ಯವಾಗಿ, ಭಾಷಾಂತರ ಕಾಲ. ಪರ್ಶಿಯದ ಯೆಹೂದ್ಯನಾದ ಮಸೋರ್ ಜವಾಯಿಹ್, ಅರೇಬಿಯದ ಕ್ರೈಸ್ತನಾದ ಇಸಾಕ್ ಮಗ ಹುನಯ್‌ನ್, ಯಾಹ್ಯನ ಮಗ ಈಸಾ, ಹುನಯ್‌ನ್ ಮಗ ಇಸ್ಹಾಕ್ (ಕ್ರಿ.ಶ. ೯೧೦), ಇರಾಕಿನ ಕುರ್‍ರಾ ಮಗ ಸಾಬಿತ್, ಲೂಕನ ಮಗ ಕುಸ್ತ, ಮಸವೆಹ್ ಮಗ ಯುಹನ್ನ ಮೊದಲಾದವರನ್ನು ಭಾಷಾಂತರಕಾರರಲ್ಲಿ ಹೆಸರಿಸಬಹುದು. ಇವರಲ್ಲಿ ಕೆಲವರು ಸ್ವತಂತ್ರ ಗ್ರಂಥಗಳನ್ನೂ ಬರೆದಿದ್ದಾರೆ.

ಎರಡನೆಯ ಕಾಲ, ಸ್ವತಂತ್ರ ಅಭ್ಯಾಸಕಾಲ. ಪರೀಕ್ಷೆ, ಪ್ರಯೋಗ, ಗ್ರೀಕ್ ಮತ್ತು ಇತರ ಪ್ರಾಚೀನ ಗ್ರಂಥಗಳ ವಿಮರ್ಶೆ, ಪ್ರಮಾಣ ವೈದ್ಯ ಗ್ರಂಥಗಳ ರಚನೆ—ಮೊದಲಾದುವು ನಡೆದಿರುವ ಈ ಕಾಲವನ್ನು ಸ್ವರ್ಣಯುಗವೆನ್ನಬಹುದು. ಈ ಕಾಲದಲ್ಲಿ ವೈದ್ಯವೊಂದಕ್ಕೇ ಅಲ್ಲದೆ ನಾನಾ ಶಾಸ್ತ್ರಗಳಿಗೆ ಉತ್ತೇಜನವಿತ್ತು. ಬುಖ್ತ್‌ಯಿಷುವಿನ ಮಗ ಜಿಬ್ರೀಲಿಗೆ (ಸ.ಕ್ರಿ.ಶ. ೮೩೦) ಸರ್ಕಾರದಿಂದ ತಿಂಗಳೊಂದಕ್ಕೆ ೧೦,೦೦೦ ದ್ರಮ್ಮಗಳೂ, ಕಲೀಫ಼ನ ಸ್ವಂತ ಖಜಾನೆಯಿಂದ ೫೦,೦೦೦ ದ್ರಮ್ಮಗಳೂ ಸಲ್ಲುತ್ತಿದ್ದುವಂತೆ. ಇವನು ತನ್ನ ೨೩ ವರ್ಷದ ವೈದ್ಯದಿಂದ ಒಟ್ಟು ೩೫ ಲಕ್ಷ ಪೌಂಡು ಗಳಿಸಿದನೆಂದು ಪ್ರತೀತಿ ಇದೆ. ಈ ಕಾಲದ ವೈದ್ಯರಲ್ಲಿ ಮುಖ್ಯರಾದವರು: (೧) ಪರ್ಷಿಯದ ರಬ್ಬಾನ್ ಮಗ ಅಲಿ—(ಸ.ಕ್ರಿ.ಶ. ೯೫೪). ಇವನು ಕಲೀಫ಼ ಮುತವಕ್ಕಲಿನ ಉದ್ಯೋಗದಲ್ಲಿದ್ದು 'ಫ಼ಿರ್ದೌಸ್ ಉಲ್ ಹಿಕ್‌ಮತ್' (ವೈದ್ಯಸ್ವರ್ಗ) ಎಂಬ ಪ್ರಸಿದ್ಧವಾದ ವೈದ್ಯ ಗ್ರಂಥ ಬರೆದಿದ್ದಾನೆ. ಈ ಗ್ರಂಥದಲ್ಲಿ ವೈದ್ಯಶಾಸ್ತ್ರ ಮಾತ್ರವಲ್ಲದೆ ದರ್ಶನ, ಪ್ರಾಣಿಶಾಸ್ತ್ರ, ಮನಶ್ಶಾಸ್ತ್ರ, ಖಗೋಳಶಾಸ್ತ್ರ—ಮೊದಲಾದುವುಗಳ ಪ್ರಸಂಗವೂ ಇದೆ. ಏಳು ಭಾಗಗಳೂ, ಮೂವತ್ತು ಒಳಭಾಗಗಳೂ, ೩೬೦ ಅಧ್ಯಾಯಗಳೂ ಉಳ್ಳ ಈ ದೊಡ್ಡ ಗ್ರಂಥಕ್ಕೆ ಕರ್ತೃವೇ ಹೇಳಿಕೊಂಡಿರುವಂತೆ ಆಕರಗಳು ಗ್ರೀಕ್, ಪರ್ಷಿಯನ್ ಮತ್ತು ಹಿಂದೂ ಗ್ರಂಥಗಳು. (೨) ಅಬೂಬಕ್‌ರ್ ಮಹಮ್ಮದ್ ಅಲ್‌ರಾಸ್ಸೀ (ಕ್ರಿ.ಶ. ೮೬೫-೯೨೫) ಇವನು ಪರ್ಷಿಯದವನು. ಆ ಕಾಲದ ವೈದ್ಯರಲ್ಲಿ ಅಗ್ರಗಣ್ಯನು. ಎಳವೆಯಲ್ಲಿ ಸಂಗೀತವನ್ನೂ, ತರುವಾಯ ದರ್ಶನವನ್ನೂ ಅಭ್ಯಾಸಮಾಡಿದ ಇವನು ಕೊನೆ ವಯಸ್ಸಿನಲ್ಲಿ ವೈದ್ಯವನ್ನು ವ್ಯಾಸಂಗ ಮಾಡಿದನು. ನಾನಾ ವಿಷಯಗಳ ಮೇಲೆ ಸುಮಾರು ೨೦೦ ಗ್ರಂಥಗಳನ್ನು ಬರೆದಿದ್ದರೂ, ಇಂದಿಗೂ ಅವನ ವೈದ್ಯ ಗ್ರಂಥ ಬಹು ಮುಖ್ಯವಾದದ್ದೆಂದು ಲೆಕ್ಕವಾಗಿದೆ. ಇಪ್ಪತ್ತು ಸಂಪುಟಗಳಲ್ಲಿ ಬರೆದಿರುವ 'ಅಲ್ ಹಾವಿ' ಎಂಬ ಈ ಗ್ರಂಥದಲ್ಲಿ ಪ್ರತಿಯೊಂದು ವ್ಯಾಧಿಯ ವಿಷಯದಲ್ಲೂ ಗ್ರೀಕ್, ಪರ್ಷಿಯನ್, ಅರಬ್ಬಿ ಮತ್ತು ಹಿಂದೂ ವೈದ್ಯರ ಅಭಿಪ್ರಾಯಗಳಿಗೆ ಗಮನ ಸೆಳೆದು ಕೊನೆ

ಯಲ್ಲಿ ತನ್ನ ಅಭಿಪ್ರಾಯ ಕೊಟ್ಟಿದ್ದಾನೆ. ಈ ಗ್ರಂಥ ಅಂಜೂ ಮನೆತನದ ಮೊದಲನೆಯ ಚಾರ್ಲೆಸ್ ದೊರೆಯ (ಕ್ರಿ.ಶ. ೧೨೭೯) ಅಪ್ಪಣೆಯ ಮೇರೆ ಲ್ಯಾಟಿನ್ನಿಗೆ 'ಕಾಂಟಿನೆನ್ಸ್' ಎಂಬ ಹೆಸರಿನಿಂದ ಪರಿವರ್ತನವಾಯಿತು. ಇವನು ಆಹಾರ, ಬೆಳವಣಿಗೆ, ದೃಷ್ಟಿ, ಸಿಡುಬು, ಅಶ್ಮರಿ–ಮೊದಲಾದವುಗಳನ್ನು ವಿಚಾರ ಮಾಡಿರುವುದಲ್ಲದೆ, ದರ್ಶನ, ಗಣಿತ, ಖಗೋಳಶಾಸ್ತ್ರ, ಪ್ರಕೃತಿ ಶಾಸ್ತ್ರ—ಮೊದಲಾದುವುಗಳ ಮೇಲೂ ಬರೆದು ಕಾಲ, ದೇಶ, ಚಲನೆ—ಮೊದಲಾದುವನ್ನೂ ಪ್ರಸ್ತಾವಿಸಿದ್ದಾನೆ. ಇವನು ಮೊದಲು ತನ್ನ ತವರೂರಿನಲ್ಲೂ ತರುವಾಯ ಬಗ್‌ದಾದಿನಲ್ಲೂ ಪ್ರಧಾನ ವೈದ್ಯನಾಗಿದ್ದನು. (೩) ಅಬ್ಬಾಸ್ ಮಗ ಅಲಿ. ಇವನು ಯೂರೋಪಿನಲ್ಲಿ 'ಹಾಲಿ' ಎಂದು ವ್ಯವಹೃತನಾಗಿದ್ದಾನೆ. 'ಕಿತಾಬ್-ಎ-ಮಲೆಕೀ' ಎಂಬ ವಿಶ್ವಕೋಶ ಇವನ ಮುಖ್ಯ ಗ್ರಂಥ. ಇದು ತಾತ್ತ್ವಿಕ ಮತ್ತು ಪ್ರಾಯೋಗಿಕ ವೈದ್ಯವೆರಡನ್ನೂ ಒಳಗೊಂಡಿದೆ. ಹಿಂದಿನ ಅರಬ್ಬಿ ಮತ್ತು ಗ್ರೀಕ್ ವೈದ್ಯರ ಮೇಲೆ ವಿಮರ್ಶೆಯೂ ಇದೆ. ಇದು ಅಸ್ಸದುದ್ದೌಲ ದೊರೆಗೆ ಅರ್ಪಣವಾಗಿದೆ. ಇದರಲ್ಲಿ ಅಂಗರಚನಾ ಶಾಸ್ತ್ರ, ಶಸ್ತ್ರವೈದ್ಯ—ಮೊದಲಾದ್ದು ಕೂಡ ಹೇಳಿದೆ. (೪) ಅಬೂ ಅಲಿ ಹುಸೇನ್ ಇಬ್‌ನ್‌ಸಿನ (ಕ್ರಿ.ಶ. ೯೮೦–೧೦೩೭): ಯೂರೋಪಿನಲ್ಲಿ ಅವಿಸಿನ್ನ ಎಂದು ವ್ಯವಹೃತನಾಗಿರುವ ಇವನು ಇಸ್ಲಾಮಿನಲ್ಲೆಲ್ಲ ಅತ್ಯಂತ ಪ್ರಸಿದ್ಧ ದಾರ್ಶನಿಕ ಮತ್ತು ವೈದ್ಯ. ಇಸ್ಲಾಂ ದೇಶಗಳಲ್ಲೇ ಅಲ್ಲದೆ ಯೂರೋಪಿನಲ್ಲೂ ಇವನ ಗ್ರಂಥಗಳು ಪ್ರಮಾಣ ಗ್ರಂಥಗಳಾಗಿದ್ದುವು. ಮೂಲಿಕೆಗಳು, ರೋಗ, ನಿದಾನ, ಔಷಧ ಮಿಶ್ರಣ, ಮೊದಲಾದ ವಿಷಯಗಳನ್ನೊಳಗೊಂಡ ಇವನ ವೈದ್ಯಗ್ರಂಥ ಲ್ಯಾಟಿನ್ನಿಗೆ ಪರಿವರ್ತನವಾಗಿ, ಪ್ರಸಿದ್ಧರಾದ ಹಿಪ್ಪೊಕ್ರಿಟೀಸ್ ಮತ್ತು ಗಲೆನ್ ಮೊದಲಾದವರ ಗ್ರಂಥವನ್ನು ಕೂಡ ಮೂಲೆಗೆ ಒತ್ತಿತ್ತು.

ಸ್ಪೆಯಿನ್, ಸಿರಿಯ, ಇರಾಕ್ ಮತ್ತು ಈಜಿಪ್ಟ್ ಪ್ರಾಂತಗಳಲ್ಲಿಯೂ ಮುಸ್ಲಿಮರಲ್ಲಿ ಹಲವು ಪ್ರಸಿದ್ಧ ವೈದ್ಯರಿದ್ದರು. ಅಬುಲ್ ಕಾಸಿಮ್‌ಸ್ಸಹ್ರವಿ (ಕ್ರಿ. ಶ. ೧೦೧೩) ಎಂಬವನು ಕಾರ್ಡೋವದಲ್ಲಿ ಆಸ್ಥಾನ ವೈದ್ಯನಾಗಿದ್ದನು. ಮೂವತ್ತು ಅಧ್ಯಾಯಗಳನ್ನುಳ್ಳ ವೈದ್ಯ

ಗ್ರಂಥ ಬರೆದಿದ್ದಾನೆ. ಇವನ ಶಸ್ತ್ರ ವೈದ್ಯದ ಲೇಖನ ಯೂರೋಪಿನಲ್ಲಿ ಶಸ್ತ್ರವೈದ್ಯಾಭಿವೃದ್ಧಿಗೆ ಬಹು ಸಹಾಯಮಾಡಿತು. ಈ ಗ್ರಂಥಲ್ಯಾಟಿನ್ನಿಗೆ ಪರಿವರ್ತನವಾಗಿ, ಅದರ ಮೇಲೆ ಅನೇಕ ವ್ಯಾಖ್ಯಾನಗಳೂ ಬರೆದಿವೆ. ಅಬು ಜುಲ್‌ಜಿಲ್, ಇಬ್‌ನ್ ಬಾಜಾ, ಇಬ್‌ನ್ ಉಲ್ ಪಷ್ಟ್‌ದ್, ಇಬ್‌ನ್ ಉಲ್ ಜಸ್ಸರ್, ಇಬ್‌ನ್ ಉಲ್ ರುಷ್ದ್ ಅಥವಾ ಅವೆರೊರ್‍ಸ್, ಅವೆನ್‌ಸ್ಟೊಅರ್, ಮೈಮೊನಿ—ಮೊದಲಾದವರು ಸ್ಪೇಯ್‌ನಿನ ಇತರ ಪ್ರಸಿದ್ಧ ವೈದ್ಯರು.

ಕೈರೋವಿನಲ್ಲಿ ರಿಸ್‌ವಾನ್ ಮಗ ಅಲಿ (ಕ್ರಿ.ಶ. ೧೦೬೭) ಎಂಬ ಪ್ರಸಿದ್ಧ ವೈದ್ಯನಿದ್ದನು. ಹಿರಾತಿನ ಅಬೂಮನ್‌ಸೂರ್ ಮೊವಫ್ಫಿಕ್ (ಕ್ರಿ.ಶ. ೯೭೫) ಎಂಬ ಪರ್ಷಿಯನ್ನನು ಸಿರಿಯ, ಪರ್ಷಿಯ, ಗ್ರೀಸ್, ಅರಬ್ಬಿ ಮತ್ತು ಹಿಂದೂದೇಶಗಳಿಂದ ಬಂದ ೫೮೫ ಔಷಧ ವಸ್ತುಗಳ ವಿಷಯವಾಗಿ ಬರೆದಿದ್ದಾನೆ. ಬಗ್‌ದಾದಿನ ಅಲಿ, ಮತ್ತು ಮೂಸಲಿನ ಅಮ್ಮಾರ್ ಇವರ ನೇತ್ರ ವೈದ್ಯ ಗ್ರಂಥಗಳು ಲ್ಯಾಟಿನ್ನಿಗೆ ಪರಿವರ್ತನವಾದದ್ದಲ್ಲದೆ, ಕ್ರಿ.ಶ. ೧೭೫೦ರ ವರೆಗೂ ಪಾಠಗ್ರಂಥಗಳಾಗಿದ್ದುವು. ಬಸ್ರದ ಅಬೂ ಅಲಿ ಹುಸೇನ್ ಅಲ್ ಹೈಥಮ್ (ಕ್ರಿ.ಶ. ೯೬೫) ಎಂಬ ಪ್ರಸಿದ್ಧ ಪಂಡಿತನ ದೃಷ್ಟಿಶಾಸ್ತ್ರಗ್ರಂಥ ಲ್ಯಾಟಿನ್ನಿಗೆ ಪರಿವರ್ತನವಾದದ್ದು ನಮಗೆ ಉಳಿದು ಬಂದಿದೆ. ಪಾಶ್ಚಾತ್ಯ ದೃಷ್ಟಿಶಾಸ್ತ್ರಜ್ಞರಿಗೆ ಇದು ಆಧಾರ ಗ್ರಂಥವಾಯಿತು.

ಅರಬ್ಬಿ ವೈದ್ಯಶಾಸ್ತ್ರದ ಮೂರನೆಯ ಕಾಲ ಅಬ್ಬಾಸಿ ಕಿಲಾಫತ್ತಿನ ಅವನತಿಯಿಂದ ಪಶ್ಚಿಮ ಏಷ್ಯದಲ್ಲಿ ಯೂರೋಪ್ ವೈದ್ಯ ಪದ್ಧತಿಯ ಏಳಿಗೆಯ ವರೆಗಿನದು. ಕ್ರಿ.ಶ. ೧೩೫೦ ರಿಂದ ಕ್ರಿ.ಶ. ೧೮೫೦ರ ವರೆಗಿನ ಈ ದೀರ್ಘಕಾಲದಲ್ಲಿ ಪೂರ್ವದ ದೇಶಗಳಲ್ಲಿ ಶಾಸ್ತ್ರಾಭ್ಯಾಸ ಕಡಮೆಯಾಗಿ ಪಾಶ್ಚಾತ್ಯದೇಶಗಳಲ್ಲಿ ಅದು ಏಳಿಗೆಹೊಂದಿತು. ಪ್ರಸಿದ್ಧ ಅರಬ್ಬಿ ಶಾಸ್ತ್ರ ಗ್ರಂಥಗಳು ಯೂರೋಪು ಭಾಷೆಗಳಿಗೆ ಭಾಷಾಂತರವಾಗಿ, ಅವುಗಳ ಆಧಾರದ ಮೇಲೆ ಸ್ವತಂತ್ರ ಪ್ರಯತ್ನ ನಡೆದು, ಅವುಗಳ ಕುಂದು ಕೊರತೆ ಗಳೆಲ್ಲ ಪೂರೈಸಿ ಮುಂದೆ ಬೆಳೆದುವು. ಮುಸ್ಲಿಮರು ಶವಕ್ಕೆ ತೋರುತ್ತಿದ್ದ ಶ್ರದ್ಧೆ ಭಕ್ತಿಗಳಿಂದ ಅದರ ಛೇದನಕ್ಕೆ ಅವಕಾಶವಿಲ್ಲದೆ, ಮುಸ್ಲಿಂ ವೈದ್ಯ

ಯೂರೋಪ್ ವೈದ್ಯದ ಮಾರ್ಗದಲ್ಲಿ ಮುಂದುವರಿಯದೆ ಹೋಯಿತು. ವೈದ್ಯಸೂತ್ರಗಳನ್ನು ಬರೆದಿರುವ ಸ್ಪೈಯ್‌ನಿನ ಯೆಹೂದ್ಯ ಮೈಮೂನಿ (ಕ್ರಿ.ಶ. ೧೧೩೫-೧೨೦೪); ಉತ್ತರ ಆಫ್ರಿಕ, ಸ್ಪೈಯ್‌ನ್, ಸಿರಿಯ— ಮೊದಲಾದ ಪ್ರಾಂತಗಳಿಂದ ಅನೇಕ ಗಿಡ ಬೇರುಗಳನ್ನು ಸಂಗ್ರಹಿಸಿ, ವೈದ್ಯಕ್ಕೊದಗುವಂತೆ, ಸಸ್ಯಶಾಸ್ತ್ರವೊಂದನ್ನು ಬರೆದಿರುವ ಇಬ್ನ್-ಎ-ಬೈತಾರ್ (ಸ.ಕ್ರಿ.ಶ. ೧೨೪೮); ಹತ್ತು ಸಂಪುಟಗಳಲ್ಲಿ "ಜಖೀರ-ಎ-ಖಾರೆಸ್ಮ್ ಷಾಹಿ" ಎಂಬ ಹೆಸರಿನ ಪ್ರಸಿದ್ಧ ವೈದ್ಯ ಗ್ರಂಥವನ್ನು (ಇದು ಅವಿಸಿನ್ನನ ಗ್ರಂಥಕ್ಕೆ ಎರಡನೆಯದೆಂದು ಎಣಿಸಿದೆ.) ಬರೆದಿರುವ ಗುರ್ಗಾನ್ನಿನ ಜೈನ್‌ಉದ್ದೀನ್ ಇಸ್ಮಾಯಿಲ್—ಇವರೇ ಮೊದಲಾದವರು ಈ ಕಾಲದ ಪ್ರಸಿದ್ಧ ವೈದ್ಯರು. ಪರ್ಷಿಯದ ಮೊಗಲ್ ದೊರೆಯ ಪ್ರಸಿದ್ಧ ಮಂತ್ರಿಯಾಗಿದ್ದ ರಷೀದ್ ಉದ್ದೀನ್ ತನ್ನಲ್ಲಿ ಸ್ವಯಂ ವೈದ್ಯನಾಗಿದ್ದು, ಹಲವು ವೈದ್ಯಶಾಲೆಗಳನ್ನೇರ್ಪಡಿಸಿದ್ದಲ್ಲದೆ, ವೈದ್ಯ ವಿದ್ಯಾಶಾಲೆಗಳನ್ನೂ ವೈದ್ಯ ಪುಸ್ತಕ ಭಂಡಾರಗಳನ್ನೂ ಸ್ಥಾಪಿಸಿದನು.

ಈಗಿನ ನಾಲ್ಕನೆಯ ಕಾಲದಲ್ಲಿ ಅರಬ ಅಥವಾ ಮುಸ್ಲಿಂ ವೈದ್ಯ ಎಲ್ಲೆಲ್ಲೂ ಹಿಂದೆ ಬಿದ್ದು ಪಾಶ್ಚಾತ್ಯ ವೈದ್ಯವೇ ಅಭಿವೃದ್ಧಿಗೆ ಬರುತ್ತಿದೆ. ಯುನಾನಿ ವೈದ್ಯ ಎಂದು ಹೆಸರು ಪಡೆದಿರುವ ಮುಸ್ಲಿಂ ವೈದ್ಯದ ಅಭ್ಯಾಸಕ್ಕಾಗಿ ಡೆಲ್ಲಿಯಲ್ಲಿ ಹಕೀಮ್ ಅಜ್‌ಮಲ್‌ಖಾನ್ ಎಂಬ ಪ್ರಸಿದ್ಧ ವೈದ್ಯನಿಂದ ಒಂದು ಯುನಾನಿ ವೈದ್ಯ ವಿದ್ಯಾಶಾಲೆ ಸ್ಥಾಪನೆಯಾಗಿದೆ. ಅಲ್ಲದೆ, ಮೈಸೂರು ಮತ್ತು ಹೈದರಾಬಾದ್ ಪ್ರಾಂತಗಳಲ್ಲಿಯೂ ಯುನಾನಿ ವೈದ್ಯ ವಿದ್ಯಾಶಾಲೆಗಳಿವೆ. ಆದರೂ, ಯುನಾನಿ ವೈದ್ಯಕ್ಕೆ ತವರಾದ ತುರ್ಕಿ, ಇರಾನ್, ಇರಾಕ್, ಈಜಿಪ್ಟ್ ಮೊದಲಾದ ಮುಸ್ಲಿಂ ಪ್ರಾಂತಗಳಲ್ಲಿ ಮಾತ್ರ ಇದಕ್ಕೆ ಎಡೆಯೇ ಇಲ್ಲದೆ ಪಾಶ್ಚಾತ್ಯ ವೈದ್ಯ ಬೇರೂರಿದೆ.

## ೭. ಮುಸ್ಲಿಂ ವಾಣಿಜ್ಯ

ಇಸ್ಲಾಂ ಪ್ರಾರಂಭಕ್ಕೆ ಮೊದಲು ಅರಬ ನಾಗರಿಕತೆ ಈಗ ಯಮನ್ ಎಂದು ಕರೆಯುವ ನೈಋತ್ಯ ಪ್ರಾಂತದಲ್ಲಿ ಅಡಕವಾಗಿತ್ತೆನ್ನಬಹುದು. ಈ ಅರಬರ ವಿಚಾರವಾಗಿ, ನಮಗೆ ದೊರಕುವ ಯೆಹೂದ್ಯ

ಲೇಖನಗಳಲ್ಲಿ ಜೋಬ್ ಎಂಬವನು, ಅರಬರು ಸಮುದ್ರಯಾನ, ವಾಣಿಜ್ಯ, ಮೀನು ವ್ಯಾಪಾರ—ಮೊದಲಾದುವುಗಳಲ್ಲಿ ಕುಶಲರೆಂದು ಬರೆದಿದ್ದಾನೆ. ಅವರು ಮುಖ್ಯವಾಗಿ ಸಾಂಬಾರ ಸರಕುಗಳು ಮತ್ತು ಸುಗಂಧ ದ್ರವ್ಯಗಳಲ್ಲಿ ಆಮದು ರಫ್ತು ವ್ಯಾಪಾರ ನಡೆಸುತ್ತಿದ್ದರು. ಅವರು ಪೂರ್ವತೀರದಲ್ಲಿ ಕೋರ (ಚೋಳ) ಮಂಡಲ, ಸಿಲೋನ್‌ಗಳ ವರೆಗೂ, ಪಶ್ಚಿಮದಲ್ಲಿ ಪೂರ್ವ ಆಫ್ರಿಕದ ತೀರದವರೆಗೂ, ಉತ್ತರದಲ್ಲಿ ಪ್ಯಾಲೆಸ್ಟೈನ್ ಸಿರಿಯಗಳವರೆಗೂ ವ್ಯಾಪಾರ ಹಬ್ಬಿಸಿದರು. ಮತ್ತೊಂದು ಪ್ರಸಿದ್ಧ ವ್ಯಾಪಾರ ಜನಾಂಗವಾದ ಫ಼ಿನೀಷಿಯನ್ನರೊಡನೆ ವ್ಯವಹಾರ ವಿಟ್ಟುಕೊಂಡಿದ್ದರು. ಡೇವಿಡ್ ಮತ್ತು ಅವನ ಮಗ ಸಾಲಮನ್ನರ ಏಳಿಗೆಯು ಮತ್ತು ಯಮನ್ನಿನ ರಾಣಿ ಸಬಾ ಇಸ್ರೇಲ್ ದೊರೆಗಳಿಗೆ ಅಧೀನಳಾದ ಅಂದಿನಿಂದ ಯಮನರ ಇಳಿಕೆಗೆ ಮೊದಲಿಟ್ಟುಕೊಂಡಿತು. ಕೊನೆಗೆ ಪಶ್ಚಿಮದಲ್ಲಿ ರೋಮನ್ ಸಾಮ್ರಾಜ್ಯವೂ, ಪೂರ್ವದಲ್ಲಿ ಸಸಾನಿಯನ್ ಸಾಮ್ರಾಜ್ಯವೂ ಎದ್ದು ಈ ಚಿಕ್ಕ ಯಮನ್ ಸಂಸ್ಥಾನಕ್ಕೆ ಸ್ಪರ್ಧಿಗಳಾಗಿ ಅದನ್ನು ಮೂಲೆಗೊತ್ತಿಬಿಟ್ಟುವು.

ಇಸ್ಲಾಂ ಏಳಿಗೆ ಅರಬರ ವ್ಯಾಪಾರಕ್ಕೆ ಮತ್ತೆ ಒಂದು ಹುರುಪನ್ನು ಕೊಟ್ಟಿತು. ಮತ್ತೆ ಚೇತರಿಸಿಕೊಂಡ ಇವರ ವ್ಯಾಪಾರ ಕ್ರುಸೇಡ್ ಯುದ್ಧಗಳ ವರೆಗೆ ನಡೆದು ಬಂತು. ಮಹಮ್ಮದ್ ಮತ್ತು ಅವನ ಮೊದ ಮೊದಲಿನ ಅನುಯಾಯಿಗಳು ದೊಡ್ಡ ವರ್ತಕರಾಗಿದ್ದರು. ಕುರಾನಿನಲ್ಲಿ ಅಲ್ಲಲ್ಲಿ ವ್ಯಾಪಾರಕ್ಕೆ ಸಂಬಂಧಿಸಿದ ಹಲವು ವಚನಗಳಿವೆ. ಮೆಕ್ಕ ಸಾಹು ಕಾರರ ಊರಾಗಿತ್ತು. ಇಲ್ಲಿಯ ವರ್ತಕರು ಹೊರದೇಶದ ವ್ಯಾಪಾರದಲ್ಲಿ ದುಡ್ಡು ಹಾಕಿ ಯಮನ್, ಸಿರಿಯ, ಮೆಸೊಪೊಟೇಮಿಯ—ಮೊದಲಾದ ದೇಶಗಳಿಗೆ ಹೋಗಿ ಬಂದು ಕಾರವಾನ್ ವ್ಯಾಪಾರ ನಡೆಸುತ್ತಿದ್ದರು. ಪ್ರತಿಯೊಬ್ಬ ಅರಬನೂ ಇಲ್ಲ ದಳ್ಳಾಳಿಯೊ ಇಲ್ಲ ವ್ಯಾಪಾರಿಯೊ ಆಗಿರು ತ್ತಿದ್ದನೆಂದು ಸ್ಟ್ರ್ಯಾಬೊ ಹೇಳಿದ್ದಾನೆ. ಹೆಂಗಸರಲ್ಲೂ ಹಲವು ಪ್ರಸಿದ್ಧ ವ್ಯಾಪಾರಿಗಳಿದ್ದರು. ಮಹಮ್ಮದನ ಹೆಂಡತಿ ಖುದೀಜ ಬಹು ದೊಡ್ಡ ವ್ಯಾಪಾರಿಯಾಗಿದ್ದಳು. ಅಬೂಜಹಲಿನ ತಾಯಿ ಪರಿಮಳ ವ್ಯಾಪಾರಿ ಯಾಗಿದ್ದಳು. ಮೊದಲನೆಯ ಉಮಯ್ಯದ್ ಕಲೀಫನ ತಾಯಿ ಹಿಂದ್

ಎಂಬವಳು ಸಿರಿಯ ಮೊದಲಾದ ಪ್ರಾಂತಗಳೊಡನೆ ವ್ಯಾಪಾರ ನಡಸುತ್ತಿದ್ದಳು. ಒಂದು ಮನೆತನಕ್ಕೆ ಸೇರಿದ ಹಲವರು ದುಡ್ಡು ಹಾಕಿ ಪಾಲುಗಾರಿಕೆಯಲ್ಲಿ ವ್ಯಾಪಾರ ನಡಸುತ್ತಿದ್ದದ್ದೂ ಉಂಟು. ಒಮ್ಮೊಮ್ಮೆ ಹೊರಗಿನವರನ್ನೂ ಪಾಲುಗಾರರನ್ನಾಗಿ ತೆಗೆದುಕೊಳ್ಳುತ್ತಿತ್ತು. ಮೆಕ್ಕ ವ್ಯಾಪಾರಿಗಳು ಇಂಡಿಯ ಮತ್ತು ಚೀನ ಸರಕುಗಳನ್ನು ಯಮನ್ ಪ್ರಾಂತ ದ್ವಾರವೂ, ಈಜಿಪ್ಟ್ ಮತ್ತು ಸಿರಿಯದ ಸರಕುಗಳನ್ನು ಸಿರಿಯದ ಗಡಿನಾಡುಗಳ ಮೂಲಕವೂ, ಪರ್ಷಿಯನ್ ಸರಕುಗಳನ್ನು ಮೆಸೊಪೊಟೇಮಿಯದ ಮೂಲಕವೂ ಆಮದು ಮಾಡುತ್ತಿದ್ದರು. ಸಾಮಾನ್ಯವಾಗಿ ಇವರು ರೇಶ್ಮೆ, ಹತ್ತಿ, ಜೋಳಗಳು, ಎಣ್ಣೆ, ಆಯುಧಗಳು ಮೊದಲಾದುವನ್ನು ಆಮದುಮಾಡಿ, ಚಿನ್ನ, ಬೆಳ್ಳಿ, ವಜ್ರ, ಗಂಧದಮರ, ಪರಿಮಳ ದ್ರವ್ಯಗಳು, ಔಷಧಗಳು, ಚರ್ಮ—ಮೊದಲಾದುವನ್ನು ರಫ್ತು ಮಾಡುತ್ತಿದ್ದರು. ಒಂದು ಕಾರವಾನ್ ಹೊರಡುವುದು, ಇಲ್ಲ, ಬರುವುದೆಂದರೆ ಊರಿನಲ್ಲಿ ಒಂದು ದೊಡ್ಡ ಉತ್ಸವವೇ ಆಗಿತ್ತು.

ಕಿಲಾಫತ್ತಿನ ಮೊದಲನೆಯ ಮೂವತ್ತು ವರ್ಷಗಳು ಈಜಿಪ್ಟ್, ಸಿರಿಯ, ಪರ್ಷಿಯ ಮೊದಲಾದ ದೇಶಗಳನ್ನು ಗೆಲ್ಲುವುದರಲ್ಲೇ ಕಳೆಯಿತು. ಈ ಮೂಲಕ ಕೊಳ್ಳೆ ಹೊಡೆದು ಅರಬರು ಧನಿಕರಾದ ಮೇಲೆ ಅವರ ಗಮನ ಮತ್ತೆ ವ್ಯಾಪಾರೋದ್ಯಮದ ಕಡೆಗೆ ತಿರುಗಿತು. ಕಾರವಾನ್ ಮಾರ್ಗಗಳು ಉತ್ತಮಗೊಂಡುವು. ಅಲ್ಲಲ್ಲಿ ಒಳ್ಳೆಯ ತಂಗುಗಳು ಏರ್ಪಟ್ಟವು. ಅಂಚೆ ಪದ್ಧತಿ ಏರ್ಪಟ್ಟಿತು. ನೆಲದ ಮೇಲೂ ಕಡಲ ಮೇಲೂ ವ್ಯಾಪಾರ ನಡೆದು ಕ್ರಮೇಣ ವಾಣಿಜ್ಯ ಮತ್ತು ಭೂಗೋಳ ವಿಷಯಕ್ಕೆ ಸಂಬಂಧಪಟ್ಟ ಹಲವು ಸಂಗತಿಗಳು ಶೇಖರವಾದುವು. ಮಸೂದಿ, ನಾಸೆರ್‌ಖುಸ್ರೊ ಮೊದಲಾದ ಸಂಚಾರಿಗಳಿಂದ ಶೇಖರಿಸಿದ ವಿಷಯಗಳು ಕ್ರೈಸ್ತ ನಾವಿಕರಿಗೂ ಸಹಾಯವಾದುವು. ಇದ್ರೀಸಿ ಎಂಬ ಮುಸ್ಲಿಂ ಭೌಗೋಳಿಕನು ಸಿಸಿಲಿಯ ನಾರ್ಮನ್‌ದೊರೆ ಎರಡನೆಯ ರೋಜರನ ಅಪ್ಪಣೆಯ ಮೇರೆ ಒಂದು ಭೂಗೋಳವನ್ನು ಬರೆದನು. ಈ ಪುಸ್ತಕ ಕ್ರಿ.ಶ. ೧೬೧೯ರಲ್ಲಿ ಲ್ಯಾಟಿನ್ನಿಗೆ ಭಾಷಾಂತರವಾಯಿತು. ಕೈಗಾರಿಕೆಯೂ ಅಭಿವೃದ್ಧಿ ಹೊಂದಿತು. ಗಣಿಕೆಲಸ,

ಕಾಗದ ತಯಾರಿಕೆ, ರೇಶ್ಮೆಹುಳು ಸಾಕುವುದು, ಕಬ್ಬಿಣ ಮತ್ತು ಉಕ್ಕಿನ ತಯಾರಿಕೆ, ಚರ್ಮದ ಕೆಲಸ, ಹಣ್ಣುಗಳನ್ನು ಒಣಗಿಸಿ ರಫ್ತುಮಾಡುವುದು ಮೊದಲಾದುವು ಅಭಿವೃದ್ಧಿಗೊಂಡುವು.

ಕಾರ್ಡೋವದ ಚಿತ್ರ ನೆಯ್ಗೆಯ ಬಟ್ಟೆಗಳೂ, ಪರ್ಷಿಯದ ಉಣ್ಣೆ ಬಟ್ಟೆಗಳೂ, ಗ್ರ್ಯಾನಡದ ರೇಶ್ಮೆಯೂ, ಟಾಲೆಡೊದ ಚಿನ್ನದ ಕೆಲಸವೂ, ಡಮಾಸ್ಕಸ್ ಮತ್ತು ಇಸ್ಫಹಾನಿನ ಕತ್ತಿಗಳೂ ಲೋಕಪ್ರಸಿದ್ಧವಾಗಿದ್ದುವು. ಪರ್ಷಿಯದಲ್ಲಿ ಬಹು ಬೆಲೆಬಾಳುವ ಉತ್ತಮ ಜಮಖಾನೆಗಳು ತಯಾರಾಗುತ್ತಿದ್ದುವು. ಒಂದೊಂದಕ್ಕೆ ೨೦,೦೦೦ ಚಿನ್ನದ ನಾಣ್ಯಗಳು ಬೆಲೆಯಾಗುತ್ತಿದ್ದ ಜಮಖಾನೆಗಳೂ ಇದ್ದುವು. ಯಮನ್ ಪ್ರಾಂತದಲ್ಲಿ ಕಾಫಿ ಸಾಗುವಳಿಯಾಗುತ್ತಿತ್ತು—(ಇದು ಇಂಡಿಯಕ್ಕೆ ಸುಮಾರು ಕ್ರಿ.ಶ. ೧೭೯೯ರಲ್ಲಿ ಬಂತು).

೧೧ನೆಯ ಶತಮಾನದಿಂದ ಮೊದಲುಗೊಂಡು ಯೂರೋಪಿಯನ್ನರ ಸಮುದ್ರ ವ್ಯಾಪಾರದ ಉದ್ಯಮದ ವರೆಗೆ ಮುಸ್ಲಿಮರೇ ಮೆಡಿಟರೇನಿಯನ್ ಸಮುದ್ರ, ಕೆಂಪುಕಡಲು, ಚೀನಾಸಮುದ್ರ, ಹಿಂದೂ ಮತ್ತು ಪೆಸಿಫಿಕ್‌ಸಾಗರ—ಈ ಭಾಗಗಳಲ್ಲೆಲ್ಲ ಅದ್ವಿತೀಯ ಅಧಿಪತಿಗಳಾಗಿದ್ದರು. ಆಟ್ಲಾಂಟಿಕ್ಕಿನಿಂದ ಹಿಡಿದು ಪೆಸಿಫಿಕ್ ವರೆಗೆ ಹಲವು ವಲಸೆನಾಡುಗಳನ್ನು ಸ್ಥಾಪಿಸಿದರು. ಪಶ್ಚಿಮದಲ್ಲಿ ಅಸ್ಸೋರೀಸ್ ದ್ವೀಪಗಳನ್ನೂ, ಪೂರ್ವದಲ್ಲಿ ಮಲಯ ದ್ವೀಪಸ್ತೋಮಗಳನ್ನೂ ಕಂಡುಹಿಡಿದರು. ಮಲಗ, ಕಾರ್ಥೆಜನ, ಅಲೆಗ್ಸ್ಯಾಂಡ್ರಿಯ, ಬಸ್ರ, ಬಗ್‌ದಾದ್, ಬಾರ್ಸಿಲೋನ, ಕಾಡಿಸ್—ಮೊದಲಾದ ಪ್ರಸಿದ್ಧ ರೇವು ಪಟ್ಟಣಗಳಾದುವು. ಸ್ಪೆಯ್‌ನ್ ಮುಸ್ಲಿಮರೊಬ್ಬರಲ್ಲಿಯೆ ೧೦೦೦ಕ್ಕೆ ಮೇಲ್ಪಟ್ಟ ವ್ಯಾಪಾರ ಹಡಗುಗಳಿದ್ದುವು. ಈ ಎಲ್ಲ ಉದ್ಯಮಗಳಲ್ಲೂ ಅರಬರು, ಪರ್ಷಿಯನ್ನರು, ತುರ್ಕಿಯರು, ಹಿಂದುಗಳು, ಚೀನಿಯರು, ಆಫ್ರಿಕದವರು—ಎಲ್ಲರೂ ಭಾಗವಹಿಸುತ್ತಿದ್ದರು.

ಸುಲೇಮಾನ್ ಎಂಬ ಅರಬ ಬರಹಗಾರನೊಬ್ಬನು ಕ್ರಿ.ಶ. ೮೫೦ರಲ್ಲಿ ಚೀನಾದಿಂದ ಬಂದ ಟೀ ವಿಷಯವಾಗಿ ಬರೆದಿದ್ದಾನೆ. ಇಂಗ್ಲೆಂಡ್ ನಾರ್ವೆ, ಮತ್ತು ಸ್ವೀಡನ್ ಪ್ರಾಂತಗಳಲ್ಲಿ ಹಲವು ಇಸ್ಲಾಂ ನಾಣ್ಯಗಳು

ಸಿಕ್ಕಿವೆ. ಸ್ಪೈಯ್‌ಸಿನ ಕಾರ್ಡೋವದಲ್ಲಿ ಎರಡು ಲಕ್ಷ ಕೈಗಾರಿಕೆಯ ಮನೆತನಗಳಿದ್ದುವಂತೆ. ಅಲ್ಲಿಯ ಮಸೀದಿಯಲ್ಲಿ ೮,೦೦೦ ದೀಪಗಳು ಬೆಳಗುತ್ತಿದ್ದುವೆಂದೂ ಅವಕ್ಕೆ ೨೦,೦೦೦ ಪೌಂಡ್ ಎಣ್ಣೆ ಖರ್ಚಾಗುತ್ತಿತ್ತೆಂದೂ ಪ್ರತೀತಿ ಇದೆ. ಸ್ಪೈಯ್‌ನ್ ಮುಸ್ಲಿಮರು ರೇಶ್ಮೆ ಮತ್ತು ಉಣ್ಣೆಯ ನೆಯ್ಗೆಯವರೆಂದೂ ಬಣ್ಣಗಾರರೆಂದೂ ಪ್ರಸಿದ್ಧರಾಗಿದ್ದರು. ೧೬,೦೦೦ ರೇಶ್ಮೆ ಮಗ್ಗಗಳಿದ್ದುವು. ಮೊರಾಕೋವಿನಲ್ಲಿ ಫೆಜ್ ಎಂಬಲ್ಲಿ ತುರ್ಕೀ ಟೋಪಿ ತಯಾರಾಗುತ್ತಿತ್ತು. ಮುಸ್ಲಿಂ ದೇಶಗಳಲ್ಲಿ ಗುಲಾಮರ ವ್ಯಾಪಾರ ಹೆಚ್ಚಾಗಿತ್ತು.

ಈಗಿನ ಕಾಲದ್ದಕ್ಕೆ ಹೋಲಿಸಿದರೆ ಅಲ್ಪವಾಗಿ ಕಂಡುಬಂದರೂ ಆಗಿನ ಕಾಲದ ಇತರ ಜನಾಂಗಗಳೊಡನೆ ಹೋಲಿಸಿದರೆ ಮುಸ್ಲಿಮರ ನೌಕಾವ್ಯವಸ್ಥೆ ಅಷ್ಟೇನೂ ಕೀಳಾಗಿರಲಿಲ್ಲ. ಚೀನ ಇಂಡಿಯ ಮತ್ತು ಆಫ್ರಿಕದಿಂದ ಪದಾರ್ಥಗಳು ಮೊದಲು ಬಗ್‌ದಾದಿಗೆ ಬಂದು ಅಲ್ಲಿಂದ ಪಾಶ್ಚಾತ್ಯ ದೇಶಗಳಿಗೆಲ್ಲ ಹೋಗುತ್ತಿದ್ದುವು. ಅಹ್‌ಮದ್ ಎಂಬ ಮುಸ್ಲಿಮನು ವಾಸ್ಕೋಡಿಗಾಮನೇ ಮೊದಲಾದ ಮೊದಮೊದಲಿನ ಕ್ರೈಸ್ತ ನಾವಿಕರಿಗೆ ಮಾರ್ಗದರ್ಶಿಯಾಗಿ ಕೆಲಸಮಾಡಿದನು. ಅವನಲ್ಲಿ ಸಮುದ್ರ ಪಟ, ದಿಕ್ಸೂಚಿ—ಮೊದಲಾದ ಸಮುದ್ರಯಾನ ಸಲಕರಣೆಗಳು ಇದ್ದುವು. ಅವನು ಹಿಂದೂಸಾಗರ, ಕೆಂಪುಕಡಲು, ಪರ್ಶಿಯನ್ ಕೊಲ್ಲಿ, ಚೀನಾ ಸಮುದ್ರ, ಇವುಗಳಲ್ಲಿ ಸಮುದ್ರಯಾನಕ್ಕೆ ಸಹಾಯವಾಗುವಂತೆ ಕೈಪಿಡಿಯೊಂದನ್ನು ಬರೆದಿದ್ದನು.

ಮೊದಮೊದಲಿನ ಮೊಗಲ್ ಚಕ್ರವರ್ತಿಗಳ ಕಾಲದಲ್ಲಿ ಇಂಡಿಯಕ್ಕೂ ಮಧ್ಯ ಏಷ್ಯಕ್ಕೂ ವ್ಯಾಪಾರ ಮುಖ್ಯವಾಗಿ ಕಾರವಾನ್ ಮೂಲಕ ನಡೆಯುತ್ತಿತ್ತು. ಕುತುಬ್‌ಷಾಹಿ ಸಂತತಿಯ ಆಳಿಕೆಯಲ್ಲಿ ಮಸುಲಿಪಟಂ ಗೋಲ್ಕೊಂಡದ ಮುಖ್ಯ ರೇವು ಪಟ್ಟಣವಾಗಿ, ಅಲ್ಲಿಂದ ಹಡಗುಗಳು ಸುಮಾತ್ರ, ಜಾವ, ಸಯಾಮ್, ಚೀನ, ಮೊದಲಾದೆಡೆಗಳಿಗೆ ಹೋಗಿಬರುತ್ತಿದ್ದುವು.

# ಅಧ್ಯಾಯ ೮

## ಮುಸ್ಲಿಂ ಕಲಾ ಸಂಸ್ಕೃತಿ

### ಸಂಗೀತ

"ಒಂದೊಂದಕ್ಕೂ ಒಂದೊಂದು ಭೂಷಣವಿದೆ; ಕುರಾನಿಗೆ ಮಧುರ ಕಂಠವೇ ಭೂಷಣ" ಎಂದು ಮಹಮ್ಮದನು ಹೇಳುತ್ತಿದ್ದನಂತೆ. ಅವನ ಮಿತ್ರನಾದ ಅಬೂಮೂಸಾ ಅವರಿಗೆ ಒಳ್ಳೆಯ ಕಂಠವಿತ್ತು. ಅವನ ಕುರಾನ್ ಪಠನ ಬಹು ಇಂಪಾಗಿರುತ್ತಿತ್ತು. ಮಹಮ್ಮದನು ಇದನ್ನು ಕಂಡು ಆವನ ಕಂಠದಲ್ಲಿ ಡೇವಿಡ್ಡಿನ ವೀಣೆ (ಹಾರ್ಪ್) ನುಡಿಯುತ್ತದೆ ಎಂದು ಹೇಳುತ್ತಿದ್ದನು.

ಅರಬ್ಬಿ ಭಾಷೆಯ ಮೂಸಿಕಿ (ಸಂಗೀತ) ಎಂಬ ಪದ ಗ್ರೀಕಿನಿಂದ ಬಂದದ್ದು. ಮೂಸಿಕಿ ಗಣಿತ ಶಾಸ್ತ್ರಕ್ಕೆ ಸಂಬಂಧಪಟ್ಟದ್ದು. ಇದನ್ನು ದಾರ್ಶನಿಕರು ಅಭ್ಯಾಸಿಸುತ್ತಿದ್ದರು. ಗಿನಾ ಎಂಬುದು ಸಾಮಾನ್ಯವಾಗಿ ಸಂಗೀತವನ್ನು ಸೂಚಿಸುವ ಪದ. ಗಾಯಕನಿಗೆ ಮೊಗನ್ನಿ ಎಂದು ಹೆಸರು. ಇಸ್ಲಾಮಿಗೆ ಪೂರ್ವದಲ್ಲಿ ಬಹು ಹಿಂದಿನಿಂದಲೂ ಅರೇಬಿಯದಲ್ಲಿ ಸಂಗೀತವಿದ್ದಿರಬೇಕು. ಮೆಕ್ಕಾ ಜಾತ್ರೆಗೆ ಅನೇಕ ಗಾಯಕಿಯರೂ ನರ್ತಕಿಯರೂ (ಅಬಿಸೀನಿಯ, ಈಜಿಪ್ಟ್, ರೋಮ್, ಇರಾನ್ ಚಕ್ರಾಧಿಪತ್ಯಗಳಿಂದ ಕೂಡ) ಬರುತ್ತಿದ್ದರು.

ಅವೆಸ್ತದ ಬಹು ಪ್ರಾಚೀನ ಭಾಗಗಳಾದ ಗಾಥಗಳು ಗಾನರೂಪದಲ್ಲಿ ಹಾಡುತ್ತಿದ್ದವು. ಡೇರಿಯಸ್ ಆಸ್ಥಾನದಲ್ಲಿ ೩೦೦ ಗಾಯಕಿಯರಿದ್ದರೆಂದು ಅಥಾನಕಸ್ ಹೇಳಿದ್ದಾನೆ. ಸಸಾನಿಯನ್ ದೊರೆಗಳು ಸಂಗೀತ ಕಲೆಗೆ ಆಶ್ರಯದಾತರೆಂದು ಪ್ರಸಿದ್ಧರಾಗಿದ್ದಾರೆ. ೫ನೆಯ ಬಹ್‌ರಾಮ್ ದೊರೆ ಇಂಡಿಯದಿಂದ ಅನೇಕ ಗಾಯಕರನ್ನು ಕರಸಿಕೊಂಡಿದ್ದನಂತೆ. ಖುಸ್ರೋವಿನ ಆಸ್ಥಾನದ ಕವಿಯೂ ಸಂಗೀತಗಾರನೂ ಆದ ಬಾರ್‌ಬದ್ ಆಸ್ಥಾನಕ್ಕೆ ಅಲಂಕಾರಪ್ರಾಯವಾಗಿದ್ದನು. ತಾಕ್-ಏ-ಬಸ್ತಮ್ ಎಂಬಲ್ಲಿಯ ಸಸಾನಿಯನ್ ಶಿಲ್ಪದಲ್ಲಿ ವೀಣೆ (ಹಾರ್ಪ್) ವಾದ್ಯವನ್ನು ನುಡಿಸುತ್ತಿರುವ ಹಲವು ಗಾಯಕಿಯರ ಚಿತ್ರಗಳಿವೆ.

ಅರಬರು ಗ್ರೀಕ್ ಮತ್ತು ರೋಮನ್ ಆಕರಗಳಿಂದ ತಮ್ಮ ಸಂಗೀತವನ್ನು ಅಭಿವೃದ್ಧಿಗೊಳಿಸಿಕೊಂಡು, ಕೃಷಿಮಾಡಿ ಬೆಳಸಿದರು. ಸಂಗೀತ ಕಲಾಭ್ಯಾಸ ಉಮಯ್ಯದ್ ಆಳಿಕೆಯ ಕೊನೆಯಲ್ಲಿ ಮೊದಲಾಗಿ ಅಬ್ಬಾಸಿದ್ ಆಳಿಕೆಯಲ್ಲಿ ಬಲಗೊಂಡು ಬೆಳೆಯಿತು. ರಾಜರೇ ಅಲ್ಲದೆ ಅನೇಕ ಶ್ರೀಮಂತರೂ ತಮ್ಮ ತಮ್ಮ ಸ್ವಂತ ಸಂಗೀತಗಾರರನ್ನು ಇಟ್ಟು ಕೊಂಡಿದ್ದರು. ಸಾಮಾನ್ಯವಾಗಿ ಇಂಥಾ ಗಾಯಕರೆಲ್ಲರೂ ಸುಂದರ ತರುಣಿಯರಾಗಿರುತ್ತಿದ್ದರು. ಇವರಲ್ಲಿ ಅನೇಕರು ತಮ್ಮ ಯಜಮಾನರ ಮೇಲೆ ಪ್ರಭಾವ ಬೀರಿ ಅವರನ್ನು ವಶಪಡಿಸಿಕೊಳ್ಳುತ್ತಿದ್ದದ್ದೂ ಉಂಟು. ಕಲೀಫ಼ ೨ನೆಯ ಯಸ್ಸೀದ್ ತನ್ನ ಗಾಯಕಿಯರಾದ ಸುಲ್ಲಮ ಮತ್ತು ಹುಬ್ಬಾಬ ಎಂಬವರನ್ನು ಬಹು ಪ್ರೀತಿಯಿಂದ ಕಾಣುತ್ತಿದ್ದು, ಅವರಲ್ಲೇ ಮಗ್ನನಾಗಿರುತ್ತಿದ್ದನು. ಅವರಲ್ಲಿ ಒಬ್ಬಳು ತೀರಿಕೊಳ್ಳಲು, ದುಃಖದಿಂದ ತಾನೂ ತೀರಿಕೊಂಡನು. ದೇವತಾ ಶಾಸ್ತ್ರಜ್ಞರು ಸಮಾಜದ ಈ ದುರವಸ್ಥೆಯನ್ನು ನೋಡಿ ಗಿನಾ (ಸಂಗೀತ) ಇಸ್ಲಾಂ ಪ್ರಕಾರ ನಿಷಿದ್ಧ ಭೋಗಗಳಲ್ಲಿ (ಮಲಾಹಿಗಳಲ್ಲಿ) ಒಂದು ಎಂದು ಹೇಳತೊಡಗಿದರು. ಆದರೆ, ಈ ಅಭಿಪ್ರಾಯದಲ್ಲಿ ಐಕಮತ್ಯವಿರಲಿಲ್ಲ. ಕಟ್ಟಿಗೆ ಒಳಪಟ್ಟು ಮಿತವಾಗಿ ನಡೆದರೆ ಗಿನಾ ದೋಷವಲ್ಲವೆಂದು ಕೆಲವರು ಹೇಳಿದರು. ಜೊತೆಗೆ, ಸೂಫ಼ೀ ಸಾಧುಗಳಲ್ಲಿ ಬಹುಮಂದಿ ವಾದ್ಯ ಸಂಗೀತವನ್ನು ಅನುಮೋದಿಸಿದ್ದೇ ಅಲ್ಲದೆ, ಗಾಯನ ನರ್ತನಗಳಿಗೂ ಅವಕಾಶಕೊಟ್ಟರು. ಅಲ್ಲದೆ, ಭಕ್ತಿಯ ವಿಕಾಸ ಪ್ರದರ್ಶನಗಳಿಗೂ ಪರಾತ್ಪರ ಸೌಂದರ್ಯದ ಅನುಭವಕ್ಕೂ ಸಂಗೀತ ಆವಶ್ಯಕವೆಂದೂ ಹೇಳಿದರು.

೧೦ನೆಯ ಶತಮಾನದಿಂದ ೧೮ನೆಯ ಶತಮಾನದವರೆಗೆ ಇಸ್ಲಾಂ ಸಂಗೀತ ಜಗತ್ತಿನ ಕಲಾಸಂಸ್ಕೃತಿಯ ಬೆಳವಣಿಗೆಗೆ ಸಹಾಯಮಾಡಿದೆ. ಸ್ಪೆಯ್‌ನ್ ಮತ್ತು ಉತ್ತರ ಆಫ್ರಿಕದ ಮೂಲಕ ಯೂರೋಪ್ ಸಂಗೀತದ ಮೇಲೂ, ಪರ್ಷಿಯ ಮಧ್ಯ ಏಷ್ಯದ ಮೂಲಕ ಹಿಂದೂ ಸಂಗೀತದ ಮೇಲೂ ತನ್ನ ಪ್ರಭಾವ ಬೀರಿದೆ. ಇತರ ಪೂರ್ವದೇಶಗಳ ಸಂಗೀತ ಪದ್ಧತಿಗಳಂತೆಯೇ ಮುಸ್ಲಿಂ ಪದ್ಧತಿಯೂ ಲಯತತ್ತ್ವದ (ಮೆಲೊಡಿ) ಆಧಾರದ ಮೇಲೆ ಕಟ್ಟಿದೆ. ಇಸ್ಲಾಂ ಪೂರ್ವದ ಅರಬರಿಗೆ ಕೊಳಲು,

ತಂಬೂರಿಗಳು ತಿಳಿದಿದ್ದುವು. ತಂಬೂರಿಗೆ ಬಗ್‌ದಾದಿ ಅಥವಾ ಮಿಸ್ತಾನಿ ಎಂದು ಹೆಸರಿತ್ತು. ಇರಾನ್ ಮತ್ತು ರೋಮನ್ ಚಕ್ರಾಧಿಪತ್ಯಗಳಿಂದ ಗುಲಾಮರನ್ನು ಮದೀನಕ್ಕೆ ಹಿಡಿದುಕೊಂಡು ಬಂದಂದಿನಿಂದ ಅರೇಬಿಯ ದಲ್ಲಿ ಸಂಗೀತ ಕಲೆ ಕ್ರಮವಾಗಿ ಅಭ್ಯಾಸವಾಗಿ ಅಭಿವೃದ್ಧಿಹೊಂದಿತೆನ್ನ ಬಹುದು. ಆ ಗುಲಾಮರಲ್ಲಿ ಹಲವರು ಉತ್ತಮ ಸಂಗೀತಗಾರರಿದ್ದು ಆ ಕಲೆಯ ಅಭ್ಯಾಸಕ್ಕೆ ಬಹಳ ಸಹಾಯಕರಾದರು.

ತುವಯೀಸ್ (ಸ.ಕ್ರಿ.ಶ. ೭೦೫), ಇಸ್ನತ್ ಉಲ್ ಮೈಲ, ಸಾಯಿಬ್ ಕಥಿರ್ (ಸ.ಕ್ರಿ.ಶ. ೬೮೩)— ಮೊದಲಾದವರು ಪುರಾತನ ಮುಸ್ಲಿಂ ಸಂಗೀತಗಾರರಲ್ಲಿ ಪ್ರಸಿದ್ಧರಾದವರು. ಇಬ್‌ನ್‌ಮಿಸ್‌ಜಾ ಎಂಬವನು ಬಿಸಾಂಟೈನ್ ಮತ್ತು ಇರಾನಿಯನ್ ಪದ್ಧತಿಗಳನ್ನು ಅಭ್ಯಾಸ ಮಾಡಿ, ಇರಾನಿಯನ್ ಮತ್ತು ರೋಮನ್ ರಾಗಗಳನ್ನು ಅರಬ್ಬಿ ಪದ್ಧತಿಗೆ ಹೊಂದಿಸಿದನು. ಇವನ ಶಿಷ್ಯನಾದ, ಮಹ್‌ರಿಸ್ ಮಗ ಮುಸ್ಲಿಮ್ ಸಿರಿಯ ಮತ್ತು ಇರಾನ್ ದೇಶಗಳಲ್ಲಿ ಸಂಚಾರಮಾಡಿ, ಅಲ್ಲಿನ ರಾಗಗಳನ್ನು ಅರಬ್ಬಿ ಸಂಗೀತಕ್ಕೆ ತಂದು ಹೊಂದಿಸಿದನು. 'ರಮಲ್' ಎಂಬ ಛಂದಸ್ಸನ್ನು ಇವನೇ ಕಂಡು ಹಿಡಿದವನು ಎಂದು ಪ್ರತೀತಿ. ಇವನೂ ಇಬ್‌ನ್ ಸುರಾಯಿಜ್ ಎಂಬವನೂ ಮೆಕ್ಕಾಪಟ್ಟಣದ ಇಬ್ಬರು ದೊಡ್ಡ ಸಂಗೀತಗಾರರಾಗಿದ್ದರು. ಹಾಗೆಯೇ ಮಾಬದ್ ಮತ್ತು ಮಾಲಿಕ್ ಎಂಬವರು ಮದೀನದ ಪ್ರಸಿದ್ಧ ಸಂಗೀತಗಾರರಾಗಿದ್ದರು. ಅತಾ ಅಬಿರಬಹ್ (ಕ್ರಿ.ಶ. ೭೩೪) ತಷ್‌ರೀಕ್ ಎಂಬ ಹೊಸ ಪದ್ಧತಿ ಯನ್ನು ಪ್ರಚಾರಕ್ಕೆ ತಂದನು. ಇವನ ಹತ್ತಿರ ಇಬ್ಬರು ಗಾಯಕಿಯ ರಿದ್ದರು. ಇವರು ಜಾತ್ರೆಕಾಲದಲ್ಲಿ ನೆರವಿಗೆ ಪ್ರೇಮಗೀತಗಳನ್ನೂ ಪ್ರಗಾಥ ಗಳನ್ನೂ ಹಾಡುತ್ತಿದ್ದರು. ಯೂನುಸ್ ಕಾತೆಬ್ ಎಂಬ ಇರಾನಿ ಒಬ್ಬನು ಮೊತ್ತಮೊದಲು ಅರಬ್ಬಿ ಪದಗಳನ್ನು ಸಂಗ್ರಹಿಸಿ, ಸಂಗೀತದ ಮೇಲೆ ಒಂದು ಗ್ರಂಥ ಬರೆದನು. ಈ ಗ್ರಂಥ ಮುಂದೆ ಬರಲಿದ್ದ ಪ್ರಸಿದ್ಧವಾದ ಅಬುಲ್ ಫರಜಿನ 'ಅಗಾನಿ' ಎಂಬ ಗ್ರಂಥಕ್ಕೆ ಮಾದರಿಯಾಯಿತು. ಯೂನಸನು ಇಬ್‌ನ್ ಸುರಾಯಿಜನೇ ಮೊದಲಾದ ಪ್ರಸಿದ್ಧ ಗುರುಗಳಲ್ಲಿ ಸಂಗೀತ ಅಭ್ಯಾಸಮಾಡಿದ್ದನು. ಇವನು ಕಲೀಫ ಎರಡನೆಯ ವಲೀದಿಗೆ

(ಕ್ರಿ.ಶ. ೭೬೫) ಬಹು ಮೆಚ್ಚಾಗಿದ್ದನು. ಯೂನುಸ್ 'ಕಿತಾಬ್-ಉಲ್-ಕಿಯಾನ್' ಎಂಬ ರಾಗಲಯಗಳ ವಿಷಯವಾದ ಒಂದು ಗ್ರಂಥವನ್ನೂ ಬರೆದಿದ್ದಾನೆ.

ಹಾರೂನ್ ಮತ್ತು ಮಾಮೂನ್ ಅವರ ಆಳಿಕೆಯಲ್ಲಿ ಮುಸ್ಲಿಂ ಸಂಗೀತ ಕಲೆ ತನ್ನ ಮೇಲ್ಮೆಲೆಯನ್ನು ಮುಟ್ಟಿತು. ಹಾರೂನಿನ ಆಸ್ಥಾನದಲ್ಲಿ ಇಬ್ರಾಹಿಮ್ ಮತ್ತು ಇಸ್ಹಾಕ್ ಮೌಸಲಿ ಎಂಬ ಪ್ರಸಿದ್ಧ ಸಂಗೀತಗಾರರಿದ್ದರು. ಇಸ್ಹಾಕ್ (ಕ್ರಿ.ಶ. ೭೬೭-೮೫೦) ಸಂಗೀತದ ಮೇಲೆ ಹಲವು ಪುಸ್ತಕಗಳನ್ನು ಬರೆದಿದ್ದಾನೆ. ಇಸ್ಹಾಕ್ ಮಗ ಹುಸೇನ್ (ಸ.ಕ್ರಿ.ಶ. ೮೭೩), ಬತ್ರೀಕ್ ಮಗ ಯುಹನ್ನ (ಸ.ಕ್ರಿ.ಶ. ೮೧೫) ಇವರು ಗ್ರೀಕಿನಿಂದ ಅರಬ್ಬಿಗೆ ಹಲವು ಸಂಗೀತ ಗ್ರಂಥಗಳನ್ನು ಭಾಷಾಂತರಿಸಿದರು. ಖಲೀಲ್ (ಸ.ಕ್ರಿ.ಶ. ೭೯೧) ಅರಬ್ಬಿ ಭಾಷೆಯಲ್ಲಿ ಮೊದಲನೆಯ ಛಂದಶ್ಶಾಸ್ತ್ರವನ್ನೂ, ನಾದ ಮತ್ತು ತಾನ ವಿಷಯಗಳನ್ನು ಕುರಿತ ಮತ್ತೊಂದು ಶಾಸ್ತ್ರವನ್ನೂ ಬರೆದಿದ್ದಾನೆ. ಇಬ್ನ್-ಫಿರ್ನಾಸ್ (ಸ.ಕ್ರಿ.ಶ. ೮೮೮) ಅರಬ್ಬಿ ಸಂಗೀತವನ್ನು ಸ್ಪೈಯ್ನ್‌ನಲ್ಲಿ ಹರಡುವುದಕ್ಕೆ ಮೊದಲನೆಯವನು. ಮುಸ್ಲಿಂ ದಾರ್ಶನಿಕನಾದ ಅಲ್ಕಿಂದಿ ಕೃತಿ ರಚನೆ, ರಾಗ ನಿಯಮಗಳು, ತಾನ, ವಾದ್ಯಗಳು, ಸಂಗೀತದ ಮೂಲ ತತ್ತ್ವಗಳು, ಸಂಗೀತಕ್ಕೂ ಕವನಕ್ಕೂ ಇರುವ ಸಂಬಂಧ—ಇವೇ ಮೊದಲಾದ ವಿಷಯಗಳ ಮೇಲೆ ಬರೆದಿದ್ದಾನೆ. ಇವನು ಬರೆದ ಮೇಲೆ ಮುಂದೆ ಅನೇಕರು ಇವೇ ವಿಷಯಗಳ ಮೇಲೆ ಬರೆದಿದ್ದಾರೆ. ಮುಸ್ಲಿಂ ದಾರ್ಶನಿಕರಲ್ಲಿ ಅಗ್ರಗಣ್ಯನಾದ ಫಾರಾಬೀ ಘನ ಸಂಗೀತಗಾರನೂ ಆಗಿದ್ದನು. ಇವನು ಗ್ರೀಕ್ ಸಂಗೀತದ ಮೇಲೆ ಒಂದು ವಿಮರ್ಶೆ ಬರೆದಿದ್ದಾನೆ. ಇವನ ಗ್ರಂಥಗಳು ಈಗಲೂ ಅವಗಾಹನೆಗೆ ಯೋಗ್ಯವಾಗಿವೆ. ಇವನ 'ಕಿತಾಬ್-ಉಲ್-ಮೂಸೀಕೀ' ಎಂಬ ಗ್ರಂಥದಿಂದ ಸಂಗೀತಕಲಾಭಿವೃದ್ಧಿಗೆ ಬಹು ಸಹಾಯವಾಗಿದೆ. ಇವನ ತರುವಾಯ ಬಂದ ಪ್ರಸಿದ್ಧನಾದ ಇಬ್ನ್‌ಸೀನ ಎಂಬ ದಾರ್ಶನಿಕನು ಸಂಗೀತಗಾರನಾಗಿ, 'ಉಸ್ತಾದ್' ಎಂಬ ಬಿರುದು ಪಡೆಯದಿದ್ದರೂ, ಉತ್ತಮ ಸಂಗೀತ ತತ್ತ್ವಜ್ಞನಾಗಿದ್ದನು. ಇವನು ಸಂಗೀತ

ತತ್ವದ ಮೇಲೆ ಬರೆದಿರುವ 'ಷಿಫ಼ಾ' ಮತ್ತು 'ನಿಜಾತ್' ಎಂಬ ಗ್ರಂಥಗಳು ಬೆಲೆಯುಳ್ಳವು. ಸರ್‌ಖಸಿನ ಮಹಮ್ಮದ್ ಮಗ ಅಹ್‌ಮದ್, ತಲ್‌ಹನ ಮಗ ಮನ್‌ಸೂರ್, ಸಿರಿಯದ ಕುಅರನ ಮಗ ಸಾಬಿತ್, ರೆಯ್ಯಿನ ಸ್ಕರಿಯನ ಮಗ ಮಹಮ್ಮದ್—ಮೊದಲಾದವರೂ ಸಂಗೀತ ತತ್ವದ ಮೇಲೆ ಬರೆದಿದ್ದಾರೆ. ಅಬುಲ್ ವಫ಼ಾ ಎಂಬ ಇರಾನಿ ಗಣಿತಜ್ಞನು ತಾನ ಶಾಸ್ತ್ರದ ವಿಷಯವಾಗಿ ಬರೆದಿದ್ದಾನೆ. 'ಇಖ್‌ವಾನ್-ಉಸ್-ಸಫ಼ಾ' ಎಂಬ ವಿಶ್ವಕೋಶದಲ್ಲಿಯ ಸಂಗೀತ ಪ್ರಕರಣದಲ್ಲಿ ಬುರುಡೆ ಮೊದಲಾದ ಒಳ ಪೊಳ್ಳು ವಸ್ತುಗಳ ಅನುರಣನ ಗುಣದ ವಿಷಯವಾಗಿ ಹೇಳಿದೆ. ಖಾರಸ್ಮಿಯ ಮಗ ಮಹಮ್ಮದ್ 'ಮಿಫ಼್ತು-ಹುಲ್-ಉಲುಮ್' ಎಂಬ ಗ್ರಂಥದಲ್ಲಿಯೂ, ಇಬ್‌ನ್-ಸ್ಹಾಯಿಲ 'ಸಂಗೀತದ ಪರ್ಯಾಪ್ತತೆ' ಎಂಬ ಗ್ರಂಥದಲ್ಲಿಯೂ ಇದೇ ವಿಷಯವನ್ನು ಪ್ರಸ್ತಾಪಿಸಿದ್ದಾರೆ. ಹೀಗೆ ೧೧ನೆಯ ಶತಮಾನದ ವೇಳೆಗೇ ಸಂಗೀತ ವಿಷಯದಲ್ಲಿ ಹಲವು ಪ್ರಸಿದ್ಧ ಶಾಸ್ತ್ರ ಗ್ರಂಥಗಳೂ, ಗೀತಾಸಂಗ್ರಹಗಳೂ ಹುಟ್ಟಿಕೊಂಡು ಸಂಗೀತ ಶ್ರೀಮಂತರ ಭೋಗ ಸಾಧನ ಮಾತ್ರವಾಗಿದ್ದದ್ದು ತಪ್ಪಿ, ವಿದ್ವಾಂಸರಿಗೂ ಪಂಡಿತರಿಗೂ ಅಭ್ಯಾಸ ಯೋಗ್ಯವಾದ ಘನ ಪದವಿಯನ್ನು ಪಡೆಯಿತು. ಇಮಾಮ್ ಘಸ್ಸಾಲಿ ಎಂಬವನು ಸಾಧು, ಮತ್ತು ಅಸಾಧು (ನಿಷಿದ್ಧ) ಸಂಗೀತದ ವಿಷಯವಾಗಿ ಬರೆದು, ಉಚ್ಚ ಸಂಗೀತ ಹೇಗೆ ಅಧ್ಯಾತ್ಮ ಆನಂದಕ್ಕೆ ಕಾರಣವಾಗುತ್ತದೆಂಬುದನ್ನು 'ಅಹ್ಯ-ಉಲ್-ಉಲೂಮ್' ಎಂಬ ತನ್ನ ಗ್ರಂಥದಲ್ಲಿ ಪ್ರತಿಪಾದಿಸಿದ್ದಾನೆ. ಸಂಗೀತ ಶಾಸ್ತ್ರದ ಮೇಲೆ ಅರಬ್ಬಿಯಲ್ಲಿ ಬಹು ಮುಖ್ಯವಾದ ಗ್ರಂಥವೆಂದರೆ ಅಬುಲ್ ಫ಼ರಜ್ ಇಸ್ಪಹಾನಿಯ ೨೧ ಪ್ರಕರಣಗಳ ಗ್ರಂಥ. ಇದರಲ್ಲಿ ೧೦೦ ರಾಗಗಳ ಮೂಲ, ಸ್ವಭಾವ, ವ್ಯಾಪನೆ—ಮೊದಲಾದ ವಿಷಯಗಳ ವಿಸ್ತಾರ ಪ್ರಸ್ತಾವವಿದೆ. ಕಲೀಫ಼ ಮುತವಕ್ಕಲ್‌ನ ಮಗ ಅಬೂ ಆಯಿಷ ೩೦೦ ಹಾಡುಗಳನ್ನು ಕಟ್ಟಿದ್ದಾನೆ.

ಇಬ್‌ನ್ ಬಾಜ್ಜಾ (ಸ.ಕ್ರಿ.ಶ. ೧೧೩೮), ಇಬ್‌ನ್-ಉರ್-ರುಷ್‌ದ್ (ಕ್ರಿ.ಶ. ೧೧೯೮) ಇಬ್‌ನ್‌ಸಾಬಿರಿ (ಸ.ಕ್ರಿ.ಶ. ೧೨೬೯), ಯಾಹ್ಯ-ಅಲ್-

ಖುದುಜ್—ಇವರೇ ಮೊದಲಾದ (ಸ್ಪೈಯ್ನಿನ) ದಾರ್ಶನಿಕರು ಪ್ರಸಿದ್ಧ ಸಂಗೀತ ಶಾಸ್ತ್ರ ಗ್ರಂಥಕರ್ತರೂ ಆಗಿದ್ದಾರೆ. ಇಬ್ನ್ ಆಬೆದ್ ರಬ್ಬೀಹಿ (ಸ.ಕ್ರಿ.ಶ. ೯೪೦) ಪ್ರಸಿದ್ಧ ಸಂಗೀತಗಾರರ ಜೀವನ ಚರಿತ್ರೆಯನ್ನು ಬರೆದು, ಸಂಗೀತದಿಂದ ಉಂಟಾಗುವ ಸತ್ಪರಿಣಾಮವನ್ನೂ, ಸಂಗೀತ ನಿಷಿದ್ಧವಲ್ಲವೆಂಬುದನ್ನೂ ಪ್ರತಿಪಾದಿಸಿದ್ದಾನೆ. ಅಲ್‌ಮಜ್ರಿತ್ (ಕ್ರಿ.ಶ. ೧೦೦೭), ಕಿರ್ಮಾನಿ (ಸ. ಕ್ರಿ. ಶ. ೧೦೬೬), ಮಹಮ್ಮದ್ ಹದ್ದಾದ್ (ಸ.ಕ್ರಿ.ಶ. ೧೦೬೫), ಮೊದಲಾದವರೂ ಆ ಪಶ್ಚಿಮ ದೇಶದ ಪ್ರಸಿದ್ಧ ಗ್ರಂಥಕರ್ತರು. ಅಬುಸ್‌ಸಹೆತ್ (ಸ.ಕ್ರಿ.ಶ. ೧೧೩೪), ಇಬ್ನ್-ಉಲ್-ಹಯಿಥೆಮ್ (ಕ್ರಿ.ಶ. ೧೦೩೯), ಆಲಮುದ್ದೀನ್ ಕಯ್‌ಸರ್ (ಕ್ರಿ.ಶ. ೧೨೫೧) ಮೊದಲಾದವರು ಈಜಿಪ್ಟಿನ ಪ್ರಸಿದ್ಧ ಸಂಗೀತ ಗ್ರಂಥಕಾರರು.

ಬಗ್‌ದಾದ್, ಕೈರೋ, ದಮಾಸ್ಕಸ್, ಸೆವಿಲ್, ಗ್ರ್ಯಾನಡ—ಮೊದಲಾದ ಮುಖ್ಯ ಪಟ್ಟಣಗಳಲ್ಲೆಲ್ಲಾ ಸಂಗೀತ ಶಾಲೆಗಳಿದ್ದುವು. ಕಲೀಫ಼ ಅಬ್ದುರ್‌ರಹ್‌ಮಾನನು ಕಾರ್ಡೋವದಲ್ಲಿ ಒಂದು ಪ್ರಸಿದ್ಧ ಸಂಗೀತ ಶಾಲೆಯನ್ನು ತೆರೆದು, ಹಲವು ಪ್ರಸಿದ್ಧ ಸಂಗೀತಗಾರರನ್ನು ತಯಾರಿಸಿದನು.

ಛಂಗಿಸ್‌ಖಾನನ ಕೈಕೆಳಗೆ ಮಂಗೋಲರು ಮಧ್ಯ ಮತ್ತು ಪಶ್ಚಿಮ ಏಷ್ಯಕ್ಕೆ ದಾಳಿಯಿಟ್ಟಾಗ ಕೊಂಚಕಾಲ ಕಲಾಭಿವೃದ್ಧಿಗೆ ಅಡಚಣೆಯಾದರೂ, ಅವರು ಅಲ್ಲಿ ನೆಲೆಯಾಗಿ ನಿಂತಾಗ ಕ್ರಮೇಣ ಪ್ರಗತಿಗೆ ಆರಂಭವಾಯಿತು. ಈ ಕಾಲದಲ್ಲಿ ಅರಬ್ಬಿ ಸಂಗೀತದ ಮೇಲೆ ಮಂಗೋಲ್ ಸಂಗೀತದ ಪ್ರಭಾವವೂ ಬಿತ್ತು. ಈ ಕಾಲದ ಮುಖ್ಯ ಸಂಗೀತಗಾರರು:—ಪ್ರಸಿದ್ಧ ಗಣಿತಜ್ಞ ನಸೀರುದ್ದೀನ್ ತೂಸಿ; 'ದುವ್ರತುತ್‌ತಾಜ್' ಎಂಬ ಗ್ರಂಥದ ಕರ್ತೃವಾದ ಷಮ್-ಸುದ್ದೀನ್ ಮಹಮ್ಮದ್ (ಕ್ರಿ.ಶ. ೧೩೧೦); 'ನಫಾಯಿಸ್ ಉಲ್-ಫ಼ುನೂನ್' ಎಂಬ ಗ್ರಂಥದ ಕರ್ತೃವಾದ ಆಮುಲಿನ ಮಹಮ್ಮದ್; ಐದು ಸಂಗೀತ ಗ್ರಂಥಗಳನ್ನು ಬಿಟ್ಟುಹೋಗಿರುವ ಅಬ್ದುಲ್‌ಕಾದಿರ್ ಗೈಬಿ (ಕ್ರಿ.ಶ. ೧೪೩೫); 'ರಿಸಾಲ-ಏ-ಫ಼ತ್‌ಹೀಯ' ಎಂಬ ಗ್ರಂಥದ ಕರ್ತೃ

ವಾದ, ಅಬ್ದುಲ್‌ಹಮೀದ್ ಲಾದಿಕಿಯ ಮಗ ಮಹಮ್ಮದ್ (ಕ್ರಿ.ಶ. ೧೫೧೨), ಮೊದಲಾದವರು. ಮುಬಾರಕ್‌ಷಾ, ಖಿಸ್ಲೀ ಮಗ ಅಮರ್ (ಕ್ರಿ.ಶ. ೧೩೯೭) ಇಬ್ನ್–ಏ–ಫ್ಲನಾರಿ, ಷಮ್‌ಸುದ್ದೀನ್ ಜಾಮಿ, ಅಲ್‌ಲಸ್ಕೀಕಿ (ಸ.ಕ್ರಿ.ಶ. ೧೪೪೫), ಜಲಾಲುದ್ದೀನ್‌ದವಾನಿ–ಮೊದಲಾದವರೂ ಈ ಕಾಲದವರು.

**ಇಂಡಿಯ.** ಸಂಗೀತ ಪ್ರಿಯನಾಗಿದ್ದ ಘಸ್ನೀಮಹಮೂದನು ಇಂಡಿಯಕ್ಕೆ ದಂಡೆತ್ತಿ ಬಂದಾಗ, ಅವನ ಜತೆಯಲ್ಲಿ ಬಂದಿದ್ದ ಸೂಫೀ ಸಾಧುಗಳು ಇಲ್ಲಿಯೆ ಉಳಿದು, ಸಿಂಧು ಪಂಜಾಬ್ ಮೊದಲಾದ ಉತ್ತರ ಇಂಡಿಯದ ಹಲವೆಡೆಗಳಲ್ಲಿ ನೆಲಸಿದರು. ಇವರು ಸಂಗೀತಕ್ಕೆ ಭಕ್ತಿ ಭಾವವನ್ನು ತಂದು, ಅದನ್ನು ಮುಸ್ಲಿಂ ಮತ್ತು ಹಿಂದೂ ಜನ ಸಾಮಾನ್ಯಕ್ಕೆ ಒಂದೇ ರೀತಿ ಆದರಣೀಯವಾಗುವಂತೆ ಬೆಳಸಿದರು.

ಇಂಡಿಯದ ಮುಸ್ಲಿಂ ದೊರೆಗಳಲ್ಲಿ ಅಲ್ಲಾವುದ್ದೀನ್ ಖಿಲ್ಜಿ, ಡೆಲ್ಲಿಯ ಮುಬಾರಕ್, ಮಹಮ್ಮದ್ ಷಹ ತೊಗಲಕ್—ಮೊದಲಾದವರು ಸಂಗೀತ ಕಲೆಗೆ ಆಶ್ರಯದಾತರಾಗಿದ್ದರು. ನಾಸ್ಸಿರ್‌ಖಾನ್ ಬಹ್‌ರೋಸ್, ಚಂಗೀ, ಅಮೀರ್‌ಖುಸ್ರೊ, ಮೊದಲಾದವರು ಅಲ್ಲಾವುದ್ದೀನ್ ಖಿಲ್ಜಿಯ ಆಸ್ಥಾನ ಸಂಗೀತಗಾರರಾಗಿದ್ದರು. ಅಮೀರ್ ಖುಸ್ರೊ ಹಿಂದೂ ಮತ್ತು ಇರಾನಿ ರಾಗಗಳನ್ನು ಹೊಂದಿಸಿ ಅನೇಕ ಹೊಸ ರಾಗ (ಮಟ್ಟು)ಗಳನ್ನು ಕಂಡುಹಿಡಿದನು. ಇವನೇ ಸಿತಾರ್ ವಾದ್ಯವನ್ನು ಕಂಡುಹಿಡಿದವನೆಂದು ಪ್ರತೀತಿ ಇದೆ. ಮುಸ್ಲಿಂ ದೊರೆಗಳು ಅರಬ್ಬಿ ಮತ್ತು ಇರಾನಿ ಸಂಗೀತಗಾರರಿಗೆ ಮಾತ್ರವಲ್ಲದೆ ಹಿಂದೂ ಸಂಗೀತಗಾರರಿಗೂ ಆಶ್ರಯವಿತ್ತುದ್ದರಿಂದ, ಈ ಮೂವರ ಸಂಪರ್ಕ ಸಮ್ಮೇಲನದಿಂದ ಈಗ 'ಹಿಂದೂಸ್ತಾನಿ' ಎಂದು ಕರೆಯುವ ಸಂಗೀತ ಪದ್ಧತಿ ಹುಟ್ಟಿಕೊಂಡಿತು. ಇದು ಹಿಂದುಗಳ ಸಂಗೀತ ಪದ್ಧತಿಯನ್ನು ಆಧಾರವಾಗಿ ಅವಲಂಬಿಸಿ ತುರ್ಕಿ, ಅರಬ್ಬಿ, ಇರಾನಿ ರಾಗಗಳನ್ನು ಯೋಗ್ಯ ರೀತಿಯಲ್ಲಿ ಹೊಂದಿಸಿಕೊಂಡಿದೆ. ಹಿಂದೂಸ್ತಾನಿ ಸಂಗೀತ ಮೊಗಲ್ ದೊರೆಗಳ ಕಾಲದಲ್ಲಿ—ತನ್ನ ಮೇಲ್ಮೆಲೆಯನ್ನು ಮುಟ್ಟಿತು.

ಈ ಕಾಲದಲ್ಲಿ ಹಿಂದೂಸ್ತಾನಿ ಸಂಗೀತಕ್ಕೂ ದಕ್ಷಿಣ ಸಂಗೀತಕ್ಕೂ ನಿಕಟಸಂಪರ್ಕವೇರ್ಪಟ್ಟಿತು. ಅಕ್ಬರ್, ಬಿಜಾಪುರದ ಇಬ್ರಾಹಿಮ್ ಆದಿಲ್‌ಷಾ ಮೊದಲಾದವರು ಈ ಸಂಪರ್ಕ ತರುವುದರಲ್ಲಿ ಮುಖ್ಯ ಭಾಗ ವಹಿಸಿದ್ದರು. ಅಕ್ಬರ್ ೩೦೦ ಇರಾನಿ ರಾಗಗಳನ್ನು ಹಿಂದೂ ಸಂಗೀತಕ್ಕೆ ಅಳವಡಿಸಿದ್ದನು. ಇಬ್ರಾಹಿಮ್ ಅನೇಕ ಹೊಸ ರಾಗ ಗಳನ್ನು ಕಂಡುಹಿಡಿದು, ನವ್‌ರಸ್ ಎಂಬ ಒಂದು ಸಂಗೀತ ಗ್ರಂಥವನ್ನು ಬರೆದಿದ್ದಾನೆ. ಇಬ್ಬರ ಆಸ್ಥಾನದಲ್ಲೂ ಹಲವು ಪ್ರಸಿದ್ಧ ಸಂಗೀತ ವಿದ್ವಾಂಸರಿದ್ದರು. ಹರಿದಾಸ ಸ್ವಾಮಿಯ ಶಿಷ್ಯನೂ, ಪ್ರಸಿದ್ಧ ಸೂರ್ ದಾಸನ ಮಿತ್ರನೂ, ತನ್ನ ಕಾಲದಲ್ಲಿ ಅತ್ಯಂತ ಪ್ರಸಿದ್ಧನೂ ಆದ ತಾನ್ ಸೇನ್ ಎಂಬ ಸಂಗೀತ ವಿದ್ವಾಂಸನು ಅಕ್ಬರನ ಆಸ್ಥಾನದಲ್ಲಿದ್ದನು. ಅಕ್ಬರ್ ಇವನಿಗೆ ಒಮ್ಮೆ ಒಂದು ಲಕ್ಷ ರೂಪಾಯಿ ಮೆಚ್ಚಿಗೆ ಕೊಟ್ಟನಂತೆ. ಜಹಾಂಗೀರನು ಅಕ್ಬರನಷ್ಟು ಸಂಗೀತದಲ್ಲಿ ಆಸಕ್ತನಲ್ಲದಿದ್ದರೂ ತಕ್ಕ ಮಟ್ಟಿಗೆ ಸಂಗೀತಗಾರರಿಗೆ ಆಶ್ರಯ ಕೊಡುತ್ತಿದ್ದನು.

ಪೂರ್ವ ಪ್ರಾಂತಗಳಲ್ಲಿ, ಜೌನ್‌ಪೂರಿನ ಸುಲ್ತಾನ್ ಹುಸೇನನು (೧೫ನೆಯ ಶತಮಾನ) ಒಳ್ಳೆಯ ಸಂಗೀತ ಪ್ರಿಯನಾಗಿದ್ದು, ಸಂಗೀತ ಗಾರರಿಗೆ ಆಶ್ರಯಕೊಟ್ಟನು. ಅಲ್ಲದೆ, ಖಿಯಾಲ್ ಎಂಬ ಗಾನ ರೀತಿಯನ್ನೂ ಜೌನ್‌ಪೂರಿ, ಹುಸೇನ್ ತೋಡಿ, ಕನ್‌ಹ್ರ—ಮೊದಲಾದ ರಾಗಗಳನ್ನು ಕಂಡುಹಿಡಿದನು. ಗುಜರಾತಿನ ಸುಲ್ತಾನ್ ಬಹಾದೂರಿನ (ಕ್ರಿ.ಶ. ೧೫೨೬–೩೬) ಆಸ್ಥಾನ ವಿದ್ವಾಂಸನಾದ ನಾಯಿಕ್ ಬೇಯ್‌ಜು ಬಹಾದುರ್ ತೋಡಿ ಎಂಬ ರಾಗವನ್ನು ಕಂಡುಹಿಡಿದನು. ಕಾಶ್ಮೀರ ದಲ್ಲಿ ಸೈನುಲಾಬೆದೀನ್ ದೊರೆ ಹಲವು ಇರಾನಿ, ಮಧ್ಯ ಏಷ್ಯಾ ಮತ್ತು ಹಿಂದೂ ಸಂಗೀತಗಾರರಿಗೆ ಆಶ್ರಯಕೊಟ್ಟನು. ಷಾಜಹಾನನು, ಸಾಮಾನ್ಯವಾಗಿ ಚಿತ್ರಕಲೆಯಲ್ಲಿ ಪ್ರೀತಿ ಇಲ್ಲದಿದ್ದರೂ, ಬಹುದೊಡ್ಡ ಸಂಗೀತ ಪ್ರಿಯನಾಗಿದ್ದು ಹಲವು ಸಂಗೀತಗಾರರನ್ನು ಆಸ್ಥಾನದಲ್ಲಿಟ್ಟು ಕೊಂಡಿದ್ದನು. ತಾನೂ ಹಲವು ವೇಳೆ ಇವರೊಡಗೂಡಿ ಹಾಡುತ್ತಿ ದ್ದನು. ಒಮ್ಮೆ ತನ್ನ ಆಸ್ಥಾನ ವಿದ್ವಾಂಸನಾದ ಕವಿರಾಜ ರಾಮ ದಾಸನನ್ನು ಚಿನ್ನದಲ್ಲಿ ತೂಗಿ ಮೆಚ್ಚಿಗೆ ಕೊಟ್ಟನಂತೆ. ಸಂಗೀತಕ್ಕೆ

ಉದಾರಾಶ್ರಯವಿತ್ತ ಮೊಗಲ್ ದೊರೆಗಳಲ್ಲಿ ಮಹಮ್ಮದ್‌ಷಹ ಕೊನೆಯವನು. ಮೊಗಲಾಯರು ಬಿದ್ದ ನಂತರ ಅವರ ಆಸ್ಥಾನದ ವಿದ್ವಾಂಸರೆಲ್ಲ ಔಧ್ ರಾಜಾಸ್ಥಾನಕ್ಕೆ ಹೋಗಿ ಆಶ್ರಯಪಡೆದರು. ಈ ದೊರೆಗಳೂ ಕೊನೆಗೊಂಡ ಮೇಲೆ ಹಿಂದೂಸ್ತಾನಿ ಸಂಗೀತ ಇಳಿಗಾಲಕ್ಕಿಟ್ಟುಕೊಂಡಿತು. ಈಗ ಮೈಸೂರ್, ಬರೋಡ, ಗ್ವಾಲಿಯರ್, ರಾಮ್‌ಪುರ್ ಮೊದಲಾದ ದೇಶೀಯ ರಾಜ ಮನೆತನದವರು ಇದಕ್ಕೆ ಆಶ್ರಯದಾತರಾಗಿ ಉತ್ತೇಜನ ಕೊಡುತ್ತಿದ್ದಾರೆ.

ಮುಸ್ಲಿಮರ ಸಂಗೀತ ವಾದ್ಯಗಳು ದೇಶಾನುಗುಣವಾಗಿ ಬೇರೆ ಬೇರೆಯಾಗಿವೆ. ಅತ್ಯಂತ ಪ್ರಾಚೀನ ಅರಬ್ಬಿ ತಂತೀವಾದ್ಯ ಎರಡು ತಂತಿಯ ಪಿಟೀಲು. ತಂಬೂರ್, ಕಿತಾರ್, ಮಾವಾಬ್, ನಕ್ಕಾರ, ಸುಂಜ್, ಕಿಸಾ, ತಬಲ್, ಕಾನೂನ್, ಉರ್ಗನುನ್, ಸಿಂತಾರ್, ನಯ್ (ಕೊಳಲು)—ಇವೇ ಮೊದಲಾದ ವಾದ್ಯಗಳು ಮುಸ್ಲಿಮರಲ್ಲಿ ಹಿಂದಿನಿಂದಲೂ ರೂಢಿಯಲ್ಲಿದ್ದುವು. ಈ ಒಂದೊಂದರಲ್ಲೂ ಅನೇಕ ಭೇದಗಳಿವೆ. ತಂತೀ ವಾದ್ಯಗಳಲ್ಲಿ ಎರಡು ತಂತಿಯಿಂದ ನೂರೆಂಟು ತಂತಿಗಳುಳ್ಳ ವಾದ್ಯಗಳಿವೆ. ಇರಾನಿ ವಾದ್ಯಗಳಲ್ಲಿ ಮುಖ್ಯವಾದುವು: ಚಂಗ್, ಬರ್ಬತ್, ಸಂಜ್, ದುಫ್, ನಯ್ (ಕೊಳಲು), ಮೊದಲಾದುವು. ಇಂಡಿಯದಲ್ಲಿ ಮುಖ್ಯವಾದುವು: ಸಿತಾರ್, ಸೆನಾಯ್, (ಇದನ್ನು ಅವಿಸಿನ್ನ ಕಂಡು ಹಿಡಿದನೆಂದು ಪ್ರತೀತಿ), ನಕ್ಕಾರ, ತಬಲ, ದಿಲ್‌ರುಬಾ ಮೊದಲಾದುವು; ಇವುಗಳಲ್ಲಿ ಹಲವು ಮುಸ್ಲಿಮರು ಬರುವುದಕ್ಕೆ ಮೊದಲೇ ಇದ್ದುವು. ಮಹಮ್ಮದ್‌ಷಾವಿನ ಕಾಲದಲ್ಲಿದ್ದ ಸಾರಂಗಿ ಖಾನ್ ಸಾರಂಗಿಯನ್ನು ಕಂಡುಹಿಡಿದನು. ಇದು ವೀಣೆ, ಸಿತಾರ್ ಮತ್ತು ತಂಬೂರಿಗಳ ಮಿಶ್ರಣ ವಾದ್ಯವೆನ್ನಬಹುದು.

ಮುಸ್ಲಿಂ ಸಂಗೀತ ಇಂಡಿಯದಲ್ಲಿ ಮೊದಲು ಹಿಂದೂ ಸಂಗೀತದ ಪ್ರಭಾವಕ್ಕೆ ಸಿಕ್ಕಿ ಬೆಳೆದುಕೊಂಡು ಬಂದಹಾಗೆಯೇ ಈಗ ಇರಾನ್, ತುರ್ಕಿ, ಅರೇಬಿಯಗಳಲ್ಲಿ ಯೂರೋಪ್ ಸಂಗೀತದ ಪ್ರಭಾವಕ್ಕೆ ಸಿಕ್ಕಿ ಬೆಳೆದುಕೊಂಡು ಬಂದಿದೆ. ಅರಬ್ಬಿ ಸಂಗೀತ ರಾಗ ಅಥವಾ ಲಯಕ್ಕಿಂತ ತಾನದ ಕಡೆಗೇ ಒಲೆಯುತ್ತದೆ. ತುರ್ಕಿ ಮತ್ತು ಇರಾನಿ ಸಂಗೀತ ರಾಗ

ಅಥವಾ ಲಯದಿಂದ ಕೂಡಿದ್ದು ತುರ್ಕೀ ಗಾಯಕರು ಅನೇಕ ವೇಳೆ ಪಕ್ಕವಾದ್ಯವಿಲ್ಲದೆಯೇ ಹಾಡುತ್ತಾರೆ.

## ವಾಸ್ತು ಶಿಲ್ಪ

ಮುಸ್ಲಿಂ ವಾಸ್ತು ಶಿಲ್ಪ ಅರೇಬಿಯದಲ್ಲಿ ಮೊದಲಾಗಿ ಮೆಸೊಪೊಟೇಮಿಯ, ಸಿರಿಯ, ಇರಾನ್, ಉತ್ತರ ಆಫ್ರಿಕ, ಸ್ಪೈನ್, ಮಧ್ಯಏಷ್ಯ— ಮೊದಲಾದೆಡೆಗಳಲ್ಲೆಲ್ಲ ಹರಡಿ ಬೆಳೆದು, ಕೊನೆಗೆ ಇಂಡಿಯದಲ್ಲಿ ತನ್ನ ಮೇಲ್ಮೆಯನ್ನು ಮುಟ್ಟಿತು. ಮುಸ್ಲಿಂ ವಾಸ್ತು ಶಿಲ್ಪ ಮಸೀದಿಗಳ ನಿರ್ಮಾಣದಿಂದ ಆರಂಭವಾಗುತ್ತದೆ. ಮಹಮ್ಮದ್ ಪೈಗಂಬರನು ಕ್ರಿ.ಶ. ೬೨೨ರಲ್ಲಿ ಮದೀನಕ್ಕೆ ಬಂದೊಡನೆಯೇ, ಅಲ್ಲಿ ತನ್ನ ಅನುಯಾಯಿಗಳ ಸಹಾಯದಿಂದ ಒಂದು ಮಸೀದಿಯನ್ನು ಕಟ್ಟಿದನು. ಹೊಟ್ಟೆಪಾಡಿಗೇ ಕಷ್ಟವಾಗಿದ್ದ ಆ ಕಾಲದಲ್ಲಿ ಕಟ್ಟಿದ ಮಸೀದಿ ಬಹು ಸಾಮಾನ್ಯ ಕಟ್ಟಡವಾಗಿ, ಬೋಳು ಬೋಳಾಗಿ, ಮಣ್ಣಿನ ಗೋಡೆಗಳೂ, ತಾಳೆಯ ಸೋಗೆ ಮತ್ತು ಮಣ್ಣಿನ ಮಾಳಿಗೆಯೂ ಉಳ್ಳ ಒಂದು ಸಣ್ಣ ಗುಡಿಸಲಾಗಿತ್ತು. ಮಹಮ್ಮದನೂ ಅವನ ಸಂಸಾರವೂ ವಾಸಮಾಡುತ್ತಿದ್ದ ಗುಡಿಸಲುಗಳೂ ಮಸೀದಿಗೆ ಸೇರಿದಂತೆಯೇ ಇದ್ದುವು. ಅವನ ಮರಣಾನಂತರ ಆ ಗುಡಿಸಲುಗಳಲ್ಲೊಂದರಲ್ಲಿಯೇ ಅವನನ್ನು ಹುಗಿದು ಗೋರಿಮಾಡಿದರು.

ಮಸೀದಿ ಕೇವಲ ಪ್ರಾರ್ಥನಾಲಯ ಮಾತ್ರವಲ್ಲದೆ, ವಿದ್ಯಾಶಾಲೆ, ಪುಸ್ತಕ ಭಂಡಾರ, ಸತ್ರ ಮೊದಲಾದುವಾಗಿಯೂ ಉಪಯೋಗಪಟ್ಟು, ಮುಸ್ಲಿಂ ಜೀವನಕ್ಕೆ ಕೇಂದ್ರ ಪ್ರಾಯವಾಗಿತ್ತು. ಈ ಕಾರಣದಿಂದ ಕ್ರಮೇಣ ಮುಸ್ಲಿಂ ವಾಸ್ತುಶಿಲ್ಪದ ವೈಭವವೆಲ್ಲ ಈ ಮಸೀದಿಗಳಲ್ಲಿ ಕಂಡುಬರಲು ಅವಕಾಶವಾಯಿತು. ಈಗ ಮಸೀದಿಗಳಲ್ಲಿ ಕಂಡುಬರುವ ಮುಸ್ಲಿಂ ವಾಸ್ತುಶಿಲ್ಪದ ವೈಶಿಷ್ಟ್ಯಗಳೆಂದರೆ—ಅವುಗಳಲ್ಲಿ ಯಾವ ವಿಧವಾದ ಪ್ರತಿಮಾ ಚಿತ್ರಗಳಾಗಲಿ ವಿಗ್ರಹಗಳಾಗಲಿ ಇಲ್ಲದೆ, ಸಾಮಾನ್ಯವಾಗಿ ಪ್ರಾರ್ಥನಾಮಂದಿರಗಳೂ ವೇದಿಕೆಗಳೂ ಇದ್ದು, ಕಮಾನುಗಳೂ ಮಿನಾರುಗಳೂ (ಗುಮಟಗಳೂ) ಲಿಪಿರೇಖಾ ಚಿತ್ರಗಳೂ ಕಂಡುಬರುವುದು. (ಮಿನಾರ್ ಅಥವಾ ಮನಾರ್ ಎಂದರೆ—ಜ್ಯೋತಿರ್ಮಂದಿರ

ಅಥವಾ ಅಗ್ನಿಮಂದಿರ ಎಂದರ್ಥ). ಮಸೀದಿಗಳಲ್ಲಿಯ ಚಿತ್ರಗಳೆಲ್ಲವೂ ಮನುಷ್ಯ ಜೀವನಕ್ಕೆ ಸಂಬಂಧಪಡದೆ, ಸಾಂಕೇತಿಕ ಚಿತ್ರಗಳಾಗಿದ್ದುವು. ಮುಸ್ಲಿಮರ ಈ ತರದ ಕಟ್ಟಿನಿಂದ ಅವರ ವಾಸ್ತುಶಿಲ್ಪ ಇತರ ಜನಾಂಗದವರ ರೀತಿಯಿಂದ ಬೇರೆಯಾಗಿ ಬೆಳೆಯಿತು. ಸುಂದರ ಲಿಪಿಯಲ್ಲಿ ಕೆತ್ತಿದ ಕುರಾನ್ ವಚನಗಳೂ, ಮರದಲ್ಲಿ ಅಥವಾ ಅಮೃತಶಿಲೆಯಲ್ಲಿ ಕೊರೆದ ರೇಖಾಚಿತ್ರಗಳೂ ಸಸ್ಯಚಿತ್ರಗಳೂ, ಬಗೆಬಗೆಯ ಬಣ್ಣಗಳ ಕಲ್ಲುವರಿಸೆಗಳ ಕಟ್ಟಡವೂ, ನುಣ್ಣನೆಯ ಹೊಳಪು ಬಿಲ್ಲೆಗಳ ಹೊವಕೆಯೂ ಮುಸ್ಲಿಂ ಚಿತ್ರ ಪದ್ಧತಿಯಲ್ಲಿ ಮುಖ್ಯವಾದುವು. ಆದರೆ, ಈ ಕಟ್ಟುಪಾಡುಗಳೆಲ್ಲ ಮಸೀದಿ ಮತ್ತು ಇತರ ಪವಿತ್ರ ಸ್ಥಳಗಳಿಗೆ ಮಾತ್ರ ಅನ್ವಯಿಸುತ್ತವೆ. ಅರಮನೆ ಮೊದಲಾದ ಕಟ್ಟಡಗಳಲ್ಲಿ, ಅದರಲ್ಲೂ ಇರಾನ್ ಮತ್ತು ಸ್ಪೈಯ್‌ನ್‌ನಲ್ಲಿ, ಮನುಷ್ಯರ ಮತ್ತು ಪ್ರಾಣಿಗಳ ಚಿತ್ರಗಳು ಇದ್ದುವು. ಅಲ್ಲದೆ, ಪ್ರತಿಮೆಗಳು ಕೂಡ ಇರುತ್ತಿದ್ದುವು.

ಶಿಲ್ಪಪ್ರಾಮುಖ್ಯತೆಯಲ್ಲಿ ಮಸೀದಿಗಳಾದ ಮೇಲೆ ರಾಜರ, ಸಾಧುಗಳ ಮತ್ತು ಇತರ ಪ್ರಸಿದ್ಧ ಪುರುಷರ ಗೋರಿಗಳು ಬರುತ್ತವೆ. ಇವಾದ ನಂತರ ಅರಮನೆ, ಕೋಟೆ, ಸಾರ್ವಜನಿಕ ಕಟ್ಟಡಗಳು ಬರುತ್ತವೆ. ಮುಸ್ಲಿಂ ವಾಸ್ತುಶಿಲ್ಪ ಆದಿ ಮುಸ್ಲಿಮರಾದ ಅರಬ್ಬಿಯವರದು ಮಾತ್ರವಲ್ಲ; ಆಫ್ರಿಕ, ಯೂರೋಪ್ ಮತ್ತು ಏಷ್ಯಾಖಂಡಗಳ ಹಲವೆಡೆಗಳ ಮುಸ್ಲಿಮರಿಂದ ಒಟ್ಟು ಬೆಳೆದು ಬಂದದ್ದು.

ಪೈಗಂಬರನ ಮರಣಾನಂತರ ಅರಬರು ಕ್ರಮೇಣ ರಾಜ್ಯ ಕಟ್ಟಿ, ಎಲ್ಲೆಲ್ಲೂ ಹರಡಿ ಕೊನೆಗೆ ದೊಡ್ಡ ಸಾಮ್ರಾಜ್ಯವನ್ನು ಸ್ಥಾಪಿಸಿದರು. ಹತ್ತಾರು ಕಡೆಯಿಂದ ಬಂದು ಕೂಡಿದ ಸಂಪತ್ತಿನಿಂದ, ಇತರ ನಾಗರಿಕ ಮತ್ತು ಸಂಸ್ಕೃತಿ ವಿಷಯಗಳಲ್ಲಿ ಮುಂದುವರಿದಂತೆಯೇ ವಾಸ್ತುಶಿಲ್ಪದಲ್ಲೂ ಮುಂದುವರಿದು, ಅನೇಕ ಭವ್ಯಭವನಗಳನ್ನು ಕಟ್ಟಿದರು. ಎಷ್ಟೋ ವೇಳೆ ಇತರರ ಕಟ್ಟಡಗಳನ್ನು ಕೆಡವಿ ತಂದ ಸಾಮಾನುಗಳಿಂದ ಸುಂದರ ಕಟ್ಟಡಗಳನ್ನು ಎಬ್ಬಿಸಿದರು. ರಾಜರು ರಾಜಧಾನಿಯಲ್ಲೇ ಅಲ್ಲದೆ, ರಾಜಪ್ರತಿನಿಧಿಗಳೂ ರಾಜಾಧಿಕಾರಿಗಳೂ ಸಿರಿಯ, ಪ್ಯಾಲೆಸ್ಟೈನ್, ಈಜಿಪ್ಟ್ ಮೊದಲಾದೆಡೆಗಳಲ್ಲಿ ಹೊಸ ಹೊಸ ಮುಸ್ಲಿಂ ಕಟ್ಟಡಗಳನ್ನು ಕಟ್ಟಿಸಿದರು.

**ಅರೇಬಿಯ.** ಅರೇಬಿಯದ ಪ್ರಸಿದ್ಧ ಕಟ್ಟಡಗಳೆಂದರೆ ಮಹಮ್ಮದ್ ಪೈಗಂಬರನ ಗೋರಿ, ಅಲ್ಲಿಯ ಮಸೀದಿ, ಕಾಬ ಮತ್ತು ಕೆಲವು ಸುಲ್ತಾನರ ಅರಮನೆಗಳು. ಮದೀನಕ್ಕೆ ಮೂರು ಮೈಲಿ ದೂರದಲ್ಲಿ 'ಕೂಬ' ಎಂಬಲ್ಲಿ ಪೈಗಂಬರನು ಮೊದಲನೆಯ ಮಸೀದಿಯನ್ನು ಕಟ್ಟಿದನು. ಇದು ಮಣ್ಣು ಮಾಳಿಗೆಯ ಜೋಳು ಗುಡಿಸಲಾಗಿತ್ತು. ಆದರೆ ಇದನ್ನು ಮುಂದೆ ಬಂದ ಅಬ್ದುಲ್ ಹಮೀದ್ ಸುಲ್ತಾನನು ಜೀರ್ಣೋದ್ಧಾರ ಮಾಡಿ ಚೆನ್ನಾಗಿ ಕಟ್ಟಿಸಿದನು. ಪೈಗಂಬರನು ಮದೀನದಲ್ಲಿಯೇ ಮತ್ತೊಂದು ಮಸೀದಿಯನ್ನು ಕಟ್ಟಿದನು. ಇದು ಕಾಬಕ್ಕೆ ಎರಡನೆಯದಾದ ಪವಿತ್ರ ಸ್ಥಳವಾಗಿ ಪರಿಗಣಿತವಾಗಿದೆ. ಒರಟುಕಲ್ಲು ಹಸಿ ಇಟ್ಟಿಗೆಗಳಿಂದ ಕಟ್ಟಿ, ಮಾಳಿಗೆಗೆ ತಾಳೆಯ ಮರ ಮತ್ತು ಮಣ್ಣು ಹಾಕಿದ್ದ ಈ ಮಸೀದಿಯಲ್ಲಿ ಪೈಗಂಬರನು ಒಂದು ಕಂಬವನ್ನು ಒರಗಿಕೊಂಡು ನಿಂತು ಉಪದೇಶ ಮಾಡುತ್ತಿದ್ದನು. ಕ್ರಮೇಣ ಅವನ ಅನುಯಾಯಿಗಳು ವೇದಿಕೆಯನ್ನು ಹಾಕಿಕೊಟ್ಟರು. ಈ ಮಸೀದಿಯನ್ನು ಮೂರನೆಯ ಕಲೀಫ಼ ಉಸ್ಮಾನ್, ಕಲೀಫ಼ ವಲೀದ್ ಮೊದಲಾದವರು ಆಗಿಂದಾಗ್ಗೆ ಜೀರ್ಣೋದ್ಧಾರ ಮಾಡಿ ಹೊಸದಾಗಿ ಕಟ್ಟಿಸಿದರು. ಕಲೀಫ಼ ವಲೀದನು ಮುಸ್ಲಿಂ ಶಿಲ್ಪಿಗಳನ್ನೇ ಅಲ್ಲದೆ ಕಾಪ್ಟ್, ಗ್ರೀಕ್ ಮೊದಲಾದ ಶಿಲ್ಪಿಗಳನ್ನೂ ಬರಮಾಡಿಕೊಂಡಿದ್ದನು. ಕಲೀಫ಼ ಅಲ್ ಮುಹ್‌ದಿ, ಕಲೀಫ಼ ಮಾಮೂನ್ ಈಜಿಪ್ಟಿನ ಸುಲ್ತಾನ್ ಕಾಯಿದ್ ಜೇಯ್ ಮೊದಲಾದವರೂ ಇದನ್ನು ಅಭಿವೃದ್ಧಿ ಪಡಿಸಿದ್ದಾರೆ. ತುರ್ಕಿ ಸುಲ್ತಾನ್ ಸುಲೇಮಾನನು ಇದರ ಪ್ರಾಂಗಣವನ್ನು ಬಿಳಿ ಅಮೃತ ಶಿಲೆಯಿಂದ ಹೊದಿಸಿ ಒಂದು ಮಿನಾರನ್ನೂ ಕಟ್ಟಿಸಿದನು. ಆದರೆ, ಬರಿಯ ವಾಸ್ತುಶಿಲ್ಪ ದೃಷ್ಟಿಯಿಂದ ಈ ಮಸೀದಿ ತುರ್ಕಿ ಸ್ಪೇಯ್ನ್ ಅಥವಾ ಇಂಡಿಯದ ಮಸೀದಿಗಳಷ್ಟು ಉತ್ತಮವಾದದ್ದಲ್ಲ. ಈ ಮಸೀದಿಗೆ ಸೇರಿದಂತೆಯೇ ಪೈಗಂಬರನ ಗೋರಿ ಇದೆ. ಮೊದಲನೆಯ ಎರಡು ಕಲೀಫ಼ರ ಗೋರಿಗಳೂ ಅಲ್ಲಿಯೇ ಇವೆ.

ಮುಸ್ಲಿಮರಿಗೆ ಪರಮ ಪವಿತ್ರ ಸ್ಥಳವಾದ ಕಾಬ ಮೆಕ್ಕಾದಲ್ಲಿದೆ. ಪ್ರಪಂಚದ ಎಲ್ಲ ಭಾಗದ ಮುಸ್ಲಿಮರೂ ಪ್ರಾರ್ಥನೆಯ ಕಾಲದಲ್ಲಿ

ಇದರ ಕಡೆಗೆ ತಿರುಗುತ್ತಾರೆ. ಇದು ೧೮ ಹಜ್ಜೆ ಉದ್ದವೂ ೧೪ ಹಜ್ಜೆ ಅಗಲವೂ ಇದ್ದು ಸುಮಾರು ೪೦ ಅಡಿ ಎತ್ತರವಿದೆ. ಇದನ್ನು ಸುತ್ತು ವರಿದು ಕಲ್ಲುಕಂಬ ಸಾಲಿನ ಪ್ರಾಂಗಣವಿದೆ. ಈ ಕಾಬಕ್ಕೆ ಒಂದೇ ಒಂದು ಬಾಗಿಲಿದ್ದು, ಅದನ್ನು ವರ್ಷಕ್ಕೆ ಮೂರು ಅಥವಾ ನಾಲ್ಕು ಸಲ ಮಾತ್ರ ತೆರೆಯುತ್ತದೆ. ಕಾಬವನ್ನು ಅನೇಕ ಸಲ ಜೀರ್ಣೋದ್ಧಾರ ಮಾಡಿ ಹೊಸದಾಗಿ ಕಟ್ಟಿದೆ. ಇದನ್ನು ಮೊದಲನೆಯ ಸಲ ಕಟ್ಟಿದ್ದು ಪೈಗಂಬರನಿಗೆ ೩೫ ವರ್ಷವಾಗಿದ್ದಾಗ. ಇದರ ಬೆಳ್ಳಿಯ ತಗಡು ಹೊದಿಸಿ ರುವ ಈಗಿನ ಬಾಗಿಲು ತುರ್ಕೀ ಸುಲ್ತಾನನೊಬ್ಬನು ಮಾಡಿಸಿಕೊಟ್ಟದ್ದು. ಸ್ವರ್ಗದಿಂದ ಇಳಿದು ಬಂದದ್ದು ಎಂದು ಪ್ರತೀತಿ ಇರುವ ಪ್ರಸಿದ್ಧವಾದ 'ಹಜರ್ ಏ ಅಸ್‌ವದ್' ಅಥವಾ ಕರಿಯಕಲ್ಲು ಅಂಡಾಕಾರವಾಗಿದ್ದು, ಈಶಾನ್ಯ ಮೂಲೆಯಲ್ಲಿ ಗೋಡೆಗೆ ಜೋಡಿಸಿದೆ. ಯಾತ್ರಿಕರೆಲ್ಲರೂ ಅದಕ್ಕೆ ಮುತ್ತು ಕೊಟ್ಟುಬರುತ್ತಾರೆ. ಕಾಬದ ಉತ್ತರಭಾಗದಲ್ಲಿ ಅದರ ಬಾಗಿಲಿನ ಹತ್ತಿರ 'ಮಿಜಾನ್' ಎಂದು ಕರೆಯುವ ಒಂದು ಸ್ಥಳ ವಿದೆ. ಈ ಸ್ಥಳದಲ್ಲಿ ಏಬ್ರಹಾಮನೂ, ಅವನ ಮಗನೂ ನಿಂತು ಕಾಬ ವನ್ನು ಕಟ್ಟಿದರಂತೆ. ಇಲ್ಲಿಯ 'ಮಿಸ಼ಾಬ್' ಅಥವಾ ನೀರ್‌ಕೊಳವೆ ಚಿನ್ನದಿಂದ ಮಾಡಿದೆ. ಕಾಬವನ್ನು ನಾಲ್ಕು ಕಡೆಗಳಿಂದಲೂ ನೇಲುವ ಕರಿಯ ರೇಷ್ಮೆಯಿಂದ ಹೊದಿಸಿದೆ. ಈ ಬಟ್ಟೆಯನ್ನು ಪ್ರತಿವರ್ಷವೂ ಬದಲಾಯಿಸುತ್ತದೆ. ಇದು ಈಜಿಪ್ಟಿನಿಂದ ಬರುತ್ತದೆ. ಯಾತ್ರಿಕರು ಕಾಬದ ಸುತ್ತಲೂ 'ತವಾಫ಼್' ಅಥವಾ ಪ್ರದಕ್ಷಿಣೆ ಮಾಡುತ್ತಾರೆ. ಇದರ ಹತ್ತಿರ ಜ಼ಮ್‌ಜ಼ಮ್ ಎಂದು ಕರೆಯುವ ಒಂದು ಪವಿತ್ರ ಬಾವಿ ಇದೆ. ಯಾತ್ರಿಕರು ಇದರ ನೀರನ್ನು ಕುಡಿದು, ತವರದ ಅಥವಾ ತಾಮ್ರದ ಪಾತ್ರೆಗಳಲ್ಲಿ ಹಾಕಿ ತಮ್ಮ ಊರಿಗೆ ತೆಗೆದುಕೊಂಡು ಹೋಗಿ ನೆರೆಯವರಿಗೆ ದಾನಮಾಡುತ್ತಾರೆ.

**ಸಿರಿಯ.** ಮುಸ್ಲಿಂ ವಾಸ್ತುಶಿಲ್ಪ ಮೆಕ್ಕ ಮದೀನಗಳಲ್ಲಿ ಆರಂಭ ವಾದಾಗಲೇ ಸಿರಿಯ, ಈಜಿಪ್ಟ್, ಮೆಸೊಪೊಟೇಮಿಯ ಮೊದಲಾದೆಡೆ ಗಳಲ್ಲೂ ಆರಂಭವಾಗಿ ಕಾಲದೇಶಾನುಗುಣವಾಗಿ ಬೇರೆಬೇರೆ ಮಾರ್ಗ ಗಳಲ್ಲಿ ಬೆಳೆದುಬಂದಿದೆ. ಸಿರಿಯದ್ದು ಬಿಜ಼ನ್‌ಟೈನ್ ಪ್ರಭಾವಕ್ಕೂ,

ಈಜಿಪ್ಟಿನದು ಕಾಪ್‌ಟಿಕ್ ಪ್ರಭಾವಕ್ಕೂ, ಮೆಸೊಪೊಟೇಮಿಯದ್ದು ಪ್ರಾಚೀನ ಬ್ಯಾಬಿಲೋನಿಯ ಮತ್ತು ಸಸಾನಿಯನ್ ಪ್ರಭಾವಕ್ಕೂ ಸಿಕ್ಕಿ ಬೆಳೆದುವು.

ಉಮಯ್ಯ ದೊರೆಗಳು ಡಮಾಸ್ಕಸ್ಸನ್ನು ರಾಜಧಾನಿಯಾಗಿ ಮಾಡಿಕೊಂಡು ಸುಂದರವಾದ ಅರಮನೆಗಳನ್ನೂ ಮಸೀದಿಗಳನ್ನೂ ಕಟ್ಟಿಸಿದರು. ಇವುಗಳಲ್ಲಿ ಜೆರುಸಲೆಮ್ಮಿನಲ್ಲಿರುವ 'ಕಲ್ಲಿನ ಗುಮಟ' ಎಂಬ ದೊಡ್ಡ ಮಸೀದಿ ಪ್ರಸಿದ್ಧವಾಗಿದ್ದು ಇಂದಿಗೂ ಉಳಿದು ಬಂದಿದೆ. ಪೈಗಂಬರನು ಈ ಎಡೆಯಿಂದ ಸ್ವರ್ಗಕ್ಕೆ ಏರಿದನೆಂಬ ನಂಬಿಕೆ ಇರುವುದರಿಂದ ಇದು ಒಂದು ಪವಿತ್ರ ಸ್ಥಳವಾಗಿ ಏರ್ಪಟ್ಟಿತು. ಮಸೀದಿಯ ಮೇಲೆ ಗುಮಟವನ್ನು ಕಟ್ಟುವುದಕ್ಕೆ ಇದೇ ಮೊದಲು. ಇದರ ಕಂಬಗಳು ಬೇರೆಕಟ್ಟಡಗಳನ್ನು ಕೆಡವಿ ತಂದವು. ಗೋಡೆಗಳು ಅರ್ಧ ಚಂದ್ರಾಕಾರದ ಕಲ್ಲುಗಳಿಂದ ಕಟ್ಟಿದುವು. ಗುಮಟ ಮರದಿಂದ ಕಟ್ಟಿ ಹೊರಗಡೆ ಸೀಸ ಹೊದಿಸಿಯೂ ಒಳಗಡೆ ಗಾರೆಮಾಡಿಯೂ ಇದೆ. ಡಮಾಸ್ಕಸ್ಸಿನಲ್ಲಿ ಕಲೀಫ಼ ವಲೀದನು ೮ನೆಯ ಶತಮಾನದಲ್ಲಿ ಒಂದು ಮಸೀದಿಯನ್ನು ಕಟ್ಟಿಸಿದನು. ಇದರಲ್ಲಿ ಕುದುರೆಲಾಳದ ಆಕಾರದ ಕಮಾನುಗಳಿವೆ. ಒಳಗಡೆ ಅಮೃತಶಿಲೆಯಿಂದ ಅಲಂಕಾರ ಮಾಡಿದೆ. ಇದಲ್ಲದೆ ಉಮಯ್ಯದ್ ಕಲೀಫ಼ರು ಹಲವು ಮಸೀದಿಗಳನ್ನೂ ಸುಂದರ ಕಟ್ಟಡಗಳನ್ನೂ ಕಟ್ಟಿಸಿದರು.

**ಈಜಿಪ್ಟ್.** ಈಜಿಪ್ಟಿನ ಮೊದಮೊದಲ ಮುಸ್ಲಿಂ ಕಟ್ಟಡಗಳಲ್ಲಿ ಕಾಪ್‌ಟಿಕ್ ಪ್ರಭಾವ ಕಂಡುಬಂದು, ಕ್ರಮೇಣ ಫಾತಮಿ ಮತ್ತು ಮಾಮ್‌ಲೂಕ್ ಮನೆತನಗಳ ಆಳಿಕೆಯಲ್ಲಿ ಇರಾನಿ ಪ್ರಭಾವ ಕಂಡು ಬರುತ್ತದೆ. ಮಸೀದಿಗಳು, ಅರಮನೆಗಳು, ಸೂಫಿ಼ ಮಠಗಳು, ವಿದ್ಯಾಶಾಲೆಗಳು, ಆಸ್ಪತ್ರೆಗಳು, ಮೊದಲಾದ ಹಲವು ಒಳ್ಳೆಯ ಕಟ್ಟಡಗಳು ಆದುವು. ಈಜಿಪ್ಟಿನ 'ಮದ್ರಸ' ಅಥವಾ ವಿದ್ಯಾಶಾಲೆ ಸುತ್ತಲೂ ಎತ್ತರವಾದ ಗೋಡೆಯಿಂದ ಸುತ್ತುವರಿದ ಚೌಕನೆಯ ಅಂಗಳವಾಗಿದ್ದು ಒಳಮುಖವಾಗಿ ನಾಲ್ಕು ಹಜಾರಗಳಿರುತ್ತಿದ್ದುವು. ಅಧ್ಯಾಪಕರಿಗೆ ಪ್ರತ್ಯೇಕ ಕಟ್ಟಡಗಳೂ, ಸ್ನಾನಾದಿಗಳಿಗೆ ಒಂದು ಕಾರಂಜಿಯೂ ಇದ್ದುವು.

ಮಸೀದಿಗಳಂತೆಯೇ ಸೂಫಿ ಮಠಗಳೂ ಪ್ರಾರ್ಥನಾ ಮಂದಿರ ವೇದಿಕೆಗಳನ್ನೊಳಗೊಂಡು, ಮಿನಾರ್‌ಗಳಿಂದ ಕಂಗೊಳಿಸುತ್ತಿದ್ದುವು. ಆದರೆ ಮಠ ಜೀವನಕ್ಕೆ ಅನುಕೂಲಿಸುವಂತೆ ಹಲವು ಸಣ್ಣ ಸಣ್ಣ ಕೋಣೆಗಳಿರುತ್ತಿದ್ದುವು. ದೊರೆಗಳ ಮತ್ತು ಇತರ ಪ್ರಸಿದ್ಧಪುರುಷರ ಸಮಾಧಿಗಳ ಮೇಲೆಯೂ 'ಕುಬ್ಬ' (ಗುಮಟ) ಗಳನ್ನು ಕಟ್ಟುತ್ತಿದ್ದರು. ಪೈಗಂಬರನು ಗೋರಿಗಳನ್ನು ಪೂಜಾಸ್ಥಳಗಳನ್ನಾಗಿ ಮಾಡಕೂಡದೆಂದು ವಿಧಿಸಿದ್ದರೂ ಅನೇಕವೇಳೆ ಪ್ರಸಿದ್ಧ ಸೂಫಿ ಸಾಧುಗಳ ಸಮಾಧಿ ಸ್ಥಳಗಳು ಯಾತ್ರಾಸ್ಥಳಗಳಾಗಿ ಪರಿಣಮಿಸಿವೆ.

ಈಜಿಪ್ಟಿನ ಮಸೀದಿಗಳ ವೈಶಿಷ್ಟ್ಯವೆಂದರೆ—ಕಾಪ್‌ಟಿಕ್ ರೀತಿಯಲ್ಲಿ ಚಿತ್ರಿಸಿದ ಕಮಾನುಗಳು. ಈಜಿಪ್ಟನ್ನು ಗೆದ್ದ ಆಸ್ ಮಗ ಅಮರ್ ದೊರೆ ಕ್ರಿ.ಶ. ೬೪೩ರಲ್ಲಿ ಮೊದಲನೆಯ ಮಸೀದಿಯನ್ನು ಕಟ್ಟಿಸಿದನು. ಕ್ರಿ. ಶ. ೮೭೯ರಲ್ಲಿ ಕೈರೋವಿನಲ್ಲಿ ಕಟ್ಟಿದ ಅಹ್‌ಮದ್‌ತುಲೂನ್ ಮಸೀದಿ ಇಟ್ಟಿಗೆಗಳಿಂದ ಕಟ್ಟಿ ಸುಂದರವಾಗಿ ಚಿತ್ರಿತವಾಗಿತ್ತು. ಕೈರೋವಿನ ಇತರ ಮಸೀದಿಗಳಲ್ಲಿ ಮುಖ್ಯವಾದುವು—ಕ್ರಿ.ಶ. ೯೭೦ರಲ್ಲಿ ಕಟ್ಟಿದ ಅಲ್‌ಅಸ್‌ಹರ್, ಕ್ರಿ. ಶ. ೧೨೮೫ರಲ್ಲಿ ಕಟ್ಟಿದ ಕಲಾವೂನ್ ಮೊದಲಾದವು. ಕೆಲವುವೇಳೆ ಮಸೀದಿಕಟ್ಟಿಸಿದವನ ಗೋರಿಯನ್ನು ಅವನ ಮಸೀದಿಯಲ್ಲೇ ಮಾಡುತ್ತಿದ್ದರು. ಉದಾಹರಣೆಗೆ ಸುಲ್ತಾನ್ ಹಸನ್ನನ್ನು (ಕ್ರಿ.ಶ. ೧೩೫೬–೬೦) ಅವನು ಕಟ್ಟಿಸಿದ ದೊಡ್ಡ ಮಸೀದಿಯ ಹಿಂದೆಯೆ ಸಮಾಧಿಮಾಡಿದೆ.

**ಉತ್ತರ ಆಫ್ರಿಕ.** ಟ್ಯೂನಿಸ್, ಅಲ್‌ಜೀರಿಯ ಮತ್ತು ಮೊರಾಕೊ: ಮುಸ್ಲಿಮರು ಈಜಿಪ್ಟನ್ನು ಗೆದ್ದೊಡನೆಯೆ ಉತ್ತರ ಆಫ್ರಿಕಕ್ಕೂ ದಾಳಿಯಿಟ್ಟು ಕೈವಶಮಾಡಿಕೊಂಡರು. ಟ್ಯೂನಿಸ್, ಮೊರಾಕೊ—ಮೊದಲಾದೆಡೆಗಳಲ್ಲಿ ಮೊದಮೊದಲು ಆಯಾ ಸ್ಥಳದ ಶಿಲ್ಪಿಗಳನ್ನೇ ಕೆಲಸಕ್ಕೆ ಹಾಕಿಕೊಂಡು ಕಟ್ಟಡಗಳನ್ನು ಕಟ್ಟಿಸಿದರು. ಈ ಕಟ್ಟಡಗಳು ದೇಶೀಯ ರೀತಿಯಲ್ಲೂ ಬಿಸಾಂಟೈನ್ ರೋಮನ್ ರೀತಿಯಲ್ಲೂ ಇರುತ್ತಿದ್ದುವು. ಆದರೆ, ಪೂರ್ವದೇಶಗಳಿಂದ ಮುಸ್ಲಿಮರು ಕ್ರಮೇಣ ಬರುವುದಕ್ಕೆ ಆರಂಭಿಸಿ ಎರಡು ಪದ್ಧತಿಗಳೂ ಮೇಳಯಿಸಿದುವು. ಶ್ರೀಮಂತರು

ಪೂರ್ವದೇಶಗಳ ರೀತಿಯನ್ನು ಅನುಸರಿಸಿ ಮನೆಯಲ್ಲಿ ಹೆಂಗಸರಿಗಾಗಿ ಒಂದು ಭಾಗವನ್ನೂ ಗಂಡಸರಿಗಾಗಿ ಒಂದು ಭಾಗವನ್ನೂ ಪ್ರತ್ಯೇಕ ವಾಗಿ ಕಟ್ಟುತ್ತಿದ್ದರು. ಈ ಪದ್ಧತಿ ಇಂದಿಗೂ ಇಂಡಿಯದ ಮುಸ್ಲಿಮರಲ್ಲಿ ಉಳಿದುಬಂದು, ಹೆಂಗಸರಿಗಾಗಿ ಜೆನಾನ ಮತ್ತು ಗಂಡಸರಿಗಾಗಿ ಮರ್ದಾನ ಎಂಬ ಎರಡು ಪ್ರತ್ಯೇಕ ಭಾಗಗಳು ಇರುತ್ತವೆ. ೧೧ನೆಯ ಶತಮಾನದ ಅನಂತರ ಬಿಜಾನ್‌ಟೈನ್ ರೋಮನ್ ಶೈಲಿಯ ಜೊತೆಗೆ ಮೆಸೊಪೊಟೇಮಿಯ ಸಿರಿಯ ಮತ್ತು ಇರಾನ್ ವಾಸ್ತು-ಶಿಲ್ಪಗಳ ಪ್ರಭಾ ವವೂ ಬಿತ್ತು. ಆಲ್‌ಜೀರಿಯ, ಟ್ಯೂನಿಸಿಸ್ ಮತ್ತು ಮೊರಾಕೊ ದೇಶಗಳ ಮುಸ್ಲಿಂ ದೊರೆಗಳು ಭವ್ಯವಾದ ರಾಜಭವನಗಳನ್ನು ಕಟ್ಟಿದ್ದಾರೆ. ಟ್ಯೂನಿಸ್ಸಿನ 'ಮುಸ್ತನ್‌ಸಿರ್' ಅರಮನೆ ಅವರ ಅಪ್ಪ್ರತಶಿಲೆಯ ಮಹಲಿಗೂ, ತೋಟಗಳಿಗೂ, ಕಾರಂಜಿಗಳಿಗೂ ಪ್ರಸಿದ್ಧವಾಗಿತ್ತು. ಟ್ಯೂನಿಸ್ಸಿನ ದೊಡ್ಡ ಮಸೀದಿಯಾದ ಕೈರವಾನ್ ಮಸೀದಿಯನ್ನು ನಾಫೆ಼ ಮಗ ಒಕುಬ (ಕ್ರಿ.ಶ. ೬೭೦-೭೫) ಕಟ್ಟಿದನು. ಇದು ಕಂಬ ಸಾಲುಗಳಿಂದಲೂ ಕಮಾನುಗಳಿಂದಲೂ ಕೂಡಿ ದೊಡ್ಡ ಪ್ರಾರ್ಥನಾ ಮಂದಿರವನ್ನು ಒಳಗೊಂಡಿದೆ. ಕ್ರಿ. ಶ. ೭೦೩ರಲ್ಲಿ ನೋಮಾನನ ಮಗ ಹಸನ್ನನಿಂದ ಒಮ್ಮೆಯೂ ಕ್ರಿ. ಶ. ೮೩೭ರಲ್ಲಿ ಸ್ಥಿಯಾದತ್ತುಲ್ಲನಿಂದ ಒಮ್ಮೆಯೂ ಇದು ಜೀರ್ಣೋದ್ಧಾರವಾಯಿತು. ಈಗ ಉಳಿದಿರುವ ಪ್ರಾಚೀನ ಮಿನಾರ್‌ಗಳಲ್ಲಿ ಒಂದಾದ ಕೈರವಾನ್ ಮಸೀದಿಯಲ್ಲಿಯ ಮಿನಾರನ್ನು ಉಮಯ್ಯದ್ ಸಂತತಿಯ ಕಲೀಫ಼ ಹಿಷಾಮ್ (ಕ್ರಿ.ಶ. ೭೨೪-೪೩) ಕಟ್ಟಿಸಿದನು. ಇದು ಒಂದು ದೊಡ್ಡ ಚೌಕನೆಯ ಗೋಪುರ ದಲ್ಲಿದೆ. ಟ್ಯೂನಿಸ್ಸಿನ ಜ಼ಯ್‌ತೂನಿಯ ಮಸೀದಿ (ಕ್ರಿ.ಶ. ೭೩೨), ಫೆ಼ಜ಼್ ಸ್ಥಳದ ಕೈರೂನ್ ಮಸೀದಿ (ಕ್ರಿ. ಶ. ೧೦೦೭), ಬೆನೀಹಮ್ಮಾದಿನ ಕೂಲಾ ಮಸೀದಿ (ಕ್ರಿ.ಶ. ೧೦೦೭), ಕಸ್‌ಬಾ ಮಸೀದಿ (ಕ್ರಿ.ಶ. ೧೩೩೧), ಮೊರ್‍ರಾಕಷ್ ಮಸೀದಿ (ಕ್ರಿ. ಶ. ೧೦೬೯), ಮೊದಲಾದುವು ಇತರ ಕೆಲವು ಪ್ರಸಿದ್ಧ ಮಸೀದಿಗಳು.

**ಸ್ಪೆಯ್‌ನ್ ಮತ್ತು ಸಿಸಿಲಿ:** ಉಮಯ್ಯ ಕಲೀಫ಼ರು ಕಾರ್ಡೋವ ದಲ್ಲಿ ಮಸೀದಿಯನ್ನೂ 'ಅಲ್‌ಮೋಹೇದ್‌ಗಿರಾಲ್‌ಡ' ಗೋಪುರವನ್ನೂ

ಸೆವಿಲ್‌ನಲ್ಲಿ ಅಲ್‌ಕಸ್ಸರ್ ಎಂಬ ಪ್ರಸಿದ್ಧ ಅರಮನೆಯನ್ನೂ ಕಟ್ಟಿಸಿದರು. ನಾಸಿರ್ ಸಂತತಿಯವರು 'ಅಲ್‌ಹಂಬ್ರ' ಎಂಬ ಪ್ರಸಿದ್ಧ ಅರಮನೆಯನ್ನು ಕಟ್ಟಿಸಿದರು. ಮುಸ್ಲಿಮರ ಪ್ರಸಿದ್ಧ ಕಟ್ಟಡಗಳು, ಮಸೀದಿಗಳು, ಅರಮನೆಗಳು ಮತ್ತು ಮದ್ರಸಗಳು ಆಗಿರುವುದರಿಂದ ಇವರ ವಾಸ್ತುಶಿಲ್ಪದ ಮಹತ್ವವನ್ನು ಈ ಕಟ್ಟಡಗಳಲ್ಲಿಯೇ ಕಾಣಬೇಕು. ಮೊದಮೊದಲಿನ ಸ್ಪೆಯ್‌ನ್ ಮುಸ್ಲಿಂ ದೊರೆಗಳು ಇತರೆಡೆಗಳಲ್ಲಿಯಂತೆಯೇ ದೇಶೀಯ ಪದ್ಧತಿಯಲ್ಲೇ ಕಟ್ಟಡಗಳನ್ನು ಕಟ್ಟಿಸಿದರು. ಕ್ರಮೇಣ ಪೂರ್ವದೇಶಗಳಿಂದ ಶಿಲ್ಪಿಗಳು ಹೋಗಿ ನೆಲಸಿ ಶೈಲಿ ಬದಲಾಯಿಸಿತು. ಮುಸ್ಲಿಂ ವೈಶಿಷ್ಟ್ಯವಾದ ಕಮಾನುಗಳೂ ಗುಮಟಿಗಳೂ ಕಟ್ಟಡಗಳಲ್ಲಿ ಕಾಣಬಂದುವು. ಹಾಗೆಯೇ ಇವರ ವೈಶಿಷ್ಟ್ಯವಾದ ಲಿಪಿರೇಖಾ ಚಿತ್ರಗಳೂ ಕಟ್ಟಡಗಳನ್ನು ಅಲಂಕರಿಸಿದುವು. ಕಾರ್ಡೋವದ ಮಸೀದಿಯನ್ನು ಉಮಯ್ಯಾದ್ ಸಂತತಿಯ ಅಬ್ದುರ್ ರಹ್‌ಮಾನ್ (ಕ್ರಿ. ಶ. ೭೭೦-೮೬) ಕಟ್ಟಿಸಿದನು. ಇವನ ತರುವಾಯ ಬಂದ ಕಲೀಫ಼ ಹಿಷಾಮ್ ಆದಕ್ಕೆ ಪಕ್ಕ ಕಟ್ಟಡಗಳನ್ನು ಸೇರಿಸಿ ಒಂದು ಮಿನಾರ್ ಕಟ್ಟಿಸಿದನು. ಹೀಗೆಯೇ ಮುಂದೆ ಬಂದ ಕಲೀಫ಼ರೂ ಇದನ್ನು ವಿಸ್ತಾರಪಡಿಸುತ್ತ ಬಂದರು. ಈಗ ಒಂದು ಮಿನಾರ್ ಮಾತ್ರ ಉಳಿದಿರುವ ಸೆವಿಲ್ ಮಸೀದಿ ಕ್ರಿ.ಶ. ೧೧೭೧ರಲ್ಲಿ ಮೊದಲು ಕಟ್ಟಿತು.

ಪಾಶ್ಚಾತ್ಯ ಮುಸ್ಲಿಮರ ತಾಜ್‌ಮಹಲ್ ಎಂದು ಪ್ರಸಿದ್ಧವಾಗಿರುವ 'ಅಲ್‌ಹಂಬ್ರ' ಅರಮನೆ ಈಗಲೂ ಉಳಿದಿದೆ. ಇದನ್ನು 'ಇಬ್‌ನ್ ಅಹ್‌ಮರ್' (ಕೆಂಚ) ಎಂಬ ಅಡ್ಡಹೆಸರಿನ ಮಹಮ್ಮದ್ ಎಂಬವನು ಕ್ರಿ.ಶ. ೧೨೪೮ರಲ್ಲಿ ಕಟ್ಟಿಸಿದನು. ಮೂರನೆಯ ಮಹಮ್ಮದ್ ಕ್ರಿ.ಶ. ೧೩೫೪ರಲ್ಲಿ ಇದನ್ನೇ ದೊಡ್ಡದು ಮಾಡಿ ಮುಗಿಸಿದನು. ಇದು ಸ್ಪೆಯ್‌ನ್ ಮುಸ್ಲಿಂ ಕಟ್ಟಡಗಳಲ್ಲಿ ಬಹು ಪ್ರಖ್ಯಾತವಾದದ್ದು. ಇದರ ನ್ಯಾಯ ಮಂದಿರ, ರಾಯಭಾರ ಮಂದಿರ, ಅಕ್ಕತಂಗಿಯರ ಮಂದಿರ ಮೊದಲಾದ ಭವ್ಯಮಂದಿರಗಳೂ ಅಮೃತಶಿಲೆಯ ಕಂಬಸಾಲುಗಳೂ, ಕಾರಂಜಿಗಳೂ, ಕಲ್ಲುಕಟ್ಟಿದ ಕೊಳವೂ, ಬಹು ಸುಂದರವಾಗಿವೆ. ಇದರ ಹೊರಭಾಗ ಒಂದು ಕೋಟೆಯ ಹಾಗೆ ಕಾಣುತ್ತದೆ. ಗೋಡೆಗಳನ್ನು ಮಣ್ಣಿಂದ

ಕಟ್ಟಿ ಇಕ್ಕೆಲದಲ್ಲೂ ಇಟ್ಟಿಗೆ ಕಟ್ಟಡದಿಂದ ಭದ್ರಪಡಿಸಿದೆ. ಚಿನ್ನದ ಕೆಲಸಮಾಡಿದ ನುಣ್ಣನೆಯ ಹೊಳಪು ಬಿಲ್ಲೆಗಳನ್ನು ಗೋಡೆಗಳಿಗೆ ಹೊದಿಸಿದೆ. ಇದರ ಮಹಾದ್ವಾರಕ್ಕೆ 'ನ್ಯಾಯ ದ್ವಾರ' ಎಂದು ಹೆಸರು. ಇದು ಪ್ರವೇಶಕೊಡುವ ಮಹಾಮಂದಿರ ೧೪೦×೭೪ ಚದರ ಅಡಿ ಹರವು ಇದ್ದು, ನಡುವೆ ಕಲ್ಲು ಕಟ್ಟಿದ ಕೊಳವಿದೆ. ಈ ಮಂದಿರ 'ಸುಖ ಮಂದಿರ' ಎಂಬ ಮತ್ತೊಂದು ಮಂದಿರಕ್ಕೂ, ಅದು ರಾಯಭಾರ ಮಂದಿರಕ್ಕೂ ಪ್ರವೇಶ ಕೊಡುತ್ತವೆ. 'ಸಿಂಹಾಂಗಣ' ಎಂಬುದು ೧೧೬×೬೬ ಚದರ ಅಡಿ ಇದ್ದು, ೧೨೪ ಕಂಬಗಳಿಂದಲೂ ಅಂದವಾದ ಕಮಾನುಗಳಿಂದಲೂ ಕೂಡಿದೆ. ಗೋಡೆಗೆ ನೀಲಿ ಮತ್ತು ಹಳದಿಬಣ್ಣದ ನುಣ್ಣನೆಯ ಹೊಳಪು ಬಿಲ್ಲೆಗಳನ್ನು ಹೊದಿಸಿದೆ. ಇದರ ಮಧ್ಯದಲ್ಲಿ ಒಂದು ಕಾರಂಜಿಯೂ, ಅದರ ಸುತ್ತಲೂ ಬಿಳಿಯ ಅಮೃತಶಿಲೆಯಲ್ಲಿ ಕಡೆದ ಹನ್ನೆರಡು ಸಿಂಹಗಳೂ ಇವೆ. ಇದಾದಮೇಲೆ ೧೫×೭೨ ಚದರ ಅಡಿ ಇರುವ ಎರಡು ಬಿಳಿಯ ಅಮೃತ ಶಿಲೆಗಳನ್ನು ಹಾಸಿರುವ ಒಂದು ಮಂದಿರವಿದೆ. ಇದರಿಂದ ಇದನ್ನು 'ಅಕ್ಕತಂಗಿ ಮಂದಿರ' ಎಂದು ಕರೆಯುತ್ತಾರೆ. ಇವಲ್ಲದೆ, ಸಂಗೀತ ಮಂದಿರವೇ ಮೊದಲಾದ ಇನ್ನೂ ಹಲವು ಸುಂದರ ಮಂದಿರಗಳೂ ಈ ದಿವ್ಯ ಭವನದಲ್ಲಿವೆ. ಈ ಅಲ್‌ಹಂಬ್ರ ಅರಮನೆಗೆ ಸೇರಿದಂತೆಯೇ ಕಾರಂಜಿ, ತೋಟ ಮೊದಲಾದವುಗಳಿಂದ ಅಲಂಕರಿಸಿದ ಮತ್ತೊಂದು ಅರಮನೆಯೂ ಇತ್ತು.

ಕಲೀಫ಼ ಮೂರನೆಯ ಅಬ್ದುರ್‌ರಹ್‌ಮಾನನು (ಕ್ರಿ.ಶ. ೯ನೆಯ ಶತಮಾನ) ಆರಂಭಿಸಿ, ಅವನ ಮಗ ಮುಗಿಸಿದ 'ಅಸ್ಸ್‌ಷಹ್‌ರ' ಎಂಬ ಅರಮನೆಯೂ ಪ್ರಸಿದ್ಧವಾದದ್ದು. ೪,೦೦೦ ಅಡಿ ಉದ್ದ ಪ್ರಾಕಾರದಿಂದ ಸುತ್ತುವರಿದು, ಕಲ್ಲುಕಟ್ಟಿದ ಕಾರಂಜಿಗಳಿಂದ ಕೂಡಿದ ಸುಂದರವಾದ ತೋಟದ ಮಧ್ಯದಲ್ಲಿ ಆಫ್ರಿಕ, ಇಟಲಿ, ಕಾನ್‌ಸ್ಟಾಂಟಿನೋಪಲ್, ದೇಶಗಳಿಂದ ತಂದ ಉತ್ತಮ ಅಮೃತಶಿಲೆಯಿಂದ ಕಡೆದ ೪೩೦೦ ಕಂಬಗಳಿಂದ ಕಂಗೊಳಿಸುತ್ತಿದ್ದ ಈ ಅರಮನೆ ಕಟ್ಟುವುದಕ್ಕೆ ೪೦ ವರ್ಷ ಹಿಡಿಯಿತು. ಅಲ್‌ಹಂಬ್ರ ಅರಮನೆಗೆ ಕಡಮೆಯೇನೂ ಅಲ್ಲದಿದ್ದ ಈ ಅರಮನೆಯ ಕುರುಹು ಕೂಡ ಈಗ ಉಳಿದಿಲ್ಲ. ಅಲ್‌ಮೊನ್‌ಸ್ಸರ್

(ಕ್ರಿ.ಶ. ೯೭೬-೮೧) ಕಟ್ಟಿಸಿದ 'ಅಸ್ಸಾಹೀರಹ್' ಎಂಬ ಅರಮನೆಯೂ ಪ್ರಸಿದ್ಧವಾದವು. ಕಾರ್ಡೋವ, ಅರಮನೆಗಳಿಂದಲೂ ತೋಟಗಳಿಂದಲೂ ಸುಂದರ ಭವನಗಳಿಂದಲೂ ಚೆಲುವಾಗಿ ಕಂಗೊಳಿಸುತ್ತಿದ್ದ ಪಟ್ಟಣವಾಗಿತ್ತು.

**ಮೆಸೊಪೊಟೇಮಿಯ ಮತ್ತು ಇರಾನ್:** ಇರಾನ್ ವಾಸ್ತುಶಿಲ್ಪದ ಚರಿತ್ರೆಯನ್ನು ಇಸ್ಲಾಂಪೂರ್ವದ್ದು ಮತ್ತು ಇಸ್ಲಾಂತರುವಾಯದ್ದು ಎಂದು ಸ್ಥೂಲವಾಗಿ ಎರಡು ಭಾಗ ಮಾಡಬಹುದು. ಇಸ್ಲಾಂಪೂರ್ವದ್ದು ಅವೆಸ್ತದ ಗಾಥಗಳ ಕಾಲದಿಂದ ಮೊದಲಾಗುತ್ತದೆ. ಇಸ್ಲಾಂತರುವಾಯದ್ದು ಇರಾನ್ ಮುಸ್ಲಿಂ ಸಾಮ್ರಾಜ್ಯಕ್ಕೆ ಸೇರಿದಂದಿನಿಂದ ಮೊದಲಾಗುತ್ತದೆ. ಆದರೂ, ಇವೆರಡಕ್ಕೂ ಹೆಚ್ಚು ವ್ಯತ್ಯಾಸವಿಲ್ಲದೆ, ಇಸ್ಲಾಂಪೂರ್ವದ ರೀತಿಯೇ ಮುಸ್ಲಿಂ ಧರ್ಮಕ್ಕೆ ಅನುಗುಣವೂ ಅವಶ್ಯಕವೂ ಆದ ಕೆಲವು ಮಾರ್ಪಾಟುಗಳನ್ನು ಹೊಂದಿ ಇಸ್ಲಾಂತರುವಾಯದಲ್ಲಿಯೂ ಕಂಡುಬರುತ್ತದೆ. ಇಸ್ಲಾಂಪೂರ್ವದ ಮೊದಲನೆಯ ಕಾಲವನ್ನು ಅವೆಸ್ತದ ಕಾಲವೆಂದು ಕರೆಯುತ್ತದೆ. ಈ ಕಾಲದಲ್ಲಿ ಅನೇಕ ಅಂದವಾದ ಕಟ್ಟಡಗಳಾದುವು. ಅವೆಸ್ತದಲ್ಲಿ ೧೦೦೦ ಕಂಬದ ಸುಂದರಭವನಗಳ ವರ್ಣನೆ ಇದೆ. ಕ್ರಿ.ಪೂ. ೭೦೦ರಿಂದ ಕ್ರಿ.ಪೂ. ೫೫೦ರ ವರೆಗಿನ ಎರಡನೆಯ ಕಾಲವನ್ನು ಮಿಡಿಯನ್ ಕಾಲವೆಂದು ಕರೆಯುತ್ತದೆ. ಈ ಕಾಲದ ಅರಮನೆಗಳ ಮತ್ತು ಇತರ ಕಟ್ಟಡಗಳ ವಿಷಯವಾಗಿ ಗ್ರೀಕ್ ಮೂಲಗಳಿಂದ ಹಲವು ಸಂಗತಿಗಳು ತಿಳಿದುಬರುತ್ತವೆ. ಅರಮನೆಗಳನ್ನು ಹಸಿಯ ಇಟ್ಟಿಗೆ ಮತ್ತು ಜೇಡಿಮಣ್ಣಿನಿಂದ ಕಟ್ಟಿ, ಚಿನ್ನದ ಮುಲಾಮಿನ ಬಣ್ಣ ಬಣ್ಣದ ನುಣ್ಣನೆಯ ಹೊಳಪು ಬಿಲ್ಲೆಗಳನ್ನು ಹೊದಿಸುತ್ತಿದ್ದರು. ಮೊದಮೊದಲು ಇರಾನಿನಲ್ಲಿ ದೇವಾಲಯಗಳೇ ಇರಲಿಲ್ಲವೆಂದು ಗ್ರೀಕ್ ಬರಹಗಳಿಂದ ತಿಳಿದುಬರುತ್ತದೆ. ಆದರೆ, ಅಖಿಮಿನಿಯನ್ನರ ಆಳಿಕೆಯ ಕೊನೆಕೊನೆಗೆ 'ಅನಹಿತ' ಮತ್ತು 'ಮಿತ್ರ' ದೇವತೆಗಳ ದೇವಾಲಯಗಳು ಆದುವು. ಆದರೆ, ಈ ಕಟ್ಟಡಗಳ ವಿಷಯವಾಗಿ ನಮಗೆ ಏನೂ ತಿಳಿದುಬಂದಿಲ್ಲ.

ಇರಾನ್ ವಾಸ್ತುಶಿಲ್ಪ ಮೂರನೆಯ ಕಾಲವಾದ ಅಖಿಮೀನಿಯನ್ ಆಳಿಕೆಯಲ್ಲಿ (ಕ್ರಿ.ಪೂ. ೫೫೦–೩೩೦) ತನ್ನ ಮೇಲ್ಮೆಯನ್ನು ಮುಟ್ಟಿತು. ಪಾಸರ್‌ಗಡೆ, ಪರ್ಸಿಪೊಲಿಸ್, ಸೂಸ, ಮೊದಲಾದ ಅಖಿಮೀನಿಯನ್ ಸಾಮ್ರಾಜ್ಯದ ಪ್ರಸಿದ್ಧ ಪಟ್ಟಣಗಳಲ್ಲೆಲ್ಲ ಭವ್ಯವಾದ ಅರಮನೆಗಳಿದ್ದುವು. ಈ ಅರಮನೆಗಳ ವಿಶೇಷ ಲಕ್ಷಣಗಳೆಂದರೆ: ಎತ್ತರವಾದ ಜಗಲಿ, ಇದನ್ನು ಹತ್ತುವುದಕ್ಕೆ ಇಕ್ಕೆಲದಲ್ಲಿಯೂ ಚಿತ್ರ ಕೆತ್ತಿದ ಮೆಟ್ಟಿಲಸಾಲು, ದ್ವಾರದಲ್ಲಿ ಮನುಷ್ಯ ಮುಖ ಮತ್ತು ಪ್ರಾಣಿ ದೇಹದ ಪ್ರತಿಮೆಗಳು, ಎತ್ತರವಾದ ತೆಳುಗಂಬಗಳ ದೊಡ್ಡ ಹಜಾರಗಳು, ಕಮಲಾಕಾರದ ಅಥವಾ ಘಂಟಾಕಾರದ ಸುಣ್ಣಪಾದಗಳು ಮತ್ತು ಬಸವಾಕಾರದ ಕಂಬತಲೆಗಳು, ಪ್ರಸಿದ್ಧ ಇರಾನ್ ದೊರೆಗಳನ್ನೂ ಪುರಾಣವೀರರನ್ನೂ ಚಿತ್ರಿಸಿದ ಗೋಡೆಗಳು. ಕ್ರಿ. ಪೂ. ೩೩೦ರಿಂದ ಕ್ರಿ.ಶ. ೨೨೬ರ ವರೆಗಿನ ನಾಲ್ಕನೆಯ ಕಾಲದಲ್ಲಿ ಕ್ರಮೇಣ ಚಪ್ಪಟೆ ಮಾಳಿಗೆಗಳು ಹೋಗಿ ಸುರಂಗಾಕಾರದ ಚಾವಣಿಗಳೂ, ಕಮಾನು ಕಟ್ಟಡಗಳೂ ಕಂಡುಬರುತ್ತವೆ. ಕ್ರಿ.ಶ. ೨೨೬ರಿಂದ ೫೬೧ರ ವರೆಗೆ ಆಳಿದ ಪ್ರಸಿದ್ಧ ಸಸಾನಿಯನ್ ಸಂತತಿಯವರ ಕಾಲದಲ್ಲಿ ಫೀರೂಜಾಬಾದ್, ಸರ್‌ವಿಸ್ತಾನ್—ಮೊದಲಾದೆಡೆಗಳ ಪ್ರಸಿದ್ಧ ಅರಮನೆಗಳು ಆದುವು. ಫೀರೂಜಾಬಾದ್ ಅರಮನೆ ೩೨೦–೧೭೦ ಚದರ ಅಡಿ ಹರವು ಇದ್ದು ೪೫ ಅಡಿ ವ್ಯಾಸದ ಮೂರು ಗುಮ್ಮಟಗಳನ್ನು ಹೊತ್ತಿತ್ತು.

ಅಬೀವಕ್ಕಾಸಿನ ಮಗ ಸಾದ್ ಎಂಬ ಪಡೆವಳನು ಮೆಸೊಪೊಟೇಮಿಯವನ್ನು ಗೆದ್ದು ಎರಡನೆಯ ಕಲೀಫ್‌ನಿಂದ ಆ ಪ್ರಾಂತದ ಅಧಿಕಾರಿಯಾಗಿ ನಿಯಮಿತನಾದಂದಿನಿಂದ ಮುಸ್ಲಿಂ ಆಳಿಕೆ ಪ್ರಾರಂಭವಾಗುತ್ತದೆ. ಅವನು ಕೂಫದಲ್ಲಿ ವಾಸವಿದ್ದು, ಇರಾನ್ ಚಕ್ರಾಧಿಪತ್ಯದ ರಾಜಧಾನಿಯಾಗಿದ್ದ ಮದಾಯಿನ್ನಿಂದ ಸಾಮಾನುಗಳನ್ನು ಸಾಗಿಸಿ ಒಂದು ಅರಮನೆಯನ್ನೂ ಮಸೀದಿಯನ್ನೂ ಕಟ್ಟಿಸಿದನು. ಇವುಗಳ ವಿಷಯ ನಮಗೇನೂ ತಿಳಿದು ಬಂದಿಲ್ಲ. ಕೂಫದಲ್ಲಿ ಕ್ರಿ.ಶ. ೬೭೦ರಲ್ಲಿ ಕಟ್ಟಿದ ಮೊದಲನೆಯ ಮಸೀದಿ ಮೇಲಿಂದ ಮೇಲೆ ಹೊಸ ಕಟ್ಟಡಗಳು ಕೂಡುತ್ತ ಅಭಿವೃದ್ಧಿ ಹೊಂದಿತು.

ಕ್ರಿ.ಶ. ೭೬೨ರಲ್ಲಿ ಬಗ್‌ದಾದ್ ಅಬ್ಬಾಸಿ ಚಕ್ರಾಧಿಪತ್ಯದ ರಾಜಧಾನಿಯಾಯಿತು. ಬಗ್‌ದಾದ್ (ಭಗದತ್ತ) ಎಂದರೆ 'ದೇವರಕೊಡುಗೆ' ಎಂದು ಅರ್ಥ. ಮೊದಲು ಇದು ಒಂದು ಹಳ್ಳಿಯಾಗಿತ್ತು. ಇದನ್ನು ಅಭಿವೃದ್ಧಿಗೆ ತಂದ ಕಲೀಫ ಮನ್‌ಸೂರನು ಇದಕ್ಕೆ 'ಮದೀನತುಸ್ ಸಲಾಮ್' (ಶಾಂತಿನಗರ) ಎಂದು ಹೆಸರು ಕೊಟ್ಟನು. ಕ್ರಮೇಣ ಬಗ್‌ದಾದ್ ಅರಮನೆಗಳಿಗೂ ತೋಟಗಳಿಗೂ ಮಸೀದಿಗಳಿಗೂ ಹೆಸರಾಯಿತು.

ಕಲೀಫ ಮನ್‌ಸೂರನು ಬಗ್‌ದಾದ್ ಹಳ್ಳಿಯನ್ನು ಒಂದು ಚಕ್ರಾಕಾರ ನಗರವನ್ನಾಗಿ ಮಾಡಿ ಅದನ್ನು ಇಕ್ಕೋಟೆಯಿಂದ ಸುತ್ತುವರಿಸಿದನು. ಪಟ್ಟಣಕ್ಕೆ ಪ್ರವೇಶಕೊಡಲು ನಾಲ್ಕು ಹೆಬ್ಬಾಗಿಲುಗಳಿದ್ದುವು. ಅರಮನೆ ಮತ್ತು ಕೋಟೆ ಕ್ರಿ.ಶ. ೭೬೬ರಲ್ಲಿ ಮುಗಿದು, ಕಲೀಫನು ತನ್ನ ಹೊಸ ರಾಜಧಾನಿಗೆ ಬಂದನು. ಕಟ್ಟಡದ ಕೆಲಸದಲ್ಲಿ ಒಂದು ಲಕ್ಷ ಜನ ಶಿಲ್ಪಿಗಳೂ ಕಾರೇಗಾರರೂ ಇದ್ದರಂತೆ. ಈ ಕೋಟೆ ಕೊತ್ತಳಗಳೂ ಅನೇಕ ಹಜಾರಗಳೂ ಗುಮಟಗಳೂ ಇದ್ದ ದೊಡ್ಡ ಅರಮನೆಯೂ ಹಸಿ ಇಟ್ಟಿಗೆಯಿಂದ ಕಟ್ಟಿದ್ದುವು. ೧೩೦ ಅಡಿ ಎತ್ತರವಿದ್ದ ಹಸುರು ಬಣ್ಣದ ಗುಮಟದ ಮೇಲೆ ರಾವುತನ ಪ್ರತಿಮೆಯೊಂದು ಬಹು ದೂರಕ್ಕೆ ಕಾಣುತ್ತಿತ್ತು. ಈ ಗುಮಟದ ಕೆಳಗೆ ಆಸ್ಥಾನಮಂಟಪವಿತ್ತು. ರಾಜ ಮಸೀದಿಯೂ ಹಸಿ ಇಟ್ಟಿಗೆಯಿಂದಲೂ, ಮರದ ಕಂಬಗಳಿಂದಲೂ ಕಟ್ಟಿತ್ತು. ಇದನ್ನು ಹಾರೂನ್-ಅಲ್-ರಷೀದ್ ಮತ್ತೆ ಹೊಸದಾಗಿ ಕಟ್ಟಿಸಿದನು. ಮೊತಸ್ಸಿ ಆಳಿಕೆಯಲ್ಲಿ ಇದು ಮತ್ತೆ ವಿಸ್ತರವಾಯಿತು. ಬುವೈಹಿ ಸಂತತಿಯ ಅಸ್ಗದುದ್ದೌಲನು ಟೈಗ್ರಿಸ್ ನದಿಯ ದಡದಲ್ಲಿ ಒಂದು ದೊಡ್ಡ ವೈದ್ಯಶಾಲೆಯನ್ನು ಕಟ್ಟಿಸಿದನು. ಈ ಕಟ್ಟಡ ನೋಟಕ್ಕೆ ವೈದ್ಯಶಾಲೆಗಿಂತಲೂ ಅರಮನೆಯಾಗಿ ಕಾಣುತ್ತಿತ್ತು. ಕಲೀಫ ಮೊತಗಿದ್ದನು 'ತಾಜ್' ಎಂಬ ಹೊಸ ಅರಮನೆಯನ್ನು ಕಟ್ಟಿಸಲು ಮೊದಲು ಮಾಡಿ, ಅವನ ನಂತರ ಬಂದವರು ಅದನ್ನು ಪೂರೈಸಿದರು. ಕಲೀಫ ಮುಕ್‌ತಫಿ ಮತ್ತಷ್ಟು ಅಂಗಣಗಳನ್ನೂ ಗುಮಟಗಳನ್ನೂ ಕಟ್ಟಿಸಿ ಇದನ್ನು ದೊಡ್ಡದು ಮಾಡಿದನು. ಈ ಬಟ್ಟಗುಮಟಗಳಲ್ಲಿ ಒಂದಕ್ಕೆ

'ಕತ್ತೆ ಗುಮಟ' ಎಂದು ಹೆಸರಿತ್ತು: ಕತ್ತೆಯ ಮೇಲೆ ಕೂತು ಮೆಟ್ಟಿಲು ಹತ್ತಿ ಅದರ ಮೇಲಕ್ಕೆ ಹೋಗಬಹುದಾಗಿತ್ತಂತೆ. ಇವಲ್ಲದೆ ಇನ್ನೂ ಎಷ್ಟೋ ಅಂದವಾದ ದೊಡ್ಡ ಅರಮನೆಗಳಿದ್ದುವು. ಆದರೆ, ಈ ಚಕ್ರ ನಗರವಾಗಲಿ, ಅರಮನೆಗಳಾಗಲಿ, ಮಸೀದಿಯಾಗಲಿ, ವೈದ್ಯಶಾಲೆಯಾಗಲಿ, ಯಾವುದೂ ಉಳಿದು ಬಂದಿಲ್ಲ.

ಈಗಿನ ಬಗ್‌ದಾದಿಗೆ ಮೂರು ಮೈಲಿ ದೂರದಲ್ಲಿ ಕಾಜ್ಮೈನ್ ಎಂಬ ಸಣ್ಣ ಊರು ಒಂದಿದೆ. ಇದು ಕುರಾಯಿಷರ ಗೋರಿಯ ಸ್ಥಳವಾಗಿತ್ತು. ಇಲ್ಲಿ ಇಮಾಮ್ ಮೂಸ ಮತ್ತು ಅವನ ಮೊಮ್ಮಗ ಇಮಾಮ್ ಮುಹಮ್ಮದ್ ಅಲ್‌ತಕಿಯವರ ಸಮಾಧಿ ಇದೆ. ಅನೇಕ ಸಲ ಹೊಸ ಹೊಸದಾಗಿ ಕಟ್ಟಿ ಬಂದ ಈ ಗೋರಿಗಳು ಈಗಲೂ ಇವೆ. ಇವಲ್ಲದೆ ಇಮಾಮ್ ಅಬೂಹನೀಫ್, ಯೂಸುಫ್ ಮತ್ತು ಸೂಫಿ ಸಾಧು ಶೇಖ್ ಅಬ್ದುಲ್ ಖಾದರ್ ಗಿಲಾನಿ—ಇವರ ಗೋರಿಗಳೂ ಇವೆ. ಮೊಹರ್ರಂ ವೀರನಾದ ಇಮಾಮ್ ಹುಸೇನಿನ ಗೋರಿ ಕರ್ಬಲದಲ್ಲಿದೆ. ಶಿಲ್ಪ ಚಾತುರ್ಯ ದೃಷ್ಟಿಯಿಂದ ಉತ್ತಮ ಕಟ್ಟಡವಾದ ನಾಲ್ಕನೆಯ ಕಲೀಫ ಅಲಿಯ ಗೋರಿ ನಜಫಿನಲ್ಲಿದೆ. ಪರ್ಷಿಯದಲ್ಲಿ ಗೋರಿಗಳ ಮೇಲಿನ ಕಟ್ಟಡಗಳು ಚೌಕನೆಯ ಅಥವಾ ನಿಡು ಚೌಕನೆಯ ಆಕಾರದಲ್ಲಿದ್ದು ದಿಂಡುಗೋಪುರಗಳನ್ನೂ ಬಟ್ಟಗುಮಟಗಳನ್ನೂ ಹೊತ್ತಿವೆ. ಒಳಗಡೆ ನುಣುಪು ಹೊಳಪು ಬಿಲ್ಲೆಗಳ ಹೊದಿಕೆ ಇದೆ. ಬಿಜನ್‌ಟೈನ್ ಗುಮಟಗಳಿಗೆ ಸೀಸ ಹೊದಿಸಿ ಅದರ ಮೇಲೆ ನುಣುಪು-ಹೊಳಪು ಬಿಲ್ಲೆಗಳನ್ನು ಹಚ್ಚುತ್ತಿದ್ದರು. ಈ ಬಿಲ್ಲೆಗಳು ಕಾಷಾನ್ ಎಂಬ ಊರಿನಲ್ಲಿ ಆಗುತ್ತಿದ್ದುದರಿಂದ ಇವಕ್ಕೆ 'ಕಾಷಿ' ಎಂದು ಹೆಸರಾಯಿತು. ಈ ಕಟ್ಟಡಗಳನ್ನೆಲ್ಲ ಕಟ್ಟಿದವರು ಬಹು ಪಾಲು ಇರಾನಿಗಳಾಗಿದ್ದುದರಿಂದ ಇವುಗಳ ಶೈಲಿ ಇರಾನಿ ಶೈಲಿ. ಕ್ರಿ.ಶ.೭೬೦ರಲ್ಲಿ ಕಟ್ಟಿದ ಇಸ್ಫಹಾನ್ ಮಸೀದಿ, ಲಿಯಸ್ ಮಗ ಅಮೀರನು ಕ್ರಿ.ಶ. ೧೦೬೫ರಲ್ಲಿ ಕಟ್ಟಿಸಿದ ಶಿರಾಜ್ ಮಸೀದಿ, ಹಜ್ಜಾಜ್ ಮಗ ಮುಹಮ್ಮದ್ ಕಟ್ಟಿಸಿದ ಕಜ್ವೀನ್ ಮಸೀದಿ ಮೊದಲಾದವು ಇರಾನಿನ ಈಗಲೂ ಉಳಿದು ಬಂದಿರುವ ಮಸೀದಿಗಳಲ್ಲಿ ಪ್ರಸಿದ್ಧವಾದುವು. ಇರಾನಿ ಮಸೀದಿಗಳ ಐವಾನ್ ಅಥವಾ ಮೊಗಸಾಲೆ

ಪ್ರಾಚೀನ ಸಸಾನಿಯನ್ ರೀತಿಯದಾಗಿದ್ದು, ಕಮಾನುಗಳು ಸಾಮಾನ್ಯವಾಗಿ ಇಟ್ಟಿಗೆಯಿಂದ ಕಟ್ಟುತ್ತಿದ್ದುವು. ಚಾವಣಿಯಿಂದ ಸುಣ್ಣಕಟ್ಟಡದ ನೇಲುಬುರುಡೆಗಳು (Stalactitic) ತೊಂಗುತ್ತಿದ್ದುವು. ಇವುಗಳಿಗೆ ಹೊದಸಿದ್ದ ಕನ್ನಡಿಗಳು ಗೋಡೆಗಳಿಗೂ ಕಮಾನುಗಳಿಗೂ ಹೊಳಪು ಬೀರುತ್ತಿದ್ದುವು. ಮಿಕ್ಕ ಕಡೆಯ ಮಸೀದಿಗಳಲ್ಲಿಯಂತೆಯೇ ಲಿಪಿರೇಖಾ ಚಿತ್ರಗಳೂ ಸಸ್ಯಚಿತ್ರಗಳೂ ನುಣುಪುಹೊಳಪು ಬಿಲ್ಲೆಗಳೂ ಮುಲಾಮ್ ಗುಮಟಗಳೂ ಇದ್ದುವು. ಕದಗಳಿಗೆ ದಂತದ ಕೆಲಸಮಾಡುತ್ತಿದ್ದರು.

ಕ್ರಿ.ಶ. ೧೨೩೪ರಲ್ಲಿ ಬಗ್‌ದಾದಿನಲ್ಲಿ ಮುಸ್ತನ್ ಸರಿಯಹ್ ವಿದ್ಯಾಶಾಲೆ ಕಟ್ಟಿತು. ಇದು ಹಲವು ಕೋಣೆಗಳನ್ನೂ ಕಮಾನುಗಳನ್ನೂ ಒಳಕೊಂಡು ಸುತ್ತಲೂ ಗೋಡೆಯಿಂದ ಸುತ್ತುವರಿದಿತ್ತು. ಈ ವಿದ್ಯಾಶಾಲೆಯ ಮಾದರಿಯಲ್ಲೇ ಸಾಮರ್‌ಖಂಡ್, ಬುಖಾರ ಮೊದಲಾದೆಡೆಗಳಲ್ಲಿಯೂ ಕಟ್ಟಡಗಳಾದುವು.

ಸೆಲ್‌ಜುಕಿಯರ ಮತ್ತು ಅವರ ಹಿಂದಿನ ಕಾಲದ ಕಟ್ಟಡಗಳಲ್ಲಿ ನಮಗೆ ಹೆಚ್ಚಾಗಿ ಏನೂ ಉಳಿದುಬಂದಿಲ್ಲವಾದ್ದರಿಂದ ಇರಾನಿ ಶಿಲ್ಪದ ಸರಿಯಾದ ಚರಿತ್ರೆ ಮಂಗೋಲಿಯನ್ ಕಾಲದಿಂದ ಆರಂಭವಾಗುತ್ತದೆ. ಸೆಲ್‌ಜುಕಿ ಆಳಿಕೆಗೆ ಕೊಂಚ ಹಿಂದೆ ಸುಮಾರು ಕ್ರಿ. ಶ. ೧೦೦೦ದಲ್ಲಿ ಕಟ್ಟಿದ ನಯಿನ್ ಮಸೀದಿ, ಮೂರನೆಯ ಸೆಲ್‌ಜುಕಿ ದೊರೆ ಮಲಿಕ್‌ಷಹ (ಕ್ರಿ.ಶ. ೧೦೭೨—೯೨) ಇಸ್ಫಹಾನಿನಲ್ಲಿ ಕಟ್ಟಿದ ಜುಮಾ ಮಸೀದಿ ಮೊದಲಾದುವು ಮೊಗಲ್‌ದಾಳಿಗೆ ಮೊದಲೇ ಕಟ್ಟಿದುವು.

**ಮೊಗಲ್ ಕಾಲದ ಪ್ರಸಿದ್ಧ ಕಟ್ಟಡಗಳು:** ಹೊಲಾಗುವಿನ ಮಗಳ ಗೋರಿ. ಇದು ಮರಾಗಹ್ ಎಂಬಲ್ಲಿ ಕ್ರಿ. ಶ. ೧೨೬೧ರಲ್ಲಿ ಕಟ್ಟಿದ್ದು. ಸುಲ್ತಾನಿಯದಲ್ಲಿ ಕ್ರಿ. ಶ. ೧೩೦೪ರಲ್ಲಿ ಕಟ್ಟಿದ 'ಖೊದಾ ಬಂದ' ಸಮಾಧಿಭವನ. ಇದು ೪ನೆಯ ಕಲೀಫ ಅಲಿಯ ಅವಶೇಷವನ್ನು ನಜಫಿನಿಂದಲೂ, ಅವನ ಮಗ ಹುಸೇನಿನ ಅವಶೇಷವನ್ನು ಕರ್ಬಾಲದಿಂದಲೂ ತಂದು ಸಮಾಧಿಮಾಡುವ ಉದ್ದೇಶದಿಂದ ಕಟ್ಟಿದ್ದು. ಆದರೆ, ಇದು ಪೂರೈಸುವುದರ ಒಳಗೆಯೇ ಕಟ್ಟಿಸುತ್ತಿದ್ದವನೇ ತೀರಿ

ಕೊಂಡದ್ದರಿಂದ ಅವನನ್ನೇ ಅಲ್ಲಿ ಹುಗಿದು ಗೋರಿಮಾಡಿತು. ಈ ಕಟ್ಟಡ ೮ ಮೂಲೆಯ ಆಕಾರವಾಗಿ, ಎರಡು ಮಿನಾರ್‌ಗಳಿಂದ ಕೂಡಿ, ೮೪ ಅಡಿ ವ್ಯಾಸದ ಗುಮಟವನ್ನು ಹೊತ್ತು ಇರಾನಿನ ಸಮಾಧಿಭವನಗಳೆಲ್ಲೆಲ್ಲ ಅತ್ಯಂತ ದೊಡ್ಡದೆಂದು ಹೆಸರುಪಡೆದಿದೆ. ಖುರಸಾನ್ ಪ್ರಾಂತದ ಮಷದ್ದನಲ್ಲಿಯು, ಷಿಯಾಪಂಗಡದ ೮ನೆಯ ಇಮಾಮ್ ರಜಾವಿನ ಗೋರಿ ಷಿಯಾಗಳಿಗೆ ಯಾತ್ರಾಸ್ಥಳವಾಗಿದೆ. ಇದನ್ನು ೭ನೆಯ ಅಬ್ಬಾಸಿ ಕಲೀಫ಼ ಮಾಮೂನನು ತನ್ನ ತಂದೆ ಹಾರೂನ್ ಅಲ್‌ರಷೀದನನ್ನು ಹುಗಿದ ಗೋರಿಯ ಮೇಲೆ ಕಟ್ಟಿಸಿದನು. ಆದರೆ, ರಜಾ ಇಮಾಮನನ್ನೂ ಅಲ್ಲಿಯೇ ಹುಗಿದದ್ದರಿಂದ ಅದಕ್ಕೆ ಅವನ ಹೆಸರೇ ಬಂತು. ಈಗ ಅದರ ಮೇಲೆ ಚಿನ್ನದ ಮುಲಾಮಿನ ಗುಮಟವಿದೆ. ಇದನ್ನು ಘಜ್ನಿ ಮಹಮೂದ್, ಸೆಲ್‌ಜುಕಿ ಮನೆತನದ ಸುಲ್ತಾನ್ ಸನ್‌ಜರ್ ಮೊದಲಾದವರು ಜೀರ್ಣೋದ್ಧಾರ ಮಾಡಿದರು. ಈಗಿನ ಸರ್ಕಾರವೂ ಇದನ್ನು ಜೀರ್ಣೋದ್ಧಾರಮಾಡಿ ಒಳ್ಳೆಯ ಸ್ಥಿತಿಯಲ್ಲಿಟ್ಟಿದೆ. ಮಷದ್ದಿನಲ್ಲಿ ಪ್ರಸಿದ್ಧವಾದ ಮತ್ತೊಂದು ಮಸೀದಿಯೂ ಇದೆ. ಇದು ತೈಮೂರ್‌ಲೇನಿನ ಮಗ ಷಹರುಖ್‌ನ ಹೆಂಡತಿ ಗೌಹರ್‌ಷಾದ್ ರಾಣಿಯ ಹೆಸರಿನ ಮಸೀದಿ. ಮೊಗಲ್ ಕಾಲದಲ್ಲಿ ಕಟ್ಟಿದ ಕಟ್ಟಡಗಳಲ್ಲಿ ಇದು ಉತ್ತಮೋತ್ತಮವಾದೆಂದು ಪರಿಗಣಿತವಾಗಿದೆ. ನಾಲ್ಕು ದೊಡ್ಡ ಕಮಾನುಗಳೂ, ದೊಡ್ಡ ಅಂಗಣವೂ, ಗುಮಟಗಳೂ ಇವೆ. ವರಾಮಿನ್ ಮಸೀದಿ (ಕ್ರಿ.ಶ. ೧೩೨೨), ವಿಶಾಲ್‌ಬುಸ್ತಾರ್ ಕವಾಮುದ್ದೀನ್ ಮಸೀದಿ (ಕ್ರಿ.ಶ. ೧೩೨೯), ಸಾಮರ್‌ಖಂಡಿನ ಬೀಬಿಖಾನುಮ್ ಮಸೀದಿ (ಕ್ರಿ.ಶ. ೧೩೯೯), ತಬ್ರೀಜಿನ ನೀಲಿ ಮಸೀದಿ (ಕ್ರಿ.ಶ. ೧೪೬೫) ಮೊದಲಾದುವು ಈಕಾಲದ ಇತರ ಕಟ್ಟಡಗಳು.

ಇರಾನಿ ಮುಸ್ಲಿಂ ವಾಸ್ತುಶಿಲ್ಪ ಸಫವಿಯರ ಆಳಿಕೆಯಲ್ಲಿ ತನ್ನ ಮೇಲ್ಮೆಯನ್ನು ಮುಟ್ಟಿತು. ಇಸ್ಫಹಾನಿನ 'ಮೈದಾನ್-ಇ-ಷಹ' ಅಥವಾ ರಾಜಾಂಗಣದ ಸುತ್ತಲೂ ಸಫವಿಯರ ಅತ್ಯುತ್ತಮ ಕಟ್ಟಡಗಳು ಕಟ್ಟಿದುವು. ಈ ಮೈದಾನ ಪೋಲೋ (ಕುದುರೆ ಚೆಂಡಾಟದ) ಅಂಗಣವಾಗಿತ್ತು. ಇದನ್ನು ಸುತ್ತುವರಿದು ಮಸೀದಿಗಳೂ, ಇತರ

ಕಟ್ಟಡಗಳೂ ಇವೆ. ಷಹ ಅಬ್ಬಾಸ್ (ಕ್ರಿ.ಶ. ೧೫೮೭–೧೬೨೮) ಕಟ್ಟಿದ ರಾಜ ಮಸೀದಿಗೆ ಒಂದು ಸುಂದರವಾದ ಮಹಾದ್ವಾರವೂ, ನಾಲ್ಕು ಐವನ್ (ಕೈಸಾಲೆ) ಗಳೂ ಇದ್ದು ಒಳಗಿನ ಅಂಗಣದ ನೆಲಕ್ಕೆ ಅಮೃತ ಶಿಲೆ ಹಾಸಿದೆ. ಮಧ್ಯದಲ್ಲಿ ಒಂದು ಕೊಳವೂ ಸುತ್ತಲೂ ಕಮಾನು ದಾರಿಯೂ ಇವೆ. ಹಿಂದುಗಡೆ ಗುಮಟಗಳನ್ನೂ ಮಿನಾರುಗಳನ್ನೂ ಹೊತ್ತ ಪ್ರಾರ್ಥನಾಲಯವಿದೆ. ಅಲ್ಲದೆ ಇತರ ಅಂಗಣಗಳೂ ಇವೆ. ಷಹಹುಸೇನ್ (ಕ್ರಿ.ಶ. ೧೭೦೦—೧೭೧೦) ಕಟ್ಟಿಸಿದ ಎರಡು ಅಂತಸ್ತಿನ ವಿದ್ಯಾಪೀಠವೂ ಈ ಮಸೀದಿಯ ಹತ್ತಿರ ಇದೆ. 'ಅಲಿ ಕಾಪಿ' ಎಂಬ ಮರಗಂಬಸಾಲಿನ ದೊಡ್ಡ ಭವನ ಪೋಲೊ ಮೈದಾನಕ್ಕೆ ಎದಿರುನೋಟ ವಾಗಿದೆ. ಅದರ ಸಭಾಮಂಟಪದಲ್ಲಿ ದೊರೆ ಯುಗಾದಿ ದಿವಸ ಸಿಂಹಾ ಸನವೇರಿ ಕುಳಿತು ಕುದುರೆ ಜೂಜು, ಮೃಗಗಳ ಕಾಳಗ, ಸೈನ್ಯಕ್ರೀಡೆ– ಮೊದಲಾದ ನೋಟಗಳನ್ನು ನೋಡುತ್ತಿದ್ದನು. ಪ್ರಜೆಗಳು ಕೆಳಗೆ ನಿಂತು ರಾಜದರ್ಶನ ಪಡೆಯುತ್ತಿದ್ದರು. ಈ ರಾಜಮಸೀದಿಗೆ ಪಕ್ಕ ದಲ್ಲಿಯೇ 'ಚೆಹೆಲ್‌ಸಿತೂನ್' ಎಂಬ ಮಂದಿರವಿದೆ. ಅದರ ಗೋಡೆಯಲ್ಲಿ ಕನ್ನಡಿಗಳಿಟ್ಟಿದ್ದುವು. ಒಳಭಾಗದಲ್ಲಿ ರಾಜನ ಯುದ್ಧ, ಕ್ರೀಡೋತ್ಸವ ಪಾನೋತ್ಸವ, ಸಂಗೀತ ನರ್ತನೋತ್ಸವ—ಮೊದಲಾದುವು ಚಿತ್ರಿಸಿ ದ್ದುವು. ಈ ಕಟ್ಟಡ ಒಮ್ಮೆ ಸುಟ್ಟುಹೋಗಿ, ಷಾಹುಸೇನನಿಂದ ಮರಳಿ ಎದ್ದಿತು. ಈ ಚೆಹೆಲ್‌ಸಿತೂನ್ ಅರಮನೆಯಿಂದ 'ಚಹಾರ್‌ಬಾಗ್' ಎಂಬ ತೋಟ ಒಂದು ಸ್ಥಾಯೆಂದಹ್ ನದಿಗೆ ಅಡ್ಡ ಹಾಕಿರುವ ಅಲ್ಲಾ ವಿರ್ದಿಖಾನ್ ಸೇತುವೆಗೆ ಪ್ರವೇಶ ಕೊಡುತ್ತದೆ. ೩೮೮ ಗಜ ಉದ್ದ ವಿರುವ ಈ ಸೇತುವೆ ವಿಶ್ವದ ದೊಡ್ಡ ಸೇತುವೆಗಳಲ್ಲಿ ಒಂದಾಗಿ ಎಣಿಕೆಯಾಗಿದೆ. ಈ ಕಟ್ಟಡಗಳೇ ಅಲ್ಲದೆ ಸಫವಿ ದೊರೆಗಳು ಹಲವು ಸರಾಯ್ ಅಥವಾ ಮುಸಾಫಿರ್‌ಖಾನೆಗಳನ್ನೂ ಸೇತುವೆಗಳನ್ನೂ ಮದ್ರಸಗಳನ್ನೂ ವೈದ್ಯಶಾಲೆಗಳನ್ನೂ ನೆಲದಡಿಕಾಲುವೆಗಳನ್ನೂ ಕಟ್ಟಿ ಸಿದರು.

ಸಫವಿದ್ ಆಳಿಕೆ ಕೊನೆಗೊಂಡಮೇಲೆ ಇರಾನಿನಲ್ಲಿ ವಾಸ್ತುಶಿಲ್ಪ ಮತ್ತು ಕಲೆಗಳು ಕ್ಷೀಣಿಸಿದುವು. ಈಗಿನ ಇರಾನಿನ ವಾಸ್ತುಶಿಲ್ಪದ

ರೀತಿ ನವೀನ ಯೂರೋಪ್ ಪದ್ಧತಿಯು ಮತ್ತು ಪುರಾತನ ಇರಾನ್ ಪದ್ಧತಿಯು ಹೊಂದಿಕೆಯಾಗಿದೆ.

**ಯೂರೋಪಿನ ತುರ್ಕಿ ಮತ್ತು ಏಷ್ಯಾ ಮೈನರ್:** ಈ ದೇಶಗಳ ಮುಸ್ಲಿಂ ವಾಸ್ತುಶಿಲ್ಪವನ್ನು ಸೆಲ್‌ಜುಕಿಯರ ಕಾಲ, ಆಟೋಮನ್ನರ ಕಾಲ, ಈಗಿನ ಕಾಲ ಎಂದು ಮೂರಾಗಿ ವಿಭಾಗಿಸಬಹುದು. ಮಂಗೋಲರು ಮಧ್ಯ ಏಷ್ಯ, ಇರಾನ್, ಮೊದಲಾದುವನ್ನು ದೂಳೆಬ್ಬಿಸಿದಾಗ ಜೀವದಿಂದ ಬದುಕಿಕೊಂಡ ಇರಾನರು ಏಷ್ಯಾಮೈನರ್, ಈಜಿಪ್ಟ್, ಇಂಡಿಯ ಮೊದಲಾದ ದೇಶಗಳಿಗೆ ಓಡಿಹೋಗಿ ನೆಲಸಿದರು. ಇವರಲ್ಲಿ ಅನೇಕರು ಶಿಲ್ಪಿಗಳೂ, ಕಾರೇಗಾರರೂ ಇದ್ದರು. ಈ ಕಾರಣದಿಂದ ಏಷ್ಯಾಮೈನರ್ ಮತ್ತು ಇಂಡಿಯದ ೧೪-೧೫ನೆಯ ಶತಮಾನಗಳ ವಾಸ್ತುಶಿಲ್ಪದ ಮೇಲೆ ಸಿರಿಯನ್-ಇರಾನಿಯನ್ ಪದ್ಧತಿಯ ಪ್ರಭಾವ ಬಹುವಾಗಿ ಕಂಡುಬರುತ್ತದೆ. ತುರ್ಕಿಯಲ್ಲಿ ಈ ಸಿರಿಯನ್-ಇರಾನಿಯನ್ ಪದ್ಧತಿ ಕ್ರಮೇಣ ರೋಮನ್ ಪ್ರಭಾವಕ್ಕೆ ಸಿಕ್ಕಿ ಮಾರ್ಪಟ್ಟಿತು. ಕೂನಿಯದಲ್ಲಿ ಸೆಲ್‌ಜುಕಿ ದೊರೆಗಳು ಅನೇಕ ಮಸೀದಿಗಳನ್ನೂ, ಅರಮನೆಗಳನ್ನೂ, ವಿದ್ಯಾಶಾಲೆಗಳನ್ನೂ ಕಟ್ಟಿಸಿದರು. ಈ ಕಟ್ಟಡಗಳ ಕಂಬಸಾಲು, ಪ್ರಾರ್ಥನಾಗೃಹ, ಸುಣ್ಣ ಕಟ್ಟಡದ ನೇಲ್‌ಬುರುಡೆ, ನುಣುಪು ಹೊಳಪುಬಿಲ್ಲೆ ಮೊದಲಾದುವುಗಳಲ್ಲೆಲ್ಲ ಸಿರಿಯನ್ ಇರಾನಿ ಪ್ರಭಾವವೇ ಕಂಡುಬರುತ್ತದೆ.

ಹೀಗೆ, ಮಸೀದಿ ವಿದ್ಯಾಶಾಲೆ ಅರಮನೆಗಳಲ್ಲಿ ಇರಾನಿ ಪ್ರಭಾವವೂ, ಗೋರಿಗಳು ಮತ್ತು ಇತರ ಪವಿತ್ರ ಕಟ್ಟಡಗಳಲ್ಲಿ ಇರಾನಿ-ಅರ್ಮೀನಿಯನ್ ಪ್ರಭಾವವೂ, ಸಾರಯ್ ಅಥವಾ ಮುಸಾಫಿರ್‌ಖಾನೆಗಳಲ್ಲಿ ಬಿಜನ್‌ಟೈನ್ ಪ್ರಭಾವವೂ, ಕಾಣಬರುತ್ತವೆ. ಕಾನ್‌ಸ್ಟಾಂಟಿನೋಪಲ್ಲಿನ ಕಟ್ಟಡಗಳಲ್ಲಿ ಮೊದಮೊದಲು ಇರಾನಿ ಪ್ರಭಾವವೇ ಕಂಡುಬಂದು, ೧೫ನೆಯ ಶತಮಾನದಿಂದ ಈಚೆಗೆ ಅದರ ಮೇಲೆ ಬಿಜನ್‌ಟೈನ್‌ಪ್ರಭಾವ ಬಿದ್ದು, ೧೮ನೆಯ ಶತಮಾನದಿಂದ ಪ್ರಾಶ್ಚಾತ್ಯಪ್ರಭಾವ ಕಾಣುತ್ತದೆ.

ಕಾನ್‌ಸ್ಟಾಂಟಿನೋಪಲ್ಲನ್ನು ಗೆದ್ದ ಸುಲ್ತಾನ್ ಮಹಮ್ಮದನು (ಕ್ರಿ.ಶ. ೧೪೫೩-೭೬) ಕಟ್ಟಿಸಿದ ಆಯ್ಯೂಬ್‌ಮಸೀದಿ,—(ತುರ್ಕಿಯ

ಸುಲ್ತಾನರು ಸಿಂಹಾಸನ ಹತ್ತುವುದಕ್ಕೆ ಮೊದಲು ಅವರಿಗೆ ಈ ಮಸೀದಿಯಲ್ಲಿ ಖಡ್ಗ ಸಂಸ್ಕಾರ ನಡೆಯುತ್ತದೆ),—ಸೆರಾಗ್ಲಿಯೊ ಅರಮನೆ, ಮಹಮ್ಮದ್ ಮಸೀದಿಗಳೂ; ಸುಲ್ತಾನ್ ಸುಲೇಮಾನ್ ಕಟ್ಟಿಸಿದ ಬಾಯಸೀದ್, ಸೆಲೀಮಿಯ, ಸುಲೇಮಾನಿಯ, ರುಸ್ತುಂಪಾಷ, ಮಿಹ್‌ರಾನಿಯ್ಯ, ಇನ್‌ಕೆಲೆಸ್ಸಿ, ಬುಯೂಕ್, ಆಯಸ್ಮ, ಜಿಹಾಂಗೀರ್—ಮೊದಲಾದ ಮಸೀದಿಗಳೂ, ಕಾನ್‌ಸ್ಟಾಂಟಿನೋಪಲ್ಲಿನ ಕೆಲವು ಪ್ರಸಿದ್ಧ ಕಟ್ಟಡಗಳು. ಬಾಯಸೀದ್ ಮಸೀದಿಯ ಗುಮಟ ೧೦೮ ಅಡಿ ವ್ಯಾಸ ಉಳ್ಳದ್ದು. ನಾಲ್ಕು ಮಿನಾರುಗಳಿಂದ ಕೂಡಿ, ಕೈಸಾಲೆಯಿಂದ ಸುತ್ತುವರಿದು ನುಣುಪು ಹೊಳಪು ಬಿಲ್ಲೆಗಳಿಂದ ಅಲಂಕೃತವಾಗಿರುವ ಸುಲೇಮಾನಿಯ ಮಸೀದಿ ದೊಡ್ಡಕಮಾನುಗಳಮೇಲೆ ೮೬ ಅಡಿ ವ್ಯಾಸವೂ ೧೫೬ ಅಡಿ ಎತ್ತರವೂ ಇರುವ ಗುಮಟವನ್ನು ಹೊತ್ತಿದೆ. ಕ್ರಿ.ಶ. ೧೬೦೯ರಲ್ಲಿ ಕಟ್ಟಿದ ಹಲವು ಗುಮಟಗಳನ್ನು ಹೊತ್ತ ಅಹ್‌ಮದೀಯ ಮಸೀದಿ ಅತ್ಯಂತ ದೊಡ್ಡದು.

**ಚೀನ ಮತ್ತು ಮಲೆಯ ದ್ವೀಪಸ್ತೋಮಗಳಲ್ಲಿ ಮುಸ್ಲಿಂ ವಾಸ್ತುಶಿಲ್ಪ:** ಉಡಿಗೆತೊಡಿಗೆ ನಡೆನುಡಿಗಳಲ್ಲಿಯಂತೆಯೇ ಶಿಲ್ಪದಲ್ಲಿಯೂ ಈ ದೇಶಗಳಲ್ಲಿ ದೇಶೀಯರಿಗೂ ಮುಸ್ಲಿಮರಿಗೂ ವ್ಯತ್ಯಾಸವೇನೂ ಕಂಡುಬರುವುದಿಲ್ಲ. ವಿಗ್ರಹವೊಂದನ್ನು ಬಿಟ್ಟರೆ ಮಸೀದಿಗಳಿಗೂ ಇತರ ದೇವಾಲಯಗಳಿಗೂ ವ್ಯತ್ಯಾಸವೇನೂ ಇಲ್ಲ. ಚೀನದ ಗಡಿನಾಡಿನಲ್ಲಿರುವ ಚೀನಾ ತುರ್ಕೀಸ್ಥಾನ ಮತ್ತು ಮಧ್ಯ ಏಷ್ಯದ ಕೆಲವು ಪ್ರಾಂತಗಳಲ್ಲಿ ಮುಸ್ಲಿಂ ಪ್ರಭಾವ ಕೊಂಚ ಕಂಡುಬರುತ್ತದೆ. ತ್ಸಿಯೂಅನ್‌ಶ್ಸಚೆನ್ ಮಸೀದಿ (ಕ್ರಿ.ಶ. ೧೦೦೯) ಕಾನ್‌ಟನ್‌ಮಸೀದಿ ಮೊದಲಾದುವು ಮುಸ್ಲಿಂ ರೀತಿಯಲ್ಲಿವೆ. ಆದರೆ, ಚೀನದ ಒಳನಾಡಿನಲ್ಲಾಗಲಿ, ಜಾವ ಮೊದಲಾದೆಡೆಯಲ್ಲಾಗಲಿ, ಮಸೀದಿಗಳಲ್ಲಿ ಮುಸ್ಲಿಂ ಕುರುಹು ಯಾವುದೂ ತೋರುವುದಿಲ್ಲ.

**ಇಂಡಿಯದಲ್ಲಿ ಮುಸ್ಲಿಂ ವಾಸ್ತುಶಿಲ್ಪ:** ಇಂಡಿಯದ ಮುಸ್ಲಿಂ ವಾಸ್ತುಶಿಲ್ಪ ಸ್ಥೂಲಮಾದರಿಯಲ್ಲಿ ಸಿರಿಯನ್, ಬಿಜ಼ನ್‌ಟೈನ್, ಈಜಿಪ್ಷಿಯನ್ ಮತ್ತು ಇರಾನಿಯನ್ ಪದ್ಧತಿಗಳ ಹೊಂದಿಕೆಯದೂ ಸೂಕ್ಷ್ಮ

ವಿವರಗಳಲ್ಲಿ ಹಿಂದೂ ರೀತಿಯದೂ ಆಗಿದೆ. ಡೆಹಲಿ ಚಕ್ರವರ್ತಿಗಳೂ, ಬಂಗಾಳ, ಗುಜರಾತ್ ಮಾಳವ, ದಖನ್ ಮೊದಲಾದ ಅರಸರೂ ಘನ ಶ್ರೀಮಂತರೂ, ಕಟ್ಟಡಗಳನ್ನು ಕಟ್ಟಿಸಿದ್ದಾರೆ. ಮುಖ್ಯ ಶಿಲ್ಪಿಗಳು ಇರಾನ್ ತುರ್ಕಿ ಮತ್ತು ಇಂಡಿಯದವರಾಗಿರುತ್ತಿದ್ದರು. ಅಪುರೂಪವಾಗಿ ಮೊಗಲ್ ಚಕ್ರವರ್ತಿಗಳು ಯೂರೋಪ್ ಶಿಲ್ಪಿಗಳನ್ನೂ ನೇಮಿಸಿಕೊಳ್ಳುತ್ತಿದ್ದರು. ಕಾರೆಗಾರರೆಲ್ಲರೂ ಸಾಮಾನ್ಯವಾಗಿ ಇಂಡಿಯದವರೇ ಆಗಿರುತ್ತಿದ್ದರು. ಚಿತ್ರಕಾರರು ಇರಾನ್, ಅಫ್ಘಾನಿಸ್ತಾನ ಮತ್ತು ಇಂಡಿಯದವರು. ಮುಸ್ಲಿಂ ಕಟ್ಟಡಗಳಲ್ಲಿ ಮಸೀದಿಗಳು, ಗೋರಿಗಳು, ಅರಮನೆಗಳು, ಕೋಟೆಗಳು, ಸತ್ರಗಳು, ಸೇತುವೆಗಳು—ಮೊದಲಾದುವು ಇವೆ.

ಮುಸ್ಲಿಮರ ಮೊದಲ ಕಟ್ಟಡಗಳಲ್ಲಿ ಒಂದಾದ ಡೆಲ್ಲಿಯ ಕುತುಬ್ ಮಿನಾರ್ ಕಟ್ಟಡ ಸೂಫಿ ಸಾಧು ಕುತುಬುದ್ದೀನನ ನೆನಪಿಗಾಗಿ ಅವನ ಸಮಾಧಿಯ ಮೇಲೆ ಕಟ್ಟಿದ್ದು. ಇದನ್ನು ಕಟ್ಟಿಸಿದವನು ಡೆಲ್ಲಿಯ ಮೊದಲನೆಯ ಚಕ್ರವರ್ತಿ ಕುತುಬುದ್ದೀನ್ ಐಬಕ್. ಇವನು ೯೫ ಅಡಿ ಎತ್ತರದ ಕೆಳ ಅಂತಸ್ತನ್ನು ಕಟ್ಟಿಸಿದನು. ಇವನ ತರುವಾಯ ಬಂದ ಇಲ್‌ತಮಿಷ್ ೫೧ ಅಡಿ ಎತ್ತರದ ಎರಡನೆಯ, ೪೧ ಅಡಿ ಎತ್ತರದ ಮೂರನೆಯ, ಮತ್ತು ೨೬ ಅಡಿ ಎತ್ತರದ ನಾಲ್ಕನೆಯ ಅಂತಸ್ತುಗಳನ್ನು ಕಟ್ಟಿಸಿದನು. ೨೫ ಅಡಿ ಎತ್ತರದ ಐದನೆಯ ಅಂತಸ್ತು ಇದೆ. ಈ ಮಿನಾರಿನ ಒಟ್ಟು ಎತ್ತರ ೨೩೮ ಅಡಿ. ಕೆಳ ಅಂತಸ್ತಿನಲ್ಲಿ ಕುತುಬುದ್ದೀನ್ ಐಬಕಿನ ಶಾಸನವೂ, ೨–೩ನೆಯವುಗಳಲ್ಲಿ ಇಲ್‌ತಮಿಷ್ ದೊರೆಯ ಹೆಸರೂ ಕೆತ್ತಿವೆ. ಈ ಮಿನಾರನ್ನು ಫಿರೂಸ್‌ಷಹ ತುಘ್‌ಲಕ್ ಒಮ್ಮೆ ಜೀರ್ಣೋದ್ಧಾರಮಾಡಿ, ಮುಡಿ ಅಂತಸ್ತನ್ನು ಕಟ್ಟಿಸಿದನು. ಸಿಕಂದರ್ ಷಹಲೋದಿಯೂ ಬ್ರಿಟಿಷ್ ಸರ್ಕಾರದವರೂ ಇವನ್ನು ಮತ್ತೆ ಜೀರ್ಣೋದ್ಧಾರಮಾಡಿದ್ದಾರೆ. ೩೭೫ ಮೆಟ್ಟಲುಗಳಿರುವ ಈ ಮಿನಾರಿನ ಮೊದಲನೆಯ ಮೂರು ಅಂತಸ್ತುಗಳನ್ನು ಕೆಂಗಲ್ಲಿಂದ ಕಟ್ಟಿದೆ. ಮೇಲಿನ ಅಂತಸ್ತುಗಳನ್ನು ಕೆಂಪುಮರಳುಗಲ್ಲಿಂದ ಕಟ್ಟಿ ಅಮೃತಶಿಲೆಹೊದಿಸಿದೆ.

ಕುತುಬುದ್ದೀನನು ಈ ಮಿನಾರಿಗೆ ಹತ್ತಿರದಲ್ಲೇ ಕುವತ್-ಉಲ್-ಇಸ್ಲಾಂ (ಇಸ್ಲಾಮಿನ ಶಕ್ತಿ) ಎಂಬ ಮಸೀದಿಯನ್ನೂ ಕಟ್ಟಿಸಿದನು.

ಇದರ ಕಂಬಗಳೂ ಕಟ್ಟಡದ ಇತರ ಭಾಗಗಳೂ, ಹಿಂದೂ ದೇವಾಲಯಗಳನ್ನು ಕೆಡವಿ ತಂದವು. ಇದರ ಪಕ್ಕದಲ್ಲಿಯೇ ಒಂದು ಹಿಂದೂ ದೇವಾಲಯವೂ ಇದೆ. ಇಲ್‌ತಮಿಷ್ ಮತ್ತು ಅಲ್ಲಾವುದ್ದೀನ್ ಖಿಲ್ಜಿ ಈ ಮಸೀದಿಗೆ ಹೊಸ ಕಟ್ಟಡಗಳನ್ನು ಸೇರಿಸಿ ವಿಸ್ತರಿಸಿದರು. ಕುತುಬುದ್ದೀನ್ ಐಬಕ್ ಅಜ್‌ಮೀರಿನಲ್ಲಿಯೂ ಒಂದು ಮಸೀದಿಯನ್ನು ಕಟ್ಟಿಸಿದನು. ಇದು ಡೆಲ್ಲಿ ಮಸೀದಿಯ ಮಾದರಿಯಲ್ಲೇ ಆದರೆ ಅದಕ್ಕಿಂತ ದೊಡ್ಡದಾಗಿ ಇದೆ. ಇದರ ಕಟ್ಟಡಭಾಗಗಳೂ ಹಿಂದೂ ದೇವಾಲಯವನ್ನು ಕೆಡವಿ ತಂದವೇ. ಇಲ್‌ತಮುಷ್ ಇದನ್ನೂ ಜೀರ್ಣೋದ್ಧಾರ ಮಾಡಿ ಮತ್ತೆ ಕಟ್ಟಿಸಿದನು.

ಇಲ್‌ತಮಿಷ್ಷಿನ ತರುವಾಯ ಬಂದವರು ಅಷ್ಟೇನೂ ಹೆಸರಾದ ಕಟ್ಟಡಗಳನ್ನು ಬಿಟ್ಟುಹೋಗಿಲ್ಲ. ಬಲ್‌ಬನ್ನಿನ ಗೋರಿಯೇ ಇವರ ಕಟ್ಟಡಗಳಲ್ಲಿ ಮುಖ್ಯವಾದದ್ದು. ಅಲ್ಲಾವುದ್ದೀನ್ ಖಿಲ್ಜಿ ಡೆಲ್ಲಿ ಮಸೀದಿಗೆ ಮಹಾದ್ವಾರವನ್ನು ಕಟ್ಟಿಸಿದ್ದಲ್ಲದೆ, ಜಮಾತ್‌ಖಾನ ಎಂಬ ಮಸೀದಿಯನ್ನೂ ಕಟ್ಟಿಸಿದನು. ಇದಕ್ಕೆ ಸಾಮಾನುಗಳನ್ನು ದೇವಾಲಯಗಳನ್ನು ಕೆಡವಿ ತರದೆ, ಅದಕ್ಕಾಗಿಯೇ ಮುಸ್ಲಿಂ ಶಿಲ್ಪರೀತಿಗೆ ಅನುಸಾರವಾಗಿ ಮಾಡಿಸಿದನು. ಇಕ್ಕೆಲದಲ್ಲಿಯೂ ನಿಡುಹಜಾರವೂ ನಡುವೆ ಚೌಕನೆಯ ಹಜಾರವೂ ಮೇಲುಗಡೆ ಕಮಾನುಗಳೂ ಗುಮಟವೂ ಉಳ್ಳ ಈ ಮಸೀದಿ ಕೆಂಗಲ್ಲಿನಿಂದ ಕಟ್ಟಿದೆ. ಇದನ್ನು ತುಘಲಕ್ ದೊರೆಗಳೂ, ಅಕ್ಬರನೂ ಜೀರ್ಣೋದ್ಧಾರ ಮಾಡಿದ್ದಾರೆ. ಖಿಲ್ಜಿಕಾಲದ ಕಟ್ಟಡಗಳು ಸುಪ್ರಮಾಣ, ಸಮಸೂತ್ರತೆಗಳಿಗೆ ಹೆಸರಾಗಿವೆ. ತುಘಲಕ್ ಅರಸರ ಕಟ್ಟಡಗಳು ಸರಳರೀತಿಯವೂ ಬೃಹದಾಕಾರದವೂ ಆಗಿವೆ. ಗಯಾಸುದ್ದೀನ್ ತುಘಲಕ್ಕಿನ ಗೋರಿಯ ಮೇಲಿನ ಕಟ್ಟಡ ೭೦ ಅಡಿ ಎತ್ತರವಿದ್ದು ದೊಡ್ಡ ಗುಮಟ ಹೊತ್ತಿದೆ. ಈ ಮನೆತನದ ಫಿರೂಸ್‌ಷಾ ಹಲವು ಅರಮನೆ, ಕೋಟೆ, ಮಸೀದಿ, ಗೋರಿ, ಮುಸಾಫಿರ್‌ಖಾನೆಗಳನ್ನು ಕಟ್ಟಿಸಿದನು. ಕಟ್ಟಡಗಳಿಗೆ ಅಮೃತಶಿಲೆ ಕೆಂಗಲ್ಲುಗಳಿಗೆ ಬದಲಾಗಿ ಕಲ್ಲು ಜಲ್ಲಿ ಮತ್ತು ಗಾರೆಯನ್ನು ಉಪಯೋಗಿಸಿದೆ. ಫಿರೂಸ್‌ಷಾ ತನಗಾಗಿಯೇ ಒಂದು ಗೋರಿಯನ್ನೂ ಕಟ್ಟಿಸಿಕೊಂಡಿದ್ದನು. ಇವನ

ಮಗನು ಖಾನ್‌ಜಿಹಾನ್ ತಿಲನ್‌ಗನಿಯ ಗೋರಿಯನ್ನೂ, ಅದರೆಡೆಯ ಮಸೀದಿಯನ್ನೂ ಕಟ್ಟಿಸಿದನು. ನಿಜಾಮುದ್ದೀನ್ ಸಮಾಧಿಭವನ ಎಂಟು ಮೂಲೆಯ ಆಕಾರದಲ್ಲಿದ್ದು, ಕೈಸಾಲೆಯಿಂದ ಸುತ್ತುವರಿದು ಗಿಡ್ಡ ಕಮಾನು ಸಾಲಿನಿಂದ ಕೂಡಿ ಗುಮಟವನ್ನು ಹೊತ್ತಿದೆ. ಇದು ಜೆರುಸಲೆಮ್ಮಿನ ಮಸೀದಿಯನ್ನು ಹೋಲುತ್ತದೆ. ಸಯ್ಯದ್ ಮತ್ತು ಅಫ್ಘಾನ್ ಸಂತತಿಯ ದೊರೆಗಳಿಗೆ ಗೋರಿಗಳನ್ನು ಕಟ್ಟಿಸಲು ಇದೇ ಮಾದರಿಯಾಯಿತು. ಲಾಲ್‌ಗುಂಬದ್ ಎಂದು ಪ್ರಸಿದ್ಧವಾಗಿರುವ ಕಬೀರುದ್ದೀನ್ ಸಮಾಧಿ, ಎರಡು ಗುಮ್ಮಟದ ಸಿಕಂದರ್ ಲೋದಿ ಸಮಾಧಿ, ಛೋಟೆಗುಂಬದ್, ಶಿಷ್‌ಗುಂಬದ್, ಮೊದಲಾದವು ತುಘಲಕ್, ಲೋದಿ, ಮತ್ತು ಸಯ್ಯದ್ ಸಂತತಿಗಳ ಕಾಲದ ಕೆಲವು ಪ್ರಸಿದ್ಧ ಕಟ್ಟಡಗಳು.

ತುಘಲಕ್ ಸಂತತಿ ಕೊನೆಗೊಂಡ ಮೇಲೆ ದೆಹಲಿ ಸಾಮ್ರಾಜ್ಯ ಒಡೆದು ಅನೇಕ ರಾಜ್ಯಗಳಾದುವು. ಇವುಗಳಲ್ಲಿ ಬಂಗಾಳ (ಕ್ರಿ.ಶ. ೧೩೩೮-೧೫೭೬), ಮಾಳವ (ಕ್ರಿ.ಶ. ೧೪೦೧-೧೫೩೧), ಕಾಶ್ಮೀರ (ಕ್ರಿ.ಶ. ೧೩೪೬-೧೫೮೯), ಸಿಂಧ್ (ಕ್ರಿ.ಶ. ೧೩೩೬-೧೫೯೨), ಜೌನ್‌ಪೂರ್ (ಕ್ರಿ.ಶ. ೧೩೯೪-೧೪೭೯), ಗುಜರಾತ್ (ಕ್ರಿ. ಶ. ೧೩೯೬-೧೫೭೨), ದಖನ್ನಿನ ಬಹಮನೀರಾಜ್ಯ (ಕ್ರಿ.ಶ. ೧೩೪೭-೧೫೨೭), ಮತ್ತೆ ಈ ಬಹಮನೀರಾಜ್ಯ ಒಡೆದು ಆದ ಬಿಜಾಪುರ್ (ಕ್ರಿ.ಶ. ೧೪೯೦-೧೬೮೬), ಗೋಲ್ಕೊಂಡ (ಕ್ರಿ.ಶ. ೧೫೧೨-೧೬೮೭), ಬಿದರೆ (ಕ್ರಿ.ಶ. ೧೪೯೨-೧೬೦೯), ಅಹಮದ್ ನಗರ್ (ಕ್ರಿ.ಶ. ೧೪೯೦-೧೬೩೦), ಬೀರಾರ್ (ಕ್ರಿ.ಶ. ೧೪೯೦-೧೫೭೪) —ಇವುಗಳು ಮುಖ್ಯವಾದುವು. ಈ ಪ್ರತಿಯೊಂದು ಸಂಸ್ಥಾನವೂ ಹಲವು ಉತ್ತಮ ಕಟ್ಟಡಗಳನ್ನು ಬಿಟ್ಟು ಹೋಗಿವೆ.

**ಜೌನ್‌ಪುರ್ :** ಫಿರೂಜ್‌ಷಾ ತುಘಲಕ್ ನಿರ್ಮಿಸಿದ ಈ ಪಟ್ಟಣ ಮುಂದೆ ಒಂದು ಸ್ವತಂತ್ರ ಮನೆತನದ ರಾಜ್ಯಕೇಂದ್ರವಾಗಿ ಪರಿಣಮಿಸಿತು. ಇದರ ಪ್ರಸಿದ್ಧ ಕಟ್ಟಡಗಳನ್ನೆಲ್ಲ ಸಿಕಂದರ್ ಲೋದಿ ಉರುಳಿಸಿ ಕೆಡವಿದನು. ಈಗ ಉಳಿದಿರುವುದು ಅತಲ ಮಸೀದಿ. ಇದನ್ನು ಹಿಂದೆ ಅತಲದೇವಿ ದೇವಸ್ಥಾನವಿದ್ದೆಡೆಯಲ್ಲಿ ಕಟ್ಟಿದೆ. ಆ ದೇವಸ್ಥಾನವನ್ನು ಕೆಡವಿ ಆ ಸಾಮಾನುಗಳಿಂದಲೇ ಕ್ರಿ.ಶ. ೧೩೭೭ರಲ್ಲಿ ಕಾಮಿಲ್ ಖಾನನು

ಈ ಮಸೀದಿಯನ್ನು ಕಟ್ಟಲು ಆರಂಭಿಸಿ ಕ್ರಿ. ಶ. ೧೪೦೮ರಲ್ಲಿ ಇಬ್ರಾಹಿಮ್ ಷಹಷರ್ಕಿ ಪೂರೈಸಿದನು.

**ಬಂಗಾಳ:** ಈ ಪ್ರಾಂತದ ಮುಸ್ಲಿಂ ಕಟ್ಟಡಗಳ ಮುಖ್ಯ ಲಕ್ಷಣಗಳೆಂದರೆ—ದೊಡ್ಡ ದೊಡ್ಡ ಕಲ್ಲುಕಂಬಗಳು, ಚೂಪು ಕಮಾನುಗಳು, ಇಟ್ಟಿಗೆ ಮಾಳಿಗೆಗಳು, ಹೊರಮೈಯ್ಯ ಚಿತ್ರಗಳು. ವಾಸ್ತುಶಿಲ್ಪ ಹಿಂದೂ ಮುಸ್ಲಿಂ ಮಿಶ್ರರೀತಿಯದು. ಪಾಂಡುವಹ್‌ನಲ್ಲಿರುವ ಆದೀನ ಮಸೀದಿ ಸುಮಾರು ೫೦೦×೩೦೦ ಚದರ ಅಡಿ ಹರವಿದ್ದು, ಸಿದುಚೌಕನಾಕಾರದಲ್ಲಿದೆ. ಕಮಾನು ದಾರಿಗಳೂ ಗುಮುಟಗಳೂ ಚಿತ್ರದ ಕೆತ್ತನೆಗಳೂ ಇವೆ. ಜಲಾಲುದ್ದೀನ್ ಮುಹಮ್ಮದ್ ಷಹವಿನ ಗೋರಿ ೭೫ ಅಡಿ ಚದರವಿದ್ದು ಇಟ್ಟಿಗೆಯಿಂದ ಕಟ್ಟಿ ಕಮಾನುಗಳ ಮೇಲೆ ಗುಮುಟ ಹೊತ್ತಿದೆ. 'ದಖೀಲ್ ದರ್‌ವಾಸ್ಹಾ' ಎಂಬ ಕಮಾನುದಾರಿಯುಳ್ಳ ಇಷ್ಟಾಲುಕೋಣೆಗಳ ಕಟ್ಟಡ, 'ಖಾನ್-ಏ-ಜಹಾನ್ ಅಲಿ'ಯ ಗೋರಿ, 'ಸಾತ್‌ಗುಂಬದ್' ಮಸೀದಿ, "ತಾಂತಿಪಾರ" ಮಸೀದಿ, 'ದರಸ್‌ಬರಿ' ಮಸೀದಿ, 'ಲತ್ತನ್' ಮಸೀದಿ, 'ಛೋಟಾಸೋನ' ಮಸೀದಿ, ಮೊದಲಾದುವು ಪ್ರಸಿದ್ಧ ಕಟ್ಟಡಗಳು.

**ಗುಜರಾತ್:** ಮುಸ್ಲಿಮರು ಗುಜರಾತಿಗೆ ಬಂದು ನೆಲಸುವುದಕ್ಕೆ ಮೊದಲೆ ಹಿಂದುಗಳ ವಾಸ್ತುಶಿಲ್ಪ ಚೆನ್ನಾಗಿ ವೃದ್ಧಿಯಾಗಿತ್ತು. ಅಲ್ಲಿಯ ಮುಸ್ಲಿಂ ಕಟ್ಟಡಗಳು ಆ ಹಿಂದೂ ಪರಿಪಕ್ವ ರೀತಿಯನ್ನೇ ಅನುಸರಿಸಿದ್ದರಿಂದ ಅವುಗಳಲ್ಲಿ ಹಿಂದೂ ಮುಸ್ಲಿಂ ಮಾರ್ಗಗಳ ಹೊಂದಿಕೆ ಕಾಣಬರುತ್ತದೆ. ಕಾಂಬೆ ಮಸೀದಿಯೇ (ಕ್ರಿ. ಶ. ೧೩೨೫) ಮೊದಲಾದ ಕೆಲವು ಕಟ್ಟಡಗಳು ಹಿಂದೂ ರೀತಿಯಲ್ಲೂ, ಸರದಾರ್‌ಖಾನ್ ಮಸೀದಿಯೇ (ಕ್ರಿ. ಶ. ೧೬೮೦) ಮೊದಲಾದ ಮತ್ತೆ ಕೆಲವು ಕಟ್ಟಡಗಳು ಇರಾನಿ ರೀತಿಯಲ್ಲೂ ಇವೆ. ಮುಸ್ಲಿಮರು ಈ ಕಟ್ಟಡಗಳಿಗೆ ತಮ್ಮದಾಗಿ ಸೇರಿಸಿದ ಹೊಸ ರೀತಿ ಎಂದರೆ,—ತಮಗೆ ಬಹು ಪ್ರಿಯವಾದ ಗುಮುಟಗಳು, ಮತ್ತು ಚೂಪು ಕಮಾನುಗಳು. ಗುಜರಾತಿನಲ್ಲಿ ಅಹಮದ್‌ಷಹ ರಾಜ್ಯಸ್ಥಾಪನೆ ಮಾಡಿದಮೇಲೆ ಅಹಮದಾಬಾದ್ ಪಟ್ಟಣವನ್ನು ನಿರ್ಮಿಸಿ, ಅದನ್ನು ರಾಜಧಾನಿಯನ್ನಾಗಿ ಮಾಡಿ ಸೋನ್‌ಗಢ್,

ದೋಹದ್ ಮತ್ತು ಅಹ್ಮದ್ ನಗರ್ ಕೋಟೆಗಳನ್ನು ಕಟ್ಟಿಸಿದನು. ಇವನ ಕಟ್ಟಡಗಳಲ್ಲಿ ಮುಖ್ಯವಾದುವು—ಗುಜರಾತ್ ರಾಜರ ಬಹು ಪ್ರಸಿದ್ಧ ಕಟ್ಟಡಗಳಲ್ಲಿ ಒಂದಾದ ಜುಮ್ಮಾ ಮಸೀದಿ; ಮಹಮ್ಮದ್ ಷಾವಿನಿಂದ ಆರಂಭವಾದ ಸುಲ್ತಾನ್ ಅಹಮದನ ಸಮಾಧಿಭವನ ಕುತುಬ್ಬುದ್ದೀನಿಂದ ಪೂರೈಸಿತು. ಕಂಬಗಳ ಮೇಲೆ ಹೊತ್ತಿರುವ ಗುಮಟಗಳುಳ್ಳ ಈ ಕಟ್ಟಡ ೧೦೪ ಅಡಿ ಚದರವಿದೆ; 'ದರಿಯಾಖಾನ್' ಗೋರಿ ಬಹು ಎತ್ತರವಾದ ಗುಮ್ಮಟವನ್ನು ಹೊತ್ತು ಇರಾನಿ ರೀತಿಯಲ್ಲಿ ಕಟ್ಟಿದೆ. ಮಹಮೂದ್‌ಷಹ ಕಾಲದಲ್ಲಿ ಅನೇಕ ಪಟ್ಟಣಗಳೂ, ಕೋಟೆಗಳೂ, ಅರಮನೆಗಳೂ, ಮಸೀದಿಗಳೂ, ಆದುವು. ಅವನು ಚಂಪಾನೀರ್ ಬಳಿ ಮಹಮ್ಮದಾಬಾದ್ ಎಂಬ ಪಟ್ಟಣವನ್ನು ಕಟ್ಟಿಸಿ ಅದನ್ನು ರಾಜಧಾನಿಯನ್ನಾಗಿ ಮಾಡಿಕೊಂಡನು. ಅಲ್ಲಿಯ ಜುಮ್ಮಾ ಮಸೀದಿ, ಸೀದಿಸಯ್ಯದ್ ಮಸೀದಿಗಳು ಇವನು ಕಟ್ಟಿಸಿದುವು.

**ಮಾಳವ:** ತೈಮೂರ್‌ಲೇನನ ದಾಳಿಯಿಂದ ದೆಹಲಿ ಸಾಮ್ರಾಜ್ಯ ಒಡೆದು ಎದ್ದ ಹಲವು ಮುಸ್ಲಿಂ ಸಂಸ್ಥಾನಗಳಲ್ಲಿ ಮಾಳವ ಒಂದು. ಇದರ ಪ್ರಾಂತಾಧಿಕಾರಿಯಾಗಿದ್ದ ದಿಲಾವರ್‌ಖಾನ್ ಘೂರಿ, ಈ ಕಾಲದಲ್ಲಿ ಸ್ವತಂತ್ರನಾದನು. ಅವನ ಮಗನೂ ಮಮ್ಮಗನೂ ಕೆಲವುಕಾಲ ಆಳಿದ ನಂತರ, ಮಹಮ್ಮದ್ ಖಿಲ್ಜಿ ಹೊಸ ಸಂತತಿಯನ್ನು ಸ್ಥಾಪಿಸಿದನು. ಈ ರಾಜರ ಮುಖ್ಯಪಟ್ಟಣಗಳಾಗಿದ್ದ ಧಾರ್ ಮತ್ತು ಮಂದರ್‌ಗಳಲ್ಲಿ ಹಲವು ಕಟ್ಟಡಗಳಿವೆ. ದೊಡ್ಡ ಆಸ್ಥಾನಮಂಟಪ, ಹಲವು ಅಂಗಣಗಳ ಅಂತಃಪುರ, ಕಮಾನು ಸಾಲು, ಮೊದಲಾದುವುಳ್ಳ ಹಿಂದೋಳ ಅರಮನೆ ಜಮ್ಮಾಮಸೀದಿ, ಬಿಳಿಯ ಅಮೃತ ಶಿಲೆಯಿಂದ ಕಟ್ಟಿರುವ ಹೋಷಂಗ್ ಷಹನ ಗೋರಿ, ಹಫ್ತ್ ಮನ್‌ಜಿಲ್ (ಏಳುಪ್ಪರಿಗೆ) ಎಂಬ ಜಯಗೋಪುರ ಮೊದಲಾದುವು ಪ್ರಸಿದ್ಧ ಕಟ್ಟಡಗಳು.

**ಕಾಶ್ಮೀರ:** ಮಿಕ್ಕೆಡೆಗಳಂತೆಯೇ ಇಲ್ಲಿಯೂ ಮೊದಮೊದಲಿನ ಕಟ್ಟಡಗಳಲ್ಲಿ ಹಿಂದೂ ಕಟ್ಟಡಗಳನ್ನು ಕೆಡವಿ ತಂದ ಸಾಮಾನುಗಳಿಂದ ಕಟ್ಟಿದುವು. ಇಲ್ಲಿಯ ಕಟ್ಟಡಗಳು ಸಂಖ್ಯೆಯಲ್ಲಾಗಲಿ, ಕಲಾ ನೈಪುಣ್ಯದಲ್ಲಾಗಲಿ ಇಂಡಿಯದ ಇತರ ಮುಸ್ಲಿಂ ರಾಜ್ಯಗಳವುಗಳಿಗೆ ಸಮತೂಗ

ಲಾರವು. ಮರ ಮತ್ತು ಇಟ್ಟಿಗೆಯಿಂದ ಕಟ್ಟಿರುವ, ಗುಮಟಗಳಿಲ್ಲದ ಶ್ರೀನಗರದ ಜುಮ್ಮಾ ಮಸೀದಿ ಮುಖ್ಯವಾದದ್ದು.

**ದಖನ್ :** ಇವರ ಮುಸ್ಲಿಂ ವಾಸ್ತುಶಿಲ್ಪವನ್ನು ಮೂರು ಕಾಲದ್ದನ್ನಾಗಿ ವಿಭಾಗಿಸಬಹುದು. ಮೊದಲನೆಯದು ಅಲ್ಲಾವುದ್ದೀನನು ದಖನ್ನನ್ನು ಗೆದ್ದಂದಿನಿಂದ ತುಘಲಕ್‌ಸಂತತಿಯು ಕೊನೆಯುವರೆಗಿನದು. ಈ ಕಾಲದಲ್ಲಿ ದಖನ್ ಉತ್ತರ ಇಂಡಿಯದ ರೀತಿಯನ್ನೇ ಅನುಸರಿಸಿತು. ೬೦೦ ಅಡಿ ಎತ್ತರದ ಬಂಡೆಯಮೇಲೆ ಕಟ್ಟಿದ ದವಲತಾಬಾದ್ ಕೋಟೆ ಈ ಕಾಲದ್ದು. ಎರಡನೆಯ ಕಾಲ, ಬಹಮನೀರಾಜ್ಯದ ಸ್ಥಾಪನೆಯಿಂದ ಮೊದಲಾಗುತ್ತದೆ. ಮೂರನೆಯ ಕಾಲ ಇದು ಒಡೆದು ಬಿಜಾಪುರ್, ಗೋಲ್ಕಂಡ—ಮೊದಲಾದ ಸಂಸ್ಥಾನಗಳು ಹುಟ್ಟಿಕೊಂಡಂದಿನಿಂದ ಮೊದಲಾಗುತ್ತದೆ. ಬಹಮನೀ ರಾಜ್ಯ ಸ್ಥಾಪನೆಯಾದಾಗ ಅರೇಬಿಯ, ಇರಾನ್—ಅಫ್ಘಾನೀಸ್ಥಾನ, ಮಧ್ಯ ಏಷ್ಯಗಳಿಂದ ಹಲವರು ಬಂದು ದಖನ್ನಿನಲ್ಲಿ ನೆಲಸಿದರು. ಇವರಲ್ಲಿ ವಿದ್ವಾಂಸರು, ಕವಿಗಳು, ಸಾಧುಗಳು, ಕಲೆಗಾರರು, ಶಿಲ್ಪಿಗಳು—ಮೊದಲಾದವರಿದ್ದರು. ಎಲ್ಲರಿಗೂ ರಾಜಾಶ್ರಯ ದೊರೆತು ದಖನ್ ಮುಸ್ಲಿಂ ಸಂಸ್ಕೃತಿಯ ಎರಡನೆಯ ಕೇಂದ್ರವಾಗಿ ಪರಿಣಮಿಸಿತು. ಈ ಕಾಲದಲ್ಲಿ ಇರಾನಿನ ಪ್ರಭಾವವೇ ಹೆಚ್ಚಾಗಿದ್ದದ್ದರಿಂದ ಈ ಕಾಲದ ವಾಸ್ತುಶಿಲ್ಪ ಇರಾನಿನ ರೀತಿಯಾಗಿದೆ. ಆದರೆ, ಮೂರನೆಯ ಕಾಲದವೇಳೆಗೆ ರಾಜಮಂಗಡದವರು ಪ್ರಜೆಗಳ ನಡೆನುಡಿಗಳನ್ನೇ ಬಹುವಾಗಿ ಅನುಸರಿಸಿ ಹೊಂದಿಕೆಯಿಂದ ನಡೆದದ್ದರಿಂದ ಈ ಕಾಲದಲ್ಲಿ ಹಿಂದೂ ಮುಸ್ಲಿಂ ಹೊಂದಿಕೆಯ ರೀತಿ ಕಂಡುಬರುತ್ತದೆ. ಪರೆಂದಹ್ ಕೋಟೆ, ಗುಲ್ಬರ್ಗದ ಬಹಮನೀ ರಾಜರ ಗೋರಿಗಳು, ಮಹಮ್ಮದ್‌ಷಾ ಬಹಮನಿ ಕಟ್ಟಿಸಿದ ಷಾಬಜ್ಜಾರ್ ಮಸೀದಿ ಮತ್ತು ಜುಮ್ಮಮಸೀದಿ, ಗೇಸೂದ್ರಾಜ್ ಎಂಬ ಸೂಫಿ ಸಾಧುವಿನ ಸಮಾಧಿ ಭವನ, ಬಿದರೆಯಲ್ಲಿಯ ಅಹಮದ್‌ಷಾ ಗೋರಿ, ದವಲತಾಬಾದಿನಲ್ಲಿಯ ಚಾರ್‌ಮಿನಾರ್ ಮತ್ತು ಅಲ್ಲಾವುದ್ದೀನ್ ಗೋರಿ, ಸೋಲಾಖಿಮ್ ಮಸೀದಿ ಇವೇ ಮೊದಲಾದುವು ಎರಡನೆಯ ಕಾಲದ ಕೆಲವು ಪ್ರಸಿದ್ಧ ಕಟ್ಟಡಗಳು. ಮೂರನೆಯ ಕಾಲದ ಕಟ್ಟಡಗಳಲ್ಲಿ ಬಿಜಾಪುರದವು

ಉತ್ತಮವಾದುವು. ಇಲ್ಲಿ ಇಬ್ರಾಹಿಮ್ ಆದಿಲ್‌ಷಾ ಕಟ್ಟಿಸಿದ ನವ್‌ರಸ್‌ಪೂರ್ ಎಂಬ ಅರಮನೆ ಮತ್ತು ಕೋಟೆಯೂ, ಆ ರಾಜನ ಗೋರಿಯೂ ಇವೆ. ಇಬ್ರಾಹಿಮ್ ಆದಿಲ್‌ಷಾವಿನ ಗೋರಿಯ ಮೇಲಿನ ಲಾಲ್‌ಗುಂಬದ್ ಎಂದು ಕರೆಯುವ ಗುಮಟವು ಪ್ರಪಂಚದ ದೊಡ್ಡ ಗುಮಟಗಳಲ್ಲಿ ಎರಡನೆಯದೆಂದು ಹೆಸರಾಗಿದೆ. ೧೭೮ ಅಡಿ ಎತ್ತರವಿರುವ ಈ ಗುಮಟವಲ್ಲಿ ಎಂಟು ಮೂಲೆ ಆಕಾರದ ಎಂಟುಸ್ತರಿಗೆಯ ನಾಲ್ಕು ಮಿನಾರುಗಳಿವೆ. ನೆಲದಿಂದ ೮೩ ಅಡಿಯ ಮೇಲ್ ಮಟ್ಟದಲ್ಲಿ ಗುಮಟದ ಸುತ್ತಲೂ ಹೊರಗಡೆ ೧೧ ಅಡಿ ಅಗಲ ಚಾಚಿರುವ ನಿಲುಜಗಲಿ ಇದೆ. ಗಾಳಿ ಬೆಳಕುಗಳಿಗಾಗಿ ದೊಡ್ಡ ಕಂಡಿಗಳಿವೆ. ಇಲ್ಲಿ ಒಂದುಕಡೆ ಆಡಿದ ಒಂದು ಸೊಲ್ಲನೆಯ ಪಿಸುಮಾತು ಕೂಡ ಇದಿರಿನ ಮೂಲೆಗೂ ಸ್ಪಷ್ಟವಾಗಿ ಕೇಳಿಬರುವುದರಿಂದ ಇದಕ್ಕೆ 'ಪಿಸುಮಾತು ಜಗಲಿ' (ವ್ಹಿಸ್ಪರಿಂಗ್ ಗ್ಯಾಲರಿ) ಎಂದು ಹೆಸರಿದೆ.

## ಮೊಗಲ್ ವಾಸ್ತುಶಿಲ್ಪ

ಸಯ್ಯದ್ ಮತ್ತು ಲೋದಿ ಸಂತತಿಗಳ ಆಳಿಕೆಯ ವೇಳೆಗೆ ಮುಸ್ಲಿಮರು ನಡೆನುಡಿಗಳಲ್ಲಿ ಹಿಂದುಗಳನ್ನೇ ಅನುಸರಿಸುತ್ತ ನಡೆದು ಇಬ್ಬರಿಗೂ ಇದ್ದ ವ್ಯತ್ಯಾಸ ವೈಷಮ್ಯಗಳು ಅಳಿಯುತ್ತ ಬಂದಿದ್ದುವು. ಆದರೆ, ಬಾಬರನ ಕೈಕೆಳಗೆ ಮೊಗಲರು ಮತ್ತೆ ದಾಳಿಯಿಟ್ಟಾಗ ಅವನ ಹಿಂದೆ ಆಫ್ಘಾನ್, ಮಧ್ಯ ಏಷ್ಯ, ಇರಾನ್‌ಗಳಿಂದ ಅನೇಕರು ಬಂದು ನೆಲಸಿ ಮತ್ತೆ ಇರಾನಿ ಪ್ರಾಬಲ್ಯ ಹೆಚ್ಚಿತು. ಆದ್ದರಿಂದ ಈ ಕಾಲದ ಮೊದಮೊದಲಿನ ಕಟ್ಟಡಗಳಲ್ಲಿ ಇರಾನಿ ರೀತಿ ಎದ್ದು ಕಾಣುತ್ತದೆ. ಬಾಬರ್ ತನ್ನ ನಾಲ್ಕು ವರ್ಷಗಳ ಆಳಿಕೆಯಲ್ಲಿ ಪಾಣಿಪಟ್ ಮತ್ತು ಸಂಭಲ್‌ಗಳಲ್ಲಿಯ ಮಸೀದಿಗಳನ್ನೂ ಇತರ ಕಟ್ಟಡಗಳನ್ನೂ ಕಟ್ಟಿಸಿದನು. ಶಿಲ್ಪಿಗಳು ಕಾನ್‌ಸ್ಟಾಂಟಿನೋಪಲಿನಿಂದ ಬಂದವರು. ಹುಮಾಯೂನನಿಗೆ ಪ್ರತಿಸ್ಪರ್ಧಿಯಾಗಿ ರಾಜ್ಯವಾಳುವುದಕ್ಕೆ ನಿಂತ ಷೇರ್‌ಷಾವಿನ ಮನೆಯವರು ಹಿಂದೂ ಇರಾನಿ ಶೈಲಿಯಲ್ಲಿ ಹಲವು ಕಟ್ಟಡಗಳನ್ನು ಕಟ್ಟಿಸಿದರು. ಇವುಗಳಲ್ಲಿ ಒಂದಾದ ಷೇರ್‌ಷಾಗೋರಿ ಕೆಲವು

ದೃಷ್ಟಿಗಳಿಂದ ಆಗ್ರದ ತಾಜ್‌ಮಹಲಿಗೆ ಕಡಮೆಯಾದದ್ದೇನೂ ಇಲ್ಲ ವೆನ್ನುತ್ತಾರೆ. ಹುಮಯೂನ್ ಪಂಜಾಬಿನ ಫತಹಾಬಾದ್ ಮತ್ತು ಆಗ್ರಾಗಳಲ್ಲಿ ಇರಾನಿ ರೀತಿಯಲ್ಲಿ ಮಸೀದಿಗಳನ್ನು ಕಟ್ಟಿಸಿದನು. ಬಾಬರನ ಮತ್ತು ಹುಮಯೂನನ ಕಟ್ಟಡಗಳ ರೀತಿ ಕೇವಲ ಇರಾನಿ ಆಗಿದ್ದುದರಿಂದ ಇಂಡಿಯಕ್ಕೆ ಹೊಸದಾಗಿತ್ತು.

ಹುಮಯೂನನ ಮಗನೂ ಅತ್ಯಂತ ಪ್ರಸಿದ್ಧ ಮೊಗಲ್ ಚಕ್ರವರ್ತಿಯೂ ಆದ ಅಕ್ಬರನು ಅರಮನೆಗಳು, ಮಸೀದಿಗಳು, ಗೋರಿಗಳು, ಕೋಟೆಗಳು, ಸೇತುವೆಗಳು, ಕೆರೆಗಳು, ರಸ್ತೆಗಳು, ಮುಸಾಫರ್‌ಖಾನೆಗಳು -ಮೊದಲಾದುವನ್ನು ಕಟ್ಟಿಸಿದನು. ಇವನ ಕಟ್ಟಡಗಳಲ್ಲಿ ಇರಾನ್ ಶಿಲ್ಪದ ಚಿತ್ರ ಮತ್ತು ಬಣ್ಣದ ವೈಖರಿಯೂ ನಯವೂ, ಹಿಂದೂ ಶಿಲ್ಪದ ಸುಮುಸೂತ್ರತೆಯೂ ಸುಪ್ರಮಾಣತೆಯೂ ಕಂಡು ಬರುತ್ತದೆ. ಕ್ರಿ. ಶ. ೧೫೬೯-೧೫೮೪ರ ವರೆಗೆ ಮೊಗಲ್ ಸಾಮ್ರಾಜ್ಯದ ರಾಜಧಾನಿಯಾಗಿದ್ದ ಫತೆಹ್‌ಪೂರ್ ಸಿಕ್ರಿ ಪಟ್ಟಣವನ್ನು ಅಕ್ಬರನು ತನ್ನ ಪ್ರಿಯಗುರುವಾಗಿದ್ದ ಷೆಯ್‌ಖ್ ಸಲೀಮ್ ಚಿಷ್ತಿಯ ಮಠದ ಬಳಿಯಲ್ಲಿ ಕಟ್ಟಿದನು. ಈ ಪಟ್ಟಣದ ಕೋಟೆ ಹಿಂದೂ ಇರಾನಿಯನ್ ಶಿಲ್ಪದ ಉತ್ತಮ ಮಾದರಿ ಎಂದು ಹೇಳುತ್ತಾರೆ. ಇದರ ಕೋಟೆಯ ದಕ್ಷಿಣ ಮಹಾದ್ವಾರ ಅಮೃತಶಿಲೆ ಮತ್ತು ಕೆಂಗಲ್ಲಿಂದ ಮಾಡಿ, ೧೭೬ ಅಡಿ ಎತ್ತರವಿದ್ದು ಪ್ರಪಂಚದ ಉನ್ನತ ಮಹಾದ್ವಾರಗಳಲ್ಲಿ ಒಂದೆಂದು ಎಣಿಸಲಾಗಿದೆ. ಈ ದ್ವಾರ ಖಾನ್‌ದೇಶದ ವಿಜಯದ ಕುರುಹಾಗಿ ಕಟ್ಟಿತು. ಅಕ್ಬರನು ತನ್ನ ತಂದೆ ಹುಮಯೂನಿನ ಗೋರಿಯ ಮೇಲೆ ಇರಾನ್ ಶೈಲಿಯಲ್ಲಿ ಒಂದು ಕಟ್ಟಡಕಟ್ಟಿಸಿದನು. (ಈ ಕಟ್ಟಡದ ಮಾದರಿಯನ್ನೇ ಹಿಡಿದು, ಅದನ್ನೇ ಪರಿಪೂರ್ಣತೆಗೆ ತಂದು ಮುಂದೆ ತಾಜ್‌ಮಹಲ್ ಕಟ್ಟಿತು.). ಇದರ ಗುಮಟ ಬಿಳಿಯ ಅಮೃತಶಿಲೆಯಿಂದ ಮಾಡಿಯೂ ಉಳಿದ ಕಟ್ಟಡ ಕೆಂಗಲ್ಲಿನಿಂದ ಮಾಡಿ ಬಿಳಿಯ ಅಮೃತಶಿಲೆ ಕೆತ್ತಿಯೂ ಇದೆ. ಆಗ್ರಾ ಮಸೀದಿ, ಅಕ್ಬರೀ ಮಹಲ್ ಎಂಬ ಅರಮನೆ, ಸಿಕಂದರಾಬಾದಿನ ಅರಮನೆ, ಅಟಕ್ ಮತ್ತು ಅಲಹಾಬಾದಿನ ಕೋಟೆಗಳು ಇವೇ ಮೊದಲಾದುವು ಅಕ್ಬರನ ಇತರ ಕೆಲವು

ಪ್ರಸಿದ್ಧ ಕಟ್ಟಡಗಳು. ಇವನ ಮಗ ಜಹಾಂಗೀರನು ತನ್ನ ತಂದೆಯ ಗೋರಿಯ ಮೇಲೆ ಕಟ್ಟಿಸಿರುವ ಕಟ್ಟಡದಲ್ಲಿ ಅಕ್ಬರನ ಕಲಾಭಿರುಚಿಯನ್ನೇ ತೋರಿಸಿದ್ದಾನೆ. ಜಹಾಂಗೀರನ ಹೆಂಡತಿ ನೂರ್‌ಜಹಾನ್ ತನ್ನ ತಂದೆ ಈತಮುದ್‌ಉದ್ದೌಲನ ಗೋರಿಯನ್ನು ಆಗ್ರಾದಲ್ಲಿ ಕಟ್ಟಿಸಿದಳು. ಬಿಳಿಯ ಅಮೃತಶಿಲೆಯಿಂದ ಮಾಡಿ ಪಂಚರಂಗೀ ಕಲ್ಲುಗಳಿಂದ ಅಲಂಕರಿಸಿರುವ ಇದು ಷಾಜಹಾನ್ ಕಟ್ಟಡಗಳನ್ನು ಮೀರಿಸುತ್ತದೆ.

ಮೊಗಲ್ ವಾಸ್ತುಶಿಲ್ಪ ಷಾಜಹಾನ್ ಆಳಿಕೆಯಲ್ಲಿ ತನ್ನ ಮೇಲ್ಮೆಯನ್ನು ಮುಟ್ಟಿತು. ಷಾಜಹಾನನಿಗೆ ಸಂಗೀತ ಕಲೆ ಶಿಲ್ಪಗಳಲ್ಲಿ ಸಹಜವಾಗಿದ್ದ ಅಭಿರುಚಿಯ ಜತೆಗೆ ದೇಶದ ಶಾಂತಿಸಂಪತ್ತುಗಳೂ ಅನುಗೂಡಿದುವು. ಇದರಿಂದ ಷಾಜಹಾನನು ರಾಜಧಾನಿಯನ್ನು ಅನೇಕ ಸುಂದರ ಭವ್ಯ ಭವನಗಳಿಂದ ಕಂಗೊಳಿಸುವಂತೆ ಮಾಡಿದನು. ಇವನ ಕಟ್ಟಡಗಳಲ್ಲಿ ಲೋಕಪ್ರಸಿದ್ಧವಾದದ್ದು ತಾಜ್‌ಮಹಲ್ ಎಂದು ಕರೆಯುವ, ತನ್ನ ಪ್ರಿಯಪತ್ನಿಯಾದ ಮುಮ್‌ತಾಜ್‌ಮಹಲ್ಳ ಸಮಾಧಿ ಭವನ. ಇದನ್ನು ೨೦,೦೦೦ ಕಾರೆಗಾರರು ೨೨ ವರ್ಷಗಳು (ಕ್ರಿ.ಶ. ೧೬೩೧-೫೩) ಕೆಲಸಮಾಡಿ ಕಟ್ಟಿದರು. ಕಟ್ಟಡ ಆರಂಭಿಸುವುದಕ್ಕೆ ಮೊದಲು ಇರಾನಿ, ಸಿರಿಯನ್, ಹಿಂದೂ, (ಕೆಲವರ ಅಭಿಪ್ರಾಯದಂತೆ ಯೂರೋಪಿಯನ್ ಕೂಡ) ಶಿಲ್ಪಜ್ಞರ ಸಭೆಯೊಂದನ್ನು ಕೂಡಿಸಿ ವಿಷಯ ಚರ್ಚೆ ನಡೆಸಿ ಅನಂತರ ಕೆಲಸಕ್ಕೆ ಕೈಹಚ್ಚಿತು. ಈ ಕಟ್ಟಡದ ಕೆಲಸದಲ್ಲಿ ನೇಮಕವಾಗಿದ್ದವರು —

(೧) ಶಿರಾಜಿನ ಉಸ್ತಾದ್ ಈಸ, ಮುಖ್ಯ ಶಿಲ್ಪಿ; (೨) ಇವನ ಮಗ ಮಹಮ್ಮದ್ ಷರೀಫ್, ಇವನಿಗೆ ಸಹಾಯಕ; (೩) ಕಾಂದ್ ಹಾರಿನ ಮಹಮ್ಮದ್ ಹನೀಫ್; (೪) ಮುಲ್ತಾನಿನ ಮಹಮ್ಮದ್ ಸೈದ್: (೫) ಅಬೂತುರಾಬ್. ಮುಖ್ಯ ಕಲ್ಲು ಕೆಲಸಿಗ; (೬) ಗುಮ್ಮಟ ಕಟ್ಟಡದಲ್ಲಿ ನಿಪುಣನಾದ ತುರ್ಕಿಯ ಇಸ್‌ಮಾಯಿಲ್‌ಖಾನ್, ಇವನಿಗೆ ಸಹಾಯಕ; (೭) ಮಹಮ್ಮದ್ ಷರೀಫ್; (೮) ಖಾಸಿಮ್ ಖಾನ್; (೯) ಪ್ರಸಿದ್ಧ ಬಡಗಿಯಾದ ದೆಹಲಿಯ ಪೀರ: (೧೦) ಲಿಪಿ ಚಿತ್ರಕಾರನಾದ ಶಿರಾಜಿನ ಅಮಾನತ್‌ಖಾನ್; ಇವನಿಗೆ ಸಹಾಯಕನಾಗಿ

(೧೧) ಕದ್‌ರೇ ಸ್ವಮಾನ್; (೧೨) ಮಹಮುದ್ ಖಾನ್; (೧೩) ರುಸ್ತುಮ್
ಖಾನ್, ಕೆತ್ತನೆಯ (ಇನ್‌ಲೆ) ಕೆಲಸದಲ್ಲಿ ನಿಪುಣನಾದ (೧೪) ಚಿರಂಜಿ
ಲಾಲ್; ಇವನಿಗೆ ಸಹಾಯಕರಾಗಿ (೧೫) ಚೋಟಿಲಾಲ್; (೧೬) ಮನು
ಲಾಲ್; (೧೭) ಮನೋಹರ್; ಅಲಂಕಾರ ಕೆಲಸಕ್ಕಾಗಿ (೧೮) ಅಲಾ
ಮಹಮ್ಮದ್; (೧೯) ಷಾಕರ್ ಮಹಮುದ್; (೨೦) ಬನ್ನುಹರ್; (೨೧)
ಷಹಮುಲ್ ಮತ್ತು (೨೨) ಸ್ಟೋರಾವರ್; (೨೩) ತೋಟದ ಮಾದರಿ
ಜಣಿಗಳಿಗಾಗಿ ಕಾಶ್ಮೀರದ ರಾಮುಲಾಲ್.

ಕಟ್ಟಡದ ಒಟ್ಟು ಮೇಲ್ವಿಚಾರಣೆ ಮಿರ್ ಅಬ್ದುಲ್ ಕರೀಮ್
ಮುಕ್‌ರಮತ್ ಖಾನನ ಕೈಯಲ್ಲಿತ್ತು. ಇರಾನಿ ರೀತಿಯಲ್ಲಿ ಕಟ್ಟಿರುವ
ಈ ಕಟ್ಟಡ ನಾಲ್ಕು ಹಜಾರಗಳನ್ನೊಳಗೊಂಡು, ಸಮಾಧಿ ಭವನದ
ಮೇಲೆ ೨೧೦ ಅಡಿ ಎದ್ದಿರುವ ಗುಮಟವನ್ನು ಹೊತ್ತಿದೆ. ಇಕ್ಕೆಲ
ದಲ್ಲೂ ಸುಮಾರು ೧೦೦ ಅಡಿ ಎತ್ತರದ ಜಗಲಿಗಳೂ, ನಾಲ್ಕು ಕಡೆಯೂ
ಕಟ್ಟಡಕ್ಕೆ ಒಯ್ಯುವ ನಾಲ್ಕು ಚೂಫುಮೇಲ್ ಮಾರೆದಾರಿಗಳೂ ಇವೆ.
ಕಟ್ಟಡವನ್ನು ಸುತ್ತುವರಿದು ತೋಟಗಳೂ ಕೊಳಗಳೂ ದಾರಿಗಳೂ ಇವೆ.

ಆಗ್ರಾದಲ್ಲಿಯ ಅಮೃತ ಶಿಲೆಯಿಂದ ಕಟ್ಟಿದ ಮೋತಿ ಮಸೀದಿ
(ಮುತ್ತಿನ ಮಸೀದಿ), ಲಾಹೋರಿನ ಈದ್‌ಗ, ಕಾಬೂಲಿನ ಕೋಟೆ
ಮತ್ತು ಅರಮನೆ, ಕಾಶ್ಮೀರದ ಅರಮನೆ, ಆಗ್ರಾ ಮತ್ತು ಡೆಲ್ಲಿ ಕೋಟೆ
ಗಳು, ಅಜ್ಮೀರ್ ಅಹಮದಾಬಾದ್ ಮುಖ್‌ಲಾಸ್‌ಪುರ್ ಮೊದಲಾ
ದೆಡೆಗಳಲ್ಲಿಯ ಕಟ್ಟಡಗಳು, ಇವೇ ಮೊದಲಾದುವು ಷಾಜಹಾನ್‌ಕಾಲದ
ಇತರ ಪ್ರಸಿದ್ಧ ಕಟ್ಟಡಗಳು.

ಇವನನಂತರ ಬಂದ ಔರಂಗಜೇಬನು ಬಹುಕಾಲ ಆಳಿದರೂ
ರಾಜ್ಯದ ಅಶಾಂತಿಯೇ ಮೊದಲಾದ ಕಾರಣಗಳಿಂದಲೂ ಸ್ವತಃ ಬಹು
ಕಠಿನ ನಿಯಮಿಷ್ಠನಾದ್ದರಿಂದ ತನಗೇ ಕಲೆಯ ವಿಷಯದಲ್ಲಿ ಅಷ್ಟು
ಆಸಕ್ತಿ ಇಲ್ಲದ್ದರಿಂದಲೂ ಇವನ ಕಾಲದಲ್ಲಿ ಹೆಚ್ಚು ಶಿಲ್ಪಕೆಲಸವೇನೂ
ನಡೆದಿಲ್ಲ. ಲಾಹೋರಿನಲ್ಲಿ ಒಂದು ಮಸೀದಿಯನ್ನೂ ಕಾಶಿ ಮಸೀದಿಗೆ
ಮಿನಾರುಗಳನ್ನೂ ಕಟ್ಟಿಸಿದನು. ಇವನ ಮಗಳು ಜೀನತ್ ಉನ್ನೀಸಳು
ಡೆಲ್ಲಿಯಲ್ಲಿ ಒಂದು ಮಸೀದಿ ಕಟ್ಟಿಸಿದಳು. ಔರಂಗಜೇಬನ ಮರಣಾ

ನಂತರ ಸಾಮ್ರಾಜ್ಯ ಪಿಲವಾಗಿ ಮೊಗಲರ ಬಲ ಕುಗ್ಗಿ ಕುಂದಿತು. ಕಲಾಕಾರ್ಯಗಳಿಗೆ ಬೇಕಾದ ಅಭಿರುಚಿಯಾಗಲಿ ಸಮೃದ್ಧಿಯಾಗಲಿ ಇರಲಿಲ್ಲ. ಔಧ್ ನವಾಬನಾದ ಸಫ್ದರ್‌ಜಂಗಿನ ಗೋರಿಯೂ, ಔಧ್‌ನವಾಬರೂ ಹೈದರಾಬಾದ್ ನಿಜಾಮರೂ ಕಟ್ಟಿಸಿದ ಕಟ್ಟಡಗಳೂ ಕೆಲವಿದ್ದರೂ ಹೆಸರಾದವು ಯಾವುದೂ ಇಲ್ಲ. ಶ್ರೀರಂಗ ಪಟ್ಟಣದಲ್ಲಿ ಹೈದರ್ ಆಲಿ ಮತ್ತು ಟಿಪ್ಪುಸುಲ್ತಾನರ ಗೋರಿಗಳಿವೆ. ಗುಂಬಸ್ ಎಂದು ಕರೆಯುವ ಈ ಸಮಾಧಿ ಭವನ ಕರಿಯ ಅಮೃತಶಿಲೆಯಿಂದ ಕಟ್ಟಿ ಗುಮ್ಮಟ ಹೊತ್ತಿದೆ. ಇದಕ್ಕೆ ಕೊಂಚ ದೂರದಲ್ಲಿ ದರಿಯಾದೌಲತ್ ಎಂಬ ಕಟ್ಟಡವೂ. ಅದನ್ನು ಸುತ್ತುವರಿದು ದರಿಯಾಬಾಗ್ ಎಂಬ ಸುಂದರವಾದ ತೋಟವೂ ಇವೆ. ಅಲ್ಲದೆ. ಐದು ಮಿನಾರುಗಳುಳ್ಳ ಒಂದು ಮಸೀದಿಯೂ. ಹಿಂದೂ ದೇವಾಲಯಕ್ಕೆ ಹತ್ತಿರದಲ್ಲಿಯೇ ಎತ್ತರವಾದ ಮಿನಾರುಗಳುಳ್ಳ ಮತ್ತೊಂದು ಮಸೀದಿಯೂ ಇವೆ.

ಬುರುಡೆಯಾಕಾರದ ಗುಮ್ಮಟ, ಕಮಾನು, ಲಿಪಿರೇಖಾಚಿತ್ರ, ಕಟ್ಟಡದ ಸರಳತೆ—ಇವೇ ಮೊದಲಾದುವು ಒಟ್ಟಿನಲ್ಲಿ ಮುಸ್ಲಿಂ ವಾಸ್ತು ಶಿಲ್ಪದಿಂದ ಇಂಡಿಯಕ್ಕೆ ಕಟ್ಟಡ ವಿಧಾನದಲ್ಲಿಯೂ ಅಲಂಕಾರ ವಿಧಾನ ದಲ್ಲಿಯೂ ಲಭಿಸಿದ ಹೊಸ ವಿಷಯಗಳು ಎನ್ನಬಹುದು.

## ಅಧ್ಯಾಯ ೯

### ಮುಸ್ಲಿಮರ ಇತರ ಕಲೆಗಳು

ಪೈಗಂಬರನೂ ಅವನ ಮರಣಾನಂತರ ಇಸ್ಲಾಂ ಧರ್ಮಪ್ರವರ್ತಕರಾದ ಅವನ ಅನುಯಾಯಿಗಳೂ ಮನುಷ್ಯ ಪ್ರಾಣಿ ಮೊದಲಾದ ಸಜೀವ ವಸ್ತುಗಳ ಎಲ್ಲ ವಿಧವಾದ ಮೂರ್ತಿ ನಿರೂಪಣೆಯನ್ನೂ ನಿಷೇಧಿಸಿದರು. ಆದರೆ, ಮುಂದೆ ಬಂದ ಉಮಯ್ಯದ್ ಕಲೀಫ್ಫರು, —ಸಂಪ್ರದಾಯ ಬದ್ಧರಾದ ಅಬ್ಬಾಸಿದ್ ಖಲೀಫ್ಫರು ಕೂಡ,— ಈ ನಿಷೇಧವನ್ನು ಮಸೀದಿಗಳಿಗೂ ಪವಿತ್ರ ಕಟ್ಟಡಗಳಿಗೂ ಮಾತ್ರ ಅನ್ವಯಿಸಿ, ಅರಮನೆಯೇ ಮೊದಲಾದ ಕಟ್ಟಡಗಳನ್ನು ಪ್ರಾಣಿ ಚಿತ್ರಗಳಿಂದ ಅಲಂಕರಿಸಿದರು. ಮೊದಲನೆಯ ವಲೀದಿನಿಂದ ಕಿ.ಶ. ೭೧೨ರಲ್ಲಿ ಕಟ್ಟದ ಅರಮನೆಯ ಗೋಡೆಯ ಮೇಲೆ ಸಿಂಹಾಸನಾರೂಢನಾದ ದೊರೆಯ ಚಿತ್ರವಿತ್ತು. ಅಲ್ಲದೆ, ಬೇಟೆ, ಜಲಕ್ರೀಡೆ—ಮೊದಲಾದುವುಗಳ ಚಿತ್ರಗಳೂ, ರೋಮನ್ ಮತ್ತು ಇರಾನಿ ರಾಜರ ಚಿತ್ರಗಳೂ ಇದ್ದುವು. ಸ್ಪೇಯ್‌ನಿನ ಅರಬ ದೊರೆಗಳು ಕೂಡ ಇದೇ ಪದ್ಧತಿಯನ್ನು ಅನುಸರಿಸಿ ತಮ್ಮ ಅರಮನೆಯ ಗೋಡೆಗಳನ್ನು ಹೆಂಗಸರ ಮತ್ತು ಗಂಡಸರ ಚಿತ್ರಗಳಿಂದ ಅಲಂಕರಿಸುತ್ತಿದ್ದರು. ಹೀಗೆ, ವೈದಿಕರೂ ಸಂಪ್ರದಾಯಾಭಿಮಾನಿಗಳೂ ಒಂದು ಕಡೆ ಪ್ರತಿಭಟಿಸುತ್ತಿದ್ದರೂ, ಇಸ್ಲಾಂ ಹುಟ್ಟಿನ ಮೊದಲುಗೊಂಡು ಧರ್ಮೇತರ ವಿಷಯಗಳಲ್ಲಿ ಈ ಸಜೀವವಸ್ತು ನಿರೂಪಣದ ನಿಷೇಧ ಸಡಿಲಿಕೊಂಡೇ ಬಂತು. ಆದರೆ, ಆಳುವರಸರು ಎಷ್ಟು ಪ್ರಯತ್ನಪಟ್ಟರೂ ಈ ವಿಧವಾದ ಚಿತ್ರಕಾರ್ಯವನ್ನು ಮಸೀದಿ ಮತ್ತು ಇತರ ಪವಿತ್ರ ಸ್ಥಳಗಳಿಗೆ ಮಾತ್ರ ತರುವುದಕ್ಕಾಗಲಿಲ್ಲ. ಇಂಥ ಕಟ್ಟುಪಾಡಿನಿಂದಲೂ ಮಸೀದಿಗಳನ್ನು ಹೇಗಾದರೂ ಅಂದಗೊಳಿಸಬೇಕೆಂಬ ಇಚ್ಛೆಯಿಂದಲೂ ಮುಸ್ಲಿಂಕಲಾಭಿಮಾನಿಗಳು ಇತರ ವಿಧವಾದ ಚಿತ್ರ ಕೆಲಸಗಳನ್ನು ರೂಢಿಗೆ ತಂದರು. ಇವುಗಳಲ್ಲಿ ಕುರಾನ್ ಲಿಪಿಚಿತ್ರ, ರೇಖಾಚಿತ್ರ, ಸಸ್ಯಚಿತ್ರ, ಬಣ್ಣ ಬಣ್ಣದ

ಸುಣ್ಣವು ಹೊಳಪು ಬಿಲ್ಲೆಗಳು—ಇವೇ ಮೊದಲಾದುವು ಮುಖ್ಯವೂ ಪ್ರಸಿದ್ಧವೂ ಆದುವು.

**ಲಿಪಿಕಲೆ:** ಮೊಟ್ಟಮೊದಲಿನ ಮುಸ್ಲಿಂ ಲಿಪಿಯನ್ನು ಕೂಫಿಕ್ ಲಿಪಿ ಎಂದು ಕರೆಯುತ್ತದೆ. ಈ ಲಿಪಿ ಮೆಸೊಪೊಟೇಮಿಯದಲ್ಲಿಯ ಅನ್‌ಬಾರ್ ಪಟ್ಟಣದಿಂದಲೊ ಇರಾನಿನ ಅಧೀನರಾಜ್ಯವಾಗಿದ್ದ ಹೀರದಿಂದಲೊ ಬಂತೆಂದು ಊಹಿಸುತ್ತಾರೆ. ಈ ಲಿಪಿಯನ್ನು ಮೊತ್ತಮೊದಲು ಕಲಿತ ಕುರೈಷ್ಯ ನಾಯಕರಲ್ಲಿ ಉಮಯ್ಯನ ಮಗ ಹರ್‌ಬ್ ಒಬ್ಬನು. ಇವನ ತರುವಾಯ ಪೈಗಂಬರನ ಚಿಕ್ಕಪ್ಪ ಅಬೂತಾಲೆಬ್, ಮೂರನೆಯ ಕಲೀಫನ ತಂದೆ ಅಫ್ಫಾನ್ ಮೊದಲಾದವರು ಕಲಿತು ಪ್ರಚಾರಕ್ಕೆ ತಂದರು. ಪೈಗಂಬರನಿಗೆ ಓದುಬರಹ ಬರದಿದ್ದರೂ ಅವನು ಓದು ಬರಹಕ್ಕೆ ಉತ್ತೇಜನ ಕೊಟ್ಟನು. ಲೇಖನಿ, ಮಸಿಕುಡಿಕೆ ಮೊದಲಾದ ಶಬ್ದಗಳು ಕುರಾನಿನಲ್ಲಿ ಎಷ್ಟೋ ಕಡೆ ಬರುವುದರಿಂದ ಆ ಕಾಲಕ್ಕೆ ಬರವಣಿಗೆ ಸಾಮಾನ್ಯವಾಗಿತ್ತೆಂದು ಊಹಿಸಬಹುದು.

"ಮಸಿಕುಡಿಕೆಯ (ನೂನ್) ಮೇಲೆ, ಲೇಖನಿಯ ಮೇಲೆ, (ಇವುಗಳಿಂದ) ಬರೆದಿರುವುದರ ಮೇಲೆ ಆಣೆಯಿಟ್ಟು ಹೇಳುತ್ತೇನೆ." "ಪ್ರಪಂಚದ ಎಲ್ಲ ಮರಗಳನ್ನೂ ಲೇಖನಿಗಳನ್ನಾಗಿಯೂ, ಒಂದಲ್ಲ ಏಳು ಸಮುದ್ರಗಳನ್ನೂ ಮಸಿಯನ್ನಾಗಿಯೂ ಮಾಡಿ ದೇವರ ನುಡಿಗಳನ್ನು ಬರೆಯುತ್ತ ಹೋದರೂ ಅವು ಕೊನೆ ಮುಟ್ಟವು." (ಕುರಾನ್)

ಮೊದಮೊದಲು ಕಲೀಫರೂ ಪೈಗಂಬರನ ಅನುಯಾಯಿಗಳೂ ಕಲಿತು ಪ್ರಚಾರಕ್ಕೆ ತಂದ ಕೂಫಿಕ್‌ಲಿಪಿ ಉಮಯ್ಯ ಮತ್ತು ಅಬ್ಬಾಸಿಯರ ಆಳಿಕೆಯಲ್ಲಿ ಮುಸ್ಲಿಂ ದೇಶಗಳಲ್ಲೆಲ್ಲ ವ್ಯವಹಾರದಲ್ಲಿತ್ತು. ಇದರಲ್ಲಿ ಕ್ರಮೇಣ ಪರಸ್ಪರ ಹೋಲುವ ವರ್ಣಗಳನ್ನು ವ್ಯತ್ಯಾಸಪಡಿಸುವುದಕ್ಕಾಗಿ ಆ ವರ್ಣಗಳಿಗೆ ಬೇರೆ ಬೇರೆ ಗುರುತುಗಳನ್ನು ಹೆಚ್ಚಾಗಿ ಸೇರಿಸುವುದೇ ಮೊದಲಾದ ಮಾರ್ಪಾಡುಗಳಾದುವು. ಹೀಗೆ ಕ್ರಿ.ಶ. ಏಳನೆಯ ಶತಮಾನದ ವೇಳೆಗೆ ಎರಡು ಸ್ಪಷ್ಟ ರೀತಿಯ ಲಿಪಿಕ್ರಮ ಏರ್ಪಟ್ಟಿತು. ಶಿಲಾಶಾಸನಗಳ ಮತ್ತು ನಾಣ್ಯಗಳ ಮೇಲಿನ ಲಿಪಿ ಮೂಲೆ ಮೂಲೆ ಅಥವಾ ಮೊನಚಾಗಿಯೂ, ಕಾಗದದ ಮೇಲಿನ ಲಿಪಿ

ಮುರಿವು ಇಲ್ಲವೇ ಬಟ್ಟವಾಗಿಯೂ ಇದ್ದುವು. ಮುಂದೆ ಹೋಗುತ್ತ ಹೋಗುತ್ತ ಈ ಎರಡು ಲಿಪಿಗಳಿಗೂ ಇದ್ದ ವ್ಯತ್ಯಾಸ ಹೆಚ್ಚು ಸ್ಪಷ್ಟವಾಗುತ್ತ ಬಂತು. ಅಬ್ಬಾಸಿಯರ ಆಳಿಕೆಯ ವೇಳೆಗೆ ಮೊದಲಿನ ಕೂಫಿಕ್ ಅಥವಾ ಮೊನಚು ಲಿಪಿ ಜನಸಾಮಾನ್ಯದಲ್ಲಿ ಬಳಕೆ ತಪ್ಪಿ ಕೆಲವು ಲಿಪಿಕಾರರಲ್ಲಿ ಮಾತ್ರ ಉಳಿದು, 'ನಸ್ಕ್' ಅಥವಾ ಬಟ್ಟಲಿಪಿ ರೂಢಿಯಲ್ಲಿ ನಿಂತಿತು. ಏಷ್ಯಾ ಮೈನರಿನ ಶಿಲಾಶಾಸನಗಳಲ್ಲಿ ಹಿಜಿರ ಒನೆಯ ಶತಮಾನದ ವೇಳೆಗೆ ಬಟ್ಟಲಿಪಿ ಕಂಡುಬರುತ್ತದೆ.

ಈ ವೇಳೆಗೆ ಸಿರಿಯ, ಪ್ಯಾಲೆಸ್ಟೈನ್, ಈಜಿಪ್ಟ್, ಸ್ಪೆಯ್ನ್, ಉತ್ತರ ಆಫ್ರಿಕ—ಮೊದಲಾದ ಪಶ್ಚಿಮ ದೇಶಗಳೂ ಮೆಸೊಪೊಟೇಮಿಯ, ಇರಾನ್, ಮಧ್ಯಏಷ್ಯ—ಮೊದಲಾದ ಪೂರ್ವದೇಶಗಳೂ ಮುಸ್ಲಿಂ ಸಾಮ್ರಾಜ್ಯದಲ್ಲಿ ಸೇರಿ, ಈ ಅಧೀನ ಜನಾಂಗಗಳೆಲ್ಲವೂ ಅರಬ್ಬೇತರವಾಗಿದ್ದರೂ ಅರಬ್ಬಿ ಭಾಷೆಯನ್ನೇ ಸಾಹಿತ್ಯ ಮತ್ತು ಶಾಸ್ತ್ರಗಳಿಗೆ ವ್ಯವಹಾರ ಭಾಷೆಯಾಗಿ ಉಪಯೋಗಿಸಿದ್ದರಿಂದ ಬರವಣಿಗೆಗೆ ಕೂಫಿಕ್ ಲಿಪಿಯನ್ನೇ ಬಳಸುತ್ತ ಬಂದರು. ಮಸೀದಿಗಳಲ್ಲೆಲ್ಲ ಕುರಾನ್ ಲಿಪಿಚಿತ್ರದ ಅಲಂಕಾರ ಕಂಡು ಬಂತು. ಅನೇಕ ವೇಳೆ ಲಿಪಿಕಾರರು ವರ್ಣಚಿತ್ರಕಾರರಿಗಿಂತ ಹೆಚ್ಚು ಮಾನ್ಯರಾಗಿದ್ದರು. ಕೆಲವು ಲಿಪಿಕಾರರು ವರ್ಣ ಚಿತ್ರದಲ್ಲೂ ಕುಶಲರಾಗಿದ್ದರು. ಬಹುಬೇಗನೆ ಒಂದು ಲಿಪಿಚಿತ್ರಶಾಸ್ತ್ರವೇ ಏರ್ಪಟ್ಟಿತು.

ಇಬ್ನ್-ಎ-ಮುಕ್ಲ ಎಂದು ಪ್ರಸಿದ್ಧನಾಗಿರುವ ಅಬೂಅಲಿ ಮಹಮ್ಮದ್ (ಕ್ರಿ. ಶ. ೮೮೫-೯೪೦), ಮತ್ತು ಅವನ ಸೋದರ ಹಸನ್ (ಕ್ರಿ. ಶ. ೮೮೧-೯೫೦) ಅಬ್ಬಾಸಿ ಕಾಲದ ಪ್ರಸಿದ್ಧ ಲಿಪಿಕಾರರು. ಇಬ್ನ್-ಎ-ಮುಕ್ಲನು ರೈಹಾನ್, ಸುಲುಸ್, ನಸ್ಕ್, ತಉಕಿ, ಮೊಹಕ್ಕಕ್—ಮೊದಲಾದ ಏಳೆಂಟು ತೆರನ ಲಿಪಿಕ್ರಮಗಳನ್ನು ಪ್ರಚಾರಕ್ಕೆ ತಂದನು. ಇವನ ಹೆಸರು ಮೆಸೊಪೊಟೇಮಿಯದಲ್ಲೆಲ್ಲ ಹರಡಿ, ಕಲೀಫನ ಕಿವಿ ಮುಟ್ಟಿ, ಅವನಿಂದ ಕರೆ ಬಂದು ಅವನ ಆಸ್ಥಾನಕ್ಕೆ ಬಂದನು. ಕೊನೆಗೆ ವಜೀರನಾದನು. ಆದರೆ, ಅವನ ಅಂತ್ಯ ಬಹು ದಾರುಣವಾಯಿತು. ಕಲೀಫನು ಅವನ ಕೈಗಳನ್ನು ಕತ್ತರಿಸಿ ಸೆರೆಹಾಕಿದ್ದಲ್ಲದೆ,

ಕೊನೆಗೆ ತಲೆಗಡಿಸಿದನು. ಕೊನೆಯ ಕಲೀಫನಾದ ಮೊಸ್ತಾಸಿಮ್ನನ ಗುಲಾಮನಾಗಿದ್ದ ಯಾಕುತ್ ಈ ಕಾಲದ ಕೊನೆಯ ಪ್ರಸಿದ್ಧ ಲಿಪಿಕಾರ. ಇವನ ಲಿಪಿಕಲಾಪ್ರೇಮ ಎಷ್ಟಿತ್ತೆಂದರೆ—ಮೊಗಲರು ಬಗ್ದಾದನ್ನು ಮುತ್ತಿ ಜನರನ್ನು ಕಡಿದು ಊರನ್ನು ಸೂರೆ ಮಾಡಿಕೊಳ್ಳುತ್ತಿದ್ದಾಗ, ಯಾಕೂತ್ ಒಂದು ಹಳೆಯ ಮಸೀದಿಯಲ್ಲಿದ್ದು ಕಾಫ್ ('ಕ') ಅಕ್ಷರವನ್ನು ಬಹು ಅಂದವಾಗಿ ಬರೆದು, ತಾನು ಲಿಪಿ ಕಲಿತದ್ದಕ್ಕೆ ಸಾರ್ಥಕವಾಯಿತೆಂದು ಹಿಗ್ಗುತ್ತಿದ್ದನಂತೆ.

ಬಗ್ದಾದ್ ಕ್ಷೀಣವಾದಮೇಲೆ ಕೊಂಚಕಾಲ ಮುಸ್ಲಿಂ ಕಲೆಯ ಮತ್ತು ಸಂಸ್ಕೃತಿಯ ಕೇಂದ್ರಸ್ಥಾನ ಈಜಿಪ್ಟ್ ಮತ್ತು ಇಂಡಿಯ ಆದುವು. ಈ ವೇಳೆಗೆ ಕೂಫಿಕ್ ಲಿಪಿ ಬಳಕೆ ತಪ್ಪಿ, ನಸ್ಕ್ ಲಿಪಿ ಪ್ರಚಾರಕ್ಕೆ ಬಂದಿತ್ತು. ೧೬ನೆಯ ಶತಮಾನದ ಆದಿಯಲ್ಲಿ ಮೂರು ದೊಡ್ಡ ಮುಸ್ಲಿಂ ಸಾಮ್ರಾಜ್ಯಗಳು ಸ್ಥಾಪನೆಯಾದುವು.—ಪಶ್ಚಿಮದಲ್ಲಿ ತುರ್ಕಿ; ಮಧ್ಯ ಏಷ್ಯದಲ್ಲಿ ಇರಾನ್; ಇಂಡಿಯದಲ್ಲಿ ಮೊಗಲ್ ಸಾಮ್ರಾಜ್ಯ. ಈ ಸಾಮ್ರಾಜ್ಯಗಳಲ್ಲೆಲ್ಲ ಮುಸ್ಲಿಂ ಕಲೆ ಚೆನ್ನಾಗಿ ಅಭಿವೃದ್ಧಿ ಹೊಂದಿತು. ತುರ್ಕಿಯಲ್ಲಿ ಕಾಲಿಕ್ ಲಿಪಿಯನ್ನೂ ಕುರಾನ್ ಮತ್ತು ಅರಬ್ಬಿ ಗ್ರಂಥಗಳನ್ನು ಪ್ರತಿಮಾಡುವುದಕ್ಕೆ ನಸ್ಕ್ ಪಿಲಿಯನ್ನೂ, ಸರ್ಕಾರದ ವ್ಯವಹಾರಕ್ಕೆ ರಿಕಾ ಲಿಪಿಯನ್ನೂ, ಚಿತ್ರಕೆಲಸಕ್ಕೆ ಸುಲುಸ್ ಲಿಪಿಯನ್ನೂ ಬಳಸುತ್ತಿದ್ದರು. ತುರ್ಕಿಯ ಸುಲ್ತಾನರು ಸಿರಿಯ, ಈಜಿಪ್ಟ್, ಸ್ಪೆಯ್ನ್ ಇರಾನ್ ಮೊದಲಾದ ದೇಶಗಳ ಕಲಾಭಿಜ್ಞರಿಗೂ ಲಿಪಿಕಾರರಿಗೂ ಉದಾರಾಶ್ರಯವಿತ್ತರು. ಇಸ್ಫಹಾನಿನ ಅಬ್ದುಲ್ ಜಬ್ಬಾರ್ (ಸ.ಕ್ರಿ.ಶ. ೧೮೪೯) ಕಾನ್‌ಸ್ಟಾಂಟಿನೋಪಲಿನಲ್ಲಿ ನೆಲಸಿ ಅಲ್ಲಿಯ ಪ್ರಧಾನ ಮಂತ್ರಿಯ ಕೋರಿಕೆಯ ಮೇಲೆ ಷಹನಾಮ ಪ್ರತಿಮಾಡಿದನು. ಹಮ್ದುಲ್ಲ (ಸ.ಕ್ರಿ.ಶ. ೧೫೨೦) ಮತ್ತು ಹಾಫಿಜ್ ಉಸ್ಮಾನ್ (ಕ್ರಿ.ಶ. ೧೬೯೮) ಇವರು ಇಲ್ಲಿಯ ಪ್ರಸಿದ್ಧ ಲಿಪಿಕಾರರು.

**ಇರಾನ್:** ಇರಾನಿನಲ್ಲಿ ಮೊನ್ನೆ ಮೊನ್ನೆಯವರೆಗೂ ಪ್ರಸಿದ್ಧ ಲಿಪಿಕಾರರಿದ್ದರು. ಈಗಲೂ ಸುಂದರ ಲಿಪಿಕಾರರು ಹಲವರಿದ್ದಾರೆ. ಇರಾನಿ ಲಿಪಿಕಲೆ ತೈಮುರಿ ಮತ್ತು ಸಫವಿದ್ ಆಳಿಕೆಯಲ್ಲಿ ತನ್ನ

ಪರಮೋನ್ನತಿಯನ್ನು ಮುಟ್ಟಿತು. ಹಿಂದೆಯೇ ಹೇಳಿದಂತೆ ಬಗ್‌ದಾದ್ ಕ್ಷೀಣಿಸಿದ ಮೇಲೆ ಕೂಫಿಕ್‌ಲಿಪಿ ಬಳಕೆ ತಪ್ಪಿ, ಪ್ರಚಾರಕ್ಕೆ ಬಂದ ನಸ್‌ಕ್ ಮತ್ತು ಅದರ ತರುವಾಯ ನಾಸ್‌ತಲಿಕ್ ಲಿಪಿಗಳು ಇರಾನಿನಲ್ಲಿಯೂ ರೂಢಿಗೆ ಬಂದುವು. ಈ ಲಿಪಿಗಳ ಮೇಲೆ ಪಲ್ಲವಿಯ ಪ್ರಭಾವವೂ ಬಿದ್ದಂತೆ ಕಾಣುತ್ತದೆ.

**ಇಂಡಿಯ:** ಇತರೆಡೆಗಳಂತೆಯೇ ಇಂಡಿಯದಲ್ಲೂ ಲಿಪಿಕಲೆ ಚಿತ್ರಕಲೆಯೊಡನೆ ಬೆಳೆಯಿತು. ಇಲ್ಲಿಯ ಉತ್ತಮ ಲಿಪಿಕಾರರು ಬಹುಪಾಲು ಇರಾನ್ ಮತ್ತು ಮಧ್ಯ ಏಷ್ಯದಿಂದ ಬಂದವರಾಗಿದ್ದರು. ಇಂಡಿಯದಲ್ಲಿ ನಾಸ್ತಲಿಕ್ ಲಿಪಿ ರೂಢಿಗೆ ಬಂತು. ಅಕ್ಬರನ ಕಾಲದಲ್ಲಿ ಎಂಟುಬಗೆಯ ಬರವಣಿಗೆಗಳಿದ್ದಂತೆ ಅಬುಲ್ ಫಸ್ಸಲ್ ಹೇಳುತ್ತಾನೆ. ಜ಼ರ್ರಿನ್ ಕಲಮ್ (ಸ್ವರ್ಣಲೇಖಿನಿ) ಎಂದು ಪ್ರಸಿದ್ಧನಾದ ಕಾಶ್ಮೀರದ ಮುಹಮ್ಮದ್ ಹುಸೇನ್, ಷಿರಾಸ್ಸಿನ ಅಬ್ದುಸ್‌ಸಮದ್, ಷಾಜಹಾನ್ ಕಾಲದ ಮಿರಾಂ ಹಾಷಿಮ್, ಔರಂಗಜೇಬಿಗೆ ಮೆಚ್ಚಾಗಿದ್ದ ಜವಾಹರ್ ರಕಮ್, ಡೆಲ್ಲಿಯ ಅಲಿ ಅಹ್‌ಮದ್ ಮೊದಲಾದವರು ಮೊಗಲ್ ಕಾಲದ ಲಿಪಿಕಾರರು. ಇವರಲ್ಲಿ ಕೆಲವು ಹಿಂದೂ ಹೆಸರುಗಳೂ ಕಂಡು ಬರುತ್ತವೆ.

**ಚೀನ ಮತ್ತು ಮಲಯ ದ್ವೀಪಸ್ತೋಮ:** ಚೀನಾದಲ್ಲಿ ಲಿಪಿ ಕಲೆ ಬಹುಕಾಲದಿಂದ ಪ್ರಚಾರದಲ್ಲಿದ್ದರೂ ಅಲ್ಲಿಯ ಮುಸ್ಲಿಮರು ಅರಬ್ಬೀ ಲಿಪಿಯಲ್ಲಿ ಹೆಚ್ಚಾಗಿ ಏನೂ ಬಿಟ್ಟುಹೋಗಿಲ್ಲ. ಕಾನ್‌ಟನ್ ಮಸೀದಿಯಲ್ಲಿ ಕ್ರಿ. ಶ ೧೩೫೦ನೆಯ ವರ್ಷದ, ನಸ್‌ಕ್ ಲಿಪಿಯಲ್ಲಿಯ ಶಾಸನವೊಂದಿದೆ. ಮಲಯದ್ವೀಪಗಳಲ್ಲೂ ನಸ್‌ಕ್ ಲಿಪಿ ಪ್ರಚಾರ ದಲ್ಲಿದೆ.

**ಉತ್ತರ ಆಫ್ರಿಕ:** ಮುಸ್ಲಿಂ ದೇಶಗಳಲ್ಲೆಲ್ಲ ಒಂದೇ ವರ್ಣಮಾಲೆ ಪ್ರಚಾರದಲ್ಲಿದ್ದರೂ ದೇಶಾನುಗುಣವಾಗಿ ಮಾರ್ಪಾಟುಗಳೂ ಇದ್ದುವು. ಉತ್ತರ ಆಫ್ರಿಕ ಮತ್ತು ಸ್ಪೈಯ್‌ನ್‌ನಲ್ಲಿ ಕೈರವಾನ್ ಬರವಣಿಗೆ ರೂಢಿಯಲ್ಲಿತ್ತು. ಕ್ರಮೇಣ ಆಫ್ರಿಕದಲ್ಲಿ ಪೂರ್ವದೇಶದ ಲಿಪಿಯನ್ನೇ ಹೋಲುವ ಟುನೀಸಿಯನ್, ಮೊನಚಾಗಿದ್ದ ಆಲ್‌ಜೀರಿಯನ್, ಚಟ್ಟೆ

ನೆಯ ಥ್ಲಾಸಿ, ದಪ್ಪನೆಯ ಸುದಾನಿ ಎಂಬ ನಾಲ್ಕು ತರದ ಬರವಣಿಗೆಗಳು ರೂಢಿಗೆ ಬಂದವು.

## ಮಡಕೆಕುಡಿಕೆಗಳು

ಇರಾನ್, ಈಜಿಪ್ಟ್, ಮತ್ತು ಸಿರಿಯ ಬಹುಪುರಾತನ ಕಾಲದಿಂದಲೂ ಗೋಡೆಗೆ ಹೊದಸುವ ನಾನಾಬಣ್ಣದ ಮತ್ತು ನಾನಾ ಮಾದರಿಯ ಬಿಲ್ಲೆಗಳ ತಯಾರಿಕೆಗೆ ಪ್ರಸಿದ್ಧವಾಗಿದ್ದುವು. ಸೂಸದಲ್ಲಿ ಡೇರಿಯಸ್ ಚಕ್ರವರ್ತಿಯು ಅರಮನೆಗೆ ಹೊದಿಸಿದ್ದ ೨,೫೦೦ ವರ್ಷಗಳ ಕೆಳಗಿನ ಬಿಲ್ಲೆಗಳು ಈಗಲೂ ಪ್ಯಾರಿಸ್ಸಿನಲ್ಲಿವೆ. ಸಸಾನಿಯನ್ನರ ಆಳಿಕೆಯಲ್ಲಿ ಈ ಕೈಗಾರಿಕೆ ಇರಾನ್ ಮತ್ತು ಸಿರಿಯಾಗಳಲ್ಲಿ ಬಹಳ ಏಳಿಗೆಗೆ ಬಂತು. ಮುಸ್ಲಿಂ ದಾಳಿಯ ಮೊದಮೊದಲಿನಲ್ಲಿ ಅಡಚಣೆ ಒದಗಿದರೂ ಕ್ರಮೇಣ ಮರಳಿ ಎಚ್ಚತ್ತು ಮುಸ್ಲಿಂ ದೇಶಗಳಿಗೆಲ್ಲ ಹರಡಿತು.

ಸ್ಪೈಯ್‌ನಿನ 'ಮೂರ್' ಮಡಕೆಕುಡಿಕೆಗಳು ಇತರ ಮುಸ್ಲಿಮ್ ದೇಶದವುಗಳಿಂದ ಬೇರೆಯಾಗಿ, ದ್ರಾಕ್ಷಿ ಬಳ್ಳಿ, ಇತರ ಸಸ್ಯಗಳು, ವಂಶ ಲಾಂಛನ, ಇವೇ ಮೊದಲಾದ ಚಿತ್ರಗಳಿಂದ ಕೂಡಿರುತ್ತಿದ್ದುವು. ಭೂಗೋಳ ಶಾಸ್ತ್ರಜ್ಞನಾದ ಇದ್‌ರಿಸಿ, ಇಬ್‌ನ್-ಏ-ಸೈದ್ (ಕ್ರಿ. ಶ. ೧೨೪೪–೮೬), ಇಬ್‌ನ್ ಉಲ್ ಹಾತಿಬ್ (ಕ್ರಿ. ಶ. ೧೩೧೩–೭೪), ಇಬ್‌ನ್ ಏ ಬತೂತ (ಕ್ರಿ. ಶ ೧೩೫೦) ಮೊದಲಾದವರು ಈ ಕಲೆಯ ವಿಷಯವಾಗಿ ಬರೆದಿದ್ದಾರೆ. ಗ್ರ್ಯಾನಡ ಪ್ರಾಂತದ ಮಲಾಗ ಮತ್ತು ವಾಲೆನ್‌ಸಿಯಗಳು ಈ ಕಲೆಗೆ ಕೇಂದ್ರಗಳಾಗಿದ್ದುವು. ಮಲಾಗದಲ್ಲಿ ಚಿನ್ನದ ಮುಲಾಮಿನ (ಹೊಂಬಣ್ಣದ) ಮತ್ತು ಹೊಳಪಿನ ಮಣ್ಣು ಪಾತ್ರೆಗಳು ತಯಾರಾಗುತ್ತಿದ್ದುವು. ಗ್ರ್ಯಾನಡ ಅರಮನೆಯ ಬಿಲ್ಲೆಗಳು ಮಲಾಗದಲ್ಲಿ ತಯಾರಾದವು. ಅಲ್‌ಮೀರಿಯ ಮತ್ತು ಮುರ್‌ಸಿಯಗಳು ಹೊಂಬಣ್ಣದ ಮಡಕೆಯ ಕೆಲಸಕ್ಕೆ ಹೆಸರಾಗಿದ್ದುವು. ಈ ಪಾತ್ರೆಗಳ ಮೇಲೆ ಅಂದವಾದ ಚಿತ್ರಗಳೂ ಲಿಪಿಗಳೂ ಕೆತ್ತಿರುತ್ತಿದ್ದುವು. ಇವು ಮುಸ್ಲಿಮರಿಗೇ ಅಲ್ಲದೆ ಸರ್ವಜನರಿಗೂ ಆದರಣೀಯವಾಗಿದ್ದುವು. ಒಮ್ಮೆ ಒಬ್ಬ ಕ್ರೈಸ್ತ ಪಾದ್ರಿ "ಅವರಿಗೆ (ಮುಸ್ಲಿಮರಿಗೆ) ನಮ್ಮ ಧರ್ಮದ

ಕೊರತೆ, ನಮಗೆ ಅವರ ಕಲೆಯ ಕೊರತೆ” ಎಂದು ಹೇಳಿದನಂತೆ. ಅಲ್‌ಹಂಬ್ರ ಅರಮನೆಯದಾದ, ಅರಬ್ಬಿ ಲಿಪಿ ಕೆತ್ತಿರುವ ಒಂದು ತಟ್ಟೆಯೂ ಹೂಜಿಯೂ ಸಿಕ್ಕಿವೆ.

ಇರಾನಿನಂತೆ ಈಜಿಪ್ಟ್ ಮತ್ತು ಸಿರಿಯಗಳೂ ನುಣ್‌ಹೊಳಪಿನ ಮಣ್ಣು ಪಾತ್ರೆಗಳಿಗೂ ಗಾಜು ತಯಾರಿಕೆಗೂ ಪ್ರಸಿದ್ಧವಾಗಿದ್ದುವು. ಸಿರಿಯದಲ್ಲಿ ರಕ್ಕ ಮಣ್ಣುಪಾತ್ರೆಗಳಿಗೆ ಪ್ರಸಿದ್ಧವಾಗಿತ್ತು. ಡಮಾಸ್ಕಸ್ಸೂ ಈ ಕೈಗಾರಿಕೆಗೆ ಪ್ರಸಿದ್ಧವಾಗಿತ್ತು. ಬಿಳಿಯೊಡಲಮೇಲೆ ಬಣ್ಣಬಣ್ಣದ ಚಿತ್ರಗಳನ್ನು ಚಿತ್ರಿಸುತ್ತಿದ್ದರು. ಡಮಾಸ್ಕಸ್ಸಿನಲ್ಲಿ ತಯಾರಾದ ಸಾಮಾನುಗಳು ಬ್ರಿಟಿಷ್ ವಸ್ತುಸಂಗ್ರಹ ಶಾಲೆಯಲ್ಲೂ, ಪ್ಯಾರಿಸ್ಸಿನ ಲೂವರ್ ಅರಮನೆಯಲ್ಲೂ ಇವೆ.

ಈ ಪಾತ್ರೆಗಳಮೇಲಿನ ಚಿತ್ರಗಳು ಮೊದಮೊದಲು ಮನುಷ್ಯರದೂ ಇತರ ಪ್ರಾಣಿಗಳದೂ ಆಗಿರುತ್ತಿದ್ದುವು. ಆದರೆ, ಕ್ರಮೇಣ ಇದು ಹೋಗಿ ರೇಖಾಚಿತ್ರಗಳೂ ಹೂವಿನ ಚಿತ್ರಗಳೂ ರೂಢಿಗೆ ಬಂದುವು. ಸಿರಿಯದ ಗಾಜು ಪಾಶ್ಚಾತ್ಯ ದೇಶಗಳಲ್ಲಿ ಬಹು ಮೆಚ್ಚಿಗೆ ಪಡೆದು, ಅದಕ್ಕೆ ತುಂಬ ಗಿರಾಕಿಯಿತ್ತು.

ತುರ್ಕಿಯ ಮಣ್ಣಿನ ಪಾತ್ರೆಗಳು ಇರಾನಿನಿಂದ ಬಂದುವೆಂದು ಮೊದಲು ಯೋಚಿಸಿದ್ದರು. ಆದರೆ ಅವು ಏಷ್ಯಾ ಮೈನರ್ ಮತ್ತು ರೋಡ್ಸ್ ಮೊದಲಾದ ಗ್ರೀಕ್ ಸಮುದ್ರದ ದ್ವೀಪಗಳ ಸ್ಥಳೀಯ ಕೆಲಸಗಳೇ ಎಂಬ ಅಭಿಪ್ರಾಯ ಈಗ ನಿಂತಿದೆ. ೧೬—೧೭ನೆಯ ಶತಮಾನದಲ್ಲಿ ಈ ಕೈಗಾರಿಕೆ ಬಹಳ ಏಳಿಗೆಗೆ ಬಂತು. ಸಾಮಾನ್ಯವಾಗಿ ಬಿಳಿಯೊಡಲಿನಮೇಲೆ ನೀಲಿ, ಹಸುರು, ಕೆಂಪು ಮೊದಲಾದ ಗಾಢವರ್ಣಗಳ ಚಿತ್ರಗಳನ್ನು ಚಿತ್ರಿಸಿ ನುಣ್‌ಹೊಳಪನ್ನು ಕೊಡುತ್ತಿದ್ದರು. ಚಿತ್ರಗಳ ಮಾದರಿಯಲ್ಲಿ ಇರಾನಿ ಮತ್ತು ತುರ್ಕಿ ಸಾಮಾನುಗಳಿಗೆ ವ್ಯತ್ಯಾಸವಿತ್ತು. ಮನುಷ್ಯ ಚಿತ್ರಗಳು ತುರ್ಕೀ ಸಾಮಾನಿನಲ್ಲಿ ಅಪುರೂಪ. ಫ್ರಿಜಿಯ, ಕುತಯಿಯ, ದಮಿಟೊಕ, ಲಿಂದಸ್ ಮೊದಲಾದ ಸ್ಥಳಗಳಲ್ಲಿ ಬಿಲ್ಲೆಗಳು ತಯಾರಾಗುತ್ತಿದ್ದುವು. ಡಮಾಸ್ಕಸ್ ಚಿತ್ರ ಕೆತ್ತಿದ ಹೊಳೆಯುವ ಅಂದವಾದ ಬಿಲ್ಲೆಗಳಿಗೆ ಹೆಸರುಪಡೆದಿತ್ತು.

**ಇರಾನ್ ಮತ್ತು ಮಧ್ಯಏಷ್ಯ:** ಇವು ಇಸ್ಲಾಂ ಕಲೆ ಮತ್ತು ವಿದ್ಯೆಗಳ ಕೇಂದ್ರಗಳಾಗಿದ್ದುವು. ಇರಾನ್ ಹೊಳಪು ಬಿಲ್ಲೆಗಳಿಗೆ ತವರು ಮನೆ ಅಲ್ಲದೆ ಬಹು ಹಿಂದಿನ ಕಾಲದಿಂದಲೂ ಇರಾನಿನಲ್ಲಿ ಗಾಜು ತಯಾರಿಕೆ ಗೊತ್ತಿತ್ತು. ಅವೆಸ್ತದಲ್ಲಿ ಇದನ್ನು ಹೇಳಿರುವುದಲ್ಲದೆ, ಕೆಲವು ಪುರಾತನ ಗಾಜಿನ ಸಾಮಾನುಗಳು ದೊರೆತೂ ಇವೆ. ಇರಾನ್ ಪೂರ್ವ ಮತ್ತು ಪಶ್ಚಿಮ ದೇಶಗಳ ಮೇಲೆ ತಾನು ಪ್ರಭಾವ ಬೀರಿ, ತಾನೇ ಚೀನಾ ಪ್ರಭಾವಕ್ಕೆ ಒಳಗಾಗಿತ್ತು. ಆದರೆ, ಇರಾನಿನ ಪಿಂಗಾಣಿ ಸಾಮಾನುಗಳು ಚೀನದವಕ್ಕೆ ಕಡಮೆ ಏನೂ ಇರದೆ, ಬಣ್ಣಗಳ ಹೊಂದಿಕೆ, ಚಿತ್ರಗಳ ಸಮತೆ, ನಯ—ಮೊದಲಾದುವುಗಳಿಗೆ ಹೆಸರಾಗಿದ್ದುವು. ಕ್ರಿ. ಪೂ. ೫-೪ನೆಯ ಶತಮಾನಗಳ ಮಣ್ಣು ಪಾತ್ರೆಗಳು ಮತ್ತು ಬಿಲ್ಲೆಗಳು ಸಿಕ್ಕಿವೆ. ಸೂಸಾದಲ್ಲಿ ದೊರೆತಿರುವ ಬಿಲ್ಲೆಗಳ ಕಮಾನುಚಿತ್ರಗಳೂ ಮೆರುಗು ಬಣ್ಣಗಳೂ ಆ ಕಾಲದ ಇರಾನಿ ಕಲೆಗೆ ನಿದರ್ಶನಪ್ರಾಯವೂ ಹೆಸರು ತರತಕ್ಕವೂ ಆಗಿವೆ. ಉರುಮಿಯ, ಗಿಲಾನ್, ತಲಿಷ್—ಮೊದಲಾದೆಡೆಗಳಲ್ಲಿ ದೊರೆತಿರುವ ಹೂಜಿ ಮತ್ತು ತಟ್ಟೆಗಳು ಅಖಿಮಿನಿಯನ್ ಕಾಲಕ್ಕಿಂತಲೂ ಹಿಂದಿನವೆಂದು ಊಹಿಸುತ್ತಾರೆ. ಅವೆಸ್ತದಲ್ಲಿ ಹೇಳಿರುವ ಕೆಲವು ಕಲೆಗಳಲ್ಲಿ ಕುಂಬಾರಕಲೆಯೂ ಒಂದು. ಇಸ್‌ಫಹಾನ್ ಸಮೀಪದಲ್ಲಿ ದೊರೆಯುವ ಅತಿಷ್‌ಕದಹ್ (ಅಗ್ನಿದೇವಾಲಯ)ಗಳ ಪಾಳಿನಲ್ಲಿ ಹೂಜಿಗಳೂ, ಬಿಲ್ಲೆಗಳೂ, ಚಿತ್ರಕೆತ್ತಿದ ಇತರ ಸಾಮಾನುಗಳೂ ಕಂಡುಬರುತ್ತವೆ.

ಇರಾನಿನ ಮಣ್ಣುಪಾತ್ರೆಗಳಲ್ಲಿ ಇಸ್ಲಾಮಿನ ಮೊದಮೊದಲು ಸಸಾನಿಯನ್ ಪ್ರಭಾವವೇ ಕಂಡುಬರುತ್ತದೆ. ಸಮನಿ ಮತ್ತು ಸೆಲ್‌ಜುಕಿ ಕಾಲದಲ್ಲಿ ಚೀನಾಪ್ರಭಾವ ಕಂಡು ಬರುತ್ತದೆ. ಈಗ ದೊರೆತಿರುವ ೧೨ನೆಯ ಶತಮಾನದ ಮಣ್ಣು ತಟ್ಟೆಯೊಂದರಲ್ಲಿ ಕುಣಿಯುತ್ತಿರುವ ಮನುಷ್ಯಚಿತ್ರವಿದೆ. ಇದು ಅಂಗಭಾವಗಳಲ್ಲಿ ಚೀನಿಯರನ್ನು ಹೋಲುತ್ತದೆ. ಆದರೆ ಮಧ್ಯ ಏಷ್ಯದಲ್ಲಿ ದೊರೆಯುವ ಅದೇ ಕಾಲದ ಸಾಮಾನುಗಳಲ್ಲಿ ಮನುಷ್ಯನ ಅಥವಾ ಪ್ರಾಣಿಯ ಚಿತ್ರಗಳಿಲ್ಲದೆ ಇರಾನಿ ಪ್ರಭಾವ ಕಂಡುಬರುತ್ತದೆ.

ರೆಯ್ ಮತ್ತು ಸ್ತನ್‌ಜಾನ್‌ಗಳು ಮಣ್ಣಿನ ಪಾತ್ರೆಗಳ ತಯಾರಿಕೆಗೆ ಹೆಸರಾಗಿದ್ದುವು. ರೆಯ್‌ನಲ್ಲಿ ದೊರೆತ, ಕ್ರಿ.ಶ. ೧೨೧೭ರಲ್ಲಿ ತಯಾರಾದ, ನಕ್ಷತ್ರಾಕಾರದ ಬಿಲ್ಲೆಯೊಂದರಲ್ಲಿ ಚುಕ್ಕೆಪೊಲದ ಚಿತ್ರವಿದೆ. ಸೆಲ್‌ಜುಕ ದೊರೆಗಳ ಲಾಂಛನವಾಗಿದ್ದು ತರುವಾಯ ರೋಮನ್ ಸಾಮ್ರಾಜ್ಯದ ಲಾಂಛನವಾದ ಇತ್ತಲೆಯ ಹದ್ದಿನ ಚಿತ್ರ ಕೆತ್ತಿದ ಪಾತ್ರೆಗಳೂ ಸಿಕ್ಕಿವೆ. ರೆಯ್ ನಾಶವಾದ ಮೇಲೆ ಸುಲ್ತಾನಾಬಾದ್ ಮತ್ತು ವೆರಾಮಿನ್‌ಗಳು ಪ್ರಸಿದ್ಧಿಗೆ ಬಂದುವು.

ಮೊಗಲರು ದಾಳಿಯಿಟ್ಟು ನೆಲಸಿದ ಮೇಲೆ ಇರಾನಿಗೂ ಚೀನಕ್ಕೂ ಸಂಪರ್ಕ ಹೆಚ್ಚಿ, ಇರಾನಿ ಕಲೆಗಳು ಚೀನಾಪ್ರಭಾವಕ್ಕೆ ಸಿಕ್ಕಿ ಮತ್ತೆ ತಲೆಯೆತ್ತಿದುವು. ಚೀನಿಯರ ಲಕ್ಷಣಗಳೂ, ಸರ್ಪ, ಕಮಲ, ಮೊದಲಾದ ಚಿತ್ರಗಳೂ ಈ ಕಾಲದಲ್ಲಿ ಕಂಡುಬರುತ್ತವೆ. ಮೊಗಲರ ತರುವಾಯ ಅವರ ಬಂಧುಗಳೇ ಆದ ತೈಮೂರರು ಬಂದರು. ತರುವಾಯ ಬಂದ ಸಫವಿಯರ ಕಾಲ ಇರಾನಿನ ಕಲೆಯಲ್ಲಿ ಸ್ವರ್ಣಯುಗವೆನ್ನಬಹುದು. ಮನುಷ್ಯ, ಪ್ರಾಣಿ, ಸಸ್ಯ, ಲಿಪಿ, ಮೊದಲಾದ ಚಿತ್ರಗಳು ಈ ಕಾಲದ ಮಣ್ಣಿನ ಸಾಮಾನುಗಳಲ್ಲಿ ಕಂಡುಬರುತ್ತವೆ. ಈ ಕಾಲದಲ್ಲಿ ಚೀನಾ ಪ್ರಭಾವ ಕಂಡುಬಂದರೂ ಮನುಷ್ಯ ಚಿತ್ರಗಳಲ್ಲಿ ಇರಾನಿಯನ್ ಅಂಗಭಾವಗಳೇ ಹೆಚ್ಚಾಗಿ ಕಂಡುಬರುತ್ತದೆ. ಇರಾನಿನ ಮಣ್ಣಿನ ಸಾಮಾನು ಕೈಗಾರಿಕೆ ಮಹಾ ಷಹಅಬ್ಬಾಸಿನ (ಕ್ರಿ.ಶ. ೧೫೮೭-೧೬೨೯) ಆಳಿಕೆಯಲ್ಲಿ ತನ್ನ ಮೇಲ್‌ನೆಲೆ ಮುಟ್ಟಿತು. ಇವನ ಕಾಲದಲ್ಲಿ ಯೂರೋಪ್ ಮತ್ತು ಚೀನದಿಂದ ಬಂದು ಪ್ರೋತ್ಸಾಹ ಪಡೆದ ಹಲವು ವ್ಯಾಪಾರಿಗಳೂ ಕಲೆಗಾರರೂ ಹೊಸ ಹೊಸ ಮಾದರಿಗಳನ್ನು ಪ್ರಚಾರಕ್ಕೆ ತಂದರು.

**ಇಂಡಿಯ:** ಹಿಂದೂ ಮುಸ್ಲಿಂ ಕಾಲದ ಹೊಳಪು ಬಿಲ್ಲೆಗಳು ಇರಾನ್ ಮತ್ತು ಮಧ್ಯ ಏಷ್ಯದ ಮಾದರಿಯವು. ಈ ಕಾಲಕ್ಕೆ ಹಿಂದೆಯೇ ಈ ಕಲೆ ಹಿಂದುಗಳಿಗೆ ತಿಳಿದಿರಲಿಲ್ಲವೆಂದಲ್ಲ. ಇಲ್ಲಿ ಇಸ್ಲಾಮಿಗೆ ಸಂಬಂಧಪಟ್ಟಂತೆ ಮಾತ್ರ ಈ ಕಲೆಯ ವಿಷಯವನ್ನು ತೆಗೆದುಕೊಂಡು ಹೋಗುತ್ತದೆ. ಘಸ್ನೀರಾಜರ ಆಳಿಕೆಯಲ್ಲಿ ಘಸ್ನದಲ್ಲಿ ಈ

ಹೊಳಪು ಚಿಟ್ಟಿಗಳು ರೂಢಿಗೆ ಬಂದು, ಆ ಕಾಲದಲ್ಲಿ ಪಂಜಾಬನ್ನು ಆಳುತ್ತಿದ್ದ ಮುಸ್ಲಿಮರಲ್ಲೂ ಬಳಕೆಗೆ ಬಂತು. ಆದರೆ, ಆ ಕಾಲದಲ್ಲಿ ಇಂಡಿಯದಲ್ಲಿ ತಯಾರಾಗುತ್ತಿದ್ದ ಚಿಟ್ಟಿಗಳು ಅಂದದಲ್ಲಾಗಲಿ ಬಣ್ಣದಲ್ಲಾಗಲಿ ಇರಾನಿನದಕ್ಕೆ ಸಮನಾಗಿರಲಿಲ್ಲ. ಹೊಳಪು ಚಿಟ್ಟಿಯ ಮೊತ್ತಮೊದಲ ತಯಾರಿಕೆಯ ಮಾದರಿಗಳು ಮುಲ್ತಾನಿನಲ್ಲಿಯ ಬಹಾಉಲ್‌ಹಕ್ (ಕ್ರಿ.ಶ. ೧೨೬೭–೭೬) ಗೋರಿಯ ಕಟ್ಟಡದಲ್ಲಿಯೂ ಇವನ ಮೊಮ್ಮಗ ರುಕ್ನುದ್ದೀನ್‌ನ ಗೋರಿಯ ಕಟ್ಟಡದಲ್ಲಿಯೂ ಇವೆ. ಬಂಗಾಳದ ತಂತಿಪುರ (ಕ್ರಿ.ಶ. ೧೪೮೦) ಮತ್ತು ಚೋಟಾಸೋನ್ (ಕ್ರಿ.ಶ. ೧೫೦೦) ಮಸೀದಿಗಳು, ಗ್ವಾಲಿಯರಿನ ರಾಜಾ ಮಾನ್‌ಸಿಂಗ್ ಅರಮನೆಯೂ, ಹೊಳಪು ಚಿಟ್ಟಿಗಳಿಂದ ಅಲಂಕೃತವಾಗಿವೆ. ಸಿಕಂದರ ಮತ್ತು ಹುಮಾಯೂನರ ಗೋರಿಗಳಲ್ಲಿಯೂ ಇಂಥ ಚಿಟ್ಟಿಗಳ ಜಾಲವನ್ನು ಕೆತ್ತಿ ಮಾಡಿರುವ ಚಿತ್ರಗಳಿವೆ. ಲಾಹೋರ್ ಕೋಟೆಯ ಗೋಡೆಯಲ್ಲಿಯ ಹೊಳಪು ಚಿಟ್ಟಿಗಳ ಚಿತ್ರ ಕೆಲಸ ಬಹು ಪ್ರಸಿದ್ಧವಾದುದು. ಇದರಲ್ಲಿ ಆನೆಗಳ ಕುಸ್ತಿಯೂ ಒಂಟೆಗಳ ಚಿತ್ರವೂ ಇವೆ. ಈ ಚಿತ್ರಕೆಲಸದಲ್ಲಿ ಪೋಲೋ (ಕುದುರೆ ಚೆಂಡಾಟ), ಆನೆ ಕಾಳಗ ಮೊದಲಾದ ಅಂದವಾದ ಚಿತ್ರಗಳಿವೆ. ಔರಂಗಜೇಬನ ಕಾಲದಲ್ಲಿ ಆಗ್ರಾದಲ್ಲಿ ಕಟ್ಟಿದ 'ಚೀನೀ ಕಾ ರೌಜಾ' ಎಂಬ ಕಟ್ಟಡಕ್ಕೆ ನೀಲಿ, ಹಸುರು, ಮತ್ತು ಕಿತ್ತಳೆ ಬಣ್ಣದ 'ಕಾಷಿ' ಚಿಟ್ಟಿಗಳನ್ನು ಹೊದಿಸಿದೆ (ಚಿಟ್ಟಿಗಳು ಮೊದಲು ಪರ್ಶಿಯಾದ ಕಾಷಾನ್ ಎಂಬ ಊರಿನಲ್ಲಿ ಆಗುತ್ತಿದ್ದುದರಿಂದ ಅವಕ್ಕೆ 'ಕಾಷಿ' ಎಂಬ ಹೆಸರು ಬಂದಿತೆಂದು ಒಂದೆಂದೇ ತಿಳಿಸಿದೆ). ೧೮ನೆಯ ಶತಮಾನದಲ್ಲಿ ಯೂರೋಪಿಯನ್ನರು ಬಂದು ನೆಲಸುವವರೆಗೂ ಈ ಕಾಷಿ ಚಿಟ್ಟಿಗಳು ಇದ್ದುವು. ಇಂಡಿಯದಲ್ಲಿ ಹೊಳಪು ಚಿಟ್ಟಿಗಳ ತಯಾರಿಕೆಗೆ ಮುಲ್ತಾನ್ ಮೊದಲಾದ ಸ್ಥಳಗಳು ಪ್ರಸಿದ್ಧವಾಗಿದ್ದುವು. ಆನೆ, ಜಿಂಕೆ, ಹೂವುಗಳು. ಇವೇ ಮೊದಲಾದ ಚಿತ್ರಗಳು ಇಂಡಿಯದ ಹೊಳಪು ಚಿಟ್ಟಿಗಳಲ್ಲಿ ಕಾಣಬರುತ್ತವೆ.

## ಬಟ್ಟೆ ನೆಯ್ಗೆ ಜಮಖಾನ ಮೊದಲಾದುವು :

ಪಶ್ಚಿಮೇಷ್ಯದ, ಸಿರಿಯ, ಇರಾನ್ ಮತ್ತು ಮಧ್ಯ ಏಷ್ಯಾಗಳಲ್ಲಿ ತಯಾರಾಗುತ್ತಿದ್ದ ಬಟ್ಟೆಗಳು ಯೂರೋಪಿನಲ್ಲೆಲ್ಲ ಮಾರಾಟವಾಗು

ತ್ತಿದ್ದುವು. ಆದರಲ್ಲೂ ರೇಶ್ಮೆ ಮತ್ತು ಜಮುಖಾನಗಳಿಗೆ ಬಹಳ ಗಿರಾಕಿಯಿತ್ತು. ಅರಮನೆಗಳಲ್ಲಿ ರಾಜರೂ ಚರ್ಚುಗಳಲ್ಲಿ ಪಾದ್ರಿಗಳೂ ಇವನ್ನು ಮೆಚ್ಚುತ್ತಿದ್ದರು. ಮಸ್‌ಲಿನ್ (ಮೆಸೊಪೊಟೇಮಿಯದ ಮುಸೂಲ್ ಪಟ್ಟಣದಿಂದ ಬಂದ ಹೆಸರು), ಡೆಮಾಸ್ಕ್ (ದಮಾಸ್ಕಸ್ಸಿನಿಂದ), ಬಲ್‌ದಾಚೀನಿ (ಬಗ್‌ದಾದಿನಿಂದ), ಕಾಟನ್ (ಅರಬ್ಬಿ, ಕುತನ್), ಫ್ಯುಸ್ತಿಯನ್ (ಈಜಿಪ್ಟಿನ ಫುಸ್ತಾತಿನಿಂದ), ಟಫ್ಟೆಟ (ಇರಾನಿ—ತಫ್ತ್‌ತ), ಟಾಬಿಸ್ (ಬಗ್‌ದಾದಿನಲ್ಲಿಯ ರೇಶ್ಮೆ ತಯಾರಿಕೆಯ ಅತ್ತಾಬಿಕ್ ಎಂಬ ಮನೆತನದ ಹೆಸರಿನಿಂದ)—ಇವೇ ಮೊದಲಾದ ಯೂರೋಪಿನಲ್ಲಿ ಪ್ರಚಾರದಲ್ಲಿರುವ ಶಬ್ದಗಳು ಇದಕ್ಕೆ ನಿದರ್ಶನವಾಗಿವೆ. ಬಗ್‌ದಾದ್ ರೇಶ್ಮೆ ತಯಾರಿಕೆಯ ಕೇಂದ್ರಗಳಲ್ಲಿ ಒಂದಾಗಿತ್ತು. ಮೊಗಲರು ಇರಾನಿಗೆ ದಾಳಿಯಿಟ್ಟು, ಇರಾನಿಗೂ ಚೀನಕ್ಕೂ ಸಂಪರ್ಕವೇರ್ಪಟ್ಟಾಗ ಇರಾನಿನ ಮತ್ತು ಮಧ್ಯ ಏಷ್ಯದ ಕೆಲವು ಮುಸ್ಲಿಮರು ಚೀನಾದಲ್ಲಿ ನೆಲಸಿದರು. ಇವರಲ್ಲಿ ರೇಶ್ಮೆ ನೆಯ್ಗೆಯವರೂ ಇದ್ದರು. ಇವರೂ ಚೀನದ ನೆಯ್ಗೆಯವರೂ ಉತ್ತಮವಾದ ರೇಶ್ಮೆಯನ್ನು ತಯಾರಿಸಿ ಪಶ್ಚಿಮ ದೇಶಗಳಿಗೆ ಕಳುಹುತ್ತಿದ್ದರು. ಚೀನಾಕ್ಕೂ ಯೂರೋಪಿಗೂ ನಡೆಯುತ್ತಿದ್ದ ರೇಶ್ಮೆ ವ್ಯಾಪಾರ ಕ್ರಿ.ಶ. ೬ನೆಯ ಶತಮಾನದಿಂದ ಇರಾನಿಗಳ ಕೈಯಲ್ಲಿತ್ತು. ಸಸಾನಿಯನ್ ಆಳಿಕೆಯಲ್ಲಿ ರೋಮನ್ನರಿಗೂ ಇರಾನಿಗಳಿಗೂ ರೇಶ್ಮೆ ವ್ಯಾಪಾರದಲ್ಲಿ ಮೇಲಾಟಕ್ಕೆ ಮೊದಲಾಯಿತು. ಇರಾನಿಗಳ ಕೈಕೆಳಗೆ ಮದಾಯನ್, ತಬ್‌ರೀಸ್—ಮೊದಲಾದೆಡೆಗಳಲ್ಲೂ, ರೋಮನ್ನರ ಕೈಕೆಳಗೆ ದಮಾಸ್ಕಸ್ ಮತ್ತು ಸಿರಿಯ ಇತರೆಡೆಗಳಲ್ಲೂ ರೇಶ್ಮೆ ತಯಾರಾಗುತ್ತಿತ್ತು. ಅರಬರ ಆಳಿಕೆಯಲ್ಲಿ ಬಗ್‌ದಾದ್, ಅಲೆಗ್ಸಾಂಡ್ರಿಯ, ಅಲೆಪ್ಪೊ, ದಮಾಸ್ಕಸ್, ತಬ್‌ರೀಸ್—ಮೊದಲಾದೆಡೆಗಳಲ್ಲಿ ರೇಶ್ಮೆ ವ್ಯಾಪಾರ ನಡೆಯುತ್ತಿತ್ತು.

ಇರಾನಿನ ರೇಶ್ಮೆ ಬಟ್ಟೆಗಳಮೇಲೆ ಸಸ್ಯಗಳ, ಪಕ್ಷಿಗಳ ಮತ್ತು ಪ್ರಾಣಿಗಳ ಅಂದವಾದ ಚಿತ್ರಗಳು ನೆಯ್ದಿರುತ್ತಿದ್ದುವು. ಈ ಬಟ್ಟೆಗಳ ಮಾದರಿಗಳು ಯೂರೋಪಿನ ಹಲವು ವಸ್ತುಸಂಗ್ರಹ ಶಾಲೆಗಳಲ್ಲೂ ಚರ್ಚುಗಳಲ್ಲೂ ಈಗಲೂ ಇವೆ. ಇರಾನಿಯನ್ನರು ಇಸ್ಲಾಮಿಗಳಾದ

ಮೇಲೂ ತಮ್ಮ ಹಳೆಯ ಸಂಪ್ರದಾಯವನ್ನೇ ಉಳಿಸಿಕೊಂಡು ಪಕ್ಷಿ, ಪ್ರಾಣಿ ಮೊದಲಾದ ಚಿತ್ರಗಳ ಬಟ್ಟೆಯನ್ನು ನೆಯ್ಯುತ್ತಿದ್ದರು. ಇಸ್ಲಾಂ ತರುವಾಯದ ರೇಶ್ಮೆ ತಯಾರಿಕೆಯಲ್ಲಿ ಮೊದಮೊದಲು ಇರಾನಿ ಪ್ರಭಾವವೂ, ಅನಂತರ ಮೊಗಲ್ ದಾಳಿಯಾದಮೇಲೆ ಚೀನಾ ಪ್ರಭಾವವೂ ಕಂಡುಬರುತ್ತವೆ. ಪ್ಯಾರಿಸ್ಸಿನ ಲೂವರ್ ಅರಮನೆಯಲ್ಲಿರುವ ಬಹು ಪ್ರಾಚೀನ ರೇಶ್ಮೆ ಬಟ್ಟೆ ಖೊರಸ್ಸಾನಿನಲ್ಲಿ ೧೦ನೆಯ ಶತಮಾನದಲ್ಲಿ ತಯಾರಾದದ್ದು. ೧೧-೧೨ನೆಯ ಶತಮಾನಗಳ ಬಟ್ಟೆಗಳು ಕೆಲವು ರೈಪಾಳಿನಲ್ಲಿ ಸಿಕ್ಕಿವೆ. ತೈಮುರಿ ಆಳಿಕೆಯ ಯಸ್ದ್, ರಷ್ತ್, ಇಸ್ಫಹಾನ್, ಕಾಷಾನ್, ಮೊದಲಾದ ಸ್ಥಳಗಳಲ್ಲಿ ರೇಶ್ಮೆ ತಯಾರಾಗುತ್ತಿತ್ತು. ಚೀನಾ ಪ್ರಭಾವ ಕಡಮೆಯಾಗಿ ಮತ್ತೆ ಇರಾನಿ ಪ್ರಭಾವ ಕಂಡುಬಂತು. ಕಾಷಾನಿನಲ್ಲಿ ಮುಖಮಲ್ಲೂ ತಯಾರಾಗುತ್ತಿತ್ತು. ಈ ಪಟ್ಟಣಗಳು ಈಗಲೂ ಹತ್ತಿ, ಉಣ್ಣೆ ಮತ್ತು ರೇಶ್ಮೆ ಬಟ್ಟೆಗಳಿಗೆ ಹೆಸರಾಗಿವೆ. ಇರಾನಿಯನ್ನರು ಬಟ್ಟೆಗಳನ್ನು ಅಂದವಾದ ಹಸೆಗಳಿಂದ ಕರೆಕಟ್ಟಿ, ಪುರಾಣ ಕಥೆಗಳ ದೃಶ್ಯಗಳನ್ನು ನೆಯ್ಯುತ್ತಿದ್ದರು.

ಇರಾನಿನ ಜಮಖಾನ ಬಹು ಪುರಾತನ ಕಾಲದಿಂದಲೂ ಪ್ರಸಿದ್ಧವಾದದ್ದು. ಅವೆಸ್ತದಲ್ಲಿ ಇದರ ಪ್ರಸ್ತಾಪವಿದೆ. ಹೆರೊಡಾಟಸ್ಸಿನ ಬರಹಗಳಲ್ಲಿಯೂ ಇದರ ವಿಷಯವಿದೆ. ಸೈರಸ್ಸಿನ ಗೋರಿಯಲ್ಲಿ ಬಹು ಅಂದವಾದ ಜಮಖಾನಗಳು ಹಾಸಿದ್ದವಂತೆ. ಇರಾನಿ ಜಮಖಾನಗಳು ರೋಮನ್ ಚಕ್ರಾಧಿಪತ್ಯದಲ್ಲೆಲ್ಲ ಹರಡಿ ಹೆಸರಾಗಿದ್ದುವು. ಅಂದವಾದ ಚಿತ್ರಗಳು ನೆಯ್ದಿದ್ದ ಬಣ್ಣಬಣ್ಣದ ಈ ಜಮಖಾನಗಳು ಬಹು ಸೊಗಸ್ಸಾಗಿ ಕಾಣುತ್ತಿದ್ದುವು. ಮುಸ್ಲಿಮರ ಕಾಲದಲ್ಲಿ ಈ ಕೈಗಾರಿಕೆ ಮತ್ತೆ ಎಚ್ಚತ್ತು ಅರಮನೆಗಳ ಗೋಡೆಗೂ ನೆಲಕ್ಕೂ ಜಮಖಾನಗಳು ಹಾಸಿರುತ್ತಿದ್ದುವು. ಜಮಖಾನಗಳನ್ನು ಸಾಮಾನ್ಯವಾಗಿ ಉಣ್ಣೆ ಮತ್ತು ಹತ್ತಿಯಿಂದ ನೆಯ್ಯುತ್ತಿದ್ದರು. ಕೆಲವುವೇಳೆ ಜರತಾರಿಯ ಮತ್ತು ರೇಶ್ಮೆಯ ಜಮಖಾನಗಳು ತಯಾರಾಗುತ್ತಿದ್ದುವು. ಇರಾನಿಯನ್ನರ ಇತರ ಅಲಂಕಾರಗಳಲ್ಲಿ ಹೇಗೊ ಹಾಗೆಯೆ ಅವರ ಜಮಖಾನ ಚಿತ್ರಗಳಲ್ಲಿಯೂ ರೇಖಾಚಿತ್ರಗಳು, ಹೂವಿನ ಚಿತ್ರಗಳು, ಪ್ರಾಣಿ ಪಕ್ಷಿಗಳ

12

ಚಿತ್ರಗಳು. ಬೇಟೆ ಸಂತಾಪದ ಚಿತ್ರಗಳು, ಪೌರಾಣಿಕ ವೀರರ ಮತ್ತು ದೊರೆಗಳ ಚಿತ್ರಗಳು—ಇವೇ ಮೊದಲಾದುವು ಕಾಣಬರುತ್ತವೆ. ಇಸ್ಫಹಾನ್, ಕಿರ್‌ಮಾನ್‌ಷಹ್, ಕುಮ್, ಫೆರಹಾನ್, ಕುರ್ದಿಸ್ತಾನ್, ಕಿರ್‌ಮಾನ್, ಹಿರಾತ್, ಖೊರಾಸಾನ್—ಮೊದಲಾದುವು ಇರಾನಿ ಜಮಖಾನ ತಯಾರಿಕೆಗೆ ಪ್ರಸಿದ್ಧವಾಗಿದ್ದುವು. ಉತ್ತಮತರದ ಶಾಲುಗಳೂ ತಯಾರಾಗುತ್ತಿದ್ದುವು.

ಮುಸ್ಲಿಮರು ಇಂಡಿಯಕ್ಕೆ ಬಂದು ನೆಲಸಿದಮೇಲೆ ಇಲ್ಲಿಯ ರೇಷ್ಮೆ ಬಟ್ಟೆಗಳಲ್ಲಿ ಬಣ್ಣ, ಚಿತ್ರ, ಮೊದಲಾದ ವಿಷಯಗಳಲ್ಲಿ ಮುಸ್ಲಿಂ ಪ್ರಭಾವ ಕೊಂಚ ಕಂಡುಬರುತ್ತದೆ. ಮೊದ ಮೊದಲಿನ ಮುಸ್ಲಿಂ ದೊರೆಗಳು ಮಧ್ಯ ಏಷ್ಯ ಮತ್ತು ಇರಾನಿನ ನೆಯ್ಗೆಕಾರರಿಗೆ ಆಶ್ರಯಕೊಡುತ್ತಿದ್ದರು. ಅಮೃತಸರ, ಮುಲ್ತಾನ್, ಪೆಷಾವರ್, ಕಾಶ್ಮೀರ, ಕಾಶಿ ಮೊದಲಾದೆಡೆಗಳಲ್ಲಿ ಹಿಂದುಗಳ ಜತೆಯಲ್ಲೇ ಮುಸ್ಲಿಂ ನೆಯ್ಗೆಯವರೂ ಕೆಲಸಮಾಡುತ್ತಿದ್ದರು. ಇಂಡಿಯಕ್ಕೆ ಜಮಖಾನಗಳು ಮೊದಲು ಇರಾನಿನಿಂದ ಬಂದುವು. ಮೊಗಲ್ ಕಾಲದಲ್ಲಿ ಇರಾನ್ ಮತ್ತು ಮಧ್ಯ ಏಷ್ಯದಿಂದ ಹಲವರು ಜಮಖಾನ ತಯಾರಿಕೆಯವರು ಇಂಡಿಯಕ್ಕೆ ಬಂದು ನೆಲಸಿದರು. ಇಂಡಿಯದಲ್ಲಿ 'ಮಷ್‌ರೂ (ನ್ಯಾಯವಾದದ್ದು ವಿಹಿತವಾದದ್ದು)' ಮತ್ತು 'ಸೂಫಿ' ಎಂದು ಕರೆಯುತ್ತಿದ್ದ ರೇಷ್ಮೆಯನ್ನೂ ಹತ್ತಿಯನ್ನೂ ಸೇರಿಸಿ ನೆಯ್ದ ಬಟ್ಟೆಗಳು ತಯಾರಾಗುತ್ತಿದ್ದುವು. ಮುಸ್ಲಿಂ ಸಂಪ್ರದಾಯದ ಪ್ರಕಾರ ವೈದಿಕರು ಶುದ್ಧ ರೇಷ್ಮೆಯನ್ನು ಉಪಯೋಗಿಸುವುದಕ್ಕೆ ನಿಷೇಧವಿದ್ದುದರಿಂದ ಈ ಮಿಶ್ರ ನೆಯ್ಗೆಯ ಬಟ್ಟೆಗಳನ್ನು ಉಪಯೋಗಿಸುತ್ತಿದ್ದರು.

## ಲೋಹ ಕೆಲಸ

ಮುಸ್ಲಿಂ ಲೋಹ ಕೆಲಸದ ಚರಿತ್ರೆಯನ್ನು ಸ್ಥೂಲವಾಗಿ ಮೊಗಲ್ ಪೂರ್ವದ್ದು ಮತ್ತು ಮೊಗಲ್ ತರುವಾಯದ್ದು ಎಂದು ವಿಭಾಗಿಸಬಹುದು. ಮೊಗಲ್ ಪೂರ್ವದಲ್ಲಿ ಗ್ರೀಕ್, ಬಿಜ಼ನ್‌ಟೈನ್ ಮತ್ತು ಸಸಾನಿಯನ್ ಪ್ರಭಾವ ಕಂಡುಬರುತ್ತದೆ. ಸೆಲ್‌ಜೂಕಿ ಮತ್ತು

ಕೆತ್ತಿದೆ. ಆ ಕಾಲದಲ್ಲಿ ಮೇಣದ ಬತ್ತಿ ತಟ್ಟೆಗಳೂ, ಖಗೋಳಗಳು ಗ್ರಹೋನ್ನತಿಮಾಪಕಗಳು ಮೊದಲಾದ ಜ್ಯೋತಿಷ ಸಲಕರಣೆಗಳೂ ಲೋಹದಲ್ಲಿ ತಯಾರಾಗಿ ಯೂರೋಪ್ ದೇಶಗಳಿಗೆಲ್ಲ ಹೋಗುತ್ತಿದ್ದುವು. ಇಸ್ಫಹಾನಿನ ಇಬ್ರಾಹಿಮ್ ಮಗ ಅಹ್ಮದನೂ ಮತ್ತೊಬ್ಬ ಮಹಮೂದನೂ ಕ್ರಿ.ಶ. ೯೮೪ ರಲ್ಲಿ ತಯಾರಿಸಿದ ಗ್ರಹೋನ್ನತಿ ಮಾಪಕ ಒಂದು ಈಗ ಆಕ್ಸ್‌ಫರ್ಡಿನಲ್ಲಿ ಇದೆ.

ಇರಾನಿ ಲೋಹಕೆಲಸದಲ್ಲಿ ಮೊದಮೊದಲು ಬೆಳ್ಳಿಯತಟ್ಟೆ ಮೊದಲಾದುವು ಕಂಡುಬರುತ್ತವೆ. ಇತರೆಡೆಗಳಲ್ಲಿಯಂತೆಯೇ ಇಲ್ಲಿಯೂ ಬೇಟೆ ಮೊದಲಾದ ಚಿತ್ರಗಳ ಕೊರೆತಗಳು ಕಾಣುತ್ತವೆ. ಸಸಾನಿಯನ್ ಕಾಲದ ಕಂಚಿನ ಹೂಜಿಗಳು ಯೂರೋಪ್ ಮತ್ತು ಪಶ್ಚಿಮ ಏಷ್ಯದ ಕೆಲವು ಪ್ರಾಂತಗಳಲ್ಲಿ ಸಿಕ್ಕಿವೆ. ಈ ಸಸಾನಿಯನ್ ಪ್ರಭಾವವೇ ಮೊದಮೊದಲು ಇಸ್ಲಾಂ ಲೋಹ ಕೆಲಸಗಳಲ್ಲೂ ಕಂಡುಬರುವುದರಿಂದ ಇವೆರಡಕ್ಕೂ ವ್ಯತ್ಯಾಸಮಾಡುವುದು ಕಷ್ಟ. ಆದರೂ, ಕ್ರಮೇಣ ಅರಬ ಜೀವನದ ಚಿತ್ರಗಳು ಕಂಡುಬಂದು ಅರಬರ ಉಡುಪು, ರುಮಾಲು, ಶಾಲು—ಮೊದಲಾದುವೂ ಅರಬ್ಬಿ ಲಿಪಿಯೂ ಕಂಡುಬರುತ್ತವೆ.

ಮೊಗಲ ಕಾಲವಲ್ಲಿ, ಬೇರೆಡೆಗಳಲ್ಲಿ ಹೇಳಿರುವಂತೆ, ಚೀನಾ ಪ್ರಭಾವ ಸಂಪೂರ್ಣವಾಗಿ ಕಂಡುಬರುತ್ತದೆ. ಇಳಿಯಬಿದ್ದು ನೇಲುವ ಗಂಭೀರ ವಸ್ತ್ರ, ಅಂದವಾದ ಕಿರುಗಣ್ಣು, ಸಣ್ಣ ಬಟ್ಟಬಾಯಿ, ಬಳುಕುವ ತೆಳುಮೈ, ಎಲ್ಲವೂ ಚೀನಿಯರದು. ಪ್ರಕೃತಿ ಚಿತ್ರಗಳೂ ಚೀನಿಯರದು. ಅರಬ್ಬಿ ಪ್ರಭಾವ ಸಂಪೂರ್ಣವಾಗಿ ಹೊರಟು ಹೋಯಿತು. ಸಫವಿಯರು ಬಂದಮೇಲೆ ಚೀನಾ ಪ್ರಭಾವ ಕ್ರಮೇಣ ಅಳಿದು ಮತ್ತೆ ಇರಾನಿ ಪ್ರಭಾವ ಮೂಡಿತು.

ಮುಸ್ಲಿಮರು ಇಂಡಿಯಾಕ್ಕೆ ಬರುವ ವೇಳೆಗೆ ಲೋಹ ಕೆಲಸ ಬಹು ಚೆನ್ನಾಗಿ ವೃದ್ಧಿಹೊಂದಿದ್ದದ್ದರಿಂದ ಈ ವಿಷಯದಲ್ಲಿ ಮುಸ್ಲಿಮರದೇ ಆದ ವೈಶಿಷ್ಟ್ಯವನ್ನೇನೂ ಹೇಳುವಂತಿಲ್ಲ. ಒಂದು ಲೋಹದ ಮೇಲೆ ಮತ್ತೊಂದು ಲೋಹವನ್ನು ಕುಟ್ಟಿ ಕೆತ್ತಿಸಿಮಾಡುವ, ಸಾಮಾನ್ಯವಾಗಿ 'ಡಮಸೀನ್' (ಡಮಾಸ್ಕಸ್ ಊರಿನ ಹೆಸರಿನಿಂದ) ಎಂದು

ಕರೆಯುವ ಲೋಹ ಕೆಲಸ ಇಂಡಿಯಕ್ಕೆ ಇರಾನಿನಿಂದ ಬಂದಿರಬಹುದು. ಈ ದಮಾಸೆನ್ ಕೆಲಸ ಸ್ಪೇಯಿನ್, ಈಜಿಪ್ಟ್ ಮತ್ತು ಇರಾನಿನಲ್ಲಿ ನಡೆಯುತ್ತಿತ್ತು. ಕಬ್ಬಿಣದ ಅಥವಾ ಕಂಚಿನ ಮೇಲೆ ಚಿನ್ನ ಅಥವಾ ಬೆಳ್ಳಿಯ ತಂತಿಯನ್ನು ಕೆತ್ತುತ್ತಿದ್ದರು. ಈ ಕೆಲಸವನ್ನು ಇಂಡಿಯದಲ್ಲಿ ಕೂಫ್ತ್‌ಗರ್ ಎಂದು ಕರೆಯುತ್ತಾರೆ. ಇದಕ್ಕೆ ಇರಾನಿನಲ್ಲಿ 'ಕುಟ್ಟಿದ್ದು' ಎಂದು ಅರ್ಥ. ಇದು ವಿಶೇಷವಾಗಿ ಬಿದರೆಯಲ್ಲಿ ತಯಾರಾಗುತ್ತಿದ್ದದ್ದರಿಂದ ಇದಕ್ಕೆ ಬಿದ್ರಿ ಎಂದೂ ಹೆಸರಿದೆ.

ಸ್ಪೇಯಿನಿನ ಅಲ್‌ಹಂಬ್ರ ಅರಮನೆಯಲ್ಲೂ, ಈಜಿಪ್ಟ್ ಮತ್ತು ಸಿರಿಯಗಳ ಮಾರ್ಬಲ್ಲಿನ ಚಿತ್ರದ ಕಲ್ಲು, ಕಂಚು ಅಥವಾ ಇತರ ಲೋಹಗಳಿಂದ ಮಾಡಿದ ಕೆಲವು ಪ್ರಾಣಿ ಪಕ್ಷಿಗಳನ್ನು ಬಿಟ್ಟರೆ, ಮುಸ್ಲಿಂ ಪ್ರತಿಮಾ ಶಿಲ್ಪದ ವಿಷಯದಲ್ಲಿ ಹೆಚ್ಚು ಹೇಳುವಂತಿಲ್ಲ. ಸೂಸಾದಲ್ಲಿಯ ಕೆಲವು ಕಂಚಿನ ವಿಗ್ರಹಗಳನ್ನು, ಸಮಾರಾದಲ್ಲಿಯ ಕಲ್ಲಿನಿಂದ ಒಂದನ್ನೂ ಬಿಟ್ಟರೆ, ಪೆಯ್‌ರಸ್ಸಿನ ಪ್ರತಿಮೆಯೇ ನಮಗೆ ದೊರೆತಿರುವ ಇರಾನಿಯನ್ ಪ್ರತಿಮೆಗಳಲ್ಲಿ ಹಳೆಯದು ಎನ್ನಬಹುದು. ಇಂಡಿಯದಲ್ಲಿ ಮೊದಲೇ ಪ್ರಚಾರದಲ್ಲಿದ್ದ, ರೇಖಾಚಿತ್ರಾಕಾರದಲ್ಲಿ ಕಂಡಿ ಕೊರೆದು ಮಾಡಿದ ಕಿಟಕಿಗಳು ಮುಸ್ಲಿಮರ ಆಳಿಕೆಯಲ್ಲಿ ಹೆಚ್ಚು ಪ್ರಚಾರಕ್ಕೆ ಬಂದವೆಂದು ಹೇಳಬಹುದು.

**ವರ್ಣಚಿತ್ರ :** ಇಸ್ಲಾಂ ಧರ್ಮ ಸ್ಥಾಪನೆಯಾಗಿ ಪ್ರಚಾರವಾಗುವ ವೇಳೆಗೆಯೇ ಮುಂದೆ ಆ ಧರ್ಮವನ್ನು ಅವಲಂಬಿಸಿದ ಸ್ಪೇಯಿನ್, ಈಜಿಪ್ಟ್, ಸಿರಿಯ, ಇರಾನ್, ಚೀನ, ಇಂಡಿಯ—ಮೊದಲಾದ ದೇಶಗಳಲ್ಲೆಲ್ಲ ಚಿತ್ರಕಲೆ ಚೆನ್ನಾಗಿ ಬೆಳೆದು ಅಭಿವೃದ್ಧಿ ಹೊಂದಿದ್ದರಿಂದಲೂ ಇಸ್ಲಾಮಿನ ತವರುಮನೆಯಾದ ಅರೇಬಿಯಾದಲ್ಲಿ ಚಿತ್ರಕಲೆಯ ಹೆಸರೇ ಇರಲಿಲ್ಲವಾದದ್ದರಿಂದಲೂ ಇಸ್ಲಾಂ ಚಿತ್ರಕಲೆಯ ವಿಷಯವಾಗಿ ಹೆಚ್ಚೇನೂ ಹೇಳಬರುವುದಿಲ್ಲ. ಆಯಾ ದೇಶದ ಇಸ್ಲಾಮಿಗಳು ಆಯಾ ದೇಶದಲ್ಲಿ ಹಿಂದಿನಿಂದಲೂ ಬಂದ ಚಿತ್ರಕಲೆಯನ್ನೇ ಅನುಸರಿಸಿ ಅಭಿವೃದ್ಧಿಗೆ ತಂದರೇ ಹೊರತು ತಮ್ಮದೇ ಆದ ವೈಶಿಷ್ಟ್ಯ ಯಾವುದನ್ನೂ ಬೆಳಸಿಕೊಂಡು ಬರಲಿಲ್ಲ. ಅಷ್ಟೇ ಅಲ್ಲದೆ, ಕೆಲವರು ಚಿತ್ರಕಲೆ ಇಸ್ಲಾಂ

ಶಾಸ್ತ್ರಕ್ಕೆ ವಿರುದ್ಧವೆಂದು ಕೂಡ ಹೇಳುತ್ತ ಅದಕ್ಕೆ ಉತ್ತೇಜನ ಕೊಡದೆ ಹೋದರು. ಇದರಿಂದ ಉಮಯ್ಯದ್ ಮತ್ತು ಅಬ್ಬಾಸಿದ್ ಆಳಿಕೆ ಯಲ್ಲಿ ಚಿತ್ರಕಲೆಗೆ ಅಷ್ಟೇನೂ ಪ್ರೋತ್ಸಾಹ ದೊರೆಯಲಿಲ್ಲ.

ಇಸ್ಲಾಂ ಚಿತ್ರಗಾರರಲ್ಲಿ ಇರಾನಿಗಳೇ ಮುಂದಾಳುಗಳೆನ್ನಬಹುದು. ಇರಾನನ್ನು ಆಳಿದ ಸಮನಿದ್ ಸಂತತಿಯವರು ತಾವು ಇರಾನಿಗಳಾದ್ದ ರಿಂದ ಇರಾನ್ ಸಾಹಿತ್ಯ ಚಿತ್ರಕಲೆಗಳನ್ನು ಏಳಿಗೆಗೆ ತಂದರು. ಅವರ ಆಳಿಕೆಗೆ ಒಳಪಟ್ಟಿದ್ದ ಚೀನಾ ತುರ್ಕಿಯಲ್ಲಿ ಮಾನಿಮತ ಪ್ರಚಾರ ದಲ್ಲಿತ್ತು. ಈ ಮತಸ್ಥಾಪಕನಾದ ಮನಿ ಪ್ರಸಿದ್ಧ ಇರಾನಿ ಚಿತ್ರಕಾರ ನಾಗಿದ್ದನೆಂದು ಪ್ರತೀತಿ ಇದ್ದದ್ದರಿಂದ ಅವನ ಅನುಯಾಯಿಗಳೆಲ್ಲರೂ ಚಿತ್ರಕಲಾ ಪ್ರೇಮಿಗಳಾಗಿ ಧರ್ಮ ಪುಸ್ತಕಗಳನ್ನೂ ಕೂಡ ಚಿತ್ರಗಳಿಂದ ಅಲಂಕರಿಸುತ್ತಿದ್ದರು. ಸೆಲ್‌ಜೂಕಿ ಆಳಿಕೆಯಲ್ಲಿ ಚಿತ್ರಕಲೆ ಅಭಿವೃದ್ಧಿ ಗೊಂಡು ಕುರಾನ್, ಷಹನಾಮ ಮೊದಲಾದ ಚರಿತ್ರಗ್ರಂಥಗಳು, ಇತರ ಕಥಾಗ್ರಂಥಗಳು ಎಲ್ಲವೂ ಚಿತ್ರಗಳಿಂದ ಅಂದಗೊಂಡವು. ಹಾಳೆಗಳಿಗೆ ಸುಂದರವಾದ ಕರೆಕಟ್ಟಿ ಚಿತ್ರಿಸುತ್ತಿದ್ದರು. ಇದಲ್ಲದೆ ಯುದ್ಧ, ಒಡ್ಡೋಲಗ, ಸಂತೋಷಕೂಟ,—ಮೊದಲಾದ ಮನುಷ್ಯ ಜೀವನ ಚಿತ್ರಗಳೂ ಕುದುರೆ, ಒಂಟೆ, ಜಿಂಕೆ ಮೊದಲಾದ ಪ್ರಾಣಿಚಿತ್ರ ಗಳೂ; ಕಾಡು, ತೋಟ, ನೀರುಬೀಳು ಮೊದಲಾದ ಪ್ರಕೃತಿ ಸೌಂದರ್ಯ ಚಿತ್ರಗಳೂ ಈ ಕಾಲದಲ್ಲಿ ಕಂಡುಬರುತ್ತವೆ. ಬೈಬಲ್ಲಿನ ಕೆಲವು ದೃಶ್ಯಗಳೂ, ಮಹಮ್ಮದ್ ಪೈಗಂಬರನ ಸ್ವರ್ಗಾರೋಹಣ ಚಿತ್ರವೂ, ಪೌರಾಣಿಕ ವ್ಯಕ್ತಿಗಳಾದ ದಿವ್ಯಪುರುಷರ ಮತ್ತು ದೇವ ದೂತರ ಚಿತ್ರಗಳೂ ಈ ಕಾಲದಲ್ಲಿ ಇವೆ.

ಇರಾನನ್ನು ಆಳಿದ ತೈಮೂರ್ ಸಂತತಿಯ ಕೊನೆಯ ಷಹನ ಆಸ್ಥಾನದಲ್ಲಿ ಕಮಾಲುದ್ದೀನ್ ಬಹ್‌ಜಾದ್ (೧೫–೧೬ ನೆಯ ಶ. ಮಾ.) ಎಂಬ ಪ್ರಸಿದ್ಧ ಚಿತ್ರಕಾರನಿದ್ದನು. ಇರಾನಿಗಳಲ್ಲಿ ಇವನು ಪ್ರಸಿದ್ಧ ಕಲೆ ಗಾರನಾದ ಮನಿಗೆ ಎರಡನೆಯವನೆಂದು ಹೆಸರಾಗಿದ್ದಾನೆ. ಬಣ್ಣಗಳ ಹೊಳಪು ಮತ್ತು ಹೊಂದಿಕೆ, ರೇಖೆಗಳ ಬಳುಕು ಮತ್ತು ತೆಳುವು, ಚಿತ್ರಗಳ ದೃಷ್ಟಿ—ಮೊದಲಾದುವುಗಳಿಗೆ ಇವನ ಚಿತ್ರಗಳು ಆದರ್ಶ

ವಾಗಿವೆ. ಇವನು ತಬ್‌ರೀಜಿನಲ್ಲಿಯ ಪುಸ್ತಕ ಭಂಡಾರಕ್ಕೆ ಮುಖ್ಯಾಧಿಕಾರಿಯಾಗಿದ್ದನು. ಇವನ ಬಹುಪಾಲು ಚಿತ್ರಗಳೆಲ್ಲವೂ ನಿಜಾಮಿಯ ಪ್ರಸಿದ್ಧಕಾವ್ಯ ವಸ್ತುವಿಂದ ತೆಗೆದುಕೊಂಡವು. ಈ ಇರಾನಿ ಚಿತ್ರಗಳಲ್ಲಿ ಧಾರ್ಮಿಕತತ್ತ್ವ ಪ್ರತಿಪಾದನೆಗಿಂತ ಮಾನವ ಹೃದಯದ ರಾಗ ಭಾವಗಳು ಹೆಚ್ಚಾಗಿ ಕಾಣುತ್ತವೆ. ಕದನ, ಬೇಟೆ, ಮೊದಲಾದ ದೃಶ್ಯಗಳು ಕಂಡುಬರುತ್ತವೆ. ಎರಡನೆಯದಾಗಿ ಪ್ರಕೃತಿ ಸೌಂದರ್ಯವನ್ನಾಗಲಿ ಅದರ ಮರೆಯ ರಹಸ್ಯವನ್ನಾಗಲಿ ಚಿತ್ರಿಸುವ, ಬಿಡಿಸುವ ಪ್ರಯತ್ನ ನಡೆದಿಲ್ಲವಾದ್ದರಿಂದ ಇರಾನಿ ಚಿತ್ರಕಲೆಯಲ್ಲಿ ಶುದ್ಧ ಪ್ರಕೃತಿ ಚಿತ್ರಗಳು ಅಷ್ಟಾಗಿ ಏನು ಕಾಣುವುದಿಲ್ಲ.

ಈ ಪ್ರಸಿದ್ಧ ಬಹ್‌ಜಾದ್ ಬರೆದನೆಂದು ಪ್ರಚಾರದಲ್ಲಿರುವ ಕೆಲವು ಚಿತ್ರಗಳು: (೧) ಶೃಂಗಾರ ತೋಟದ ಚಿತ್ರ—ಜಮಖಾನಗಳು ಹಾಸಿವೆ; ವಾದ್ಯಗಳನ್ನು ನುಡಿಸುತ್ತಿದ್ದಾರೆ; ಎತ್ತಲೂ ಮಾಂಸ ಅಡುಗೆ, ಕಳ್ಳು ಕುಡಿತ; (೨) ಸಂತೋಷಕೂಟದ ಚಿತ್ರ—ಕಳ್ಳುಬಟ್ಟಲು ಹಿಡಿದಿರುವ ಹೆಣ್ಣುಗಂಡುಗಳು; ಕೆಲವು ಹೆಂಗಸರ ಕೈಯಲ್ಲಿ ಗುಲಾಬಿ ಹೂವು; ಮತ್ತೆ ಕೆಲವರ ಕೈಯಲ್ಲಿ ಢೇಗೆ ಹಕ್ಕಿ; ಹೂವುಗಿಡಗಳು. (೩) ನಂದನವನ ಚಿತ್ರ—ರೆಕ್ಕೆಯ ದೇವದೂತರು, ಮರದಕೊಂಬೆ, ಕಲ್ಲು ಬಂಡೆಗಳ ಮೇಲೆ ಕುಳಿತು ಗಾನಮಾಡುತ್ತಿದ್ದಾರೆ, ಕುಣಿಯುತ್ತಿದ್ದಾರೆ. (೪) ಯಿಮಮೋರೆಯ (ಜಾಮ್‌ಷೆದ್) ದರ್ಬಾರು—ಇದು ಷಹನಾಮಾ ಗ್ರಂಥದಿಂದ ತೆಗೆದದ್ದು. (೫) ರೋಗಗ್ರಸ್ತಳಾದ ಒಬ್ಬ ಹೆಂಗಸಿನ ಚಿತ್ರ—ಪರಿಚಾರಿಕೆಯೊಬ್ಬಳು ಆವಳ ಬಾಯ ಹತ್ತಿರ ಚಮಚದಲ್ಲಿ ಔಷಧ ಹಿಡಿದು ನಿಂತಿದ್ದಾಳೆ; ಸುತ್ತಲೂ ಪರಿವಾರ. (೬) ಒಬ್ಬ ಯುವಕ ಚಿತ್ರಗಾರನು ಚಿತ್ರ ಬರೆಯುತ್ತಿರುವುದು. (೭) ಒಂಟೆಕಾಳಗ. (೮) ತೈಮೂರ್ ಪಾಳಯದ ಚಿತ್ರ—ಕಳ್ಳು ಕುಡಿತ. (೯) ಮುಹಮ್ಮದ್ ಪೈಗಂಬರನ ಸ್ವರ್ಗಾರೋಹಣಚಿತ್ರ—(ಇದನ್ನು ಮಿರಾಕ್ ಬರೆದನೆಂದು ಕೆಲವರೂ, ಸುಲ್ತಾನ್ ಮುಹಮ್ಮದ್ ಬರೆದನೆಂದು ಕೆಲವರೂ ಹೇಳುವುದು ಉಂಟು.) ಪೈಗಂಬರನು ಮನುಷ್ಯಮುಖದ ಪ್ರಾಣಿಯೊಂದನ್ನು ಏರಿಕೊಂಡು ಚಂದ್ರನನ್ನು ಹಾದುಹೋಗುತ್ತಿದ್ದಾನೆ; ತಿಳಿ ನೀಲಿಯ

ತಬ್ರೀಜಿನಲ್ಲಿ ಬೆಹಜ್ಜಾದ್ ಕೈಕೆಳಗೆ ಕಲಾಭ್ಯಾಸ ಮಾಡಿದವನು. ಇವನು ಇಂಡಿಯದಲ್ಲಿ ಮೊಗಲ್ ಕಲಾ ಸಂಪ್ರದಾಯಕ್ಕೆ ಆದಿಪುರುಷನೆಂದು ಪರಿಗಣಿತನಾಗಿದ್ದಾನೆ. ರಜಾ ಅಬ್ಬಾಸಿ ಎಂಬ ಚಿತ್ರಗಾರನು ಷಹ ಅಬ್ಬಾಸಿನ ಸಮಕಾಲೀನನು. ಇವನು ಸಂತೋಷಕೂಟವೇ ಮೊದಲಾದ ಸಮುದಾಯ ಚಿತ್ರಗಳನ್ನೇ ಅಲ್ಲದೆ, ಕೆಲವು ಏಕವ್ಯಕ್ತಿ ಚಿತ್ರಗಳನ್ನು ಬರೆದಿದ್ದಾನೆ: ತರುಣರ ಮತ್ತು ಸುಂದರಸ್ತ್ರೀಯರ ಚಿತ್ರಗಳನ್ನು ಚಿತ್ರಿಸಿದ್ದಾನೆ. ೧೭ನೆಯ ಶತಮಾನದಲ್ಲಿದ್ದ ಇವನು ಒಂದು ಹೊಸಮಾರ್ಗವನ್ನೇ ಸ್ಥಾಪಿಸಿದನೆಂದು ಹೇಳಬಹುದು. ಮುಸ್ಲಿನಿಂದ ಸುತ್ತಿದ ಮುಂಡಾಸು, ಕನ್ನಡಕ ಹಾಕಿದ ಕಣ್ಣು ತೋರುವ ಇವನ ಚಿತ್ರವೊಂದನ್ನು ಇವನ ಶಿಷ್ಯ ಮೊಯಿನ್ ಮುಸವ್ವಿರ್ ಚಿತ್ರಿಸಿದ್ದಾನೆ.

ತಬ್ರೀಜಿನ ಮಿರ್ಜಾ ಅಲಿ ಪುಸ್ತಕಗಳಿಗೆ ಕಲೆಹಾಕುವ ಚಿತ್ರದಲ್ಲಿ ಪ್ರಸಿದ್ಧನಾಗಿದ್ದನು. ಅಲ್ಲದೆ ಇತರ ವರ್ಣಚಿತ್ರಗಳನ್ನೂ ಬರೆದಿದ್ದನು. ಇವನು ಪ್ರಸಿದ್ಧ ಸಂಗೀತಗಾರನೂ ಕವಿಯೂ ಆದ ಬಾರ್ಬದನು ಸಿಂಹಾಸನಾರೂಢನಾದ ೨ನೆಯ ಖುಸ್ರೋವಿನ ಮುಂದೆ ಸಂಗೀತ ನುಡಿಸುತ್ತಿರುವ ಚಿತ್ರವನ್ನು ಚಿತ್ರಿಸಿದ್ದಾನೆ. ಸೇವಕನೊಬ್ಬನು ಹಣ್ಣಿನ ತಟ್ಟೆಯೊಂದನ್ನೂ ಮತ್ತೊಬ್ಬನು ಸಂಗೀತಗಾರನಿಗೆ ರಾಜನ ಪಾರಿತೋಷಕವನ್ನೂ ಹಿಡಿದು ನಿಂತಿದ್ದಾರೆ. ಪಕ್ಕದಲ್ಲಿ ಹುಡುಗನೊಬ್ಬನು ಪಕ್ಕವಾದ್ಯ ನುಡಿಸುತ್ತಿದ್ದಾನೆ.

ಜಲಪ್ರಳಯದಲ್ಲಿ ನೋವಾ ಮತ್ತು ಆವನ ಸಂಸಾರ ಹಡಗಿನಲ್ಲಿ ಕ್ಷೇಮವಾಗಿ ಬದುಕಿದ್ದು (ಕ್ರಿ. ಶ. ೧೬೦೮); ಷಹನಾಮೆಯ ಕಥಾನಾಯಕ ರುಸ್ತುಮ್ ತನ್ನ ಸೋದರ ಷುಗದನನ್ನು ಬಾಣದಿಂದ ಎಸೆಯುತ್ತಿರುವುದು (ಕ್ರಿ. ಶ. ೧೬೦೮); ಅವಿಸಿನ್ನನು ವಿದ್ಯಾರ್ಥಿವೃಂದಕ್ಕೆ ಅಂಗರಚನ ಶಾಸ್ತ್ರದ ಮೇಲೆ ಪಾಠಪ್ರವಚನ ನಡೆಸುತ್ತಿರುವುದು; ಇವೇ ಮೊದಲಾದ ಕೆಲವು ಉತ್ತಮ ಚಿತ್ರಗಳು ೧೬-೧೭ನೆಯ ಶತಮಾನದಗಳಲ್ಲಿ ಚಿತ್ರಿತವಾದುವು. ೧೭ನೆಯ ಶತಮಾನದಲ್ಲಿ ಷ್ಫತರ್‌ಅಲಿ ಮೊದಲ ಹಲವು ಚಿತ್ರಗಳನ್ನು ಬರೆದನು. ವೇಷಭೂಷಣಗಳು ಇರಾನಿನವಾಗಿದ್ದರೂ ಶೈಲಿ ಇರಾನಿಯನ್ ಮತ್ತು ಯೂರೋಪಿಯನ್ ಮಿಶ್ರಶೈಲಿ.

**ಇಂಡಿಯಾ :** ಇರಾನ್ ಮೊದಲಾದೆಡೆಗಳಲ್ಲಿಯಂತೆಯೇ ಇಂಡಿಯದಲ್ಲಿ ಮುಸ್ಲಿಮರು ಬರುವವರೆಗೆ ಚಿತ್ರಕಲೆ ಉಚ್ಛ್ರಾಯಸ್ಥಿತಿಯನ್ನು ಮುಟ್ಟಿತ್ತು. ಇಂಡಿಯಾದ ಮೊದಮೊದಲ ಮುಸ್ಲಿಮರ ಚಿತ್ರಗಳಲ್ಲಿ ಇರಾನಿ ಪ್ರಭಾವ ಕಂಡುಬರುತ್ತದೆ. ಖೊರಸಾನಿನ ಇರಾನಿ ಕಲೆಗಾರನಾದ ಷಹಸ್ವಾರನು ಚಿತ್ರಿಸಿರುವ ಸುಲ್ತಾನ್ ಮಹಮ್ಮದ್ ತುಘಲಕ್ಕನ ಆಸ್ಥಾನದೃಶ್ಯ ಒಂದಿದೆ. ಸಿಂಹಾಸನಾರೂಢನಾದ ರಾಜನ ಇಕ್ಕೆಲದಲ್ಲಿಯೂ ಹೆಂಗಸರು ಮಂಡಿಸಿದ್ದಾರೆ. ಮುಂದುಗಡೆ ಹೆಂಗಸರು—ಕೆಲವರು ಕುಣಿಯುತ್ತಲೂ, ಕೆಲವರು ಹಾಡುತ್ತಲೂ, ಕೆಲವರು ವೀಣೆ, ಸಿತಾರ್, ಕೊಳಲುಗಳನ್ನು ನುಡಿಸುತ್ತಲೂ ಇದ್ದಾರೆ. ಒಬ್ಬಳು ಕಳ್ಳುಬಟ್ಟಲನ್ನು ಹಿಡಿದಿದ್ದಾಳೆ; ಮತ್ತೊಬ್ಬಳು ವೀಳ್ಯತಟ್ಟೆ ಹಿಡಿದಿದ್ದಾಳೆ. ಮುಖಭಾವಗಳೂ ವೇಷಭೂಷಣಗಳೂ ಇಂಡಿಯದವು.

ಮುಸ್ಲಿಂ ಚಿತ್ರಕಲೆಗೆ ಮೊಗಲರೇ ಪ್ರಧಾನ ಆಶ್ರಯದಾತರೆನ್ನಬಹುದು. ಹಿಂದೆಯೇ ಹೇಳಿದಂತೆ ಹುಮಾಯೂನನು ಇರಾನಿನಿಂದ ಮೀರ್‌ಸಯ್ಯದ್‌ಅಲಿ ಎಂಬ ಚಿತ್ರಗಾರನನ್ನು ತನ್ನ ಆಸ್ಥಾನಕ್ಕೆ ಬರಮಾಡಿಕೊಂಡು ಅಮೀರ್ ಹಂಸಾವಿನ ಕಥೆಗೆ ಚಿತ್ರ ಬರಸಿದನು. ಹುಮಾಯೂನ್ ಮಗ ಅಕ್ಬರನೂ ಅವನ ಮಗ ಜಹಾಂಗೀರನೂ ಚಿತ್ರಕಲೆಗೆ ದೊಡ್ಡ ಆಶ್ರಯದಾತರು. ಮಧ್ಯ ಏಷ್ಯ ಇರಾನ್ ಮತ್ತು ತುರ್ಕಿಯಿಂದ (ಯೂರೋಪ್ ಮತ್ತು ಚೀನದಿಂದ ಕೂಡ) ಅನೇಕ ಚಿತ್ರಗಾರರು ಇಲ್ಲಿಗೆ ಬಂದು ಅವರ ಆಸ್ಥಾನದಲ್ಲಿ ಆಶ್ರಯ ಪಡೆದರು. ಹಿಂದೂ ಕಲೆಗಾರರು ಕೆಲವು ವಿಷಯಗಳಲ್ಲಿ ಇವರ ಮಾರ್ಗವನ್ನು ಅನುಸರಿಸಿದರೂ ಒಟ್ಟಿನ ಮೇಲೆ ಇವರ ಪ್ರಭಾವಕ್ಕೆ ಸಿಕ್ಕಿದಂತೆ ಕಾಣುವುದಿಲ್ಲ. ಅಷ್ಟೇ ಅಲ್ಲದೆ, ತಮ್ಮ ಪ್ರಭಾವವನ್ನೇ ಅವರ ಮೇಲೆ ಬೀರಿ ಆ ಕಾಲದಲ್ಲಿ ಇರಾನಿ ಕಲೆಯಲ್ಲಿ ಕಂಡುಬರುತ್ತಿದ್ದ ಚೀನಾ ಮತ್ತು ಮಂಗೋಲಿಯ ಮುಖಭಾವಗಳನ್ನು ತೆಗೆದುಹಾಕಿ ಆರ್ಯ ಮುಖಭಾವಗಳನ್ನು ತರುವುದಕ್ಕೆ ಸಹಾಯ ಮಾಡಿದರು. ಈ ಕಾಲದಲ್ಲಿ ರಜಪೂತ ಕಲಾಸಂಪ್ರದಾಯ ಮತ್ತು ಮೊಗಲ್ ಸಂಪ್ರದಾಯ ಎಂದು ಎರಡು ಮಾರ್ಗಗಳು ಹುಟ್ಟಿಕೊಂಡು ಮೊದಲನೆಯದರಲ್ಲಿ ಹಿಂದೂ

ನಕೀಬ್ ಖಾನ್: ಇವನು ಹಲವು ಪಂಡಿತರ ಸಹಾಯ ಪಡೆದು ಮಹಾಭಾರತವನ್ನು ಭಾಷಾಂತರಿಸುವುದಕ್ಕೆ ನೇಮಕವಾಗಿದ್ದನು. ಬದಾಯೂನಿ (ಅಬ್ದುಲ್ ಖಾದಿರ್): ಇವನು ನಕೀಬ್‌ಖಾನನಿಗೆ ಮುಖ್ಯ ಸಹಾಯಕ. ಹಾಜೀ ಮಹಮ್ಮದ್ ಸುಲ್ತಾನ್ ಮುಲ್ಲಾಷೀರಿ: ಇವನು ರಜ್ಮ್‌ನಾಮಾ ಎಂಬ ಹೆಸರಿಟ್ಟು ಮಹಾಭಾರತ ಭಾಷಾಂತರ ಮಾಡಿದ್ದಾನೆ. ಗಿರ್‌ಧರ್‌ದಾಸ್ (ಕ್ರಿ. ಶ. ೧೬೦೬) ರಾಮಾಯಣವನ್ನು ಮತ್ತೆ ಭಾಷಾಂತರಿಸಿದನು. ದಾರಾಷುಕೊ ದೊರೆ (ಕ್ರಿ. ಶ. ೧೬೫೭) ಉಪನಿಷತ್ತುಗಳನ್ನು ಕೆಲವು ಪಂಡಿತರ ಸಹಾಯದಿಂದ ಭಾಷಾಂತರ ಮಾಡಿದನು. ಅಲ್ಲದೆ ಭಗವದ್ಗೀತೆಯನ್ನೂ ಯೋಗವಾಸಿಷ್ಠವನ್ನೂ ಭಾಷಾಂತರ ಮಾಡಿಸಿದನು. ಈ ವಿಧವಾದ ಭಾಷಾಂತರ ಕೆಲಸ ಇಂದಿಗೂ ನಡೆದು ಬಂದು ಹೈದರಾಬಾದಿನ ವಿಶ್ವವಿದ್ಯಾನಿಲಯವು ಈ ಕೆಲಸವನ್ನು ನಡೆಸುತ್ತಿದೆ.

ಮುಸ್ಲಿಂ ಧರ್ಮತತ್ತ್ವ, ದರ್ಶನ, ಆಚಾರ ವ್ಯವಹಾರ ಮೊದಲಾದವುಗಳ ಮೇಲೆ ಹಿಂದೂ ಪ್ರಭಾವ ಪರಿಣಾಮಗಳನ್ನು ಕುರಿತು ಬೇರೆಡೆ ಪ್ರಸ್ತಾಪಿಸಿದೆ.

# ಅಧ್ಯಾಯ ೧೦

## ಮುಸ್ಲಿಂ ದರ್ಶನದ ಚರಿತ್ರೆ

ಮುಸ್ಲಿಂ ದರ್ಶನವನ್ನು ಸರಿಯಾಗಿ ತಿಳಿದುಕೊಳ್ಳಬೇಕಾದರೆ ಇಸ್ಲಾಂ ಪೂರ್ವದ ಇರಾನಿ ದರ್ಶನವನ್ನೂ ಗ್ರೀಕ್ ದರ್ಶನವನ್ನೂ ಕೊಂಚಮಟ್ಟಿಗೆ ಸ್ಥೂಲವಾಗಿ ತಿಳಿದುಕೊಳ್ಳುವುದು ಆವಶ್ಯಕ. ಇರಾನಿಯನ್ನರ ಮೊದಮೊದಲ ಧರ್ಮಬೋಧಕ ಜ಼ರಥುಷ್ಟ್ರ. ಇವನ ಕಾಲ ಕ್ರಿ.ಪೂ. ೧೦೦೦ ದಿಂದ ೧೨೦೦ ರ ನಡುವಣ ಕಾಲ. ಇವನ ಹೆಸರು ಕ್ರಿ. ಪೂ. ೪-೫ನೆಯ ಶತಮಾನಗಳ ವೇಳೆಗೇ ಪುರಾಣದ ಹೆಸರಾಗಿ ಹೋಗಿತ್ತು. ಗ್ರೀಕ್ ಬರಹಗಾರರು ಹಲವು ಜ಼ರಥುಷ್ಟ್ರರನ್ನು ಹೇಳಿದ್ದಾರೆ. ಇವರಲ್ಲಿ ಕೊನೆಯವನು ಪ್ರಸಿದ್ಧ ಅಲೆಗ್ಜಾಂಡರನ ಸಮಕಾಲಿಕನು. ಇವನ ಧರ್ಮಬೋಧೆ ಗಾಥಗಳಲ್ಲಿ ಅಡಕವಾಗಿದೆ. ಮೈನ್ಯೂ (ಸಂಸ್ಕೃತ-ಮನ್ಯು) ಅಥವಾ ಆತ್ಮ ಎಂಬುದೇ 'ಸತ್'. ಇದು ಎರಡಾಗಿದೆ. ರಚನಾತ್ಮಕವಾದ ಒಂದು ಒಳ್ಳೆಯ ಮೈನ್ಯೂವೂ, ನಾಶಾತ್ಮಕವಾದ ಒಂದು ಕೆಟ್ಟ ಮೈನ್ಯೂವೂ ಇವೆ. ದ್ರವ್ಯಕ್ಕೆ ಸ್ವತಂತ್ರವಾದ ಅಸ್ತಿತ್ವವಿಲ್ಲ. ಅಹುರ (ಸಂಸ್ಕೃತ-ಅಸುರ) ಎಂಬ ಪರವಸ್ತುವೇ ಇದನ್ನು ಸೃಷ್ಟಿಸಿದನು. ಪರಿಪೂರ್ಣನೂ ನಿರ್ವಿಕಾರನೂ ಆದ ಇವನೇ ಸೃಷ್ಟಿಕರ್ತನು. ವ್ಯಕ್ತಸ್ವರೂಪದಲ್ಲಿ ಇವನು ಎರಡು ರೂಪದಲ್ಲಿ ಕಾಣಿಸಿಕೊಳ್ಳುತ್ತಾನೆ. ಒಂದು ಶಾಶ್ವತ, ರಚನಾತ್ಮಕ, ಜ್ಯೋತಿ, ಜೀವನ, ಪುಣ್ಯ ಮತ್ತು ಸತ್. ಮತ್ತೊಂದು ಅಸ್ಥಿರ, ನಾಶಾತ್ಮಕ, ತಮಸ್ಸು, ಮರಣ ಮತ್ತು ಪಾಪ. ಈ ಎರಡು ಶಕ್ತಿಗಳು ಸೃಷ್ಟಿಯೆಲ್ಲದರಲ್ಲೂ ಕಂಡುಬರುತ್ತವೆ. ದ್ರವ್ಯ ಈ ಎರಡು ಶಕ್ತಿಗಳಿಗೆ ಆಧಾರ ಅಥವಾ ಪಾತ್ರ ಎನ್ನಬಹುದು. ಅಹುರನಿಗೆ ಸಹಾಯಕವಾಗಿ ಹಲವು ಶಕ್ತಿಗಳಿವೆ. (೧) ವೊಹುಮನಹ್ (ಸಂಸ್ಕೃತ-ವಸುಮನಸ್) ಎಂದರೆ, ಪರಮ ಮನಸ್ಸು ಅಥವಾ ವಿಶ್ವಬುದ್ಧಿ. (೨) 'ಅಷ' ಅಖಿಮೀನಿಯನ್ ಭಾಷೆಯಲ್ಲಿ 'ಅರ್ತ', ಸಂಸ್ಕೃತದಲ್ಲಿ 'ಋತ'. ಇದು ಜೀವಶಕ್ತಿ ಅಥವಾ ವಿಶ್ವಾತ್ಮ. (೩) ಕ್ಷತ್ರವೈರ್ಯ (ಸಂ.-ಕ್ಷತ್ರ ವೀರ್ಯ). ಇದು

ದಿವ್ಯಶಕ್ತಿ ಅಥವಾ ವಿಶ್ವೇಚ್ಛೆ. (೪) ಅರ್‌ಮುಯ್‌ತಿ (ಸಂ.–ಅರಮತಿ) ಅಥವಾ ದ್ರವ್ಯ ಈ ಕಸತ್ರ ವೈರ್ಯಕ್ಕೆ ಪಾತ್ರಭೂತವಾಗಿದ್ದು ಸೃಷ್ಟಿ ರೂಪದಲ್ಲಿ ಕಾಣುತ್ತದೆ. ಈ ತತ್ತ್ವಗಳ ಜತೆಗೆ (೫) ಹೌರ್ವ ತತ್ (ಸಂ.–ಸರ್ವತತಿ) ಎಂದರೆ ಅಪರಿಚ್ಛಿನ್ನ ದೇಶವೂ (೬) ಅಮರ್‌ತತ್ (ಸಂ.–ಅಮೃತತೆ) ಎಂದರೆ ಅನಂತಕಾಲವೂ ಸೇರುತ್ತವೆ. ಮನುಷ್ಯನು ಸಮಗ್ರಸೃಷ್ಟಿಯ ಅಡಕ. ಅವನಲ್ಲಿ ಮೇಲೆ ಹೇಳಿದ ಆರು ತತ್ವಗಳೂ (ಬುದ್ಧಿ, ಆತ್ಮ, ಇಚ್ಛೆ, ದ್ರವ್ಯ, ದೇಶ ಮತ್ತು ಕಾಲ) ಅಡಗಿವೆ. ಇದರಿಂದ ವಿಶ್ವಾತ್ಮನ ಚರ್ಯೆಯೇ ಜೀವಾತ್ಮನ ಚರ್ಯೆಯೂ ಆಗಿದೆ. ಜೀವಾತ್ಮ ಅಹುರನಿಂದ ಸೃಷ್ಟಿಯಾಗಿ ಆತ್ಮ ಇಚ್ಛೆ ಮತ್ತು ದ್ರವ್ಯದಿಂದ ಕೂಡಿ, ಮನುಷ್ಯನ ಕರ್ಮಕ್ಕೆ ಅವನ ಇಚ್ಛಾಶಕ್ತಿಯೇ ಕಾರಣವಾಗಿರುತ್ತದೆ. ಮನುಷ್ಯನ ಇಚ್ಛೆ ಅವನನ್ನು ದೇವತ್ವಕ್ಕಾದರೂ ಏರಿಸಬಹುದು, ಕೇವಲ ಪಾರ್ಥಿವ ಜೀವನದಲ್ಲಿ ಮುಳುಗಿಸಿ ಕೆಳಕ್ಕಾದರೂ ಬೀಳಿಸಬಹುದು. ಮರಣ ಹೊಸ ಜೀವನ; ಅಥವಾ ಆತ್ಮದ ಸಹಜ ಸ್ವರೂಪದ ಜ್ಞಾನ. ಸ್ಪರಥುಸ್ತ್ರ ಧರ್ಮದ ನೀತಿ ನಡೆವಳಿಗಳೆಲ್ಲ ಈ ನಂಬಿಕೆಯ ತಳಹದಿಯಮೇಲೆ ಕಟ್ಟಿದೆ. ಮನುಷ್ಯನು ಆತ್ಮ ದ್ರವ್ಯ, ಪಾಪ ಪುಣ್ಯ, ಮೃತಿ ಅಮೃತಿ, ಕತ್ತಲೆ ಬೆಳಕು —ಈ ಎರಡುಗಳ (ದ್ವಂದ್ವಗಳ) ನಡುವೆ ಇದ್ದು, ಒಂದನ್ನು ಬಿಟ್ಟು ಒಂದನ್ನು ಆಯ್ದುಕೊಂಡು ಬಾಳಬೇಕಾಗಿದೆ. ಮನುಷ್ಯನು ಸಾಧ್ಯವಾದಷ್ಟು ಬೆಂಕಿ, ಗಾಳಿ, ನೀರು, ಮಣ್ಣು—ಈ ನಾಲ್ಕು ಭೂತಗಳನ್ನೂ ಕೆಡಿಸದೆ ಪವಿತ್ರವಾಗಿಟ್ಟುಕೊಂಡು ಜೀವನ ನಡಸಬೇಕು.

ಅಖಿಮಿನಿಯನ್ನರು ಉರುಳಿ ಅರೆ ಇರಾನಿಗಳಾಗಿದ್ದ ಪಾರ್ಥಿಯನ್ನರು ಪಟ್ಟಕ್ಕೆ ಬಂದಾಗ, ಗ್ರೀಕ್‌ಜ್ಞಾನದ ಪ್ರಭಾವ ಇರಾನಿನ ಮೇಲೆ ಸಂಪೂರ್ಣವಾಗಿ ಬಿತ್ತು. ಧರ್ಮವಿಷಯದಲ್ಲಿ ಸ್ಪರಥುಸ್ತ್ರ ತತ್ವ ಉಳಿದುಕೊಂಡು ಬಂದರೂ ಜ್ಞಾನ ವಿಷಯದಲ್ಲಿ ಗ್ರೀಕ್ ಪ್ರಭಾವವೇ ಹೆಚ್ಚಾಯಿತು. ಕ್ರಮೇಣ ಸ್ಪರಥುಸ್ತ್ರ ತತ್ತ್ವವೇ ಮಿಥ್ರ ಧರ್ಮರೂಪವನ್ನು ತಾಳಿ ಮಿಥ್ರ (ಸಂ.–ಮಿತ್ರ ಸೂರ್ಯ) ಯೂರೋಪಿನ ಮೇಲೂ ತನ್ನ ಪ್ರಭಾವವನ್ನು ಬೀರಿತು. ಇತ್ತಲಾಗಿ ಬೌದ್ಧಧರ್ಮ ಇರಾನಿನ

ಪೂರ್ವ ಭಾಗಗಳಲ್ಲಿ ತನ್ನ ಪ್ರಭಾವ ಬೀರಿ ಅನೇಕ ಜನ ಇರ್ರಾನಿಗಳು ಬೌದ್ಧರಾದರು. ಕ್ರೈಸ್ತಧರ್ಮ ಹುಟ್ಟಿಕೊಂಡು ಅತ್ತ ಪಶ್ಚಿಮದ ಕಡೆಯೂ ಮಿಥ್ರಧರ್ಮದ ಪ್ರಾಬಲ್ಯ ಕಡಮೆಯಾಯಿತು. ಅರ್ಮೇನಿಯ ದವರೂ, ಮೆಸೊಪೊಟೇಮಿಯದವರೂ, ಸಿರಿಯದವರೂ, ಕ್ರೈಸ್ತ ರಾದರು.

ಪಾರ್ಥಿಯನ್ ಆಳಿಕೆಯ ಕೊನೆಯ ಮತ್ತು ಸಸಾನಿಯನ್ ಆಳಿಕೆಯ ಮೊದಲ ವೇಳೆಗೆ ಧರ್ಮ ಸಂಸ್ಕರಣ ನಡೆದು ಅನೇಕ ವ್ಯಾಖ್ಯಾನ ಮತಗಳು (ಸ್ಕೊಲ್ಯಾಸ್ಟಿಸಿಸ್ಸಮ್) ಹುಟ್ಟಿಕೊಂಡುವು. ಈ ಕಾಲದ ತಾತ್ವಿಕರಲ್ಲಿ ಅರ್ಸಕ ಅಥವಾ ಅರಸ್ಯ ಎಂಬುವನೊಬ್ಬನು. ಇವನು 'ಜ಼ರ್‌ವಾನ್' ಮತಪ್ರವರ್ತಕನೆಂದು ಪ್ರತೀತಿ ಇದೆ. ಜ಼ರ್‌ವಾನ್ (ಅನಂತಕಾಲ) ಎಂಬ ಶಬ್ದ ಅವೆಸ್ತದಲ್ಲಿ ಕಂಡು ಬಂದರೂ ಅದಕ್ಕೆ ಅಲ್ಲಿ ಅಷ್ಟು ಪ್ರಾಮುಖ್ಯತೆ ಇಲ್ಲ. ಜ಼ರ್‌ವಾನ್ ಮತದ ಪ್ರಕಾರ ಜ಼ರ್‌ವಾನ್ ಅಥವಾ 'ಕಾಲ' ಅಹುರನನ್ನೂ ನಿರ್ಮಿಸಿದ್ದು. ಅಲ್ಲದೆ, ಅಹುರ ಮತ್ತು ಅಂಗ್ರಮೈನ್ಯು ಎಂಬುವು ಈ ಕಾಲತತ್ವದಿಂದ ಹುಟ್ಟಿದ ತತ್ವಗಳು. ಈ ಕಾಲವೇ ಸೃಷ್ಟಿಗೆ ಆದಿಕಾರಣ. ಥ್ವಾಸ (ದೇಶ) ಮತ್ತು ಕ್ಷೇತ (ತೇಜಸ್ಸು) ಇವೆರಡೂ ಈ ಕಾಲದ ಬೇರೆಬೇರೆ ಸ್ವರೂಪಗಳು. ಜ಼ರ್‌ವಾನ್ ಮತದಲ್ಲಿ ಥ್ವಾಸಕ್ಕೂ ವಾಯುವಿಗೂ ದೊಡ್ಡ ಸ್ಥಾನವಿದ್ದು, ಜ಼ರ್‌ವಾನಿಗೆ ಸಲ್ಲುವಂತೆಯೇ ಇವಕ್ಕೂ ಪೂಜೆ ಸಲ್ಲುತ್ತದೆ. ಮನುಷ್ಯನ ಜೀವನದ ಮೇಲೆ ಗ್ರಹಗಳ ಪ್ರಭಾವ ಇರುತ್ತೆಂಬ ನಂಬಿಕೆ ಇದ್ದುದ್ದರಿಂದ ಈ ಮತದಲ್ಲಿ ಗ್ರಹಗಳಿಗೂ ಪ್ರಾಮುಖ್ಯತೆ ಉಂಟು. ಜ಼ರ್‌ವಾನ್ ಮತ ಕೇವಲ ದಾರ್ಶನಿಕತತ್ವ ಮಾತ್ರವಲ್ಲದೆ ವ್ಯವಹಾರ ಧರ್ಮವೂ ಆಗಿದ್ದು, ಮಿಥ್ರಧರ್ಮದಂತೆಯೇ ಪುರಾಣಗಳೂ, ಗೂಢಾರ್ಥಗಳೂ, ರಹಸ್ಯಗಳೂ, ಸಂಕೇತಗಳೂ ಬೆಳೆದುಕೊಂಡು ಬಂದುವು. ಈ ಮತ ಇರಾನಿನಲ್ಲೆಲ್ಲ ಹಬ್ಬಿ, ಕೊಂಚ ಮಟ್ಟಿಗೆ ಇಂಡಿಯ ಮತ್ತು ಸಿರಿಯಗಳ ಮೇಲೂ ಪ್ರಭಾವ ಬೀರಿರ ಬಹುದು. ಸಸಾನಿಯನ್ ಕಾಲದ ಹಲವು ದೇವತಾ ಶಾಸ್ತ್ರಜ್ಞರು ಜ಼ರ್‌ವಾನ್‌ಮತೀಯರು. ಮತ್ತೆ ಜೋರಾಸ್ಟರ್ ವೈದಿಕ ಧರ್ಮವೂ,

ಮಾನಿ ಮತವೂ ತಲೆಯೆತ್ತಿಕೊಂಡು ಜ಼ರ್‌ವಾನ್ ಮತ ಅಡಗಿ ಹೋಯಿತು.

ನೀಷಾಪೂರಿನ ಮಾನಿ ಪ್ರಸಿದ್ಧ ಇರಾನ್ ತಾತ್ತ್ವಿಕರಲ್ಲಿ ಒಬ್ಬನು. ಸಸಾನಿಯನ್ ರಾಜಧಾನಿಯ ಹತ್ತಿರದ ಕ್ಟೆಸಿಫೋನ್ ಹಳ್ಳಿಯಲ್ಲಿ ಕ್ರಿ.ಶ. ೨೧೫ ರಲ್ಲಿ ಹುಟ್ಟಿದನು. ತನ್ನ ತಂದೆಯಲ್ಲೇ ವಿದ್ಯಾಭ್ಯಾಸ ಮಾಡಿ, ಗ್ರೀಕ್ ಸಾಹಿತ್ಯ ಮತ್ತು ದರ್ಶನವನ್ನೂ, ಜ್ಯೋತಿಷ, ವೈದ್ಯ, ಸಂಗೀತ, ಚಿತ್ರಕಲೆ—ಮೊದಲಾದುವನ್ನೂ ವ್ಯಾಸಂಗಮಾಡಿ ಪಾರಂಗತನಾದನು. ಇವನು ೨೫ ವರ್ಷ ವಯಸ್ಸಿನಲ್ಲೇ ಧರ್ಮಸುಧಾರಣೆಗೆ ಕೈ ಹೊಟ್ಟನು.

ಮಾನಿಯ ತತ್ತ್ವ ಸಂಕ್ಷೇಪವಾಗಿ ಏನೆಂದರೆ:—ತಮಸ್-ತತ್ತ್ವವಾದ ದ್ರವ್ಯ ಮತ್ತು ತೇಜಸ್-ತತ್ತ್ವವಾದ ಆತ್ಮ ಇವೆರಡೂ ಕಾಲತತ್ತ್ವವಾದ ಜ಼ರ್‌ವಾನ್‌ನಿಂದ ಹುಟ್ಟಿದುವು ಎಂಬ ಜ಼ರ್‌ವಾನ್ ಮತೀಯರ ನಂಬಿಕೆಯನ್ನಾಗಲಿ, ಅಹುರಮಜ್ದನೇ ಪರವಸ್ತು ಎನ್ನುವ ಜ಼ೊರಾಸ್ಟರ್ ತತ್ತ್ವವನ್ನಾಗಲಿ ಇವನು ಒಪ್ಪಲಿಲ್ಲ. ಇವನ ಪ್ರಕಾರ ದ್ರವ್ಯ ಆತ್ಮಕ್ಕೆ ಪಾತ್ರವಲ್ಲ; ಆದರೆ, ಅದನ್ನು ಒಳಹೇರಿಕೊಳ್ಳುವ ಒಂದು ತತ್ತ್ವ. ಜ಼ೊರಾಸ್ಟರ್ ಮತದ ಪ್ರಕಾರ ದ್ರವ್ಯಕ್ಕೆ ನಿಜವಾದ ಅಸ್ತಿತ್ವವಿಲ್ಲ. ದ್ರವ್ಯ ಸತ್ ಮತ್ತು ಅಸತ್ ಶಕ್ತಿಗಳ ಹೋರಾಟಕ್ಕೆ ಪಾತ್ರ ಮಾತ್ರ. ಬುದ್ಧಿಯ ಬೆಳಕಿನ ಮೂಲಕ ಇಚ್ಛಾಶಕ್ತಿಯಾಗಿ ವ್ಯಕ್ತವಾಗುವ ಜೀವಾತ್ಮನು ಈ ಶಕ್ತಿಗಳಲ್ಲಿ ಒಂದನ್ನು ಬಿಟ್ಟು ಒಂದರ ಪಕ್ಷ ಹಿಡಿಯಬೇಕಾಗಿದೆ. ಆದರೆ, ಮಾನಿ ದ್ರವ್ಯಕ್ಕೂ ಒಂದು ಸ್ವತಂತ್ರ ಅಸ್ತಿತ್ವ ಕೊಟ್ಟು, ಅದನ್ನು ಆತ್ಮಕ್ಕೆ ವಿರೋಧಿಯನ್ನಾಗಿ ಹೇಳಿದ್ದಾನೆ. ದೃಶ್ಯಪ್ರಪಂಚ ತಮಸ್ಸು ತೇಜಸ್ಸುಗಳ ಸಂಯೋಗವೆಂದೂ, ಈ ಕೂಡಿಕೆ ಅಸ್ವಾಭಾವಿಕವಾದ್ದರಿಂದ ಇವುಗಳ ಬೇರ್ಪಾಟು ಆವಶ್ಯಕವೆಂದೂ ಪ್ರತಿಪಾದಿಸಿದ್ದಾನೆ. ದ್ರವ್ಯಕ್ಕೆ ಬುದ್ಧಿಶಕ್ತಿ ಇಚ್ಛಾಶಕ್ತಿಗಳು ಇಲ್ಲ; ಅದು ಶುದ್ಧ ಕುರುಡು, ಜಡ. ಆತ್ಮದೊಡನೆ ಸಂಯೋಗ ಹೊಂದುವುದರಿಂದ ಅದಕ್ಕೆ ಚೈತನ್ಯ ಬರುತ್ತದೆ. ಮುಕ್ತಿ ದಶೆಯಲ್ಲಿ ಆತ್ಮ ಈ ಪಾರ್ಥಿವ ಬಂಧನದಿಂದ ತಪ್ಪಿಸಿಕೊಂಡಾಗ, ದ್ರವ್ಯ ಕೊನೆಗೆ ತಮಃಕೂಪವನ್ನು ಸೇರಿಕೊಳ್ಳುತ್ತದೆ. ಜಗತ್ತು ದೇವಸೃಷ್ಟಿಯಲ್ಲ; ಸೈತಾನ್ ಸೃಷ್ಟಿ. ಪಾರ್ಥಿವ

ಜೀವನ ಮೂಲತಃ ಪಾಪಭರಿತವಾದದ್ದು. ಮಾನಿಯ ಪ್ರಕಾರ ಪರ ವಸ್ತು ಪರಿಶುದ್ಧನೂ, ಶಾಶ್ವತನೂ, ಜ್ಞಾನಿಯೂ, ಸತ್ಯನೂ ಆಗಿದ್ದು ತಮಸ್ಸಾದ ದ್ರವ್ಯ ತೇಜಸ್ಸಾದ ಆತ್ಮವನ್ನು ಆಕ್ರಮಿಸಿಕೊಂಡಿರಲು ಅದರ ಆಕ್ರಮಣದಿಂದ ಆತ್ಮಕ್ಕೆ ಬಿಡುಗಡೆ ತರಲು ಪ್ರಯತ್ನಿಸುತ್ತಾನೆ. ಪಾರ್ಥಿವಬಂಧನದಿಂದ ಮುಕ್ತನಾಗುವುದೇ ಜೀವನ ಧ್ಯೇಯ. ದೇಹ ಆತ್ಮಕ್ಕೆ ಸೆರೆಯು ಕಟ್ಟಾದರೂ ಆತ್ಮದ ಮುಕ್ತಿಗೂ ಅದೇ ಮೂಲ ಸ್ಥಾನ. ಎಲ್ಲ ಜೀವಾತ್ಮಗಳೂ ತಮ್ಮ ತಮ್ಮ ದೇಹದಿಂದ ಬಿಡುಗಡೆ ಹೊಂದಿದಾಗ ಪ್ರಪಂಚ ಕೊನೆಗೊಳ್ಳುತ್ತದೆ. ಭೋಗವನ್ನು ತ್ಯಜಿಸು ವುದು, ಸನ್ಮಾರ್ಗದಲ್ಲಿ ನಡೆಯುವುದು, ವಿಗ್ರಹಾದಿಗಳನ್ನು ಪೂಜೆ ಮಾಡದಿರುವುದು ಇವೇ ಮಾನಿಮತದ ಮುಖ್ಯ ಬೋಧನೆ. ಬೌದ್ಧರಲ್ಲಿ ರುವಂತೆಯೇ ಮಾನಿಮತಾನುಯಾಯಿಗಳಲ್ಲೂ ಸಂನ್ಯಾಸಿಗಳು ಅಥವಾ ಭಿಕ್ಷುಗಳು ಎಂಬ ಪ್ರಪಂಚವನ್ನು ತೊರೆದವರ ಪಂಗಡವೊಂದೂ, ಗೃಹ ಸ್ಥರು ಅಥವಾ ಶ್ರಾವಕರು ಎಂಬ ಸಂಸಾರಿಗಳ ಪಂಗಡವೊಂದೂ ಇದ್ದುವು. ಸಂನ್ಯಾಸಿಗಳು ಮನೆ ಮಠಗಳನ್ನು ಬಿಟ್ಟು ಮದುವೆ ಮಾಡಿ ಕೊಳ್ಳದೆ ಮದ್ಯಮಾಂಸಗಳನ್ನು ವರ್ಜಿಸಿ ದೇಶಾಟನೆ ಮಾಡಿಕೊಂಡು ಭಿಕ್ಷೆಯೆತ್ತಿ ಜೀವಿಸುತ್ತಿದ್ದರು. ಸ್ತ್ರೀ ಪುರುಷರಿಬ್ಬರೂ ಈ ಜೀವನ ವನ್ನು ಅವಲಂಬಿಸಬಹುದಾಗಿತ್ತು. ಈ ಎರಡು ಪಂಗಡಗಳ ಜತೆಗೆ ಸತ್ವ, ರಜಸ್ಸು, ತಮಸ್ಸು ಈ ಮೂರು ಗುಣಗಳಿಗೆ ಅನುಸಾರವಾಗಿ ಮೂರನೆಯ ತಮೋಗುಣ ಪ್ರಧಾನರಾದ ಪಾಪಿಗಳ ಮೂರನೆಯ ಒಂದು ಪಂಗಡವೂ ಇತ್ತು.

ಮಾನಿ ತನ್ನ ಹಿಂದಿನ ಧರ್ಮಪ್ರಚಾರಕರು ಮತ್ತು ತಾತ್ವಿಕರಲ್ಲಿ ಪ್ಲೇಟೊ, ಜರಥುಷ್ಟ್ರ, ಹರ್‌ಮೀಸ್, ಬುದ್ಧ, ಏಸುಕ್ರಿಸ್ತ, ಮೊದಲಾದ ವರ ಹೆಸರನ್ನು ಹೇಳಿದ್ದಾನೆ. ಆದರೆ ಮಾನಿ ಹೇಳುವ ಏಸು ಕ್ರಿಸ್ತನು ಶಿಲುಬೆಯ ಮೇಲೆ ಕೊಲೆಯಾದವನಲ್ಲ; ಕೇವಲ ಜ್ಯೋತಿರ್ಮಯ ವಾದ ಒಂದು ಶಕ್ತಿ. ಈ ಶಕ್ತಿಯೇ ಮನುಷ್ಯಕೋಟಿಯ ಜೀವನ ಮುಕ್ತಿಗಳಿಗೆ ಮೂಲಾಧಾರ. ಮಾನಿಯ ನಂಬಿಕೆಯಲ್ಲಿ ದೇವರು ಒಳ್ಳೆಯದು ಕೆಟ್ಟದ್ದು ಎರಡನ್ನೂ ಮಾಡಿದ್ದಾನೆಂದು ಎಣಿಸುವುದು

ದೈವದ್ರೋಹ. ಒಂದು ರೀತಿಯಲ್ಲಿ ಮಾನಿ ಪುನರ್ಜನ್ಮವುಂಟೆಂದು ನಂಬಿದ್ದನು. ಈ ಪುನರ್ಜನ್ಮದಿಂದ ಬಿಡುಗಡೆ ಹೊಂದುವುದೇ ಮುಕ್ತಿ. ಈ ಮುಕ್ತಿ ಕೆಲವರಿಗೆ (ಉದಾಹರಣೆಗೆ—ಸಂನ್ಯಾಸಿಗಳಿಗೆ) ಬೇಗ ಬರಬಹುದು; ಮುಕ್ತಿ ಕೆಲವರಿಗೆ (ಉದಾಹರಣೆಗೆ—ಶ್ರಾವಕರಿಗೆ) ತಡೆದು ಬರಬಹುದು.

ಮಾನಿಮತ ಯೂರೋಪ್, ಆಫ್ರಿಕ, ಚೀನ, ಇಂಡಿಯ, ಟಿಬೆಟ್, ಮೊದಲಾದ ಭಾಗಗಳಲ್ಲೂ ಹರಡಿ, ಕ್ರೈಸ್ತ ಮತ್ತು ಇಸ್ಲಾಂ ಧರ್ಮಗಳ ಮೇಲೂ ತನ್ನ ಪ್ರಭಾವ ಬೀರಿತು. ಇಸ್ಲಾಂ ಪ್ರಾಬಲ್ಯದಲ್ಲಿ ಮಾನಿಮತಾನುಯಾಯಿಗಳಿಗೆ ಹಿಂಸೆ ಹೆಚ್ಚಾಗಿ, ಮೊಗಲರ ದಾಳಿಯ ತರುವಾಯ ಇವರು ಸಂಪೂರ್ಣ ನಾಶವಾಗಿ ಹೋದರು. ಮಾನಿ ತತ್ತ್ವಕ್ಕೂ ಕುರಾನಿನಲ್ಲಿ ಹೇಳಿರುವ ಕೆಲವು ವಿಷಯಗಳಿಗೂ ಅಲ್ಲಲ್ಲಿ ಸಾಮ್ಯಗಳಿವೆ: ಸತ್ ಅಥವಾ ಜೀವನ ಸ್ವರೂಪವಾದ ಒಂದು ಮರ, ತಮಸ್ ಅಥವಾ ಮೃತ್ಯುಸ್ವರೂಪವಾದ ಮತ್ತೊಂದು ಮರ, ಈ ಎರಡು ಮರಗಳೂ ಸಮಸ್ತ ದೇಶವನ್ನೂ ತುಂಬಿಕೊಂಡಿವೆ ಎಂಬ ದೃಷ್ಟಾಂತ; ಯೆಹೂದ್ಯರು ಸಿಲುಬೆಗೆ ಏರಿಸಿದ್ದು ಏಸುಕ್ರಿಸ್ತನನ್ನಲ್ಲ, ಆದರೆ, ತಪ್ಪಿನಿಂದ ಬೇರೆ ಯಾವನನ್ನೊ ಎಂಬ ವಿಷಯ; ಸತ್, ರಜಸ್, ತಮೋಗುಣಗಳಿಗೆ ಅನುಸಾರವಾಗಿ ಜನರನ್ನು ಮೂರು ಪಂಗಡ ಮಾಡುವುದು—ಇವೇ ಮೊದಲಾದುವು. ಆದರೆ, ಯೆಹೂದ್ಯ ಮತ್ತು ಕ್ರೈಸ್ತ ಧರ್ಮಗಳಂತೆಯೇ ಇಸ್ಲಾಂ ಧರ್ಮವೂ ಆದಮ್ ಮತ್ತು ಈವ್ ಇವರಿಬ್ಬರ ಬೀಳಿಗೆ ಸೈತಾನ್ ಕಾರಣವೆಂದು ನಂಬುತ್ತದೆ. ಮಾನಿ ಇದನ್ನು ಒಪ್ಪದೆ ಜ್ಞಾನಫಲವನ್ನು ತಿನ್ನಿಸಿ ಅದರ ಮೂಲಕ ಮರಣದ ಮರ್ಮವನ್ನೂ, ಪಾರ್ಥಿವ ಜೀವನದ ದುಃಖವನ್ನೂ ಮನುಷ್ಯನಿಗೆ ಅನುಭವ ಮಾಡಿಕೊಟ್ಟವನು ಏಸುಕ್ರಿಸ್ತನೆಂದು ನಂಬಿದ್ದನು.

ಮಾನಿಯ ತರುವಾಯ ಬಂದ ಪ್ರಸಿದ್ಧ ತಾತ್ತ್ವಿಕರಲ್ಲಿ ಸ್ಸಂಥುಸ್ತ್ರ ಒಬ್ಬನು. ಇವನ ಮತವನ್ನು ಇವನ ಶಿಷ್ಯನಾದ ಮಸ್ದಕ್ ಪ್ರಚಾರ ಮಾಡಿದನು. ಈ ಮತವನ್ನು ಮಸ್ದಕ್ ಮತವೆಂದೇ ಕರೆಯುತ್ತಿದ್ದರು. ಇದು ಮಾನಿಮತದ ಮತ್ತೊಂದು ರೂಪವೆನ್ನಬಹುದು. ಮಾನಿ ಜಡ

ದ್ರವ್ಯ ತಾನೇ ಆತ್ಮದೊಡನೆ ಕಲೆತು ಸೃಷ್ಟಿ ಮೊದಲಾಗುತ್ತದೆಂದು ನಂಬಿದ್ದನು. ಮಸ್ದಕ್ ಇದನ್ನು ಒಪ್ಪದೆ ದ್ರವ್ಯಕ್ಕೆ ಬುದ್ಧಿಯಾಗಲಿ ಇಚ್ಛಾಶಕ್ತಿಯಾಗಲಿ ಇಲ್ಲದ್ದರಿಂದ ಆತ್ಮವೇ ದ್ರವ್ಯವನ್ನು ಹೊಕ್ಕಿರ ಬೇಕು; ಆದರೆ, ಅದು ಆಕಸ್ಮಾತ್ ಘಟನೆಯೇ ಹೊರತು ಉದ್ದೇಶ ಪೂರ್ವಕವಲ್ಲ—ಎಂದು ವಾದಿಸಿದನು. ಈ ವಿಷಯವನ್ನೇ ಒತ್ತಿಹೇಳಿ ಇವನು ತನ್ನದೇ ಒಂದು ಹೊಸ ಮತವನ್ನು ಸ್ಥಾಪಿಸಿದನೆನ್ನಬಹುದು. ಆತ್ಮಕ್ಕೆ ತನ್ನ ಈ ಅಸ್ವಾಭಾವಿಕ ಬಂಧನಾವಸ್ಥೆ ತಿಳಿದು ಜ್ಞಾನೋದಯ ವಾಗಿ, ಕಟ್ಟಿನಿಂದ ಬಿಡುಗಡೆ ಹೊಂದುವುದೇ ಮುಕ್ತಿ. ಮಸ್ದಕ್ ಪ್ರಕಾರ ಸೃಷ್ಟಿ, ಬೆಂಕಿ ನೀರು ಮಣ್ಣುಗಳಿಂದ ಆದ್ದು. ಈ ಮೂರು ಭೂತಗಳೂ ಸಮರಸವಾಗಿ ಶುದ್ಧ ರೀತಿಯಲ್ಲಿ ಬೆರೆತು ಆದುವು ಸದ್ ವಸ್ತುಗಳು; ಅಶುದ್ಧರೀತಿಯಲ್ಲಿ ವಿರಸವಾಗಿ ಬೆರೆತು ಆದುವು ಅಸದ್ ವಸ್ತುಗಳು. ಮಾನಿಯ ತತ್ತ್ವದಂತೆಯೇ ಮಸ್ದಕಿನ ತತ್ತ್ವವೂ ಐಹಿಕ ಭೋಗದ ತ್ಯಾಗದ ಮೇಲೆ ನಿಂತಿದೆ. ಮಾನಿಯಂತೆಯೇ ಮಸ್ದಕನೂ ಮಾಂಸಾಹಾರ, ಪ್ರಾಣಿವಧೆ ಮೊದಲಾದ ಹಿಂಸಾಕೃತ್ಯಗಳನ್ನು ನಿಷೇಧಿ ಸಿದನು. ಕೊನೆಗೆ, ಮಾನಿಮತದಂತೆಯೇ ಇದೂ ಹಿಂಸೆ ಕಾಟಗಳಿಗೆ ಸಿಕ್ಕಿ ಅಳಿದು ಹೋಯಿತು.

ಗ್ರೀಕ್ ದರ್ಶನದ ಬಹು ಸ್ಥೂಲಪರಿಚಯವನ್ನು ಇಲ್ಲಿ ಮಾಡಿ ಕೊಡಬಹುದು. ಈಜಿಪ್ಟ್, ಬ್ಯಾಬಿಲೋನ್, ಮೊದಲಾದ ಪೂರ್ವ ದೇಶಗಳು ನಾಗರಿಕತೆಯ ಕೇಂದ್ರಗಳಾಗಿದ್ದ ಇತಿಹಾಸಪೂರ್ವ ಕಾಲ ದಲ್ಲಿ ಗ್ರೀಕರು ಆ ದೇಶಗಳಿಗೆ ಹೋಗಿಬಂದು ಅವರ ಜ್ಞಾನವನ್ನು ಗಳಿಸಿ, ಮತ್ತೆ ತಮ್ಮ ಕಳೆಯಿಂದ ಅದನ್ನು ಪ್ರಪಂಚಕ್ಕೆ ಬೀರಿದರು. ಕ್ರಿ. ಪೂ. ೬ನೆಯ ಶತಮಾನದಲ್ಲಿದ್ದ ಮಿಲೆತಸ್ಸಿನ ಥಲೀಸ್ ಬಹು ಪ್ರಾಚೀನ ಗ್ರೀಕ್ ದಾರ್ಶನಿಕರಲ್ಲಿ ಒಬ್ಬನು. ಇವನು ನೀರೇ ಎಲ್ಲದಕ್ಕೂ ಮೂಲ ಕಾರಣ ಎಂಬ ಜಲಮೂಲತತ್ತ್ವವನ್ನು ಪ್ರತಿಪಾದಿಸಿದನು. ಇವನ ತರುವಾಯ ಬಂದ ಅನಕ್ಸಿಮಾಂಡರ್ (ಹು. ಸು. ಕ್ರಿ. ಪೂ. ೬೧೦) ಇದನ್ನು ಕೊಂಚ ಮುಂದುವರಿಸಿ ಈ ಮೂಲತತ್ತ್ವ ದೇಶಕಾಲಗಳಿಂದ ಪರಿಚ್ಛಿನ್ನವಾಗಿರದೆ ಅನಂತವಾದದ್ದು ಎಂದು ಹೇಳಿದನು. ಇವನ

ತರುವಾಯ ಬಂದ ಅನಕ್ಸಿಮನೀಸ್ ಗಾಳಿಯೇ ಮೂಲತತ್ತ್ವ ಎಂದು ವಾದಿಸಿದನು. ಈ ಹೊತ್ತಿಗೆ ಕ್ರಿ. ಪೂ. ೬ ನೆಯ ಶತಮಾನದ ಮಧ್ಯದಲ್ಲಿ ಪೈಥಾಗೊರಸ್ ಎಂಬ ಪ್ರಸಿದ್ಧ ದಾರ್ಶನಿಕನು ಕ್ರಾಟೋನ್ ಎಂಬಲ್ಲಿ ತನ್ನ ಮತವನ್ನು ಪ್ರಚಾರಕ್ಕೆ ತಂದನು. ಇವನು ಪೂರ್ವ ದೇಶಗಳನ್ನೆಲ್ಲ ತಿರುಗಿ ಅಲ್ಲಿ ಗಣಿತ, ಜ್ಯಾಮಿತಿ, ದರ್ಶನ ಮೊದಲಾದ ವಿಷಯಗಳನ್ನು ವ್ಯಾಸಂಗಮಾಡಿದನೆಂದು ತಿಳಿದು ಬರುತ್ತದೆ. ಪೈಥಾಗೊರಸ್ ತನ್ನ ಸಂಖ್ಯಾತತ್ತ್ವಕ್ಕೆ ಪ್ರಸಿದ್ಧನಾಗಿದ್ದಾನೆ. ಸಂಖ್ಯೆಗಳೇ ಸಮಸ್ತಕ್ಕೂ ಮೂಲವೆಂದೂ, ವಿಷಮ ಸಂಖ್ಯೆ ಸಮಸಂಖ್ಯೆಗಿಂತ ಮೇಲೆಂದೂ, 'ನಾಲ್ಕು' ಪರಿಪೂರ್ಣ ಸಂಖ್ಯೆಯೆಂದೂ ತಿಳಿದಿದ್ದನು. ಇವನ ಮತದ ಪ್ರಕಾರ ಪ್ರಪಂಚ ದ್ವಿಸ್ವಭಾವದ್ದು. ಇವನ ಮತ ಝೋರಾಸ್ಟರ್ ಮತವನ್ನೂ ಹಿಂದೂ ಮತವನ್ನೂ ಕೊಂಚಮಟ್ಟಿಗೆ ಹೋಲುತ್ತದೆ. ಪ್ರಪಂಚದಲ್ಲಿರುವ ಪ್ರತಿಯೊಂದು ವಸ್ತುವಿಗೂ ಒಂದೊಂದು ಆತ್ಮವಿದೆಯೆಂದೂ, ಪ್ರತಿ ಆತ್ಮವೂ ತನ್ನ ಪೂರ್ಣತೆಯ ಅಥವಾ ಅಪೂರ್ಣತೆಯ ಅನುಸಾರವಾಗಿ ದೇಹದಿಂದ ದೇಹಕ್ಕೆ ಬದಲಾಯಿಸುತ್ತದೆಂದೂ ಇವನು ನಂಬಿದ್ದನು. ಇವನ ಮತ್ತು ಇವನ ಅನುಯಾಯಿಗಳ ಪ್ರಭಾವ ಪ್ರಸಿದ್ಧ ಗ್ರೀಕ್ ದಾರ್ಶನಿಕರಾದ ಸಾಕ್ರಟೀಸ್ ಪ್ಲೇಟೋ ಅರಿಸ್ಟಾಟಲರ ಮೇಲೆ ಬಿದ್ದಿದೆ. ಪೈಥಾಗೊರಸ್ ಮುಸ್ಲಿಂ ದಾರ್ಶನಿಕರಿಗೆ ಬಹಳ ಗೌರವಪಾತ್ರನು.

ಹೆರಾಕ್ಲಿಟಸ್ ಎಂಬ ದಾರ್ಶನಿಕನು ಬೆಂಕಿಯೇ ಮೂಲತತ್ತ್ವವೆಂದೂ ಸೃಷ್ಟಿ ಒಂದು ನಿರಂತರ ಚಲನ ದ್ರವ್ಯವೆಂದೂ ನಂಬಿದ್ದನು. ಝೋರಾಸ್ಟರನಂತೆ ಹೆರಾಕ್ಲಿಟಸ್ ಸೃಷ್ಟಿಯ ದ್ವಿಸ್ವಭಾವವನ್ನು ಒಪ್ಪಿಕೊಂಡರೂ ಎರಡೂ ಒಂದೇ ಸತ್ಯದ ಎರಡು ಮುಖಗಳೆಂದು ವಾದಿಸಿದನು. ಪಾರ್ಮಿನಿಡೀಸ್ ಸೃಷ್ಟಿ ನಿರಂತರ ಚಲನದ್ರವ್ಯವೆಂದೂ, 'ಸತ್' ನಿರ್ವಿಕಾರವೂ ನಿಶ್ಚಲವೂ ಆದದ್ದೆಂದೂ ವಾದಿಸಿದನು. ಇವನು ಪ್ರಪಂಚದ ವೈವಿಧ್ಯಕ್ಕೆ ಕಾರಣಭೂತವಾದ ಎರಡು ತತ್ತ್ವಗಳನ್ನು ಬೆಂಕಿ ಮತ್ತು ಮಣ್ಣು ಅಥವಾ ಕಾವು ಮತ್ತು ತಣಾವು ಎಂದು ಕರೆದನು. ಲ್ಯೂಕಿಪ್ಪಸ್ ಮೊದಲು ಹೂಡಿದ ಅಣುತತ್ತ್ವವನ್ನು ಡೆಮಾಕ್ರಿಟಸ್

ವಿಸ್ತರಿಸಿದನು. ಅನಕ್ಸಾಗೊರಸ್ (ಹು. ಸು. ಕ್ರಿ. ಪೂ ೫೦೦) ಅವ್ಯವಸ್ಥೆಯ ಸೃಷ್ಟಿಯಲ್ಲಿ ವ್ಯವಸ್ಥೆಗೆ ಕಾರಣಭೂತವಾದದ್ದು ಬುದ್ಧಿ (ನೌಸ್) ಎಂದು ಪ್ರತಿಪಾದಿಸಿದನು.

ಗ್ರೀಕರ ಅಣುವಾದಿಗಳು ಸೃಷ್ಟಿಯೆಲ್ಲ ಅದೃಶ್ಯ ಅಸಂಖ್ಯಾತ ಅಣುಗಳಿಂದ ಘಟಿತವಾಗಿ, ಅಪರಿಚ್ಛಿನ್ನ ಆಕಾಶದಲ್ಲಿ ತೂಗಬಿಟ್ಟಿದೆ ಎಂದು ನಂಬಿದ್ದರು. ಇವರ ಪ್ರಕಾರ ಈ ಅಣುಗಳೆಲ್ಲ ಅವಿನಾಶಿ, ಅವಿಭಜ್ಯ, ಅನಾದಿ ಮತ್ತು ಅನಂತ; ಬೇರೆ ಬೇರೆ ಪರಿಮಾಣದುವಾದರೂ ಎಲ್ಲವೂ ಒಂದೇ ಪದಾರ್ಥದುವು. ಇವು ಬೇರೆ ಬೇರೆ ಪ್ರಮಾಣಗಳಲ್ಲಿ ಸಂಘಟಿಸುವುದೇ ಬೇರೆ ಬೇರೆ ರೂಪಗುಣಗಳಿಗೆ ಕಾರಣ. ಇವುಗಳ ಸಂಘಟನೆಯಿಂದ ವಸ್ತುಗಳ ಉತ್ಪತ್ತಿಯೂ, ವಿಘಟನೆಯಿಂದ ನಾಶವೂ ಆಗುತ್ತವೆ. ಇವುಗಳ ಸಂಘನೆ ವಿಘಟನೆಗಳಿಂದ ಚಲನ ಹುಟ್ಟುತ್ತದೆ. ಈ ಚಲನಕ್ಕೆ ಒಂದು ಆಕಾಶ ಬೇಕು. ಆದ್ದರಿಂದ ಆಕಾಶ ಮತ್ತು ಚಲನೆ ಇವೆರಡೂ ಸತ್ಯಾಂಶಗಳು. ಪ್ರತಿಯೊಂದು ವಸ್ತುವೂ ಒಂದೊಂದು ವಿಶಿಷ್ಟರೂಪದ ಅಣುವಿನಿಂದ ಘಟಿತವಾದದ್ದೆಂದೂ ಇವರು ನಂಬಿದ್ದರು. ಇವರ ಪ್ರಕಾರ ಆತ್ಮವೂ ಕೂಡ ಅಣುಘಟಿತವೆ. ಇದು ಅಗ್ನಿ ಅಣುಗಳಿಂದ ಘಟಿತವಾಗಿ ಮೆದುಳಿನಲ್ಲಿ ಬುದ್ಧಿಯಾಗಿಯೂ, ಹೃದಯದಲ್ಲಿ ಧೈರ್ಯವಾಗಿಯೂ, ಯಕೃತ್ತಿನಲ್ಲಿ (ಪಿತ್ತ ಜನಕಾಂಗದಲ್ಲಿ) ರಾಗ ಅಥವಾ ಕಾಮವಾಗಿಯೂ ಕೆಲಸ ಮಾಡುತ್ತದೆ.

ಗ್ರೀಕರಲ್ಲಿ ಸಾಫಿಸ್ಟರು ಎಂಬ ಒಂದು ಗುಂಪಿನ ತಾರ್ಕಿಕರು ಇದ್ದರು. ಸಾಮಾನ್ಯವಾಗಿ, ಇವರು ದ್ರವ್ಯಾರ್ಜನೆಗಾಗಿಯೂ, ಬರಿಯ ವಾದಕ್ಕಾಗಿಯೂ ವಿದ್ಯೆಯನ್ನು ಕಲಿಯುತ್ತಿದ್ದರು. ಇವರ ಗುರಿ ಆಷ್ಟಾಗಿ ಸತ್ಯಾನ್ವೇಷಣ ಆಗಿರದೆ, ಚರ್ಚೆಯಲ್ಲಿ ಹೇಗಾದರೂ ಗೆಲ್ಲುವುದೇ ಆಗಿತ್ತು. ಧರ್ಮಾಧರ್ಮಗಳೂ, ಗುಣಾವಗುಣಗಳೂ ಯಾವ ವಿಶ್ವದ ಮೂಲತತ್ತ್ವವನ್ನೂ ಅವಲಂಬಿಸಿರದೆ, ಇಷ್ಟಾನಿಷ್ಟಗಳನ್ನೂ ಸುಖದುಃಖಗಳನ್ನೂ ಅವಲಂಬಿಸಿವೆ ಎಂಬುದೇ ಇವರ ಮತ. ಅಲ್ಲದೆ, ಇವೆಲ್ಲ ನಿರಪೇಕ್ಷವಾಗಿರದೆ, ವೈಯಕ್ತಿಕವಾಗಿದ್ದು ಒಬ್ಬನಿಂದ ಒಬ್ಬನಿಗೆ ಬೇರೆಯಾಗುತ್ತವೆಂದೂ ವಾದಿಸಿದರು. ನ್ಯಾಯ, ಧರ್ಮ ಇವೆಲ್ಲವೂ

ದುರ್ಬಲರನ್ನು ಬಲೆಗೆ ಕೆಡವುವುದಕ್ಕೆ ಏರ್ಪಟ್ಟುವು ಎಂದು ಅವರು ನಂಬಿದ್ದರು. ಈ ತಾರ್ಕಿಕರಲ್ಲಿ ನಿಷ್ಕಾಮಿಗಳೂ ಸತ್ಯಪರಾಯಣರೂ ಜ್ಞಾನವನ್ನು ಜ್ಞಾನಕ್ಕಾಗಿ ಆರ್ಜಿಸತೊಡಗಿದವರೂ ಇರಲಿಲ್ಲವೆಂದಲ್ಲ. ವಸ್ತುತಃ ಪ್ರಸಿದ್ಧ ದಾರ್ಶನಿಕನಾದ ಸಾಕ್ರಟೀಸ್ ಇವರ ವಾದಮಾರ್ಗವನ್ನೇ ಅನುಸರಿಸಿದವನು. ಆದರೆ, ಇವನು ಹಣಕ್ಕಾಗಿಯಾಗಲಿ, ಎದುರಾಳಿಯನ್ನು ಸೋಲಿಸುವುದಕ್ಕಾಗಿಯಾಗಲಿ ವಾದ ಹೂಡದೆ ಕೇವಲ ನಮ್ರಭಾವದಿಂದ ಸತ್ಯಾನ್ವೇಷಣೆಗಾಗಿ ವಾದಿಸುತ್ತಿದ್ದನು. ಈ ಸಾಫಿಸ್ಟ್ ತಾರ್ಕಿಕರಿಗೂ ಮುಸ್ಲಿಂ ಸ್ಕೊಲಾಸ್ಟಿಕ್ಕರಿಗೂ (ವ್ಯಾಖ್ಯಾನಕಾರರು) ಕೆಲವು ಹೋಲಿಕೆಗಳಿವೆ.

ಸಾಕ್ರಟೀಸನ ಶಿಷ್ಯನೂ ಲೋಕಪ್ರಸಿದ್ಧ ದಾರ್ಶನಿಕನೂ ಆದ ಪ್ಲೇಟೋ ಮುಸ್ಲಿಮರಲ್ಲಿ ಅಫ್ಲಾತೂನ್ ಎಂಬ ಹೆಸರಿನಿಂದ ವ್ಯವಹೃತನಾಗಿದ್ದಾನೆ. ಇವನ 'ರಿಪಬ್ಲಿಕ್' (ಕಿತಾಬ) 'ಲಾಸ್', ಸಾಫಿಸ್ಟ್ ಮತ್ತು ಇತರ ಸಂವಾದಗಳು ಮುಸ್ಲಿಂ ವಿದ್ವಾಂಸರಿಂದ ಅರಬ್ಬೀ ಭಾಷೆಗೆ (ಸಿರಿಯನ್ ಮೂಲಕ) ಭಾಷಾಂತರವಾಗಿ, ಅವುಗಳ ವಿಷಯ ತಿಳಿದಿತ್ತು. ಆದರೆ, ಇವನನ್ನೂ ಇವನ ಗ್ರಂಥಗಳನ್ನೂ ಕುರಿತು ಎಷ್ಟೋ ತಪ್ಪು ತಿಳಿವಳಿಕೆಗಳೂ ಇದ್ದುವು. ಯಾವ ವಿಧವಾದ ಸಂಬಂಧವೂ ಇಲ್ಲದ ರಸತಂತ್ರ, ಇಂದ್ರಜಾಲ, ಸಾಮುದ್ರಿಕ, ಮೊದಲಾದ ವಿಷಯಗಳನ್ನು ಕುರಿತ ಚಿತ್ರವಿಚಿತ್ರ ಗ್ರಂಥಗಳು ಹಲವು ಪ್ಲೇಟೋ ಬರೆದನೆಂದು ಪ್ರವಾದವಿದೆ. ಕೆಲವೆಡೆಗಳಲ್ಲಿ ಪ್ಲೇಟೋವಿಗೂ ಪ್ಲಾಟಿನಸ್ಸಿಗೂ ತಪ್ಪು ತಿಳಿದುಕೊಂಡು ಒಬ್ಬರ ಅಭಿಪ್ರಾಯಗಳನ್ನು ಮತ್ತೊಬ್ಬರಿಗೆ ಆರೋಪಿಸಿರುವುದೂ ಉಂಟು.

ಮುಸ್ಲಿಂ ದಾರ್ಶನಿಕರಲ್ಲಿ ಅಲ್‌ಕಿಂದಿ, ಫ಼ಾರಾಬಿ, ಅಬೂಬಕರ್ ರಾಸ್ಸಿ ಇಬ್‌ನ್‌ಉರ್‌ರುಷ್‌ದ್, ರಿಸ್ವಿವಾನಿನಮಗ ಅಲಿ ಮೊದಲಾದವರು ಪ್ಲೇಟೋ ಗ್ರಂಥಗಳ ಮೇಲೂ, ಅವನು ಪ್ರತಿಪಾದಿಸಿರುವ ವಿಷಯಗಳ ಮೇಲೂ ಬರೆದಿದ್ದಾರೆ. ಇಬ್‌ನ್‌ಅಲಿ ಉಸೈಬ, ಇಬ್‌ನ್ ಏಕಿಸ್ಟಿ, ಅನ್‌ನದೀಮ್, ಹಾಜಿ ಕಲೀಫ಼ ಮೊದಲಾದವರು ತಮ್ಮ ಗ್ರಂಥಗಳಲ್ಲಿ ಪ್ಲೇಟೋವಿನ ಹೆಸರನ್ನು ಹೇಳಿದ್ದಾರೆ. ಇಷ್‌ರಾಕಿ ಎಂಬ

ಮುಸ್ಲಿಂ ದರ್ಶನಕ್ಕೂ ಪ್ಲೇಟೋತತ್ವಗಳಿಗೂ ಕೊಂಚ ಸಂಬಂಧವಿರುವಂತೆ ಕಾಣುತ್ತದೆ. ಪ್ಲೇಟೋತತ್ವಗಳನ್ನು ನವೀನ ಪ್ಲೇಟೋ ಅನುಯಾಯಿಗಳ ದೃಷ್ಟಿಯಿಂದ ಮುಸ್ಲಿಮರು ವ್ಯಾಸಂಗಮಾಡಿದಂತೆ ತೋರುತ್ತದೆ. ಪ್ಲೇಟೋತತ್ವಗಳು ಮುಸ್ಲಿಂ ದಾರ್ಶನಿಕರಿಗಿಂತ ಮುಸ್ಲಿಂ ಅತೀಂದ್ರಿಯ (ಅನುಭಾವಿ) ವಾದಿಗಳಿಗೆ (ಮಿಸ್ಟಿಕ್ಸ್) ಹೆಚ್ಚು ಪ್ರಿಯವಾದಂತೆ ಕಾಣುತ್ತದೆ. ಪ್ಲೇಟೋವಿನ ಸತ್‌ಭಾವವನ್ನು (ಐಡಿಯ ಆಫ್ ಗುಡ್) ಸೂಫಿಗಳು ದೇವರ ಪರಸೌಂದರ್ಯವನ್ನಾಗಿ ಮಾಡಿದ್ದಾರೆ. ಒಟ್ಟಿನಲ್ಲಿ ಮುಸ್ಲಿಮರ ಮೇಲೆ ಪ್ಲೇಟೋವಿನ ಪ್ರಭಾವ ಪ್ರತ್ಯಕ್ಷವಾದ್ದಕ್ಕಿಂತಲೂ ಪರೋಕ್ಷವಾದುದ್ದೆಂದು ತೋರುತ್ತದೆ.

ಪ್ಲೇಟೋವಿನ ಶಿಷ್ಯನಾದ ಅರಿಸ್ಟಾಟಲ್ ಮುಸ್ಲಿಮರಲ್ಲಿ 'ಮೊಅಲ್ಲಿಮ್-ಏ-ಅವ್ವಲ್' (ಆದಿಗುರು) ಎಂದು ವ್ಯವಹೃತನಾಗಿದ್ದಾನೆ. ಇವನು ಉಳಿದದ್ದಕ್ಕಿಂತ ಹೆಚ್ಚಾಗಿ ತಾರ್ಕಿಕ ಮತ್ತು ವೈಯ್ಯಾಕರಣ ಎಂದು ಮುಸ್ಲಿಮರಲ್ಲಿ ಖ್ಯಾತನಾಗಿದ್ದಾನೆ. ಇವನು ಅಲೆಗ್ಝಾಂಡರ್ ಚಕ್ರವರ್ತಿಗೆ ಗುರುವಾಗಿದ್ದನು. ಇವನ ಗ್ರಂಥಗಳು ಅರಾಮೆಯಿಕ್ (ಸಿರಿಯನ್) ಮತ್ತು ಪಲ್ಹವೀ ಭಾಷೆಗಳಿಗೆ ಭಾಷಾಂತರವಾಗಿ ಪೂರ್ವದೇಶದ ವಿದ್ವಾಂಸರೆಲ್ಲರಿಗೂ ಸುಪರಿಚಿತವಾಗಿದ್ದುವು. ಪ್ಲೇಟೋ ಗ್ರಂಥಗಳಂತೆಯೇ ಅರಿಸ್ಟಾಟಲ್ ಗ್ರಂಥಗಳೂ ಪೂರ್ವದೇಶದ ವಿದ್ವಾಂಸರ ಕೈ ಸೇರಿದ್ದು, ಪಾರ್ಫಿರಿ ಮೊದಲಾದ ರೋಮನ್ ವ್ಯಾಖ್ಯಾನಕಾರರ ಮೂಲಕ. ಅರಬ್ಬಿ ವ್ಯಾಕರಣ ವಿಭಾಗಕ್ರಮ ಅರಿಸ್ಟಾಟಲಿನ ಗ್ರಂಥದ ಮೇಲೆ ಕಟ್ಟಿದ್ದಾಗಿ ಎಣಿಸುತ್ತಾರೆ. ಇದು ನಿಜವಾಗಿದ್ದರೆ ಅರಿಸ್ಟಾಟಲಿನ ಗ್ರಂಥಗಳು ಪೈಗಂಬರನ ಕಾಲಕ್ಕೇ ಅರಬರಿಗೆ ತಿಳಿದಿರಬೇಕು. ಏಕೆಂದರೆ, ಪ್ರಥಮ ಅರಬ್ಬಿ ವೈಯಾಕರಣ ಎಂದು ಪರಿಗಣಿತನಾಗಿರುವ ಅಬೂಅಸುದ್ ದೋಎಲಿ ವ್ಯಾಕರಣವನ್ನು 'ಇಸಮ್' (ನಾಮಪದ), ಫೇಲ್ (ಕ್ರಿಯಾಪದ) ಮತ್ತು ಹರ್ಫ್ (ಉಪಸರ್ಗಗಳು) ಎಂದು ಮೂರು ಭಾಗ ಮಾಡಿದ್ದಾನೆ. ಇದು ಅರಿಸ್ಟಾಟಲ್ ಗ್ರಂಥದ ಮಾದರಿಯ ಮೇಲಿದೆ ಎಂದು ಕೆಲವರು ಎಣಿಸುತ್ತಾರೆ.

ಅರಿಸ್ಟಾಟಲಿನ ಗ್ರಂಥಗಳು ಭಾಷಾಂತರವಾಗಿ ಮುಸ್ಲಿಮರಿಗೆ ತಿಳಿದಿತ್ತೆಂದ ಮಾತ್ರಕ್ಕೆ ಅವನ ಅಭಿಪ್ರಾಯಗಳೆಲ್ಲವನ್ನೂ ಮುಸ್ಲಿಮರು ಸ್ವೀಕರಿಸಿದರೆಂದಲ್ಲ. ಉದಾಹರಣೆಗಾಗಿ ಅರಿಸ್ಟಾಟಲ್ ತತ್ತ್ವಗಳಿಗೂ ಕೆಲವು ಮುಸ್ಲಿಂ ತತ್ತ್ವಗಳಿಗೂ ಇರುವ ಸಾದೃಶ್ಯ ವೈದೃಶ್ಯಗಳಲ್ಲಿ ಒಂದೆರಡನ್ನು ಸಂಕ್ಷೇಪವಾಗಿ ಇಲ್ಲಿ ಹೇಳಬಹುದು. ಅರಿಸ್ಟಾಟಲಿನ ಪ್ರಕಾರ ಪರವಸ್ತುವೇ ಜಗತ್ತಿಗೆ ಆದಿ ಮತ್ತು ಅಂತ್ಯ. ಇದೇ ವಿಷಯವನ್ನು ಕುರಾನಿನಲ್ಲಿ " ನಾವು ಅಲ್ಲಾವಿನಿಂದ ಬಂದವರು, ಮತ್ತೆ ಅವನಲ್ಲಿಗೆಯೇ ಹೋಗುತ್ತೇವೆ " ಎಂದು ಹೇಳಿದೆ. ವಿಶ್ವದ ಚಾಲಕದಿಂದ ಈ ಪರವಸ್ತು ಸ್ವಯಂ ನಿಶ್ಚಲವೂ, ಶಾಶ್ವತವೂ, ದೇಶಕಾಲಾತೀತವೂ ಆದದ್ದು. ಸೂಫಿಗಳು ಹೇಳುವಂತೆ ಪರವಸ್ತುವಿನ ಪ್ರೇಮವೇ ಸೃಷ್ಟಿಯ ಗತಿಗೆ ಕಾರಣ. ಸೃಷ್ಟಿಯನ್ನು ನಡೆಸುವ ಸಾಮಾನ್ಯ ಧರ್ಮವೇ (ನಿಯಮವೇ) ಪ್ರಕೃತಿಯೆಂದೂ, ಇದು ಒಂದು ಗುರಿ ಇಟ್ಟುಕೊಂಡು ಅದನ್ನು ಸಾಧಿಸುವುದಕ್ಕಾಗಿಯೇ ನಡೆಯುತ್ತಿದೆಯೆಂದೂ ಅರಿಸ್ಟಾಟಲ್ ಪ್ರತಿಪಾದಿಸಿದನು. ಇದನ್ನೇ ಕುರಾನಿನಲ್ಲಿ ಸೃಷ್ಟಿ ಒಂದು ಉದ್ದೇಶಸಾಧನೆಗಾಗಿ ಆದದ್ದೇ ಹೊರತು ವ್ಯರ್ಥವಾಗಿ ಅಲ್ಲ ಎಂದು ಹೇಳಿದೆ. ದ್ರವ್ಯವೇ ದೃಶ್ಯಪ್ರಪಂಚದ ನಾನಾ ರೂಪ ವೈವಿಧ್ಯಗಳಿಗೆ ಕಾರಣವೆಂಬುದೂ, ಅದು ಪರವಸ್ತುವಿನಿಂದ ಸೃಷ್ಟಿಯಾಗದೆ ಆದ್ಯಂತ ರಹಿತವೆಂಬುದೂ ಅರಿಸ್ಟಾಟಲಿನ ಮತ. ಇದನ್ನು ಮುಸ್ಲಿಂ ದೇವತಾ ಶಾಸ್ತ್ರಜ್ಞರೂ ದಾರ್ಶನಿಕರೂ ಒಪ್ಪದೆ ಅವನ ದರ್ಶನವನ್ನು ಪಾಷಂಡ ಮತವೆಂದು ಜರೆದರು. ಅರಿಸ್ಟಾಟಲಿನ ಪ್ರಕಾರ ಬುದ್ಧಿ ಎರಡು ಸ್ವರೂಪದ್ದು. ಒಂದು ರಚನಾತ್ಮಕ; ಮತ್ತೊಂದು ಅಪ್ರವರ್ತಕ (ಪ್ಯಾಸಿವ್). ಈ ಅಪ್ರವರ್ತಕ ಬುದ್ಧಿ ಹೊರಗಿನ ವಿಷಯಗಳನ್ನು ಗ್ರಹಿಸಿಕೊಂಡು ಸ್ಮರಣಸಾಧನ ಮಾತ್ರವಾಗಿದ್ದು, ದೇಹದೊಡನೆ ತಾನೂ ನಾಶವಾಗಿ ಬಿಡುತ್ತದೆ. ಆದರೆ, ರಚನಾತ್ಮಕ ಬುದ್ಧಿ ಅಭೌತವೂ ಅನಂತವೂ ಆಗಿದ್ದು ಸ್ಮರಣರಹಿತವಾದ್ದಾಗಿರುತ್ತದೆ. ಇದು ಮುಸ್ಲಿಮರ ಪುನರುತ್ಥಾನ ನಂಬಿಕೆಗೆ ವಿರೋಧ ತರುವುದರಿಂದ ಇದನ್ನು ಅವರು ಒಪ್ಪುವುದಿಲ್ಲ.

ಹೀಗೆಯೇ ಮುಸ್ಲಿಂ ಬರಹಗಾರರು ತಮ್ಮ ನೀತಿಶಾಸ್ತ್ರ ವಿಷಯ ದಲ್ಲಿ ಗುಣದೋಷವಿಭಾಗ ಕ್ರಮದಲ್ಲಿ ಅರಿಸ್ಟಾಟಲನನ್ನು ಅನುಸರಿಸಿ, ಅಲ್ಲಲ್ಲಿ ಸಾಕ್ರಟೀಸ್, ಪ್ಲೇಟೋ, ಗೆಲೆನ್, ಹಿಪ್ಪೊಕ್ರಟೀಸ್, ಮೊದಲಾ ದವರನ್ನು ಉದ್ಧರಿಸಿದ್ದಾರೆ. ಆದರೂ, ಒಟ್ಟಿನಲ್ಲಿ ತಮ್ಮ ನೀತಿ ಪ್ರತಿ ಪಾದನೆಯನ್ನು ಕುರಾನ್ ವಚನಗಳ ಮೇಲೆಯೂ ಇರಾನಿ ಅರಬ್ಬಿ ಮತ್ತು ಹಿಂದೂ ಸನಾತನ ಸಂಪ್ರದಾಯಗಳ ಮೇಲೆಯೂ ಆಧರಿ ಸಿದ್ದಾರೆ. ಕುರಾನಿನ ಪ್ರಕಾರ ಸಹನೆ, ಶ್ರದ್ಧೆ, ಭಕ್ತಿ, ಸ್ವಾರ್ಥತ್ಯಾಗ, ಇವು ಮುಖ್ಯ ಗುಣಗಳು. ' ಅರಿಸ್ಟಾಟಲಿನ ಪ್ರಕಾರ ಧೈರ್ಯ, ಮಿತಾ ಚರಣೆ, ಉದಾರತೆ, ವೈಭವ ಅಥವಾ ಮಹತ್ವ, ಉತ್ತಮಾಕಾಂಕ್ಷೆ, ಆತ್ಮಗೌರವ, ಶಾಂತವರ್ತನೆ, ಸತ್ಯ, ಸ್ನೇಹ, ಜ್ಞಾನ—ಇವೇ ಮೊದ ಲಾದುವು ಮುಖ್ಯಗುಣಗಳು. ಇಬ್ನ್ ಉರ್‌ರುಷ್‌ದ್ ಮೊದಲಾದ ವರು ಅರಿಸ್ಟಾಟಲನನ್ನು ಬಹಳವಾಗಿ ಮೆಚ್ಚಿ ಅನೇಕ ವ್ಯಾಖ್ಯಾನಗಳನ್ನು ಬರೆದಿದ್ದಾರೆ. ಇಬ್ನ್ ಉರ್‌ರುಷ್‌ದ್ ಬರೆದಿರುವ ಅರಿಸ್ಟಾಟಲಿನ ದರ್ಶನದ ವ್ಯಾಖ್ಯಾನ ಮಧ್ಯಕಾಲದ ಯೂರೋಪಿನಲ್ಲಿ ಪ್ರಮಾಣ ಗ್ರಂಥವಾಗಿತ್ತು. ಆದರೆ, ಎಷ್ಟೋಸಲ ಪ್ಲೇಟೋವಿನ ವಿಷಯದಲ್ಲಿ ಇದ್ದಂತೆಯೇ ಅರಿಸ್ಟಾಟಲಿನ ವಿಷಯದಲ್ಲೂ ತಪ್ಪು ತಿಳಿವಳಿಕೆಗಳಿದ್ದುವು. ನಿಜವಾದ ಅರಿಸ್ಟಾಟಲ್ ಗ್ರಂಥಗಳಿಗೂ ಪ್ಲೇಟೋ ಸಂಬಂಧವಾದ ವ್ಯಾಖ್ಯಾನಗಳಿಗೂ ಎಷ್ಟೋ ವೇಳೆ ವ್ಯತ್ಯಾಸವೇ ಮಾಡುತ್ತಿರಲಿಲ್ಲ. ಒಟ್ಟಿನಲ್ಲಿ ಅರಿಸ್ಟಾಟಲಿನ ಅಭಿಪ್ರಾಯಗಳು ಮುಸ್ಲಿಮರಿಗೆ ಅಷ್ಟಾಗಿ ಹಿಡಿಯಲಿಲ್ಲವೆನ್ನಬಹುದು. ಅನೇಕಜನ ಮುಸ್ಲಿಂದಾರ್ಶನಿಕರೂ, ಬರಹ ಗಾರರೂ, (ಉದಾಹರಣೆಗೆ—ಅಬೂಸ್ಟಕರಿಯ ರಾಸಿ, ಇಬ್ನ್ ಏ ಹಸ್‌ಮ್, ನಸ್ಸಾಮ್, ಅಬೂ ಅಲೀ ಜುಬ್ಬಾಯ್, ಹೀಬೆತುಲ್ಲಷ್, ಹಸನ್—ಮೊದಲಾದವರು) ಅರಿಸ್ಟಾಟಲಿನ ಮತವನ್ನು ಖಂಡಿಸಿ ಬರೆ ದಿದ್ದಾರೆ.

**ನವೀನ ಪ್ಲೇಟೋತತ್ವ:** ಅಲೆಗ್ಸಾಂಡರಿನ ಮರಣಾನಂತರ ಅವನ ದೊಡ್ಡ ಸಾಮ್ರಾಜ್ಯ ಒಡೆದು ಮೆಸಿಡೋನಿಯನ್, ಇರಾನಿಯನ್, ಗ್ರೀಕ್, ಮೊದಲಾದ ರಾಜ್ಯಗಳಾಗಿ ಪಾಲಾಯಿತು. ಆ ಕಾಲಕ್ಕೆ

ಗ್ರೀಕ್ ಸಾಹಿತ್ಯ ಮತ್ತು ದರ್ಶನಗಳು ಪೂರ್ವದೇಶದಲ್ಲೆಲ್ಲ ಹರಡಿ ಕೊಂಡಿದ್ದುವು. ಇರಾನಿನ ಪಾರ್ಥಿಯನ್ ಮತ್ತು ಸಸಾನಿಯನ್ ಸಾಮ್ರಾಜ್ಯಗಳ ರಾಜಧಾನಿಯಾದ ಕ್ಟೆಸಿಫ಼ೋನ್ ಬಳಿಯ ಸೆಲ್ಯೂಸಿಯು ಪಟ್ಟಣ ಇಂಥ ಪ್ರಸಾರಣಾ ಕೇಂದ್ರಗಳಲ್ಲಿ ಒಂದಾಯಿತು.

ಮಿಥ್ರ ಧರ್ಮ ಏಷ್ಯಾಮೈನರಿನಲ್ಲೆಲ್ಲ ಪ್ರಧಾನ ಧರ್ಮವಾಗಿ, ರೋಮನ್ ಸಾಮ್ರಾಜ್ಯದಲ್ಲೂ ಆಫ್ರಿಕದಲ್ಲೂ ಅದಕ್ಕೆ ಅನೇಕರು ಅನುಯಾಯಿಗಳಾದರು. ಶುದ್ಧ ಗ್ರೀಕ್ ದರ್ಶನದ ಚರಿತ್ರೆ ಆರಿಸ್ಟಾಟಲಿನೊಡನೆ ಕೊನೆಗೊಂಡು, ಪೌರಸ್ತ್ಯ ಭಾವನೆಗಳೊಡನೆ ಮಿಳಿತವಾಗಿ ಅದು ಮತ್ತೆ ನವೀನ ಪ್ಲೇಟೋ ಮತದ ರೂಪದಲ್ಲಿ ಹರಡಿತು. ಇದರಲ್ಲಿ ಪೂರ್ವ ದೇಶಗಳಿಗೆ ಸಹಜವಾದ ಉದ್ಗಮ ಅಥವಾ ಆವಿರ್ಭಾವವಾದ (ಎಮನೇಷನ್), ತಾಪಸ ಜೀವನ, ಧ್ಯಾನ, ಆನಂದ, ಭಕ್ತಿ, ಪ್ರಾಪಂಚಿಕ ಸುಖ ನಶ್ವರತೆ—ಮೊದಲಾದುವು ಕಂಡುಬರುತ್ತವೆ.

ನವೀನ ಪ್ಲೇಟೋ ಮತಸ್ಥಾಪಕನಾದ ಪ್ಲಾಟಿನಸ್ ಲ್ಯೂಕೊಪೊಲಿಸ್ಸಿನಲ್ಲಿ ಸುಮಾರು ಕ್ರಿ.ಶ. ೨೦೫ರಲ್ಲಿ ಹುಟ್ಟಿದನು. ಇವನು ಇರಾನಿಯನ್ ಮಾನಿಯ ಸಮಕಾಲಿಕನು. ಅಮ್ಮೋನಿಯಸ್ ಸಕ್ಕಾಸ್ಸಿನ ಶಿಷ್ಯನು. ಇರಾನಿಗೆ ದಂಡೆತ್ತಿ ಬಂದ ಗಾರ್ಡಿಯನ್ ಚಕ್ರವರ್ತಿಯ ಸೈನ್ಯದಲ್ಲಿ ಸೇರಿಕೊಂಡು ಇರಾನಿಗೆ ಬಂದು ಅಲ್ಲಿ ಸಂಚಾರ ಮಾಡಿ ಜ್ಞಾನ ಸಂಪಾದಿಸಿ ಕೊನೆಗೆ ರೋಮಿನಲ್ಲಿ ನೆಲಸಿ ದರ್ಶನ ಪಾಠ ಹೇಳುತ್ತ ಜೀವನ ನಡಸಿದನು. ಇವನ ಬರಹಗಳನ್ನು ಇವನ ಶಿಷ್ಯ ಸಿರಿಯದ ಮಾಲ್‌ಖಸ್ (ಪಾರ್ಫ಼ಿರಿಯಸ್ ಎಂಬುದು ಗ್ರೀಕ್ ಹೆಸರು) ಸಂಗ್ರಹಿಸಿ ಸಂಪಾದಿಸಿದ್ದಾನೆ.

ಈ ವೇಳೆಗಾಗಲೇ ಜ್ಞಾನಕೇಂದ್ರ ಅಥೆನ್ಸಿನಿಂದ ರೋಮಿಗೆ ಬದಲಾಯಿಸಿತ್ತು. ಅಲ್ಲದೆ, ಅಲೆಗ್ಸಾಂಡ್ರಿಯ ಥಿಯೊಡೊಸಿಯಸ್ ಎಂಬ ರೋಮನ್ ಚಕ್ರವರ್ತಿಯ ಕಾಲದಲ್ಲಿ ಮತ್ತೊಂದು ಜ್ಞಾನಕೇಂದ್ರವಾಯಿತು. ಇವಲ್ಲದೆ ಏಷ್ಯಾ ಮೈನರ್, ಮೆಸೊಪೊಟೇಮಿಯ, ಸಿರಿಯ, ಮತ್ತು ಇರಾನ್‌ಗಳಲ್ಲಿ ಅನೇಕ ಪಟ್ಟಣಗಳಲ್ಲಿ ವಿದ್ಯಾಪೀಠಗಳು ಏರ್ಪಟ್ಟುವು. ಈ ಕಾಲದಲ್ಲಿ (ಕ್ರಿ. ಶ. ೩ರಿಂದ ೬ನೆಯ ಶ. ಮಾ.) ದರ್ಶನ

ಹೆಚ್ಚು ಹೆಚ್ಚಾಗಿ ದೇವತಾಶಾಸ್ತ್ರ ಸ್ವರೂಪವನ್ನೂ (ಥಿಯೊಲಾಜಿಕಲ್) ವ್ಯಾಖ್ಯಾನ ಸ್ವರೂಪವನ್ನೂ (ಸ್ಕೊಲ್ಯಾಸ್ಟಿಕ್) ತಾಳಿತು. ಅಲ್ಲದೆ ಪಶ್ಚಿಮದಲ್ಲಿ ಕ್ರೈಸ್ತಧರ್ಮವೂ ಪೂರ್ವದಲ್ಲಿ ಝೊರಾಸ್ಟರ್ ಧರ್ಮವೂ —ಒಂದು ರೋಮನ್ ಚಕ್ರಾಧಿಪತ್ಯದ ಬಲದಿಂದಲೂ ಮತ್ತೊಂದು ಇರಾನಿಯನ್ ಚಕ್ರಾಧಿಪತ್ಯದ ಬಲದಿಂದಲೂ—ಬೆಳೆದು ಹರಡಿದುವು. ೬ನೆಯ ಶತಮಾನದ ವೇಳೆಗೆ ನವೀನ ಪ್ಲೇಟೋ ಮತ ಒಂದು ಸ್ವತಂತ್ರ ದರ್ಶನವಾಗಿರುವುದು ತಪ್ಪಿಹೋಗಿ, ಬೇರೆ ಬೇರೆ ವೇಷವನ್ನು ಹಾಕಿಕೊಂಡು ಕ್ರೈಸ್ತ ಮತ್ತು ಮುಸ್ಲಿಂ ಅನುಭಾವಿವಾದದ ಸ್ವರೂಪವನ್ನು ತಾಳಿತು.

ಹೀಗೆ ನವೀನ ಪ್ಲೇಟೋ ತತ್ವಕ್ಕೂ ಮುಸ್ಲಿಂ ತತ್ವಕ್ಕೂ ಸಂಬಂಧ ವಿರುವುದರಿಂದ ಈ ವಿಷಯವನ್ನು ಇಲ್ಲಿ ಕೊಂಚ ಪ್ರಸ್ತಾಪಿಸಬಹುದು. ಪರವಸ್ತು, ನಿರ್ಗುಣವೂ ನಿರಾಕಾರವೂ ನಿಶ್ಚಲವೂ ಭಾವಾತೀತವೂ ಆದದ್ದು. ಈ ಪರವಸ್ತುವಿನ ಮೊದಲನೆಯ ಆವಿರ್ಭಾವವೇ ವಿಶ್ವಬುದ್ಧಿ (ನೌಸ್). ಈ ಬುದ್ಧಿ ಪರವಸ್ತುವಿನ ಪ್ರತಿಬಿಂಬವಾಗಿದ್ದು, ಅದ ರಂತೆಯೇ ಸ್ವಯಂಭವವೂ ಶಾಶ್ವತವೂ ಸಂಪೂರ್ಣವೂ ಆಗಿ ಸಕಲ ವನ್ನೂ ತನ್ನಲ್ಲಿ ಅಡಗಿಸಿಕೊಂಡಿದೆ. ವಿಶ್ವಬುದ್ಧಿಯ ಆವಿರ್ಭಾವ ಅಥವಾ ಪ್ರತಿಬಿಂಬವೇ ವಿಶ್ವಾತ್ಮ (ಸೈಖಿ). ಇದು ಅಭೌತವಾಗಿದ್ದು ಬುದ್ಧಿಗೂ ದೃಶ್ಯ ಸೃಷ್ಟಿಗೂ ಮಧ್ಯದಲ್ಲಿದೆ. ಒಂದು ಕಡೆ ತಾನು ಬುದ್ಧಿಯಿಂದ ಬೆಳಗಿ, ಮತ್ತೊಂದು ಕಡೆ ಪ್ರಕೃತಿಯನ್ನು ತಾನು ಬೆಳಗುತ್ತದೆ. ಈ ವಿಶ್ವಾತ್ಮ ದ್ರವ್ಯದೊಡನೆ ಬೆರೆತು ಜೀವನಕ್ಕೆ ಆದಿ ಕಾರಣವಾಗಿದೆ. ಈ ರೀತಿಯಾಗಿ ಪರವಸ್ತು, ವಿಶ್ವಬುದ್ಧಿ, ವಿಶ್ವಾತ್ಮ—ಇವು ಒಂದು ತತ್ತ್ವ ತ್ರಯ ಎನ್ನಬಹುದು. ಬುದ್ಧಿಗೋಚರ ಪ್ರಪಂಚ ಅಭೌತವಾಗಿದ್ದು ಭೌತ ಪ್ರಪಂಚಕ್ಕೆ ಮೂಲಬಿಂಬವಾಗಿದೆ. ಪ್ರತಿಯೊಂದು ಭೂತ ಪದಾರ್ಥಕ್ಕೂ ಒಂದು ಪೂರ್ಣತರವೂ ಸಮಗ್ರವೂ ಆದ ಅಭೌತಮೂಲ ಬಿಂಬ ಇರುತ್ತದೆ. ವಿಶ್ವಬುದ್ಧಿಗೆ ತನ್ನ ಪ್ರಜ್ಞೆ ತನಗೆ ಆದೊಡನೆಯೇ ತಾನು, ತಾನಲ್ಲದ್ದು ಎಂಬ ದ್ವೈತಭಾವ ಬಂದು ಜೀವನಕ್ಕೆ ಮೊದಲು ಆಗುತ್ತದೆ.

ಇಂದ್ರಿಯ ಗೋಚರವಾದ ಭೌತಪ್ರಪಂಚ ಶಕ್ತಿಯೂ ಅಲ್ಲ, ಕಾರಕವೂ ಅಲ್ಲ. ಅದು ನಿರಾಕಾರವೂ ಅದೃಶ್ಯವೂ ಆಗಿದ್ದು ಆತ್ಮಕ್ಕೆ ಪಾತ್ರವಾಗಿ ತರುವಾಯ ಕನ್ನಡಿಯೊಳಗಿನ ಬಿಂಬಗಳಂತೆ ನಾನಾ ರೂಪಗಳಿಂದ ಕಾಣಿಸಿಕೊಳ್ಳುತ್ತದೆ. ದ್ರವ್ಯಕ್ಕೆ ಕ್ರಿಯಾಶಕ್ತಿ ಇಲ್ಲವಾಗಿ ಈ ರೂಪಗಳೂ ಕ್ರಿಯಾಶಕ್ತಿರಹಿತವಾಗಿವೆ. ಇವು ಕ್ರಿಯಾವಂತಗಳಾಗಿ ಕಂಡುಬಂದರೂ ಬುದ್ಧಿಪ್ರಪಂಚದಲ್ಲಿಯ ಮೂಲಬಿಂಬಗಳ ಪ್ರತಿಬಿಂಬಗಳು ಮಾತ್ರ ಆಗಿರುವುದರಿಂದ ನಿಜವಾಗಿ ಇವು ಕ್ರಿಯಾವಂತಗಳಲ್ಲ. ಈ ರೀತಿಯಾಗಿ ಒಟ್ಟು ದೃಶ್ಯ ಪ್ರಪಂಚವೇ ಒಂದು ಮಾಯೆ. ಆತ್ಮ ಇದಕ್ಕೆ ಅತೀತವಾದದ್ದು. ದ್ರವ್ಯಕ್ಕೆ ಆತ್ಮದೊಡನೆ ಸಂಪರ್ಕವಾಗಿ ಅದು ಒಂದು ರೂಪತಾಳಿದ ಹೊರತು ನಮಗೆ ಅದು ಗ್ರಾಹ್ಯವಾಗುವುದಿಲ್ಲ. ಆದರೆ, ಆತ್ಮಕ್ಕೆ ದ್ರವ್ಯದೊಡನೆ ಆಗುವ ಸಂಯೋಗ ನಷ್ಟವೇ ಹೊರತು ಲಾಭವಲ್ಲ; ಬೀಳೇ ಹೊರತು ಏರಲ್ಲ. ದ್ರವ್ಯ ಜೀವಂತವಾಗ ಬೇಕಾದರೆ ಆತ್ಮದ ಅಪೇಕ್ಷೆ ಬೇಕು. ಆದರೆ, ಆತ್ಮಕ್ಕೆ ದ್ರವ್ಯದ ಅಪೇಕ್ಷೆ ಇಲ್ಲ.

ಎಲ್ಲ ಪ್ರತ್ಯೇಕ ಬುದ್ಧಿಗಳೂ ಒಂದೇ ವಿಶ್ವಬುದ್ಧಿಯಲ್ಲಿ ಅಡಗಿರುವಂತೆ ಎಲ್ಲ ಪ್ರತ್ಯೇಕ ಆತ್ಮಗಳೂ ಒಂದೇ ವಿಶ್ವಾತ್ಮದಲ್ಲಿ ಅಡಗಿವೆ. ಆದರೆ, ಇವುಗಳ ಐಕ್ಯ ಇವುಗಳ ವ್ಯಕ್ತಿತ್ವವನ್ನು ಹಾಳುಮಾಡಿಲ್ಲ. ಮನುಷ್ಯನಿಗೆ ಎರಡು ಆತ್ಮಗಳುಂಟು. ಒಂದು ದಿವ್ಯವೂ ಉನ್ನತವೂ ಸತ್ಯವೂ ಆದ್ದು. ಇದು ವಿಶ್ವಾತ್ಮನ ಪ್ರತಿಬಿಂಬವಾಗಿದ್ದು ಬುದ್ಧಿ, ಜ್ಞಾನ, ಇಚ್ಛೆ, ಸ್ಮರಣ, ಮೊದಲಾದ ಶಕ್ತಿಗಳನ್ನುಳ್ಳದ್ದು. ಮತ್ತೊಂದು ನೀಚ, ಅಥವಾ ಪಾಶವ ಆತ್ಮ. ಇದು ರಾಗದ್ವೇಷಗಳಿಗೆ ಆಕರವಾಗಿದ್ದು ದೇಹದೊಡನೆ ಬೆರೆತುಕೊಂಡು ಇದೆ. ದಿವ್ಯ ಆತ್ಮ ದೇಹದೊಡನೆ ಬೆರೆಯದೆ ನಿರ್ಲಿಪ್ತವಾಗಿದೆ. ಇವೆರಡೂ ಬೇರೆ ಬೇರೆ ಸ್ವಭಾವದುವಾಗಿ ಪರಸ್ಪರ ವಿರೋಧಿಗಳಾಗಿವೆ. ಇವನ್ನೇ ಸ್ಲೊರಾಸ್ಟರ್ ಒಂದನ್ನು ರಚನಶಕ್ತಿಯೆಂದೂ ಮತ್ತೊಂದನ್ನು ನಾಶಶಕ್ತಿಯೆಂದೂ ಕರೆದದ್ದು. ರಾಗದ್ವೇಷಗಳಿಂದ ಬದ್ಧವಾದ ಪಾಶವಾತ್ಮದ ದುಷ್ಪ್ರವೃತ್ತಿಗಳನ್ನು ತಡೆದು ಮನುಷ್ಯನು ಸ್ವತಂತ್ರವೂ ನಿರ್ಲಿ

ಪ್ತವೂ ಆದ ದಿವ್ಯಾತ್ಮ ಅಥವಾ ಬುದ್ಧಿ-ಆತ್ಮವನ್ನು ಬೆಳಗಬೇಕು. ಪ್ಲಾಟಿನಸ್ಸಿನ ಪ್ರಕಾರ ಆತ್ಮದ ಜಾಗ್ರದವಸ್ಥೆಯೇ ಗುಣ. ಅದರ ಸುಪ್ತ ಅವಸ್ಥೆಯೇ ದೋಷ. ತಮಸ್ಸಿನಲ್ಲಿ ಮುಳುಗಿ ಐಹಿಕಪ್ರಪಂಚ ದಲ್ಲಿ ಮಗ್ನರಾಗಿರುವವರು, ಐಹಿಕ ಪ್ರಪಂಚವನ್ನು ಆಶಿಸದೆ ಅಧ್ಯಾತ್ಮದ ಕಡೆ ಒಲಿದವರು, ದಿವ್ಯರೂ ಪರಿಪೂರ್ಣರೂ ಆದವರು—ಎಂದು ಮನುಷ್ಯರನ್ನು ಮೂರು ವಿಭಾಗ ಮಾಡಿದೆ. ಇದನ್ನೇ ಕುರಾನಿನಲ್ಲಿಯೂ ಬೇರೆ ವಿಧದಲ್ಲಿ ಹೇಳಿದೆ. "ನೀವು ಮೂರು ರೀತಿಗಳಲ್ಲಿ ಆಗಿರುವಿರಿ. ಮೊದಲಿನವರು ದೇವರ ಹತ್ತಿರವಿದ್ದು ಮೋಕ್ಷ (ಆನಂದ) ವನದಲ್ಲಿ ಇರುತ್ತೀರಿ. ಎರಡನೆಯವರು ಒಳ್ಳೆಯ ಅದೃಷ್ಟಶಾಲಿಗಳು ಅಥವಾ ಬಲಗೈಯಂತಿರುವವರು. ಮೂರನೆಯವರು ದುರದೃಷ್ಟಶಾಲಿಗಳು ಅಥವಾ ಎಗಡೈಯಂತಿರುವವರು."

ಸೌಂದರ್ಯವೂ ಸತ್ ಅಥವಾ ಒಳ್ಳೆಯದೂ ಒಂದೇ. ಆದರೆ, ಒಳ್ಳೆಯದು ಮೊದಲು, ಸೌಂದರ್ಯ ತರುವಾಯದ್ದು. ಆದ್ದರಿಂದ ಒಳ್ಳೆಯದರ ಪ್ರೇಮ ಸೌಂದರ್ಯದ ಪ್ರೇಮಕ್ಕಿಂತ ಮೇಲಾದ್ದು. ಆದರೆ, ಸೌಂದರ್ಯದ ಪ್ರೇಮ ಒಳ್ಳೆಯದರ ಪ್ರೇಮಕ್ಕೆ ದಾರಿ ಮಾಡಿಕೊಡುತ್ತದೆ. ಮೂರು ಬಗೆಯ ಸೌಂದರ್ಯ ಪ್ರೇಮಿಗಳುಂಟು—ಗಾಯಕ, ಪ್ರೇಮಿ, ದಾರ್ಶನಿಕ. ಮೊದಲನೆಯವನು ನಾದಸಾಮರಸ್ಯವನ್ನೂ, ಎರಡನೆಯವನು ರೂಪಸಾಮರಸ್ಯವನ್ನೂ ಮೂರನೆಯವನು ಬುದ್ಧಿ ಸಾಮರಸ್ಯವನ್ನೂ ಪ್ರೀತಿಸುತ್ತಾರೆ. ಆದರೆ, ಈ ಮೂವರಿಗೂ ಕೊನೆಯ ಗುರಿ ಒಂದೇ. ಅಧ್ಯಾತ್ಮ ಸಾಧನೆಯಲ್ಲಿ ಎರಡು ಅವಸ್ಥೆಗಳುಂಟು. ಮೊದಲನೆಯದು ದೇವರ ಜ್ಞಾನವಾಗಿ, ಆವನನ್ನು ಪ್ರತ್ಯೇಕವಾದ ಒಂದು ಮಹಾವ್ಯಕ್ತಿ ಎಂದು ತಿಳಿದುಕೊಳ್ಳುವುದು. ಎರಡನೆಯದು, ತಾನೇ ದೇವಾವಿಷ್ಟನಾಗಿ ಪ್ರತ್ಯಕ್ಷದರ್ಶನದ ಅನುಭವ ಹೊಂದುವುದು. ಆದರೆ, ಪ್ಲಾಟಿನಸ್ಸಿನ ಪ್ರಕಾರ ಈ ದಿವ್ಯದರ್ಶನ ಅಗತ್ಯವಾಗಿ ಇದ್ದೇ ಇರಬೇಕಾದ ಅವಸ್ಥೆಯಲ್ಲ. ಕುರಾನಿನಲ್ಲೂ ಪೈಗಂಬರನು ದಿವ್ಯ ದರ್ಶನ ಪಡೆದದ್ದನ್ನು ಹೇಳಿದೆ. "ಅವನು (ಮನೋ) ದಿಗಂತದ ಅತ್ಯುನ್ನತ ಪ್ರದೇಶದಲ್ಲಿದ್ದನು. ಮೆಲ್ಲ ಮೆಲ್ಲನೆ ಹತ್ತಿರಕ್ಕೆ ಇಳಿದು ಬಂದು,

ಎರಡು ಬಿಲ್ಲು ದೂರಗಳ ಒಳಗೆ ಬಂದನು. ಬಂದು ತನ್ನ ಸೇವಕನಿಗೆ (ಮುಹಮ್ಮದನಿಗೆ) ತಾನು ಕಾಣಿಸಿಕೊಂಡು ದರ್ಶನವಿತ್ತನು. ಹೃದಯ ತಾನು ಕಂಡದ್ದನ್ನು ಸುಳ್ಳು ಹೇಳುವುದಿಲ್ಲ. ನೀನು ಅವನೊಡನೆ (ಪೈಗಂಬರನೊಡನೆ) ಈ ದರ್ಶನ ವಿಷಯದಲ್ಲಿ ಪ್ರತಿವಾದಿಸುತ್ತೀಯ.... ನಿಜವಾಗಿಯೂ ಅವನು ತನ್ನ ಸ್ವಾಮಿಯ ಮಹಾ ಲಕ್ಷಣಗಳನ್ನು ಕಂಡನು."

ಪ್ಲಾಟಿನಸ್ಸಿನ ತರುವಾಯ ಅವನ ಶಿಷ್ಯರು ಪಾರ್‌ಫ್ಲಿರಿ, ಅಮೆಲಿಯುಸ್, ಮೊದಲಾದವರು ಬಂದು ಕೆಲವು ಸಣ್ಣ ಪುಟ್ಟ ವಿಷಯಗಳಲ್ಲಿ ಮಾರ್ಪಾಟು ಮಾಡಿದರು. ಪಾರ್‌ಫ್ಲಿರಿ ಮುನಿಯಂತೆ ತಾಪಸಜೀವನವನ್ನು ಬೋಧಿಸಿದನು. ಪಾರ್‌ಫ್ಲಿರಿಯನಂತರ ಅವನ ಶಿಷ್ಯ ಇಯಂಬ್ಲಿಖಸ್ ಮೊದಲಾದವರೂ, ತರುವಾಯ ಕೊನೆಯವನಾಗಿ ಪ್ರೊಕ್ಲಸ್ ಎಂಬವನೂ (ಕ್ರಿ. ಶ. ೪೧೧-೪೮೫) ಕೆಲವು ಮಾರ್ಪಾಟುಗಳನ್ನು ತಂದು ನವೀನ ಪ್ಲೇಟೋಮತವನ್ನು ಅಲ್ಲಲ್ಲಿ ಸುಧಾರಿಸಿ ಅದಕ್ಕೆ ಒಂದು ರೂಪ ಕೊಟ್ಟು ಹೋದರು. ಇದನ್ನೇ ಮೊದಲು ಕ್ರೈಸ್ತದೇವತಾಶಾಸ್ತ್ರಜ್ಞರೂ, ತರುವಾಯ ಮುಸ್ಲಿಂ ದಾರ್ಶನಿಕರೂ ಎತ್ತಿಕೊಂಡರು. ಹೀಗೆ ನವೀನ ಪ್ಲೇಟೋತತ್ತ್ವ ಮುಸ್ಲಿಂ ದರ್ಶನದ ಮೇಲೆ ಪ್ರಭಾವ ಬೀರಿದೆ. ಕೆಲವು ವಿಷಯಗಳಲ್ಲಿ ಮುಸ್ಲಿಂ ಸೂಫಿಗಳ ಮೇಲೂ ಇದರ ಪ್ರಭಾವ ಬಿದ್ದಿದೆ.

ಇದಲ್ಲದೆ ಇಸ್ಲಾಂ ಪ್ರಾದುರ್ಭಾವದ ಕಾಲಕ್ಕೆ ಮೊದಲೇ ಇರಾನ್ ಮೊದಲಾದೆಡೆಗಳಲ್ಲೆಲ್ಲ ಕ್ರೈಸ್ತಧರ್ಮವೂ ಕೊಂಚಕೊಂಚವಾಗಿ ಹರಡಿಕೊಂಡು ಕ್ರೈಸ್ತತತ್ತ್ವಗಳು ಜನರಿಗೆ ಪರಿಚಯವಾಗಿತ್ತು. ಕ್ರಿ. ಶ. ೩ನೆಯ ಶತಮಾನದ ಆದಿಯಲ್ಲಿ ಇರಾನಿನಲ್ಲೇ ಸುಮಾರು ೩೬೦ ಚರ್ಚುಗಳು ಇದ್ದುವು. ಆದರೆ, ಕ್ರಿ. ಶ. ೨೬೬ ರಲ್ಲಿ ಉದಾರಿಗಳಾಗಿದ್ದ ಪಾರ್ಥಿಯನ್ನರು ಕಳೆದು, ಶುದ್ಧ ವೈದಿಕ ಮತಾವಲಂಬಿಗಳಾದ ಸಸಾನಿಯನ್ನರು ಬಂದು ವೈದಿಕ ಜ಼ೊರಾಸ್ಟರ್‌ಧರ್ಮ ಮತ್ತೆ ತಲೆಯೆತ್ತಿ, ಇತರ ಧರ್ಮಗಳಿಗೆ ತೊಂದರೆಗೆ ಇಟ್ಟುಕೊಂಡಿತು. ಕೊನೆಗೆ ಇರಾನಿನಲ್ಲಿ ಜ಼ೊರಾಸ್ಟರ್ ಧರ್ಮವೇ ಪ್ರಬಲವಾಗಿ ಉಳಿಯಿತು.

## ಮುಸ್ಲಿಂ ದರ್ಶನ

ಇಸ್ಲಾಂ ತಲೆಯೆತ್ತುವ ವೇಳೆಗಾಗಲೆ ಪೂರ್ವದೇಶಗಳಲ್ಲಿ ಹಲವು ಅರಬೇತರ ವಿದ್ಯಾಕೇಂದ್ರಗಳಿದ್ದುವು. ಪೂರ್ವದೇಶದಲ್ಲಿ ಗ್ರೀಕ್ ವಿದ್ಯಾಪ್ರಚಾರಕ್ಕೆ ಕೇಂದ್ರವಾಗಿದ್ದ ಸೆಲ್ಯೂಕಿಯವನ್ನು ರೋಮನರು ಕ್ರಿ. ಶ. ೧೬೪ ರಲ್ಲಿ ನಾಶಮಾಡಿದ ಮೇಲೆ, ಬೇರೆಬೇರೆ ವಿದ್ಯಾಕೇಂದ್ರಗಳು ಹುಟ್ಟಿಕೊಂಡುವು. ಮೆಸೊಪೊಟೇಮಿಯದಲ್ಲಿ ನಿಸಿಬಿಸ್ ಮತ್ತು ಎಡೆಸ್ಸಗಳು ಕ್ರೈಸ್ತ ದೇವತಾಶಾಸ್ತ್ರ, ಮತ್ತು ಗ್ರೀಕ್ ದರ್ಶನಗಳ ವ್ಯಾಸಂಗಸ್ಥಾನಗಳಾದುವು. ಸಿರಿಯದಲ್ಲಿ ಹರಾನ್ ಎಂಬುದು ಲೌಕಿಕವಿದ್ಯೆಯ ಕೇಂದ್ರವಾಗಿತ್ತು. ಇದು ಇಸ್ಲಾಂ ಏಳಿಗೆಯವರೆಗೆ ನಡೆದು ಬಂತು. ಹರಾನ್‌ನಲ್ಲಿಯ ವಿದ್ವಾಂಸರು ಸಿರಿಯನ್ನಿಗೆ ಭಾಷಾಂತರವಾಗಿದ್ದ ಗ್ರೀಕ್ ಗ್ರಂಥಗಳನ್ನೆಲ್ಲ ಅರಬ್ಬಿಗೆ ಭಾಷಾಂತರಿಸಿದರು. ಹೀಗೆ ಗೆಲನ್, ಹಿಪ್ಪೊಕ್ರಟೀಸ್, ಪ್ಲೇಟೊ, ಅರಿಸ್ಟಾಟಲ್, ಆರ್ಕಿಮಿಡೀಸ್, ಅಪ್ಪೊಲಿನಿಯಸ್, ನವೀನ ಪ್ಲೇಟೋ ಅನುಯಾಯಿಗಳು ಮೊದಲಾದವರ ಗ್ರಂಥಗಳು ಗ್ರೀಕಿನಿಂದ ಅರಬ್ಬೀ ಭಾಷೆಗೆ ನೇರವಾಗಿ ಬರದೆ ಸಿರಿಯನ್ ಭಾಷಾಂತರದಿಂದ (ಕೆಲವು ಸಂದರ್ಭಗಳಲ್ಲಿ ಪಲ್ಲವಿಯಿಂದ) ಭಾಷಾಂತರವಾಗಿ ಬಂದುವು. ಇರಾನಿನಲ್ಲಿಯ ಜುಂದೇಷಹಪುರ್ ಪಟ್ಟಣ ಇರಾನ್ ವಿದ್ಯಕ್ಕೆ ಕೇಂದ್ರಸ್ಥಾನವಾಗಿತ್ತು. ಅಲ್ಲಿಗೆ ಸಿರಿಯ, ಇಂಡಿಯ ಮೊದಲಾದೆಡೆಗಳಿಂದಲೂ ವಿದ್ವಾಂಸರು ಬರುತ್ತಿದ್ದರು. ಇವರಲ್ಲಿ ಹಲವರು ದಾರ್ಶನಿಕರಿದ್ದರು. ಇಲ್ಲಿಯ ವಿದ್ಯಾಪೀಠದಲ್ಲಿ ಸಿರಿಯನ್ ಭಾಷೆಯ ಮೂಲಕವೇ ವಿದ್ಯಾ ಪ್ರಚಾರ ನಡೆಯುತ್ತಿತ್ತು. ಆದರೆ, ಪಲ್ಲವೀ ಭಾಷೆಯೂ ಬರುತ್ತಿತ್ತು. ಈಜಿಪ್ಟಿನ ಅಲೆಗ್ಸಾಂಡ್ರಿಯದಲ್ಲಿ ಜಾಕೊಬೈಟ್ ಕ್ರೈಸ್ತಪಂಗಡದ ವಿದ್ಯಾಕೇಂದ್ರವೊಂದಿತ್ತು. ಕಾನ್‌ಸ್ಟಾಂಟಿನೋಪಲಿನಲ್ಲಿ • ಅಲ್ಲಿಯ ಬಿಷಪ್ ನೆಸ್ಟೋರಿಯಸ್ ಪ್ರಚಾರಕ್ಕೆ ತಂದ ನೆಸ್ಟೋರಿಯನ್ ಕ್ರೈಸ್ತ ಮತದವರು ಜಾಕೋಬೈಟರಂತೆಯೇ ರೋಮನರ ಹಿಂಸೆಗೊಳಪಟ್ಟರು. ಇದರಿಂದ ಇವರು ರೋಮ್ ನಾಡನ್ನು ಬಿಟ್ಟು ಇರಾನಿನ ಅರಸನ ಅನುಗ್ರಹ ಬೇಡಿ ಸಂಪಾದಿಸಿದರು. ಇವರು ದೇವತಾಶಾಸ್ತ್ರ, ದರ್ಶನ,

ಮತ್ತು ಇತರ ಕಲಾ ಶಾಸ್ತ್ರಗಳ ವ್ಯಾಸಂಗವನ್ನು ಗ್ರೀಕ್, ಲ್ಯಾಟಿನ್ ಭಾಷೆಗಳಲ್ಲಿ ಮಾಡುವುದನ್ನು ಬಿಟ್ಟು, ಸಿರಿಯನ್ ಭಾಷೆಯಲ್ಲಿ ಮಾಡುವುದಕ್ಕೆ ತೊಡಗಿದರು. ಹೀಗೆ ಗ್ರೀಕ್ ಭಾಷಾ ಪ್ರಚಾರ ಪೂರ್ವ ದೇಶಗಳಲ್ಲಿ ತಪ್ಪಿಹೋಗಿ ಸಿರಿಯ, ಮೆಸೊಪೊಟೇಮಿಯ, ಪಶ್ಚಿಮ ಇರಾನ್‌ಗಳಲ್ಲೆಲ್ಲ ಸಿರಿಯನ್ ಭಾಷೆಯೇ ಪ್ರಬಲವಾಗಿ ಪ್ರಚಾರಕ್ಕೆ ಬಂತು. ಗ್ರೀಕರ ಉತ್ತಮ ಗ್ರಂಥಗಳೆಲ್ಲ ಸಿರಿಯನ್ನಿಗೆ (ಕೆಲವು ವೇಳೆ ಪಲ್ಲವಿಗೂ) ಭಾಷಾಂತರವಾದುವು. ಸಿರಿಯನ್ನಿಗೆ ಭಾಷಾಂತರವಾದ ಈ ಗ್ರಂಥಗಳು ಮೇಲೆಯೇ ಹೇಳಿದಂತೆ ಅರಬ್ಬಿಗೆ ಭಾಷಾಂತರವಾದುವು.

ಅರಬರು ಕ್ರೈಸ್ತ ಅಥವಾ ಜ಼ೊರಾಸ್ಟರ್ ಅನುಯಾಯಿಗಳಿಂದ ನಡೆಯುತ್ತಿದ್ದ ಮೇಲೆ ಹೇಳಿದ ವಿದ್ಯಾಪೀಠಗಳಿಗೆ ಹೋಗಿ ವ್ಯಾಸಂಗ ಮಾಡಿ ಬರುತ್ತಿದ್ದರು. ಇದರಿಂದ ಇಸ್ಲಾಂ ತಲೆಯೆತ್ತಿದ ವೇಳೆಗೆ ಮೆಕ್ಕಾದಲ್ಲಿ ಇರಾನಿಯನ್ ಮತ್ತು ಜ಼ೊರಾಸ್ಟರರ ಪರವಾದ ಒಂದು ಪಂಗಡವೂ, ರೋಮನ್ ಮತ್ತು ಕ್ರೈಸ್ತರ ಪರವಾದ ಒಂದು ಪಂಗಡವೂ ಇದ್ದುವು. ಬಹುಶಃ ಪೈಗಂಬರನೂ ಜುಂದೇಷಹಪೂರಿನ ವಿದ್ಯಾಪೀಠದಲ್ಲಿ ವ್ಯಾಸಂಗಮಾಡಿದ ವಿದ್ವಾಂಸರನೇಕರ ಮತ್ತು ಹಲವು ಸಿರಿಯನ್ ಕ್ರೈಸ್ತ ಪಾದ್ರಿಗಳ ಸಂಪರ್ಕವನ್ನು ಪರೋಕ್ಷವಾಗಿಯಾದರೂ ಪಡೆದಿದ್ದಿರಬಹುದು. ಇಸ್ಲಾಂ ಬರುವವೇಳೆಗೆ ಹೀಗೆ ವಾತಾವರಣ ಬರಿಯದಾಗಿಲ್ಲದೆ ಕ್ರೈಸ್ತ ಮತ್ತು ಜ಼ೊರಾಸ್ಟರ್ ಧರ್ಮದ ಭಾವನೆಗಳಿಂದ ತುಂಬಿದ್ದದ್ದರಿಂದ, ಮುಸ್ಲಿಂ ದರ್ಶನ ಸಂಪೂರ್ಣ ಸ್ವತಂತ್ರವಾಗಿ ಹುಟ್ಟಿಕೊಂಡು ಬೆಳೆಯದೆ ಮೊದಲಿದ್ದ ಭಾವನೆಗಳನ್ನೇ ಮುಸ್ಲಿಂ ಧರ್ಮಕ್ಕೆ ಅನುಗುಣವಾಗಿ ಮಾರ್ಪಡಿಸಿ ಹೊಂದಿಸಿಕೊಂಡು ಬೆಳೆಯಿತು. ಪೂರ್ವ ದೇಶಗಳಲ್ಲಿ ಮುಸ್ಲಿಮರು ಪ್ರಾಬಲ್ಯಕ್ಕೆ ಬಂದಮೇಲೆ ಪಲ್ಲವಿ, ಕಾಪ್ಟಿಕ್, ಮತ್ತು ಸಿರಿಯನ್ ಭಾಷೆಗಳ ಪ್ರಾಬಲ್ಯ ನಿಂತುಹೋಗಿ ಅರಬ್ಬೀ ಭಾಷೆಯ ಪ್ರಾಬಲ್ಯ ಹೆಚ್ಚಿ ಮುಸ್ಲಿಂ ದೇಶಗಳಲ್ಲೆಲ್ಲ ಅರಬ್ಬೀ ಭಾಷೆಯೇ ವಿದ್ಯಾ ಭಾಷೆಯಾಯಿತು. ಇತರ ಭಾಷೆಗಳ ಗ್ರಂಥಗಳು ಅರಬ್ಬಿಗೆ ಭಾಷಾಂತರವಾದುವು. ಸುಮಾರು ೧೧ನೆಯ ಶತಮಾನದವರೆಗೂ ಭಾಷಾಂತರ ಕಾರ್ಯವೇ ನಡೆದು ಅಲ್ಲಿಂದ ತರುವಾಯ ಸ್ವತಂತ್ರ

ಗ್ರಂಥಗಳು ಹುಟ್ಟಿದುವು ಎನ್ನಬಹುದು. ಅಲ್ಲದೆ ಮೊದಮೊದಲಿನ ಅರಬ್ಬೀ ಭಾಷಾಂತರವೆಲ್ಲ ಸಿರಿಯನ್ ಕ್ರೈಸ್ತರು, ಇರಾನಿಯನ್ ಕ್ರೈಸ್ತರು ಮತ್ತು ಇತರ ಮತೀಯರಿಂದ ನಡೆಯಿತು. ಆಮೇಲೆ ಇಸ್ಲಾಂ ಮತಾವಲಂಬಿಗಳಾದ ಇರಾನಿಯನ್ನರಿಂದ ನಡೆಯಿತು.

೯ನೆಯ ಶತಮಾನದಿಂದ ೧೬ನೆಯ ಶತಮಾನದ ವರೆಗಿನ ಕಾಲದಲ್ಲಿ ಅನೇಕ ಪ್ರಸಿದ್ಧ ಮುಸ್ಲಿಂ ದಾರ್ಶನಿಕರು ಆಗಿ ಹೋದರು. ಮೊತ್ತ ಮೊದಲ ಮುಸ್ಲಿಂ ದಾರ್ಶನಿಕರಲ್ಲಿ ಒಬ್ಬನೂ, ಅರಬ ಜಾತೀಯರ ಒಬ್ಬನೇ ದೊಡ್ಡ ದಾರ್ಶನಿಕನೂ ಆದ ಅಬೂಯೂಸುಫ್ ಯಾಕೂಬ್ ೮ ನೆಯ ಶತಮಾನದ ಕೊನೆಯಲ್ಲಿ ಹುಟ್ಟಿದವನು. ಇವನನ್ನು ಅಲ್ ಕಿಂದಿ ಎಂಬ ಹೆಸರಿನಿಂದ ಕರೆಯುತ್ತಾರೆ. ಇವನ ತಂದೆ ಕಿಂದಾ ಬುಡಕಟ್ಟಿನ ಇಸ್ಹಾಕ್ ಅಲ್‌ಕಿಂದಿಗೆ ಅರಬ್ಬೀ ಭಾಷೆಯು ಜತೆಗೆ ಪಲ್ಲವಿಯೂ ಬರುತ್ತಿತ್ತು. ಇವನು ನಾನಾ ವಿಷಯಗಳ ಮೇಲೆ ೨೬೫ ಸಣ್ಣ ದೊಡ್ಡ ಗ್ರಂಥಗಳನ್ನು ಬರೆದಿದ್ದಾನೆ. ಇವನು ದರ್ಶನವನ್ನೇ ಅಲ್ಲದೆ ಗಣಿತ, ಜ್ಯೋತಿಷ, ಭೂಗೋಳ, ವೈದ್ಯ ಮೊದಲಾದ ವಿಷಯಗಳನ್ನೂ ವ್ಯಾಸಂಗಮಾಡಿ, ಅವುಗಳ ಮೇಲೆ ಬರೆದೂ ಇದ್ದಾನೆ. ಅರಿಸ್ಟಾಟಿಲ್, ಟಾಲೆಮಿ, ಯೂಕ್ಲಿಡ್, ಮೊದಲಾದವರ ಗ್ರಂಥಗಳ ಮೇಲೆಲ್ಲ ಬರೆದಿದ್ದಾನೆ. ಅಲ್ಲದೆ, ಅರಿಸ್ಟಾಟಲಿನ ಚರಿತ್ರೆಯು ಅರಬ್ಬೀ ಭಾಷಾಂತರವನ್ನು ತಿದ್ದಿ ಪರಿಷ್ಕರಿಸಿದ್ದಾನೆ. ಅಫ್ರೊದೆಸಿಯಾಸಿನ ಅಲೆಗ್ಸಾಂಡರ್ ಅರಿಸ್ಟಾಟಲಿನ ಗ್ರಂಥಗಳಿಗೆ ಬರೆದಿರುವ ವ್ಯಾಖ್ಯಾನದ ಪ್ರಭಾವ ಅಲ್‌ಕಿಂದಿಯ ದರ್ಶನದಮೇಲೆ ಬಿದ್ದಿರುವಂತೆ ಕಾಣುತ್ತದೆ. ಅಲ್‌ಕಿಂದಿ ಕಾರ್ಯಕಾರಣ ತತ್ತ್ವದಲ್ಲಿ ನವೀನ ಪ್ಲೇಟೋ ಅನುಯಾಯಿಗಳನ್ನು ಅನುಸರಿಸಿ ಕಾರ್ಯಕಾರಣಕ್ಕಿಂತ ಕಡಮೆಯೆಂದೂ; ಪರವಸ್ತುವೇ ಆದಿಕಾರಣ, ಈ ಆದಿಕಾರಣದಿಂದ ವಿಶ್ವಬುದ್ಧಿ, ವಿಶ್ವಬುದ್ಧಿಯಿಂದ ವಿಶ್ವಾತ್ಮ—ಹೀಗೆ ಬಂದು ಆತ್ಮ ಬುದ್ಧಿ ಪ್ರಪಂಚಕ್ಕೂ ಇಂದ್ರಿಯಪ್ರಪಂಚಕ್ಕೂ ನಡುವೆ ಇದೆಯೆಂದೂ; ಪ್ರತಿಯೊಂದು ಕಾರ್ಯಕ್ಕೂ ಕಾರಣ ಇದ್ದರೂ ಆದಿಕಾರಣವಾದ ಪರವಸ್ತುವಿಗೆ ಬೇರೆ ಕಾರಣವಿಲ್ಲವೆಂದೂ ಪ್ರತಿಪಾದಿಸಿದ್ದಾನೆ.

ವ್ಯಕ್ತಿ-ಆತ್ಮ ಅಥವಾ ಜೀವಾತ್ಮ ಬುದ್ಧಿಮಯವೂ ಅಭೌತವೂ ಅನಶ್ವರವೂ ಆಗಿ ತನ್ನ ಮೂಲವನ್ನು ಬುದ್ಧಿಪ್ರಪಂಚದಲ್ಲಿ ಪಡೆದು ಇಂದ್ರಿಯ ಪ್ರಪಂಚಕ್ಕೆ ಇಳಿದು ಬರುತ್ತದೆ. ಆತ್ಮ ದ್ವಿಮುಖದ್ದು ಅಥವಾ ದ್ವಿಸ್ವಭಾವದ್ದು ಎನ್ನಬಹುದು. ಒಂದು ಭೌತದ ಕಡೆಗೆ ಎಳೆಯುತ್ತ ಐಹಿಕ ವ್ಯಾಪಾರಗಳಿಗೆ ಕಾರಣವಾದ್ದು; ಮತ್ತೊಂದು ತನ್ನ ಅಭೌತ ಮೂಲದ ಕಡೆಗೆ ಏರಿ ಮೇಲೇರುವಂಥಾದ್ದು. ಆತ್ಮ ದೇಹದೊಳಗಿದ್ದರೂ ಅದರಿಂದ ಅಲಿಪ್ತವಾಗಿದೆ. ಬುದ್ಧಿಯ ವ್ಯಕ್ತೀಕರಣಕ್ಕೆ ಆತ್ಮ ಸಾಧನವಿದ್ದಂತೆ ದೇಹ ಮರಣಾನಂತರ ಅಳಿದುಹೋಗುತ್ತದೆ. ದೇಹದಿಂದ ಮುಕ್ತವಾದ ಅನಶ್ವರ ಆತ್ಮ ಶುದ್ಧರೂಪದಲ್ಲಿ ತನ್ನ ಮೂಲವಾದ ವಿಶ್ವಾತ್ಮವನ್ನು ಸೇರುತ್ತದೆ. ಆದರೆ, ಆತ್ಮ ರಾಗದ್ವೇಷಗಳಿಂದ ಲಿಪ್ತವಾಗಿ ಕಲುಷಿತಗೊಂಡಿದ್ದ ಪಕ್ಷದಲ್ಲಿ, ಅದು ಇಂದ್ರಿಯ ಪ್ರಪಂಚದಲ್ಲೇ ನವೆದು ಕ್ರಮೇಣ ಪ್ರಾಯಶ್ಚಿತ್ತಪಡೆದು ಪರಿಶುದ್ಧವಾಗಿ ತರುವಾಯ ಮುಕ್ತಿಹೊಂದುತ್ತದೆ.

ಅಲ್‌ಕಿಂದಿಯ ಪ್ರಕಾರ ಮೂಲ ತತ್ತ್ವಗಳು ಐದು. (೧) ದ್ರವ್ಯ. (೨) ರೂಪ. ರೂಪ ದ್ರವ್ಯವನ್ನು ಬಿಟ್ಟು ಇರಲಾರದು. ದ್ರವ್ಯ ಒಂದರ ರೂಪವನ್ನು ತೆಗೆದುಕೊಳ್ಳುತ್ತದೆ; ಆದರೆ ತಾನು ಮತ್ತೊಂದಕ್ಕೆ ರೂಪ ಕೊಡಲಾರದು. ದ್ರವ್ಯ ತನ್ನ ಕೇವಲ ಸ್ಥಿತಿಯಲ್ಲಿ ಅಮೂರ್ತವೂ ಸತ್ಯವೂ ಆಗಿದ್ದು, ಅದು ಒಂದು ಪದಾರ್ಥವಾಗಿ ಪರಿಣಮಿಸಿದೊಡನೆಯೇ ರೂಪವನ್ನು ಪಡೆದು ಅಸತ್ಯವಾಗುತ್ತದೆ. (೩) ಚಲನೆ ಅಥವಾ ಗತಿ. ಇದೂ ದ್ರವ್ಯವನ್ನು ಬಿಟ್ಟು ಇರಲಾರದು. ಇದು ಆರು ವಿಧ—ಉತ್ಪತ್ತಿ, ನಾಶ, ವೃದ್ಧಿ, ಕ್ಷಯ, ವೈವಿಧ್ಯ, ಸ್ಥಾನ ವ್ಯತ್ಯಾಸ. (೪) ಕಾಲ. ಇದು ಚಲನೆಯೊಡನೆ ಸಂಬಂಧಿಸಿದ್ದು. (೫) ಆಕಾಶ.

ಯೂರೋಪಿನಲ್ಲಿ ಅಲ್ಫರ್‍ಯಾಬಿಯಸ್ ಎಂಬ ಹೆಸರಿನಿಂದ ಬಳಕೆಯಾಗಿರುವ ಫ್ಹಾರಾಬಿನ ಅಬೂನಸರ್ ಮಹಮ್ಮದ್ ಎಂಬ ಪ್ರಸಿದ್ಧ ದಾರ್ಶನಿಕನು ೯ನೆಯ ಶತಮಾನದ ಕೊನೆಯಲ್ಲಿ ಹುಟ್ಟಿದವನು. ಇವನ ತಂದೆ ಸೈನ್ಯದಲ್ಲಿ ದಳನಾಯಕನಾಗಿದ್ದನು. ಮಗನು ಎಳವೆಯಲ್ಲೇ ತವರೂರಾದ ಫ್ಹಾರಾಬನ್ನು ಬಿಟ್ಟು ಬಗ್‌ದಾದಿಗೆ ಬಂದ

ಅರಬ್ಬೀ ಭಾಷೆಯನ್ನು ಕಲಿತು, ಅಬುಲ್‌ಬಷರ್ ಮತ್ತನ ಕೈಕೆಳಗೆ ತರ್ಕಶಾಸ್ತ್ರ ಓದಿದನು. ಅಲ್ಲಿಂದ ಹರ್ರಾನ್ನಿಗೆ ಹೋಗಿ ಯುಹನ್ನ ಎಂಬವನ ಶಿಷ್ಯನಾಗಿ ದರ್ಶನವನ್ನು ಓದಿದನು. ಅಲ್ಲಿಂದ ಸಿರಿಯ ಮತ್ತು ಈಜಿಪ್ಟ್ ದೇಶಗಳಲ್ಲಿ ಸಂಚಾರಮಾಡಿಕೊಂಡು ಬಂದು ದಮಾಸ್ಕಸ್ಸಿನಲ್ಲಿ ನೆಲಸಿದನು. ಬಡತನದಿಂದ ಕಷ್ಟಪಟ್ಟು, ಕಾವಲುಗಾರನ ಕೆಲಸಕ್ಕೆ ಸೇರಿಕೊಂಡು ತೋಟದ ದೀಪದ ಕೆಳಗೆ ಓದುತ್ತಿದ್ದ ಇವನನ್ನು ನೋಡಿ ದಮಾಸ್ಕಸ್ಸಿನ ದೊರೆ ಸಯ್ಫುದ್‌ದೌಲನು ಇವನಿಗೆ ಒಂದು ವೃತ್ತಿಯನ್ನು ಕಲ್ಪಿಸಿಕೊಟ್ಟು, ಇವನ ವ್ಯಾಸಂಗಕ್ಕೂ ಗ್ರಂಥ ನಿರ್ಮಾಣಕ್ಕೂ ಅನುಕೂಲಮಾಡಿಕೊಟ್ಟನು. ಇವನು ನೂರಾರು ಗ್ರಂಥಗಳನ್ನು ಬರೆದಿದ್ದಾನೆ. ಇವುಗಳಲ್ಲಿ ಅರ್ಧ ಹಿಂದಿನ ಗ್ರಂಥಗಳ ವ್ಯಾಖ್ಯಾನಗಳು ಮತ್ತು ವಿಮರ್ಶೆಗಳು. ಉಳಿದವು ಸ್ವತಂತ್ರ ಗ್ರಂಥಗಳು. ಅಲ್‌ಕಿಂದಿಯವಂತೆಯೇ ಇವನ ಗ್ರಂಥಗಳೂ ಎಲ್ಲವೂ ನಮಗೆ ಉಳಿದು ಬರದೆ ಕೆಲವು ಮಾತ್ರ, ಅವೂ ಹರುಕು ಮುರುಕಾಗಿ, ನಿಂತಿವೆ. ಇವನು ತರ್ಕ, ನೀತಿ, ಅಲಂಕಾರ, ಕಾವ್ಯ, ಪೌರಧರ್ಮ, ದರ್ಶನ, ಮೊದಲಾದವುಗಳ ಮೇಲೆ ಬರೆದಿದ್ದಾನೆ. ಪ್ಲೇಟೋ, ಅರಿಸ್ಟಾಟಲ್, ಟಾಲೆಮಿ, ಯೂಕ್ಲಿಡ್, ಮೊದಲಾದವರಮೇಲೆ ಬರೆದಿದ್ದಾನೆ. ಇವನು ದೊಡ್ಡ ದಾರ್ಶನಿಕನು ಮಾತ್ರವೇ ಅಲ್ಲದೆ ಗಣಿತಜ್ಞನೂ, ಸಂಗೀತಗಾರನೂ, ಅತೀಂದ್ರಿಯ (ಅನುಭಾವಿ) ವಾದಿಯೂ ಆಗಿದ್ದನು. ಆದರೆ, ಇವನ ಶೈಲಿ ತಿಳಿಯಾಗಿಲ್ಲದೆ ಬಹು ಕಠಿನವಾಗಿದ್ದದ್ದರಿಂದ, ಇವನ ತರುವಾಯ ಬಂದ ಅವಿಸೆನ್ನನಷ್ಟು ಇವನು ಜನಪ್ರಿಯನಾಗಲಿಲ್ಲ. ಆದರೂ, ನಾನಾ ವಿಷಯಗಳ ಜ್ಞಾನಸಂಪಾದಿಸಿ ಘನಪಂಡಿತನಾಗಿದ್ದದ್ದರಿಂದ ಇವನನ್ನು ಎರಡನೆಯ ಆಚಾರ್ಯ ಅಥವಾ ಅಪರ ಅರಿಸ್ಟಾಟಲ್ ಎಂದು ಕರೆದಿದ್ದಾರೆ. ಅಬೂಸ್ಸಕರಿಯ,. ಅಬೂಸುಲೇಮಾನ್‌ತಾಹರ್ ಮೊದಲಾದವರು ಇವನ ಪ್ರಸಿದ್ಧ ಶಿಷ್ಯರು.

ಈ ಫಾರಾಬಿ ಮೊದಲು ಮುಸ್ಲಿಂ ಭಕ್ತ; ತರುವಾಯ ದಾರ್ಶನಿಕ. ಇದರಿಂದ ಇವನು ಪ್ಲೇಟೊ ಮತ್ತು ಅರಿಸ್ಟಾಟಲರ ಅಭಿಪ್ರಾಯಗಳನ್ನು ಇಸ್ಲಾಂ ಧರ್ಮತತ್ತ್ವಕ್ಕೆ ತಕ್ಕಂತೆ ಹೊಂದಿಸಹೋಗಿದ್ದಾನೆ. ಇವನ

ಒಲವು ಅನುಭಾವವಾದದ ಕಡೆಗೆ. ಆದಿಕಾರಣವೂ ದ್ರವ್ಯವೂ ಅನಾದಿ ಎಂಬ ಅರಿಸ್ಟಾಟಲಿನ ಮತದ್ವೈತವಾದರೂ, ನಿಜವಾಗಿ ಅದು ಪೈಗಂಬರನ ಬೋಧನೆಗೆ ವಿರುದ್ಧವಲ್ಲವೆಂದು ತೋರಿಸಿದ್ದಾನೆ. ದರ್ಶನದ ಪರಮಧ್ಯೇಯು ತರ್ಕದಿಂದಲೂ, ಜ್ಞಾನದಿಂದಲೂ, ಪರಿಶುದ್ಧ ಜೀವನದಿಂದಲೂ ದೇವರನ್ನು ಅರಿತುಕೊಳ್ಳುವುದೇ—ಎಂಬುದು ಇವನ ಮತ.

ಫ಼ಾರಾಬಿ ಮುಸ್ಲಿಂ ವಿದ್ವಾಂಸರಲ್ಲಿ ದಾರ್ಶನಿಕನು ಮಾತ್ರವಲ್ಲದೆ, ದೊಡ್ಡ ತಾರ್ಕಿಕನೆಂದೂ ಪ್ರಸಿದ್ಧನಾಗಿದ್ದಾನೆ. ಫ಼ಾರಾಬಿಯ ತರ್ಕ ಶಾಸ್ತ್ರ ಲ್ಯಾಟಿನ್ ತರ್ಕಶಾಸ್ತ್ರಜ್ಞರ ಮೇಲೆ ಪ್ರಭಾವ ಬೀರಿದೆಯೆಂದು ಪಾಶ್ಚಾತ್ಯರೇ ಒಪ್ಪಿಕೊಂಡಿದ್ದಾರೆ. ಫ಼ಾರಾಬಿಯ ಕಾಲಕ್ಕೆ ಹಿಂದೆಯೇ ಹರ್‍ರ್‍ನ್, ನಿಸಿಬಿಸ್, ಎಡೆಸ್ಸ, ಜುಂದೇಹಪ್ಪೂರ್—ಈ ಪಟ್ಟಣಗಳ ವಿದ್ಯಾಪೀಠಗಳಲ್ಲಿ ತರ್ಕವನ್ನು ಪಾಠ ಹೇಳುತ್ತಿದ್ದರು. ಫ಼ಾರ್ಫಿರಿಯ ಮತ್ತು ಅರಿಸ್ಟಾಟಲಿನ ತರ್ಕ ಗ್ರಂಥಗಳ ಭಾಷಾಂತರಗಳೂ, ಸಂಗ್ರಹ ಗಳೂ, ವ್ಯಾಖ್ಯಾನಗಳೂ ಸಿರಿಯನ್ ಮತ್ತು ಪಹ್ಲವಿ ಭಾಷೆಯಲ್ಲಿ ದೊರಕುತ್ತಿದ್ದುವು. ಪಾಲ್ ಎಂಬ ಇರಾನಿಯನ್ ಬಿಷಪ್ ಒಬ್ಬನು ಬರೆದ ತರ್ಕ ಗ್ರಂಥಗಳು ಇಸ್ಲಾಂ ಜನ್ಮ ಕಾಲದಲ್ಲಿ ಪ್ರಚಾರದಲ್ಲಿದ್ದುವು. ತರ್ಕಶಾಸ್ತ್ರ ತಿಳಿದದ್ದರಿಂದ ತಿಳಿಯದ್ದನ್ನು ತಿಳಿಯುವುದಕ್ಕೆ ನೆರವಾಗಿ ಸತ್ಯಾಸತ್ಯಗಳ, ಸದಸತ್ತುಗಳ, ಪಾಪಪುಣ್ಯಗಳ, ವಿವೇಚನೆಗೆ ಸಹಾಯ ವಾಗಿ, ಆತ್ಮಜ್ಞಾನಕ್ಕೆ ಸಾಧನವೆಂದು ನಂಬಿದ್ದರು. ಇತರ ತಾರ್ಕಿಕರು ಮನಶ್ಶಾಸ್ತ್ರ ಅತಿಭೌತ ಶಾಸ್ತ್ರಗಳಂತೆ ತರ್ಕಶಾಸ್ತ್ರವೂ ಒಂದು ಜ್ಞಾನ ಸಾಧನ ಮಾತ್ರವೆಂದು ತಿಳಿದಿದ್ದರು. ಆದರೆ ಫ಼ಾರಾಬಿ ಅದು ದರ್ಶನ ಶಾಸ್ತ್ರದ ಒಂದು ಸಹಜ ಭಾಗವೆಂದೂ, ಸದಸದ್‌ವಿವೇಚನೆಗೂ, ಸತ್ಯಾನ್ವೇಷಣಕ್ಕೂ, ಆತ್ಮಜ್ಞಾನಕ್ಕೂ ಅದು ಅತ್ಯಾವಶ್ಯಕವೆಂದೂ ವಾದಿಸಿ ತರ್ಕಕ್ಕೆ ಬಹು ಪ್ರಾಧಾನ್ಯ ಕೊಟ್ಟನು. ಇವನ ಅತಿಭೌತ ಪ್ರತಿಪಾದನೆಯೆಲ್ಲ ಕೇವಲ ತರ್ಕವಾದದ ಮೇಲೆಯೇ ನಿಂತಿದೆ.

ಮೊದಲೇ ಹೇಳಿದಂತೆ ಫ಼ಾರಾಬಿ ಕುರಾನ್ ತತ್ವಗಳನ್ನೂ ಆ ಕಾಲದಲ್ಲಿದ್ದ ದರ್ಶನ ತತ್ವಗಳನ್ನೂ ಹೊಂದಿಸಹೋಗಿ, ದರ್ಶನ ತತ್ವ

ಗಳು ಕುರಾನ್ ತತ್ವಗಳಿಗೆ ವಿರುದ್ಧವಲ್ಲವೆಂದು ಬಹು ಪ್ರಯತ್ನಪಟ್ಟು ತೋರಿಸಿದ್ದಾನೆ. ಸಂಘಟಿತ ಪದಾರ್ಥಗಳೆಲ್ಲ ಅವುಗಳ ಘಟನೆಗೆ ಕಾರಣವುಂಟಾಗಿಯೇ ಇರಬೇಕೆಂದೂ, ಪ್ರಪಂಚ ಘಟಿತವಾದ್ದರಿಂದ ಅದಕ್ಕೂ ಕಾರಣ ಅಥವಾ ಕಾರಣಗಳು ಇದ್ದೇ ಇರಬೇಕೆಂದೂ, ಇವುಗಳೆಲ್ಲದರ ಕಾರಣವಾದ ಪರಕಾರಣ ಅಥವಾ ಆದಿಕಾರಣ, ತನಗೆ ಬೇರೇ ಕಾರಣವಿಲ್ಲದೆ, ಸ್ವತಂತ್ರವಾದ್ದೆಂದೂ ವಾದಿಸಿದ್ದಾನೆ. ಪರಿಪೂರ್ಣವೂ ಸ್ವತಸ್ಸಿದ್ಧವೂ ಆದ ಈ ಆದಿಕಾರಣ ಅಥವಾ ಆದಿತತ್ವವೇ ಫ಼ಾರಾಬಿಯ ಪ್ರಕಾರ ಸೃಷ್ಟಿಕರ್ತೃ; ಅರಿಸ್ಟಾಟಲ್ ಹೇಳುವಂತೆ ಆದಿಚಾಲಕ ಮಾತ್ರವಲ್ಲ. ಈ ಆದಿಕಾರಣವಾದ ದೇವರು ಸ್ವಯಂ ಪ್ರಮಾಣನೇ ಹೊರತು ಅನ್ಯಪ್ರಮಾಣಗಳಿಂದ ಸಾಧ್ಯನಲ್ಲ. ಈ ಆದಿಕಾರಣ ತಾನೇ ಜ್ಞಾತೃ, ಜ್ಞೇಯ, ಜ್ಞಾನ; ತಾನೇ ಪ್ರೇಮಿ, ಪ್ರೇಮ್ಯ, ಪ್ರೇಮ; ಸ್ವಯಂ ಪ್ರಕಾಶ, ಸ್ವಯಂಪರಿಪೂರ್ಣ, ನಿತ್ಯತೃಪ್ತ. ದರ್ಶನದ ಪರಮಧ್ಯೇಯ ಇದನ್ನು ಅರಿತು ಅನುಭವಮಾಡಿಕೊಳ್ಳುವುದೆ.

ಇತರ ಪೌರಸ್ತ್ಯ ವಿದ್ವಾಂಸರಂತೆಯೇ ಮುಸ್ಲಿಂ ವಿದ್ವಾಂಸರೂ ಪರಿಣಾಮ ವಾದವನ್ನು ಒಪ್ಪಿಕೊಂಡು, ಜೀವ ಮೆಟ್ಟಿಲು ಮೆಟ್ಟಿಲಾಗಿ ಖನಿಜ, ಸಸ್ಯ, ನೀಚಪ್ರಾಣಿ, ಉಚ್ಚಪ್ರಾಣಿ—ಇವೇ ಮೊದಲಾದ ನಾನಾ ರೂಪಗಳನ್ನು ಹೊಂದಿ, ಕೊನೆಗೆ ಮನುಷ್ಯ ರೂಪವನ್ನು ತಾಳಿ, ಮುಂದೆ ಅದಕ್ಕೂ ಮೇಲಾದ ಬೇರೆ ರೂಪಗಳನ್ನೂ ಪಡೆದು ಚರಮಾವಸ್ಥೆಯಲ್ಲಿ ಪರಿಪೂರ್ಣಗೊಳ್ಳುತ್ತದೆ ಎಂದು ನಂಬಿದ್ದರು. ಈ ನಂಬಿಕೆಯನ್ನೇ ಅನುಸರಿಸಿ ಫ಼ಾರಾಬಿಯೂ—ಅವನಂತೆಯೇ ಇತರ ಕೆಲವು ಮುಸ್ಲಿಂ ದಾರ್ಶನಿಕರೂ—ಮನುಷ್ಯನು ಆತ್ಮ ಮತ್ತು ದೇಹಗಳ ಸಂಘಟನವೆಂದೂ, ಆತ್ಮವೇ ಸಾರವೆಂದೂ, ಆತ್ಮ ನಿರ್ವಿಕಾರವೂ ಅನಶ್ವರವೂ ಆಗಿದ್ದು ಕಾಲದೇಶಾದಿಗಳ ಅಪೇಕ್ಷೆಯಿಲ್ಲದ್ದೆಂದೂ, ದ್ರವ್ಯದಲ್ಲಿ ಮಾತ್ರ ವ್ಯತ್ಯಾಸವಾಗುತ್ತ ಹೋಗುತ್ತದೆಂದೂ ವಾದಿಸಿದರು.

ಫ಼ಾರಾಬಿ ಸೂಫಿ಼ೀ ಧರ್ಮಾನುಯಾಯಿಯಾಗಿದ್ದನು. ಭೌತ ಪ್ರಪಂಚದ ಜ್ಞಾನವನ್ನೂ, ಬುದ್ಧಿಗತ ಅನುಭವವನ್ನೂ ವಿಚಾರ

ಬೇರೊಂದು ಶಕ್ತಿವಿಶೇಷವುಂಟೆಂದೂ, ಅದು ಪ್ರೇಮವೆಂದೂ, ಈ ಪ್ರೇಮದಿಂದಲೇ ಪ್ರಪಂಚಕ್ಕೆ ಮುಕ್ತಿ ಎಂದೂ, ಈ ಪ್ರೇಮದಿಂದಲೇ ಸೃಷ್ಟಿಯ ನಾನಾ ಭಾಗಗಳು ಒಂದರೊಡನೊಂದು ಸಮರಸದಿಂದ ಬೆರೆತು ಏಕರೂಪವಾಗಿವೆಯೆಂದೂ, ಅವನು ಎಣಿಸಿದ್ದನು. ಪರಮ ಪ್ರೇಮವೇ ಪರಮ ಸೌಂದರ್ಯವೂ, ಪರಮಸತ್ತೂ ಎಂಬುದು ಫಾರಾಬಿಯ ಅಭಿಪ್ರಾಯ. ಅಪೂರ್ಣಗಳೇ ಪ್ರೇಮಿಗಳೆಂದೂ, ಪೂರ್ಣಗಳೇ ಪ್ರೇಮ್ಯಗಳೆಂದೂ, ಇವೆರಡಕ್ಕೂ ಇರುವ ಸಂಬಂಧವೇ ಪ್ರೇಮವೆಂದೂ, ಈ ಪ್ರೇಮದಿಂದ ಕೆಳಗಿನದು ಮೇಲಿನದಕ್ಕೆ ಸೆಳೆ ಹೊಂದಿ ಕೊನೆಗೆ ತುದಿ ಮುಟ್ಟುತ್ತದೆಂದೂ ನಂಬಿದ್ದನು. ಇಂದ್ರಿಯಗಳು ಕೆಲವು ಇಂದ್ರಿಯ ಗೋಚರ ವಸ್ತುಗಳನ್ನು ಮಾತ್ರವೂ, ಬುದ್ಧಿ ಸೃಷ್ಟಿಯ ಒಂದೆರಡು ರಹಸ್ಯಗಳನ್ನು ಮಾತ್ರವೂ ನಮಗೆ ತೋರಿಸಿ ಕೊಡಬಹುದು; ಆದರೆ, ಮನುಷ್ಯನನ್ನು ತನ್ನ ಮೂಲಸ್ಥಾನವಾದ ಪರಮಾತ್ಮನಲ್ಲಿಗೆ ಕೊಂಡೊಯ್ಯಬೇಕಾದರೆ ಪ್ರೇಮವೊಂದೇ. ದೇವರು ಮನುಷ್ಯನಿಂದ ದೂರನಲ್ಲ, ಬಲು ಹತ್ತಿರ. ಕುರಾನಿನಲ್ಲಿ ಹೇಳಿರುವಂತೆ ದೇವರು ಮನುಷ್ಯನ ಜೀವನಾಳಗಳಿಗಿಂತ ಹತ್ತಿರದಲ್ಲಿದ್ದಾನೆ. ಮನಸ್ಸಿನ ಕಣ್ಣನ್ನು ತೆರೆದು ಪರಮಾತ್ಮನನ್ನು ಕಾಣಿಸಬೇಕಾದರೆ ಪ್ರೇಮವೊಂದೆ. ಪ್ರಾಪಂಚಿಕ ಆಸೆಗಳು ಆತ್ಮಕ್ಕೂ ಆದರ ಪ್ರೇಮ್ಯವಾದ ದೇವರಿಗೂ ನಡುವೆ ತೆರೆಯಂತೆ ಇರುತ್ತವೆ. ಆದರೆ, ಇಹ ಪ್ರಪಂಚದಲ್ಲಿ ಇದ್ದರೂ ಅದಕ್ಕೆ ಅಂಟಿರದಿದ್ದರೆ, ಅಂಥವನು ಈ ದೇಹದಲ್ಲಿಯೆ ಇತರರು ಕಾಣದ್ದನ್ನು ಕಾಣಬಹುದು; ದೇವರ ಸಾಮೀಪ್ಯವನ್ನೂ ದಿವ್ಯ ದರ್ಶನವನ್ನೂ ಹೊಂದಬಹುದು. ಮೊದಮೊದಲು ಈ ಅನುಭವ ಕ್ಷಣಿಕವಾಗಿದ್ದು, ಸಾಧನೆಯಿಂದಲೂ, ಪರಿಶುದ್ಧ ಜೀವನದಿಂದಲೂ ಕ್ರಮೇಣ ದೀರ್ಘಕಾಲಿಕವೂ ಸ್ಥಿರವೂ ಆದ ನಿತ್ಯಾನುಭವವಾಗುತ್ತದೆ.

ಫಾರಾಬಿ ಮೊದಲೇ ಹೇಳಿದಂತೆ ಹಲವು ವಿಷಯಗಳ ಮೇಲೆ ಬರೆದಿದ್ದಾನೆ. ರಾಜನೀತಿ, ಸಮಾಜನೀತಿಗಳ ಮೇಲೂ ಬರೆದಿದ್ದಾನೆ. ಜನತೆಗೆ ಮುಕ್ತಿ ಪ್ರತಿವ್ಯಕ್ತಿಯ ಪರಿಶುದ್ಧ ಜೀವನದಿಂದಲೂ, ಸಮಾಜ

ಸಹಕಾರದಿಂದಲೂ, ಸಮರಸ ಸಹಾನುಭೂತಿಗಳಿಂದಲೂ ಬರುತ್ತ ದೆಂದೂ, ವ್ಯಕ್ತಿ ತನ್ನ ಅಪೂರ್ಣತೆಯನ್ನೂ, ಕೊರತೆಯನ್ನೂ ತಿಳಿದು ತಿದ್ದಿಕೊಂಡು ಪೂರ್ಣನಾಗಬೇಕಾದರೆ ಸಮಾಜದಲ್ಲಿಯೇ ಎಂದೂ ಇವನು ತಿಳಿದಿದ್ದನು. ಫ಼ಾರಾಬಿ ಅನೇಕ ವಿಷಯಗಳಲ್ಲಿ ಪ್ಲೆಟೋ ವನ್ನೇ ಅನುಸರಿಸಿ ಹೋಗಿದ್ದರೂ, ರಕ್ತಗತವಾಗಿದ್ದ ಇರಾನ್ ಸಂಸ್ಕೃತಿ ಅವನ ಮೇಲೆ ತನ್ನ ಪ್ರಭಾವ ತೋರಿಸದೆ ಇರಲಿಲ್ಲ. ದಿವ್ಯಜ್ಞಾನ ಪರಿ ಪೂರ್ಣನೂ ಬುದ್ಧಿವಿವೇಕಗಳುಳ್ಳವನೂ ಆದ ದೊರೆಯೊಬ್ಬನು ಜನ ರನ್ನು ಆಳಲು ಇದ್ದೇ ಇರಬೇಕೆಂದು ಇವನು ನಂಬಿದ್ದನು. ಫ಼ಾರಾ ಬಿಯ ನಂಬಿಕೆಯಲ್ಲಿ ಪೈಗಂಬರನು ಇಂಥ ಒಬ್ಬ ದೊರೆ. ಹೀಗೆ ದಿವ್ಯ ಜ್ಞಾನಿಗಳಾದ ದೊರೆಗಳು ದೊರೆಯದೆ ಹೋದರೆ, ಅದಕ್ಕೆ ಎರಡನೆಯ ದಾಗಿ ಕೆಲವು ಜನ ಬುದ್ಧಿವಂತರಿಂದ ಜನಾಂಗ ಸಾಗಬೇಕೆಂದು ಹೇಳಿದನು.

ಮಹಮ್ಮದನ ಮಗ ಅಬೂಅಲಿ ಅಹಮದ್ (ಸ. ಕ್ರಿ. ಶ. ೧೦೩೦) ಇವನು ಇಬ್ನ್‌ಏ ಮುಸ್ಕೆವಯ್ ಎಂಬ ಹೆಸರಿನಿಂದ ಪ್ರಸಿದ್ಧನಾಗಿ ದ್ದಾನೆ. ಇವನು ನೀತಿಶಾಸ್ತ್ರದಲ್ಲೇ ಹೆಚ್ಚು ಆಸಕ್ತಿಯಿಂದ ಪರಿಶ್ರಮ ಮಾಡಿದ್ದರೂ ದೊಡ್ಡ ದಾರ್ಶನಿಕನೆಂದೂ ಹೆಸರುಗೊಂಡಿದ್ದಾನೆ. ಅಲ್ಲದೆ ಪ್ರಸಿದ್ಧ ವೈದ್ಯನೂ ಆಗಿದ್ದನು. ಇವನ ಪ್ರಕಾರ ಚಲಿಸುವ ಪ್ರತಿ ಯೊಂದಕ್ಕೂ ಒಂದು ಚಾಲಕ ಇದ್ದೇ ಇರಬೇಕು. ಆದರೆ, ಆ ಚಾಲಕ ಅಚಲವಾದದ್ದಾಗಿರಬೇಕು. ಇದನ್ನೇ ಅರಿಸ್ಟಾಟಲಿನ ರೀತಿಯಲ್ಲಿ ಹೇಳುವುದಾದರೆ, ಚಲನವಿರುವ ಪ್ರತಿಯೊಂದಕ್ಕೂ ಅದರಿಂದ ಬೇರೆ ಯಾದ ಒಂದು ಚಾಲಕಮೂಲ ಇದ್ದೇ ಇರಬೇಕು. ಚಲನ ಪದಾ ರ್ಥದ ಗುಣವಲ್ಲ. ಏಕೆಂದರೆ, ಜಡಪದಾರ್ಥಕ್ಕೆ ಚಲನವಿಲ್ಲ. ಚಲ ನಕ್ಕೆ ಹೊರಗಿನ ಕಾರಣ ಇರಲೇಬೇಕು. ಎಲ್ಲ ಚಲನಗಳಿಗೂ-ಆದಿ ಕಾರಣ ಪರವಸ್ತು. ಈ ಪರವಸ್ತು ಸ್ವತಸ್ಸಿದ್ಧ ಮತ್ತು ಸ್ವತಂತ್ರ. ಅರಿ ಸ್ಟಾಟಲಿನ ಪ್ರಕಾರ ದ್ರವ್ಯವೂ ಆದಿಕಾರಣವಾದ ಪರವಸ್ತುವಿನಂತೆಯೇ ಅನಾದಿ. ಆದರೆ, ಇಬ್ನ್‌ಏ-ಮುಸ್ಕೆವಯ್ ಪ್ರಕಾರ ಪರವಸ್ತುವಾದ ದೇವರು ಸೃಷ್ಟಿಯನ್ನು ಬರಿದರಿಂದ ಮೂಡಿಸಿದನು. ದ್ರವ್ಯರೂಪಗಳೆ

ರಡೂ ಅಸತ್ತಿನಿಂದ (ಬರಿದರಿಂದ, ಶೂನ್ಯದಿಂದ) ಬಂದುವು. ಈ ಆದಿ ಕಾರಣನಾದ ದೇವರು ಒಂದನ್ನು ಮಾತ್ರ ಸೃಷ್ಟಿಸಿದನೆಂದೂ, ಈ ಒಂದು ಮತ್ತೊಂದಕ್ಕೆ ಕಾರಣವಾಗಿ ಅದು ಮುಗುದೊಂದಕ್ಕೆ ಕಾರಣ ವಾಗಿ ಹೀಗೆ ಕಾರಣ ಪರಂಪರೆಯಿಂದ ಸೃಷ್ಟಿ ಸಕ್ರಮವಾಗಿ ಹೊಮ್ಮಿ ತೆಂದೂ ವಾದಿಸಿದನು. ಹೀಗೆ ಸೃಷ್ಟಿಯ ಪ್ರತಿಯೊಂದು ಮೆಟ್ಟಲೂ ತನ್ನ ಮೇಲಿನದಕ್ಕಿಂತ ಕಡಮೆ ಕಡಮೆ ಆಧ್ಯಾತ್ಮವೂ ಹೆಚ್ಚು ಹೆಚ್ಚು ಭೌತವೂ ಆಗಿಬರುತ್ತ ಕೊನೆಗೆ ಇಂದ್ರಿಯ ಗೋಚರವಾದ ದ್ರವ್ಯ ಸ್ವರೂಪ ಬರುತ್ತದೆಂದೂ ಪ್ರತಿಪಾದಿಸಿದನು. ದ್ರವ್ಯದ ಮೇಲೆ ಒಂದು ಸಲ ಒಂದು ಪ್ರಭಾವ ಅಥವಾ ಬಿಂಬ ಮಾತ್ರ ಬೀಳಲು ಸಾಧ್ಯ ವೆಂದೂ, ಆತ್ಮದ ಮೇಲೆ ಏಕಕಾಲದಲ್ಲಿ ಅನೇಕ ಪ್ರಭಾವಗಳು ಅಥವಾ ಬಿಂಬಗಳು ಬೀಳುವುದರಿಂದ ಆತ್ಮ ಅಭೌತವೆಂದೂ, ಅಭೌತವಾದ್ದ ರಿಂದ ಅನಾದಿಯೂ ಅಮೃತವೂ ಆದದ್ದೆಂದೂ ಇವನು ವಾದಿಸಿದನು.

ಅಬೂಅಲಿಹುಸೇನ್: ಇವನು ಇಬ್‌ನೆಸೀನ ಅಥವಾ ಅವಿಸಿನ್ನ ಎಂಬ ಹೆಸರಿನಿಂದ ಪ್ರಸಿದ್ಧನಾಗಿದ್ದಾನೆ. ಇವನು ಬುಖಾರದ ಸಮೀ ಪದ ಅಫ್ಷಾನದಲ್ಲಿ ಕ್ರಿ. ಶ. ೯೮೦ ರಲ್ಲಿ ಹುಟ್ಟಿದನು. ಇವನು ಇಬ್‌ನ್ ಏಮುಸ್ಕೆವಯ್ ಫಿರ್ದೂಸಿ, ಅಬೂರಯ್‌ಹಾನ್ ಬಿರೂನಿ, ಮೊದಲಾದ ಪ್ರಸಿದ್ಧ ಪುರುಷರ ಸಮಕಾಲಿಕನು. ಅಬೂ ಅಬ್ದುಲ್ಲನ ತಾಲಿಯಲ್ಲಿ ತರ್ಕ, ಜ್ಯಾಮಿತಿ, ಖಗೋಳಶಾಸ್ತ್ರಗಳನ್ನು ಓದಿದನು. ಇತರ ಶಾಸ್ತ್ರ ಗಳನ್ನೂ ಕೆಲವು ವೇಳೆ ಗುರು ಸಹಾಯದಿಂದಲೂ, ಕೆಲವು ವೇಳೆ ಸ್ವಪ್ರ ಯತ್ನದಿಂದಲೂ ವ್ಯಾಸಂಗಮಾಡಿದನು. ೧೭ನೆಯ ವಯಸ್ಸಿನ ವೇಳೆಗೆ ಇವನ ಹೆಸರು ಎಲ್ಲೆಲ್ಲೂ ಹರಡಿ, ಸಾಮಾನಿ ಸಂತತಿಯ ನೋವಾ ದೊರೆಗೆ ಚಿಕಿತ್ಸೆ ಮಾಡುವುದಕ್ಕಾಗಿ ಇವನನ್ನು ಕರಸಿದರೆಂದೂ, ಇವನು ಹೋಗಿ ಚಿಕಿತ್ಸೆ ಮಾಡಿ ಗುಣಪಡಿಸಿದನೆಂದೂ, ಪ್ರತೀತಿ ಇದೆ. ಅವಿಸಿನ್ನನು ಗುರ್ಗಾನ್, ರಾಯ್, ಹಮದಾನ್, ಇಸ್‌ಫಹಾನ್ ಮೊದಲಾದೆಡೆಯ ಆಸ್ಥಾನಗಳಲ್ಲಿ ಇದ್ದನು. ಈ ನಿರಂಕುಶರಾಜರಿಂದ ಒಮ್ಮೆ ಮನ್ನಣೆಯನ್ನೂ ಒಮ್ಮೆ ಹಿಂಸೆಯನ್ನೂ ಅನುಭವಿಸುತ್ತಿದ್ದನು. ಹಲವು ವೇಳೆ ಗಡೀಪಾರಾಗಿದ್ದನು. ಪೂರ್ವಪಶ್ಚಿಮ ದೇಶಗಳಲ್ಲೆಲ್ಲ

ಪ್ರಸಿದ್ಧಿಗೆ ಬಂದು ಉದ್ ಗ್ರಂಥಗಳನ್ನು ಬರೆದ ಈ ದೊಡ್ಡ ಇರಾನ್ ದಾರ್ಶನಿಕನು ಪ್ರತಿಕ್ಷಣವೂ ತನ್ನ ಸ್ವಾತಂತ್ರ್ಯವನ್ನು ಕಳೆದುಕೊಳ್ಳುವ ಭಯದಿಂದಲೂ ಜೀವ ಭಯದಿಂದಲೂ ಬದುಕನ್ನು ನೂಕಿ ಸುಮಾರು ಕ್ರಿ. ಶ. ೧೦೩೭ ರಲ್ಲಿ ದೈವಾಧೀನನಾದನು. ಹೀಗೆ ತನ್ನ ಜೀವನದ ಬಹುಕಾಲವನ್ನು ಒಡೆಯರ ಊಳಿಗದಲ್ಲಿ, ಗಡೀಪಾರಿನಲ್ಲಿ, ಸೆರೆಯಲ್ಲಿ, ಊರೂರು ಅಲೆಯುವುದರಲ್ಲಿ ಕಳೆದರೂ ದರ್ಶನ, ವೈದ್ಯ ಮೊದಲಾದ ವಿಷಯಗಳ ಮೇಲೆ ಹಲವು ದೊಡ್ಡ ಗ್ರಂಥಗಳನ್ನು ಬರೆದಿದ್ದಾನೆ. ಇವನೂ ಅಲ್‌ಕಿಂದಿ ಫ್ಹಾರಬಿಯರಂತೆ ಹಲವು ಶಿಷ್ಯರನ್ನು ತಯಾರಿಸಿದನು. ಬಹ್‌ಮನ್‌ಯಾರ್, ಅಬುಲ್‌ಮಾಮೂನ್, ಇಸ್‌ಫ್ಹಹಾನಿ, ಮಾಸೂಮಿ ಅಬುಲ್‌ಅಬ್ಬಾಸ್-ಇಬ್‌ನೆತಾಹೆರ್ ಮೊದಲಾದವರು ಇವರಲ್ಲಿ ಮುಖ್ಯರು.

ಇವನ ಗ್ರಂಥಗಳು :—'ಷಫ್ಹ' ಎಂಬ ೧೮ ಸಂಪುಟಗಳ ದೊಡ್ಡ ಗ್ರಂಥ ದರ್ಶನಶಾಸ್ತ್ರದ ಒಂದು ಬೃಹತ್‌ಕೋಶವೆನ್ನಬಹುದು. ಇದನ್ನು ೨೦ ತಿಂಗಳುಗಳಲ್ಲಿ ಮುಗಿಸಿದನಂತೆ. ಇದು ಮುಸ್ಲಿಂ ವಿದ್ವಾಂಸರಲ್ಲಿಯೂ, ಯೂರೋಪ್ ವಿದ್ವಾಂಸರಲ್ಲಿಯೂ ಪ್ರಮಾಣಗ್ರಂಥವೆಂದು ಅಂಗೀಕೃತವಾಗಿದೆ. ಈ ದೊಡ್ಡ ಗ್ರಂಥವನ್ನೇ ನಜಾತ್ ಎಂಬ ಹೆಸರಿನಿಂದ ಸಂಗ್ರಹಮಾಡಿ ಬರೆದಿದ್ದಾನೆ. "ಕಾನೂನ್" ಎಂಬ ಇವನ ವೈದ್ಯ ಗ್ರಂಥ ಲ್ಯಾಟಿನ್ನಿಗೂ ಭಾಷಾಂತರವಾಗಿದೆ. ಇದು ೧೭ನೆಯ ಶತಮಾನದ ಮಧ್ಯದವರೆಗೆ ಅರಬ್ಬೀ ವೈದ್ಯದ ಪಾಠಗ್ರಂಥವಾಗಿತ್ತು. ಪೂರ್ವದೇಶಗಳಲ್ಲಿ ಈಗಲೂ ಇದನ್ನು ಯುನಾನಿ ವೈದ್ಯವಿದ್ಯಾರ್ಥಿಗಳು ಓದುತ್ತಾರೆ. ಇದಲ್ಲದೆ 'ಸದ್‌ದಿಯ' ಎಂಬ ಹೆಸರಿನ ಐದು ಸಂಪುಟಗಳ ಮತ್ತೊಂದು ವೈದ್ಯಗ್ರಂಥವನ್ನೂ ಬರೆದಿದ್ದಾನೆ. ತರ್ಕಶಾಸ್ತ್ರವೊಂದನ್ನು ಬರೆದು ಅಬುಲ್‌ಹಸನ್ ಸಹಲಿಗೆ ಅರ್ಪಣೆ ಮಾಡಿದ್ದಾನೆ. 'ಮೋಜೆಜ್ ಕಬೀರ್' ಮತ್ತು 'ಸಗೀರ್' ಎಂಬ ತರ್ಕಗ್ರಂಥವನ್ನೂ ಬರೆದಿದ್ದಾನೆ. 'ಉಯೂನ್-ಉಲ್-ಹಿಕ್‌ಮತ್' ಎಂಬ ಹತ್ತು ಸಂಪುಟಗಳ ದರ್ಶನಶಾಸ್ತ್ರವನ್ನು ಬರೆದಿದ್ದಾನೆ. ಐದು ಸಂಪುಟಗಳ ಅರಬ್ಬಿ ನಿಘಂಟೊಂದನ್ನು ತಯಾರಿಸಿದ್ದಾನೆ. ಈ ಅರಬ್ಬೀ ಗ್ರಂಥ

ಗಳಲ್ಲದೆ ಇರಾನಿಯನ್ ಭಾಷೆಯಲ್ಲಿ ದಾನಿಷ್‌ನಾಮೆಹ್ ಎಂಬ ದರ್ಶನಗ್ರಂಥವನ್ನು ಬರೆದಿದ್ದಾನೆ. ನಾನಾಶಾಸ್ತ್ರ, ಸಂಗೀತ—ಮೊದಲಾದ ವಿಷಯಗಳ ಮೇಲೆ ಇವನ ಗ್ರಂಥಗಳು ಹಲವಿವೆ. ಇವನ ತರ್ಕರೀತಿ ಫ್ಲಾರಾಬಿ ಮತ್ತು ರಾಸ್ಟಿಗಳ ರೀತಿಗಳಿಗಿಂತ ಮೇಲಾದದ್ದೆಂದು ತಿಳಿಯುತ್ತಾರೆ. ಫ್ಲಾರಾಬಿ ಸಾಮಾನ್ಯದಿಂದ ವಿಶೇಷವನ್ನೂ, ರಾಸ್ಟಿ ವಿಶೇಷದಿಂದ ಸಾಮಾನ್ಯವನ್ನೂ ಅನುಮಾನಿಸುವ ಪದ್ಧತಿಯನ್ನು ಅನುಸರಿಸಿದರು. ಆದರೆ, ಅವಿಸಿನ್ನನು ಸಮುಯೋಚಿತವಾಗಿ ಈ ಎರಡು ಪದ್ಧತಿಗಳನ್ನೂ ಜೋಡಿಸಿ ಒಂದು ಹೊಸ ಪದ್ಧತಿಯನ್ನೇ ಪ್ರಚಾರಕ್ಕೆ ತಂದನೆನ್ನಬಹುದು. ಇವನು ತರ್ಕಶಾಸ್ತ್ರ ಇತರ ಕಲಾ ಶಾಸ್ತ್ರಗಳಿಗೂ ದರ್ಶನಶಾಸ್ತ್ರಕ್ಕೂ ಪ್ರವೇಶಿಕೆ ಎಂದು ಎಣಿಸಿದ್ದನು. ಇವನು ತರ್ಕದಲ್ಲಿ ಪದ ಪದಾರ್ಥಗಳ ಲಕ್ಷಣ ನಿರ್ದೇಶಕ್ಕೆ ಬಹು ಗಮನಕೊಟ್ಟು, ನಿಷ್ಕೃಷ್ಟ ಲಕ್ಷಣ ನಿರ್ದೇಶವೇ ಋಜುತರ್ಕಕ್ಕೆ ಅಡಿಗಲ್ಲೆಂದು ಭಾವಿಸಿದ್ದನು.

ಇವನು ತನ್ನ ದರ್ಶನ ಗ್ರಂಥಗಳಲ್ಲಿ ಜ್ಞಾನ ಮತ್ತು ಅದರ ಮೂಲ; ಪ್ರಯೋಗ ಪರೀಕ್ಷೆ; ವಿಶೇಷ ಸಾಮಾನ್ಯ ಅನುಮಾನ (ಅನುಗಮ) (ಇನ್‌ಡಕ್‌ಷನ್); ಸಾಮಾನ್ಯ ವಿಶೇಷ ಅನುಮಾನ (ನಿರ್ಗಮ) (ಡಿಡಕ್‌ಷನ್); ದ್ರವ್ಯ; ಶಕ್ತಿ; ಕಾರಣ, ಕಾರ್ಯ, ಮತ್ತು ಅವುಗಳ ಪರಸ್ಪರ ಸಂಬಂಧ; ಪ್ರಧಾನ ಮತ್ತು ಗೌಣ; ಸಾಮಾನ್ಯ ಮತ್ತು ವಿಶೇಷ; ಆದಿಕಾರಣ; ವಿಶ್ವದ ಏಕತೆ; ಜೀವಾತ್ಮಕ್ಕೂ ಪರಮಾತ್ಮಕ್ಕೂ ಇರುವ ಸಂಬಂಧ; ಜೀವಾತ್ಮದ ಅಮರತ್ವ; ಭವಿಷ್ಯ ಜೀವನ; ಭವಿಷ್ಯ ಜ್ಞಾನಿ (ಪೈಗಂಬರ್)—ಇವೇ ಮೊದಲಾದ ವಿಷಯಗಳನ್ನು ಕುರಿತು ಬರೆದಿದ್ದಾನೆ.

ಸೃಷ್ಟಿಯನ್ನು ಸಮಗ್ರ ದೃಷ್ಟಿಯಲ್ಲಿ ನೋಡಿ ಒಂದು ವಸ್ತು ಎಂದು ಭಾವಿಸಿದರೆ ಅದರ ಅಸ್ತಿತ್ವ ನೈಜವಲ್ಲ; ಹೊರಗಿನಿಂದ ಬಂದದ್ದು. ಸರ್ವ ಅಸ್ತಿತ್ವಕ್ಕೂ ಮೂಲವಾದ ದೇವರಿಂದ ವಿಶ್ವಕ್ಕೆ ಜೀವಚೈತನ್ಯ ಹರಿದು ಬರುತ್ತದೆ. ವಿಶ್ವಸೃಷ್ಟಿ ಒಂದು ನದಿ ಇದ್ದ ಹಾಗೆ. ಪ್ರತಿಯೊಂದು ಹನಿಯನ್ನೂ ಬೇರೆಮಾಡಿ ತಡೆದಿಟ್ಟರೆ ನದಿಯೇ

ಬತ್ತಿ ಹೋಗುತ್ತದೆ. ಹೀಗೆಯೇ, ಸೃಷ್ಟಿಯು ಬೇರೆಬೇರೆ ವಸ್ತುಗಳು ಕ್ಷಣಿಕವಾಗಿದ್ದು, ಅವುಗಳ ತೆರವಿಲ್ಲದ ಹರಿತ ಮಾತ್ರ ನಮಗೆ ಕಂಡು ಬರುತ್ತದೆ.

ಇಬ್ನ್‌ಸಿನನೂ ಒಂದು ಒಂದನ್ನೇ ಉತ್ಪನ್ನಮಾಡುತ್ತದೆ ಎಂಬ ತತ್ವದವನು. ಆದ್ದರಿಂದ, ಆದಿಕಾರಣದಿಂದ ದ್ರವ್ಯ ಮತ್ತು ರೂಪ ಎರಡೂ ಬರಲಿಲ್ಲ. ದ್ರವ್ಯಕ್ಕೆ ರೂಪವಿಲ್ಲ. ಆದಿಮೂರ್ತಿಯಾದ ದೇವರು ಶುದ್ಧಬುದ್ಧಿಯನ್ನು ಉತ್ಪನ್ನಮಾಡಿದನು. ಇದರಿಂದ ಅದ್ವೈತ ವಾದ ಆದಿಕಾರಣ ದ್ವೈತವಾಗಿ ಪರಿಣಮಿಸಿತು. ಆದರೂ ಈ ದ್ವೈತ ಭಾವದಿಂದ ಆದಿಕಾರಣ ಕೊಂಚವೂ ವ್ಯತ್ಯಸ್ತವಾಗಲಿಲ್ಲ. ಕ್ರಮೇಣ, ಈ ದ್ವೈತ ಬಹುತ್ವವನ್ನು ತಾಳಿತು. ಮೊದಲು ಕಲ್ಲು, ಕಲ್ಲಿನಿಂದ ಗಿಡ, ಗಿಡದಿಂದ ಪ್ರಾಣಿ, ತರುವಾಯ ಮನುಷ್ಯ—ಈ ರೀತಿ ಮನುಷ್ಯನು ಜನ್ಮ ಪಡೆದನು. ಈ ಕೆಳ ಜನ್ಮಗಳಲ್ಲದೆ ಇವನಿಗೆ ಇನ್ನೂ ಮೇಲಿನ ಜನ್ಮಗಳೂ ಇವೆ.

ಇಬ್ನ್‌ಸಿನನ ಪ್ರಕಾರ ಈ ಪರಿಣಾಮ ಸೌಂದರ್ಯೋಪಾಸನೆಯ ಫಲ. ಸೌಂದರ್ಯೋಪಾಸನೆ ಎಂದರೆ–ಪರಿಪೂರ್ಣತೆಯ ಸಾಧನೆ. ವಸ್ತುಗಳು ಪೂರ್ಣ ಅಥವಾ ಅಪೂರ್ಣವಾಗಿದ್ದು, ಅಪೂರ್ಣವಾದದ್ದು ಪೂರ್ಣತ್ವಪಡೆಯಲು ಶ್ರಮಿಸುತ್ತದೆ. ಇದರಲ್ಲಿ ಅಪೂರ್ಣವಾದದ್ದು ಪೂರ್ಣವಾದದ್ದರ ನೆರವನ್ನು ಪಡೆಯುತ್ತದೆ. ಈ ಪೂರ್ಣತ್ವಸಾಧನೆಯೇ ಪ್ರೇಮ ಎಂಬುದು. ವಿಶ್ವವೆಲ್ಲ ಈ ಪ್ರೇಮದಿಂದ ಪರಸೌಂದರ್ಯವಾದ ದೇವರ ಕಡೆಗೆ ಎಳೆಯುತ್ತದೆ. ಅನಸ್ತಿತ್ವ ಒಬ್ಬರಿಗೂ ಬೇಡ. ಪ್ರತಿಯೊಬ್ಬರಿಗೂ ನಿರಂತರವೂ ಪರಿಪೂರ್ಣವೂ ಆದ ಶಾಶ್ವತ ಅಸ್ತಿತ್ವ ಬೇಕು. ಇದನ್ನು ಸಾಧಿಸುವುದಕ್ಕೆ ಪ್ರೇಮವೇ ಸಾಧನ. ಇವನ ಪರಿಣಾಮವಾದದ ಪ್ರಕಾರ ಆತ್ಮ ತನ್ನ ಅವಸ್ಥಾನುಗುಣವಾಗಿ ವಿಕಾಸ ತೋರಿಸುತ್ತದೆ. ಬಹು ಸುಲಭರೂಪದ್ದೂ ಕಡಮೆಯದೂ ಆದ ಅವಸ್ಥೆ ಖನಿಜಾವಸ್ಥೆ; ಸಸ್ಯಾವಸ್ಥೆ ತರುವಾಯದ್ದು; ಇದರಲ್ಲಿ ಜೀವನದ ಮೂಲಲಕ್ಷಣಗಳಾದ ಆಹಾರಸ್ವೀಕಾರ, ಬೆಳವಣಿಗೆ, ಸಂತಾನೋತ್ಪತ್ತಿ—ಮಾತ್ರ ಕಂಡುಬರುತ್ತವೆ. ಇದಕ್ಕೆ ಮೇಲಿನ ಅವಸ್ಥೆಯಾದ

ಪ್ರಾಣಿಜೀವನದಲ್ಲಿ ಇವುಗಳ ಜತೆಗೆ ಗ್ರಹಣಶಕ್ತಿ (ವೇದನೆ) ಮತ್ತು ಇಚ್ಛಾಶಕ್ತಿಗಳು ಕಂಡುಬರುತ್ತವೆ. ಇದಕ್ಕೂ ಮೇಲಾದ ಮನುಷ್ಯನಲ್ಲಿ ಬುದ್ಧಿ ಕಂಡುಬರುತ್ತದೆ. ಈ ಬುದ್ಧ್ಯಾತ್ಮಕ ಆತ್ಮ ಅಭೌತವಾಗಿದ್ದು ಆದಿಕಾರಣವಾದ ದಿವ್ಯಮೂಲದಿಂದ ಬಂದದ್ದು. ಈ ಆತ್ಮ ಮೇಲು ಮೇಲಕ್ಕೇರಿ ಪರಿಪೂರ್ಣತೆಯನ್ನು ಪಡೆದಂತೆಲ್ಲ ದಿವ್ಯಜ್ಞಾನಿಗಳ (ಪೈಗಂಬರ್) ಮತ್ತು ದೇವದೂತರ ಅವಸ್ಥೆ ಬರುತ್ತದೆ. ಈ ಪರಿಣಾಮದಲ್ಲಿ ಕೊನೆಯ ಅವಸ್ಥೆ ಆತ್ಮ ತನ್ನ ಮೂಲವಾದ ಭಗವಂತನಲ್ಲಿ ಮತ್ತೆ ಐಕ್ಯಹೊಂದುವುದು.

ಒಬ್ಬೊಬ್ಬ ಘನ ವಿದ್ವಾಂಸನೂ ಪ್ರತ್ಯೇಕವಾಗಿ ಗ್ರಂಥಗಳನ್ನು ಬರೆದಿರುವುದಲ್ಲದೆ, ಹಲವರು ಒಟ್ಟಿಗೆ ಸೇರಿ ಗ್ರಂಥ ನಿರ್ಮಾಣಮಾಡಿರುವುದೂ ಉಂಟು. ಇಂಥ ಗ್ರಂಥಗಳಲ್ಲಿ "ಅಕ್‌ವಾನ್ ಉಸ್‌ಸಫ್ಷ" ಎಂಬ ಹೆಸರಿನ ೫೧ ಭಾಗಗಳುಳ್ಳ ಗ್ರಂಥವೊಂದು. ಇದನ್ನು ಶಾಸ್ತ್ರ ಮತ್ತು ದರ್ಶನಗಳ ಬೃಹತ್ ಕೋಶ ಎನ್ನಬಹುದು. ಇದನ್ನು ಹಲವು ಇರಾನ್ ವಿದ್ವಾಂಸರು ಕಲೆತು ಬರೆದರು. ಇದರಲ್ಲಿ ಕೆಲವರ ಹೆಸರು (ಸ್ಥಯದ್, ಅಬೂಸುಲೇಮಾನ್ ಮಹಮ್ಮದ್ ಅಲಿ, ಅಬೂ ಅಹ್‌ಮದ್ ಮೆಹ್‌ರೆಗಾನಿ, ಅವ್‌ಫ಼ಿ) ತಿಳಿದಿದೆ, ಮತ್ತೆ ಕೆಲವರದು ತಿಳಿದಿಲ್ಲ. ಈ ಗ್ರಂಥದಲ್ಲಿ ಹೊಸ ವಿಷಯ ಯಾವುದೂ ಪ್ರತಿಪಾದಿತವಾಗಿಲ್ಲ. ಆದರೆ, ಆ ಕಾಲದ ಅಭಿಪ್ರಾಯಗಳನ್ನೆಲ್ಲ ಕ್ರೋಡೀಕರಿಸಿ ಬರೆದಿದೆ. ಅವರ ಅಧ್ಯಾತ್ಮಶಾಸ್ತ್ರ, ದೇವತಾಶಾಸ್ತ್ರ, ಮನಶ್ಶಾಸ್ತ್ರ, ಮೊದಲಾದುವು ನವೀನ ಪ್ಲೇಟೊ ತತ್ವಗಳನ್ನು ಹೋಲುತ್ತವೆ. ಆದರೆ, ನೀತಿಶಾಸ್ತ್ರ ಹಿಂದೂ, ಇರಾನಿಯನ್ ಮತ್ತು ಅರೇಬಿಯನ್ ನಡೆವಳಿಗಳನ್ನೂ ಸಂಪ್ರದಾಯವನ್ನೂ ಕ್ರೋಡೀಕರಿಸಿ, ಗ್ರೀಕ್ ಮಾದರಿಯ ಮೇಲೆ ವಿಂಗಡಿಸಿದೆ.

ಈ ಗ್ರಂಥದಿಂದ ಸಂಗ್ರಹಿಸಬಹುದಾದ ವಿಷಯವೆಂದರೆ—ವಿಶ್ವ ದೇವರಿಂದ ನೇರವಾಗಿ ಬಂದದ್ದಲ್ಲ. ದೇವರ ಪ್ರಥಮ ಸೃಷ್ಟಿ ಬುದ್ಧಿ. ಈ ಬುದ್ಧಿಯಿಂದ ವಿಶ್ವಾತ್ಮವೂ (ನಫ್ಷ್‌ಸಿಕುಲ್), ವಿಶ್ವಾತ್ಮದಿಂದ ಆದಿ ದ್ರವ್ಯವೂ (ಹಯುಲ) ಬಂದುವು. ಈ ಆದಿ ದ್ರವ್ಯವೇ ಆಕಾರ ತಾಳುವ ಸ್ಥಿತಿಪಡೆದರೆ ದ್ವಿತೀಯ ದ್ರವ್ಯ ಎನಿಸುತ್ತದೆ. ವಿಶ್ವ ಈ ದ್ವಿತೀಯ

ದ್ರವ್ಯದಿಂದ ಸೃಷ್ಟಿಯಾಯಿತು. ದ್ರವ್ಯಕ್ಕೂ ಆತ್ಮಕ್ಕೂ ಇರುವ ಸಂಬಂಧ ಶಾಶ್ವತವಲ್ಲ, ತಾತ್ಕಾಲಿಕ ಮಾತ್ರ. ಈ ಸಂಬಂಧ ಹರಿದು ಆತ್ಮ ಬಿಡುಗಡೆ ಹೊಂದುವುದೇ ಮುಕ್ತಿ. ಪ್ರತಿಯೊಂದು ಜೀವಾತ್ಮವೂ ವಿಶ್ವಾತ್ಮದ ಒಂದು ಭಾಗ. ಪ್ರತಿಯೊಂದೂ ಪರಿಶುದ್ಧವಾದಮೇಲೆ ವಿಶ್ವಾತ್ಮದಲ್ಲಿ ಐಕ್ಯ ಹೊಂದುತ್ತದೆ. ಹೀಗೆ ಪೃಥಕ್ ಆತ್ಮಗಳು ಐಕ್ಯ ಹೊಂದಿದ ವಿಶ್ವಾತ್ಮ ಪುನರುತ್ಥಾನ ದಿನದಲ್ಲಿ ದೇವರನ್ನು ಹೋಗಿ ಸೇರುತ್ತದೆ. ಹೀಗೆ, ಪ್ರತ್ಯೇಕ ವ್ಯಕ್ತಿಗಳ ಸಾವು ಆತ್ಮ ದೇವರನ್ನು ಸೇರುವುದರಲ್ಲಿ ಇಡುವ ಮೊದಲನೆಯ ಚಿಕ್ಕ ಹೆಜ್ಜೆ. ವಿಶ್ವಾತ್ಮದ ಸಾವು ಆತ್ಮ ದೇವರನ್ನು ಸೇರುವುದರಲ್ಲಿ ಎರಡನೆಯ, ಕೊನೆಯ, ದೊಡ್ಡ ಹೆಜ್ಜೆ.

ಮುಸ್ಲಿಂ ದರ್ಶನದ ಸ್ವರ್ಣಯುಗವೆಂದರೆ ೧೦ ರಿಂದ ೧೪ನೆಯ ಶತಮಾನಗಳವರೆಗಿನ ಕಾಲ. ೧೧-೧೨ನೆಯ ಶತಮಾನಗಳಲ್ಲಿ ಇಬ್ನ್-ಸಿನ, ಅಬುರಯ್‌ಹಾನ್ ಅಲ್ ಬೆರೂನಿ—ಮೊದಲಾದವರೂ; ಇವರ ನಂತರ ಇಬ್ನ್ ಎಫ್ಹಾಲಿಕ್, ಜಮಕ್‌ಷರಿ, ಉಮರ್ ಖಯ್ಯಾಮ್, ಇಮಾಮ್ ಘಸ್ಸಾಲಿ, ನಾಸಿರ್‌ಖುಸ್ರೊ, ಷಹರಸ್ತಾನಿ, ಇಬ್ನ್‌ಎಬಾಜ್ಜಾ, ಇಬ್ನ್-ಎ-ತುಫೈಲ್, ಷಹಾಬುದ್ದೀನ್ ಸುಹ್ರವರ್ದಿ, ಇಬ್ನ್ ಉರ್‌ರುಷ್ದ್—ಮೊದಲಾದವರೂ ಆಗಿ ಹೋದರು. ಇವರಲ್ಲಿ ಕೊನೆಯ ನಾಲ್ವರನ್ನು ಕುರಿತು ಕೊಂಚ ಹೇಳಬಹುದು.

ಅಬೂಬಕರ್ ಇಬ್ನ್‌ಎಬಾಜ್ಜ (ಸ. ಕ್ರಿ.ಶ. ೧೧೩೮) ಯೂರೋಪಿನಲ್ಲಿ ಅವೆಂಪೇಸ್ ಎಂಬ ಹೆಸರಿನಿಂದ ಬಳಕೆಯಾಗಿದ್ದಾನೆ. ಇವನು ಸ್ಪೈಯಿನ್ ದೇಶದ ದೊಡ್ಡ ಮುಸ್ಲಿಂ ತಾತ್ವಿಕರಲ್ಲಿ ಒಬ್ಬನು. ಅರಿಸ್ಟಾಟಲಿನ ಭೌತಶಾಸ್ತ್ರದ ಮೇಲೆ ವ್ಯಾಖ್ಯಾನಗಳನ್ನೂ, ಗಣಿತ ಶಾಸ್ತ್ರದಮೇಲೆ ಸ್ವತಂತ್ರ ಗ್ರಂಥವನ್ನೂ, "ಸಂನ್ಯಾಸಿಯ ಮಾರ್ಗದರ್ಶಿ" ಎಂಬ ಗ್ರಂಥವನ್ನೂ ಬರೆದಿದ್ದಾನೆ. "ಪ್ರತ್ಯೇಕ ವಸ್ತು ತತ್ವ"ವನ್ನು (ಸೆಪರೆಟ್ ಸಬ್‌ಸ್ಟೆನ್‌ಸಸ್) ಪ್ರತಿಪಾದಿಸಿದವನೆಂದು ಇವನು ಯೂರೋಪಿನ ವ್ಯಾಖ್ಯಾತಾರರಲ್ಲಿ (ಸ್ಕೊಲಾಸ್ಟಿಕ್‌ಸ್) ಪ್ರಸಿದ್ಧನಾಗಿದ್ದಾನೆ. "ಪ್ರತ್ಯೇಕ ವಸ್ತುತತ್ವ" ಎಂದರೆ ಇವನ ಅರ್ಥ—ಮೂರ್ತ ವಸ್ತುಗಳ ಜ್ಞಾನದಿಂದ

ಅಮೂರ್ತ ವಸ್ತುಗಳ ಜ್ಞಾನಪಡೆಯಬಹುದು ಎಂಬುದು. ಇವನು ಫ್ಲಾರಾಬಿಯಂತೆ ಆನಂದಪರವಶತೆಯಲ್ಲಿ ನಂಬದೆ, ತನ್ನ ಅನುಭಾವ ತತ್ವಕ್ಕೆ ಪ್ರಾಪಂಚಿಕ ಸುಖತ್ಯಾಗವನ್ನು ಅಡಿಗಲ್ಲಾಗಿ ಮಾಡಿದನು. ಪರಮಾತ್ಮನಲ್ಲಿ ಐಕ್ಯ (ಇತ್ತಿಸಾಲ್) ಹೊಂದುವುದಕ್ಕೆ ಭಕ್ತಿ, ಜ್ಞಾನ, ಕರ್ಮ, ತಪಸ್ಸು—ಮೊದಲಾದ ಹಲವು ದಾರಿಗಳುಂಟು. ಫ್ಲಾರಾಬಿ ಭಕ್ತಿಮಾರ್ಗವನ್ನು ಹಿಡಿದು ಆನಂದಪರವಶತೆ ಮತ್ತು ಧ್ಯಾನವೇ ಉತ್ತಮ ಸಾಧನವೆಂದು ನಂಬಿದ್ದನು. ಇಬ್‌ನ್‌ಎಬಾಜ್ಜನು ತಾಪಸ ಜೀವನವೇ ಉತ್ತಮ ಸಾಧನವೆಂದು ಅನುಸರಿಸಿದನು.

ಇಬ್‌ನ್‌ಎತುಫ್ಲಯ್‌ಲ್ ಎಂಬ ಹೆಸರಿನಿಂದ ಬಳಕೆಯಾಗಿರುವ ಅಬೂಬೇಕ್‌ರ್ ಮುಹಮ್ಮದ್ (ಕ್ರಿ.ಶ. ೧೧೦೬-೮೫) ಗ್ರಾನಡ ಸಮೀಪದಲ್ಲಿ ಹುಟ್ಟಿದವನು. ಇವನು ಪ್ರಸಿದ್ಧ ದಾರ್ಶನಿಕನೇ ಅಲ್ಲದೆ ಗಣಿತಜ್ಞನೂ ವೈದ್ಯನೂ ಕವಿಯೂ ಆಗಿದ್ದನು. ಇವನ ಪ್ರಸಿದ್ಧ ಗ್ರಂಥ 'ಹಯ್‌ಯ್ಯಿಕ್‌ಸ್ಲಾನ್' ಕಥೆ. ಈ ಕಥೆಯಲ್ಲಿ ದರ್ಶನ ತತ್ವವನ್ನು ನಿರೂಪಿಸ ತೊಡಗಿದ್ದಾನೆ. ಇದರಲ್ಲಿ ಇವನ ಆಶಯ ಮನುಷ್ಯನು ತನ್ನ ಬುದ್ಧಿ ಬಲದಿಂದ ತನ್ನನ್ನು ತಾನು ಅರಿತುಕೊಳ್ಳಬಹುದೆಂಬುದನ್ನೂ ಸುತ್ತುಮುತ್ತಲಿನ ಪ್ರಕೃತಿಯನ್ನು ನೋಡಿ ಸೃಷ್ಟಿ ರಹಸ್ಯವನ್ನು ತಿಳಿದು ಶಾಸ್ತ್ರ, ಗುರು, ಮತ, ಧರ್ಮ—ಯಾವುದೂ ಇಲ್ಲದೆಯೇ ಪರಿಪೂರ್ಣತೆಯನ್ನು ಹೊಂದಿ ಮುಕ್ತನಾಗಬಹುದೆಂಬುದನ್ನೂ ತೋರಿಸುವುದೆ.

ಕಥಾ ಸಾರಾಂಶವೇನೆಂದರೆ—ದ್ವೀಪವೊಂದರಲ್ಲಿ ಹುಡುಗನೊಬ್ಬನು ಒಬ್ಬೊಂಟಿಗನಾಗಿ ಸಿಕ್ಕಿಕೊಂಡು ಒಂದು ಜಿಂಕೆಯ ಕೈಯಲ್ಲಿ ಬೆಳೆಯುತ್ತಾನೆ. ವಯಸ್ಸಾದಮೇಲೆ ತನ್ನ ಸುತ್ತುಮುತ್ತಲಿರುವುದನ್ನು ತಿಳಿಯಬೇಕೆಂದು ಪ್ರಬಲವಾದ ಇಚ್ಛೆ ಹುಟ್ಟುತ್ತದೆ. ಮೃಗಗಳಿಗೆ ಸಹಜವಾದ ಹೊದಕೆಯೂ, ರಕ್ಷಣ ಸಲಕರಣೆಗಳೂ ಇರುವುದನ್ನೂ, ತಾನು ಬತ್ತಲೆಯೂ ನಿರಾಯುಧನೂ ಆಗಿರುವುದನ್ನೂ ನೋಡಿ ಎಲೆ, ತೊಗಲು—ಮೊದಲಾದುವನ್ನು ಹೊದೆಯುವುದನ್ನೂ, ಕೋಲು ಉಪಯೋಗಿಸುವುದನ್ನೂ ಕಲಿತುಕೊಂಡು, ಕ್ರಮೇಣ ಜೀವನಕ್ಕೆ ಆವಶ್ಯಕ

ವಾದ ಜಿಂಕೆಯ ಉಪಯೋಗವನ್ನು ತಿಳಿದುಕೊಳ್ಳುತ್ತಾನೆ. ಗುಡಿಸಲು ಕಟ್ಟಿಕೊಂಡು ನೆಯ್ಗೆ ಕಲಿತು ಬದುಕು ನಡಸುತ್ತಾನೆ. ಕಾಲಕ್ರಮದಲ್ಲಿ ಅವನನ್ನು ಸಾಕಿದ ಜಿಂಕೆ ಮುದಿಯಾಗಿ ಸಾಯುತ್ತದೆ. ಮನುಷ್ಯನ ರಹಸ್ಯಭೇದಿಯಾದ ಬುದ್ಧಿ ಜೀವ ಮರಣದ ಈ ವ್ಯತ್ಯಾಸವನ್ನು ತಿಳಿಯಲು ಕುತೂಹಲಿಯಾಗಿ ಪ್ರಾಣಿಯ ಮೈ ಬಿಚ್ಚುವಂತೆ ಅವನನ್ನು ಪ್ರೇರಿಸುತ್ತದೆ. ಅವನು ಅದರ ಮೈ ಬಿಚ್ಚಿ ಒಳಗಿನ ಭಾಗಗಳನ್ನೆಲ್ಲ ಪರೀಕ್ಷಿಸಿ ಹೃದಯ ದೇಹದ ಕೇಂದ್ರಾಂಗ ಎಂದು ನಿರ್ಧರಿಸುತ್ತಾನೆ. ಕ್ರಮೇಣ ತನ್ನ ದ್ವೀಪದಲ್ಲಿಯ ಸಸ್ಯ, ಪ್ರಾಣಿ, ಖನಿಜಗಳನ್ನು ತಿಳಿದು, ಪ್ರಾಣಿಗಳ ಧ್ವನಿಯನ್ನೂ ನುಡಿಯಲ್ಲಿ ಅನುಕರಿಸುತ್ತಾನೆ. ಅಲ್ಲದೆ, ಈ ವೈವಿಧ್ಯಗಳಲ್ಲಿ ಒಂದು ಸಾಮರಸ್ಯವನ್ನೂ ಏಕತೆಯನ್ನೂ ಕಂಡುಕೊಳ್ಳುತ್ತಾನೆ. ಕೊನೆಗೆ, ಈ ವೈವಿಧ್ಯಗಳ ಹಿಂದೆ ಗೂಢವೂ ಅದೃಶ್ಯವೂ ಆದ ಶಕ್ತಿಯೊಂದು ಇದೆಯೆಂದು ತಿಳಿದು, ಆ ಶಕ್ತಿಯನ್ನು ಆದಿ ಕಾರಣ ಅಥವಾ ಸೃಷ್ಟಿಕರ್ತೃ ಎಂದು ಕರೆಯುತ್ತಾನೆ. ಕ್ರಮೇಣ ಹೊರ ನೋಟವನ್ನು ತನ್ನೊಳಕ್ಕೆ ತಿರುಗಿಸಿಕೊಂಡು ಧ್ಯಾನ ಮಗ್ನನಾಗಿ ತನ್ನನ್ನು ತಾನು ಅರಿತುಕೊಳ್ಳುತ್ತಾನೆ. ಸೃಷ್ಟಿಯ ಮರ್ಮವನ್ನು ಅರಿತಮೇಲೆ ತನ್ನ ನಡೆವಳಿಯನ್ನು ತಿದ್ದಿಕೊಂಡು, ಪ್ರಾಣಿಗಳನ್ನು ಕೊಲ್ಲುವುದನ್ನು ಬಿಟ್ಟು ಗೆಡ್ಡೆಗೆಣಸುಗಳನ್ನೂ, ಕಾಯಿಕರಿಗಳನ್ನೂ ತಿಂದು ಜೀವಿಸುತ್ತಾನೆ. ಪ್ರಕೃತಿ ವಿಮರ್ಶಕನು ಹೋಗಿ ಆತ್ಮಾನ್ವೇಷಿ ಆಗುತ್ತಾನೆ. ವಿಶ್ವವೆಲ್ಲ ಒಬ್ಬನೇ ದೇವರ ಪ್ರತಿಬಿಂಬವೆಂದು ಕಂಡರಿತು, ಆ ಜ್ಞಾನಪರವಶತೆಯಲ್ಲಿ ಆನಂದ ಸವಿಯುತ್ತಿರುತ್ತಾನೆ.

ಹೀಗಿರಲು ಒಂದು ದಿನ ಪಕ್ಕದ ದ್ವೀಪದಲ್ಲಿದ್ದ ಅಸಲ್ ಎಂಬ ಮತ್ತೊಬ್ಬ ವಿದ್ವಾಂಸನು ಈ ದ್ವೀಪಕ್ಕೆ ಬಂದು ಇವನನ್ನು ಕಂಡು ಇವನಿಗೆ ತನ್ನ ನುಡಿಯನ್ನು ಕಲಿಸುತ್ತಾನೆ. ತರುವಾಯ ಇಬ್ಬರೂ ತಮ್ಮ ತಮ್ಮ ಅನುಭವಗಳನ್ನು ಹೋಲಿಸಿ ನೋಡಿಕೊಂಡಾಗ, ಪ್ರಕೃತಿ ಉಪಾಸಕನಾದ ಹಯ್ಯ್ ಮತ್ತು ತಾತ್ವಿಕನಾದ ಅಸಲ್ ಇಬ್ಬರೂ ಒಂದೇ ಗುರಿಮುಟ್ಟಿದ್ದು ಕಂಡುಬರುತ್ತದೆ. ಈ ರೀತಿಯಲ್ಲಿ, ಈ ಕಥೆಗಾರನು ದಿವ್ಯದರ್ಶನ ಲಬ್ಧವಾದ ಮತಧರ್ಮ ಯಾವುದೂ ಇಲ್ಲದೆಯೇ

ಅಂತರ್ಜ್ಯೋತಿಯಿಂದಲೂ ಸಂಯಮದಿಂದಲೂ ದಿವ್ಯಜ್ಞಾನಪಡೆದು ಮುಕ್ತನಾಗಬಹುದೆಂಬುದನ್ನು ತೋರಿಸುತ್ತಾನೆ. ಅಲ್ಲದೆ, ದರ್ಶನ, ಮತಧರ್ಮ ಮತ್ತು ನೈಸರ್ಗಿಕ ಸರಳಜೀವನ—ಇವು ಮೂರಕ್ಕೂ ಪರಸ್ಪರ ವಿರೋಧವಿಲ್ಲದೆ ಮೂರೂ ಒಂದೇ ಆಗಿವೆ ಎಂಬುದನ್ನೂ ಸೂಚಿಸಿದ್ದಾನೆ.

ಷಹಬುದ್ದೀನ್ ಸುಹ್ರವರ್ದಿ:—(ಹು. ಕ್ರಿ. ಶ. ೧೧೫೩). ಇತರ ರಂತೆಯೇ ಈ ದಾರ್ಶನಿಕನೂ ವೈದ್ಯಶಾಸ್ತ್ರ, ಮೊದಲಾದುವನ್ನು ಅಭ್ಯಾಸಮಾಡಿದ್ದನು. ಇವನು ಸಂಪ್ರದಾಯ ಮಾರ್ಗವನ್ನು ಅನು ಸರಿಸದೆ, ಎದೆಗಾರಿಕೆಯಿಂದ ದೇವತಾಶಾಸ್ತ್ರ, ದರ್ಶನ, ಮೊದಲಾ ದುವುಗಳಲ್ಲಿ ಸ್ವತಂತ್ರಾಲೋಚನೆಯಿಂದ ತನ್ನದೇ ಒಂದು ಬೇರೆ ಮಾರ್ಗ ಹಿಡಿದನು. ಇವನ ಭಾವಸ್ವಾತಂತ್ರ್ಯವೂ ನಿರ್ಭಯ ವಿಮ ರ್ಶೆಯೂ ಆ ಕಾಲದ ದೇವತಾ ಶಾಸ್ತ್ರಜ್ಞರಿಗೆ ಸರಿಬೀಳದೆ, ೩೮ನೆಯ ವಯಸ್ಸಿನಲ್ಲೇ ಇವನನ್ನು ರಾಜಾಜ್ಞೆಯಿಂದ ತಲೆಗಡಿಸಿದರು. ಇವನ ಗ್ರಂಥಗಳಲ್ಲಿ ಬಹು ಪ್ರಸಿದ್ಧವಾದ್ದು 'ಹಿಕ್‌ಮತ್ ಉಲ್ ಇಷ್‌ರಾಕ್' ಅಥವಾ ಜ್ಯೋತಿಷ್‌ತತ್ವ ಎಂಬ ದರ್ಶನಗ್ರಂಥ.

ಇವನ ದರ್ಶನ ಜ್ಯೋತಿಷ್‌ತತ್ವವನ್ನು ಅವಲಂಬಿಸಿದೆ. ಈ ತತ್ವ ಪುರಾತನ ಇರಾನ್ ನಂಬಿಕೆ. ಇದನ್ನು ನವೀನ ಪ್ಲೇಟೊ ಮತ ರೀತಿಯಲ್ಲಿ ಇಸ್ಲಾಂ ತತ್ವಕ್ಕೆ ಹೊಂದಿಸಿಕೊಂಡಿದ್ದಾನೆ. ಇವನು ಇತರ ರಂತೆ ಆದಿಕಾರಣವನ್ನು ಹೇಳದೆ, ಆದಿತತ್ವವನ್ನು 'ಕೇವಲಜ್ಯೋತಿ' ಎಂದು ಕರೆಯುತ್ತಾನೆ. ಈ ಜ್ಯೋತಿಯಿಂದ ಬೇರೆಯಾದ ಅಜ್ಯೋತಿ ಯನ್ನು ಅರಿಸ್ಟಾಟಲಿನ ದ್ರವ್ಯಕ್ಕೆ ಸಮನಾಗಿ ಬಳಸುತ್ತಾನೆ. ನಮಗೆ ಕಾಣುವ ವಿಶ್ವ ಪರಂಜ್ಯೋತಿಯ ಒಂದು ಭಾಗ ಮಾತ್ರ. ಆ ಬೆಳಕು ಸಮಸ್ತ ಚಲನೆಗೂ ಕಾರಣವಾಗಿದ್ದು, ತಾನು ಮಾತ್ರ ಅಚಲವಾಗಿದೆ. ಅದರ ಅಸಂಖ್ಯಾತ ಕಿರಣಗಳೇ ಜೀವ. ಆ ಕಿರಣಗಳು ಒಂದೊಂದೂ ಬೇರೆ ಬೇರೆ ಹೊಳಪಿನವು. ಹೆಚ್ಚು ಪ್ರಕಾಶದ್ದು ಕಡಮೆ ಪ್ರಕಾಶದ್ದರ ಮೇಲೆ ಪ್ರಭಾವ ಬೀರಿ ಅದನ್ನು ಬೆಳಗುತ್ತದೆ. ಈ ಪ್ರಕಾಶ ಎರಡು ತೆರದ್ದು. ಒಂದು, ರೂಪವಿಲ್ಲದ ಅಮೂರ್ತ ಸ್ವರೂಪದ್ದು; ಮತ್ತೊಂದು,

ಮೂರ್ತ ಸ್ವರೂಪದ್ದು. ಮನುಷ್ಯಬುದ್ಧಿ ಈ ಅಮೂರ್ತ ಸ್ವರೂಪದ ಪ್ರತಿಬಿಂಬ. ಮೂರ್ತಸ್ವರೂಪದ ಬೆಳಕು ಗೌಣ. ಅಮೂರ್ತ ಜ್ಯೋತಿಗೂ ಈ ಗೌಣ ಜ್ಯೋತಿಗೂ ಕಾರಣಕಾರ್ಯ ಸಂಬಂಧವಿದೆ —ಎಂದರೆ, ಇವೆರಡೂ ಪ್ರತ್ಯೇಕ ವಸ್ತುಗಳು ಎಂದಲ್ಲ; ಎರಡೂ ಒಂದರ ಎರಡು ಮುಖಗಳು, ಅಥವಾ ಒಂದು ಮತ್ತೊಂದರ ನೆರಳು.

ಸುಹ್ರವರ್ದಿ ಅರಿಸ್ಟಾಟಲನೇ ಮೊದಲಾದ ಪೂರ್ವಿಕರಂತೆ ದ್ರವ್ಯ (ಹಯುಲ) ಅನಾದಿಯೂ, ಆದಿಕಾರಣದ ಸಹಭಾವಿಯೂ ಆದದ್ದು ಎಂಬುದನ್ನು ಒಪ್ಪುವುದಿಲ್ಲ. ಅಜ್ಯೋತಿ ಎಂದು ಇವನು ಕರೆಯುವ ದ್ರವ್ಯ ಆಕಾಶದಲ್ಲಿ ಆ ಪರಂಜ್ಯೋತಿಯ ನೆರಳು ಮಾತ್ರ. ಈ ಅಜ್ಯೋತಿ ದ್ರವ್ಯವನ್ನು ಶಾಶ್ವತ ಮತ್ತು ಕ್ಷಣಿಕ ಎಂದು ಎರಡು ಭಾಗ ಮಾಡುತ್ತಾನೆ. ಆಕಾಶಕಾಯಗಳ ಆತ್ಮಗಳು, ಬುದ್ಧಿ, ಮೂಲಭೂತಗಳು, ಕಾಲ ಮತ್ತು ಚಲನೆ—ಇವೆಲ್ಲ ಶಾಶ್ವತದ್ರವ್ಯ. ಸಂಘಟಿತ ವಸ್ತುಗಳೆಲ್ಲ ಕ್ಷಣಿಕದ್ರವ್ಯ. ಪ್ಲೇಟೋವಿನಂತೆ ಸುಹ್ರವರ್ದಿಯೂ ಒಂದು ಭಾವ ಪ್ರಪಂಚವನ್ನು ಕಲ್ಪಿಸುತ್ತಾನೆ. ಪುರಾತನ ಇರಾನ್ ಜ್ಞಾನಿಗಳಿಗೂ ಈ ಕಲ್ಪನೆ ಇತ್ತೆಂದು ತಾನೇ ಹೇಳುತ್ತಾನೆ. ಗೋಚರ ಪ್ರಪಂಚದ ವಸ್ತುಗಳಿಗೆಲ್ಲ ಭಾವಪ್ರಪಂಚದಲ್ಲಿ ಮೂಲ ಮಾದರಿಗಳು ಇವೆಯೆಂದು ಅವನ ನಂಬಿಕೆ. ಮನುಷ್ಯನ ಮೂಲಮಾದರಿ ದಿವ್ಯಾತ್ಮ ಅಥವಾ ವಿಶ್ವಬುದ್ಧಿ. ಆತ್ಮ ಕೇವಲ ಜ್ಯೋತಿರೂಪವಾದ್ದು. ಇದು ದೇಹದಲ್ಲಿ ಸೇರಿ ಪ್ರಾಣಾತ್ಮನನ್ನು (ಅನಿಮಲ್ ಸೋಲ್) ಕಾರ್ಯ ಮಾಡುವಂತೆ ಚೋದಿಸುತ್ತದೆ. ಪ್ರತಿಯೊಂದು ಆತ್ಮವೂ ತನ್ನ ಮೂಲವಾದ ಪರಂಜ್ಯೋತಿಯ ಕಡೆಗೆ ನಡೆಯಲು ತವಕಿಸುತ್ತದೆ. ಅದು ಹಾಗೆ ಜ್ಯೋತಿಯಕಡೆಗೆ ನಡೆಯುವುದೇ ಜ್ಞಾನ ಮತ್ತು ಧರ್ಮ; ಅಜ್ಯೋತಿಯ ಕಡೆಗೆ ಜಾರುವುದೇ ಅಜ್ಞಾನ ಮತ್ತು ಅಧರ್ಮ.

ಸುಹ್ರವರ್ದಿಯ ಪ್ರಕಾರ ಮೂಲಭೂತಗಳು ಮೂರು—ನೀರು, ಗಾಳಿ ಮತ್ತು ಮಣ್ಣು. ಬೆಂಕಿ ಉರಿಯುವ ಗಾಳಿ ಮಾತ್ರ. ಈ ಭೂತಗಳ ಪರಸ್ಪರ ಸಂಘಟನದಿಂದ ರೂಪ ವೈವಿಧ್ಯಗಳು ಉಂಟಾಗುತ್ತವೆ. ಇವನು ಕಾರ್ಯಕಾರಣ ಭಾವವನ್ನು ಅಷ್ಟಾಗಿ ಒಪ್ಪುವುದಿಲ್ಲ. ಆದರೆ,

ಎಲ್ಲ ವಸ್ತುಗಳೂ ಪರಂಜ್ಯೋತಿಯ ಕಡೆಗೆ ಹೋಗುತ್ತಿರುವುವೆಂದೂ, ಈ ಕಾರ್ಯದಲ್ಲಿ ಒಂದರ ನೆರವನ್ನು ಮತ್ತೊಂದು ಪಡೆಯುತ್ತದೆಂದೂ ಮಾತ್ರ ಹೇಳುತ್ತಾನೆ. ಮನುಷ್ಯನು ಮೂಲಬೆಳಕಿನ ಹತ್ತಿರಕ್ಕೆ ಹೋಗ ಬೇಕೆಂದು, ಪ್ರೇಮಿ ತನ್ನ ಪ್ರೇಮಿಯನ್ನು ಹುಡುಕಿಕೊಂಡು ಹೋಗು ವಂತೆ, ತವಕದಿಂದ ಹೋಗುತ್ತಾನೆ. ಇದರ ಸಾಧನೆಗೆ ಇರುವುದು ಒಂದೇ ಮಾರ್ಗ. ಅದು ಅಜ್ಯೋತಿಯಿಂದ ಬಿಡುಗಡೆ. ಈ ಸಾಧನೆ ಯಲ್ಲಿ ಸೂಫಿಗಳಂತೆ ಸುಹ್ರವರ್ದಿಯೂ ಅವಸ್ಥಾಭೇದಗಳನ್ನು ಒಪ್ಪು ತ್ತಾನೆ. ಮೊದಲನೆಯ ಅಥವಾ ಕನಿಷ್ಠ ಅವಸ್ಥೆಯಲ್ಲಿ ಮನುಷ್ಯನು ಅಹಂಕಾರದಲ್ಲಿ ಮುಳುಗಿ ತೊಳಲುತ್ತಾನೆ. ಎರಡನೆಯ ಅವಸ್ಥೆಯಲ್ಲಿ ಇತರರ ಮೇಲೆ ಪ್ರೇಮ ತಿರುಗಿದರೂ ತನ್ನ ಮೇಲಿನ ಪ್ರೇಮ ಮತ್ತು ತಾನು ಎಂಬ ಭಾವ ಹೋಗಿರುವುದಿಲ್ಲ. ಮೂರನೆಯದರಲ್ಲಿ ಇತರರಿ ಗಾಗಿ ತಾನು ಜೀವಿಸುತ್ತ, ನಾಲ್ಕನೆಯದರಲ್ಲಿ ಪರಂಜ್ಯೋತಿಯ ಧ್ಯಾನ ಮಗ್ನನಾಗಿರುತ್ತಾನೆ. ಐದನೆಯದರಲ್ಲಿ ಅಹಂಕಾರ ನಿಶ್ಶೇಷವಾಗಿ ಅಳಿದು ಕೇವಲ ಧ್ಯಾನದಲ್ಲಿ ಇರುತ್ತಾನೆ.

ಸಾವು ಪರಂಜ್ಯೋತಿಯ ಕಡೆಗೆ ಹೋಗುವ ಪ್ರಯಾಣ. ಆದರೆ, ಈ ಪ್ರಯಾಣ ಒಂದೇ ದಾರಿಯಲ್ಲಿ ಮುಂದು ಮುಂದಕ್ಕೇ ಯೇ ಹೋಗಬೇಕೆಂದಿಲ್ಲ. ಕರ್ಮಾನುಸಾರವಾಗಿ ಮುಂದಕ್ಕಾದರೂ ಹೋಗ ಬಹುದು, ಹಿಂದಕ್ಕಾದರೂ ಹೋಗಬಹುದು. ಮುಂಜರಿದರೆ ಪ್ರತಿಯೊಂದು ಸಾವೂ ಪರಂಜ್ಯೋತಿಯ ಹತ್ತಿರಕ್ಕೆ ಕೊಂಡೊ ಯ್ಯುತ್ತದೆ. ಹಿಂಜರಿದರೆ ಅಜ್ಯೋತಿಯ ಕಡೆಗೆ ಕೆಡವುತ್ತದೆ. ಒಂದು ದೇಹ ಅಳಿದರೆ ಮತ್ತೊಂದು ದೇಹ ತಾಳಿ ಪ್ರಯಾಣ ಸಾಗುತ್ತದೆ.

ಸುಹ್ರವರ್ದಿಯ ಅಭಿಪ್ರಾಯಗಳನ್ನು ಅವನ ತರುವಾಯ ಬಂದ ತಾತ್ವಿಕರು ಎತ್ತಿಕೊಂಡು ಇನ್ನೂ ವಿಸ್ತರಿಸಿದರು. ಅದರಲ್ಲೂ, ಅನುಭಾವಿ ವಾದಿಗಳಿಗೆ ಇವನ ಜ್ಯೋತಿಷ್ ತತ್ವ ಬಹು ಮೆಚ್ಚಿಗೆಯಾಗಿ, ಷಹರಾ ಜೂರಿ (ಕ್ರಿ. ಶ. ೧೨೫೦), ಇಬ್ನ್ ಎಕಮ್ಮುನ (ಕ್ರಿ. ಶ. ೧೨೭೭), ಹರ್ವಂ (ಕ್ರಿ. ಶ. ೧೩೦೦), ಷಿರಾಸಿ (ಕ್ರಿ. ಶ. ೧೩೧೧), ದವ್ವಾನಿ

(ಕ್ರಿ. ಶ. ೧೫೦೧), ಶಿರಾಸ್ಸಿ (ಕ್ರಿ. ಶ. ೧೬೪೦) ಮೊದಲಾದವರು ಇವನ ದರ್ಶನದ ಮೇಲೆ ವ್ಯಾಖ್ಯಾನಗಳನ್ನು ಬರೆದಿದ್ದಾರೆ.

ಇಬ್ನ್ ಉರ್‌ರುಷ್‌ದ್ ಎಂದು ಪೂರ್ವದೇಶದಲ್ಲೂ ಅವೆರ್ರೊಸ್ ಎಂದು ಪಶ್ಚಿಮದೇಶದಲ್ಲೂ ಪ್ರಸಿದ್ಧನಾಗಿರುವ ಅಬೂವಲೀದ್ ಮುಹಮ್ಮದ್ ಎಂಬ ಕೊನೆಯ ಪ್ರಸಿದ್ಧ ಮುಸ್ಲಿಂ ದಾರ್ಶನಿಕನು ಕಾರ್ಡೋವ ದಲ್ಲಿ ಕ್ರಿ. ಶ. ೧೧೨೬ ರಲ್ಲಿ ಹುಟ್ಟಿ ಕ್ರಿ. ಶ. ೧೧೯೮ ರಲ್ಲಿ ಸತ್ತನು. ಇತರ ರಂತೆಯೇ ಇವನೂ ದರ್ಶನದ ಮೇಲೆ ಮಾತ್ರವೇ ಅಲ್ಲದೆ ವೈದ್ಯ, ಜ್ಯೋತಿಷ, ವ್ಯಾಕರಣ, ಮೊದಲಾದುವುಗಳ ಮೇಲೆ ವ್ಯಾಖ್ಯಾನಗಳನ್ನೂ ಸ್ವತಂತ್ರ ಗ್ರಂಥಗಳನ್ನೂ ಬರೆದಿದ್ದಾನೆ. ಇವನನ್ನು ಯೂರೋಪಿನ ವ್ಯಾಖ್ಯಾಕಾರರು (ಸ್ಕೊಲ್ಯಾಸ್ಟಿಕ್‌ಸ್) ವ್ಯಾಖ್ಯಾನಗಾರನೆಂದು ಕರೆ ದಿರುತ್ತಾರೆ. ಹೆಚ್ಚು ಕಡಮೆ ಇವನ ದರ್ಶನ ಅರಿಸ್ಟಾಟಲ್ ತತ್ವಗಳನ್ನೇ ಇಸ್ಲಾಂ ತತ್ವಗಳಿಗೆ ಸರಿಹೊಂದಿಸಹೋಗುವ ವ್ಯಾಖ್ಯಾನ ಎನ್ನಬಹುದು.

ಅರಿಸ್ಟಾಟಲಿನಂತೆ ಇವನೂ ಪ್ರಪಂಚ ಅನಾದಿಯೆಂದೂ, ದ್ರವ್ಯ ಮತ್ತು ರೂಪ ಅಸ್ಪೃಷ್ಟವೆಂದೂ ಒಪ್ಪುತ್ತಾನೆ. ದೇವರು ದ್ರವ್ಯಕ್ಕೆ ಚೈತನ್ಯ ಮಾತ್ರ ಕೊಟ್ಟು ಸೃಷ್ಟಿ ಉಂಟು ಮಾಡುತ್ತಾನೆ; ಆದರೆ ಈ ಸೃಷ್ಟಿ, ಇತರ ದಾರ್ಶನಿಕರು ಹೇಳುವಂತೆ ಪರಿಣಾಮ ಪರಂಪರೆಯಿಂದ ಬರದೆ, ಒಮ್ಮೆಗೇ ಆದದ್ದು. ದ್ರವ್ಯಕ್ಕೆ ರೂಪ ತಾಳುವ ಶಕ್ತಿ ಸ್ವಾಯತ್ತವಾದ್ದು. ಈ ನಂಬಿಕೆಯಲ್ಲಿ ಇವನಿಗೂ ಇಬ್ನ್‌ಸೀನನಿಗೂ ವ್ಯತ್ಯಾಸವುಂಟು (ಏಕೆಂದರೆ, ಇಬ್ನ್‌ಸೀನನ ಪ್ರಕಾರ ಆದಿಕಾರಣ ದ್ರವ್ಯಕ್ಕೆ ಚಲನಮಾತ್ರವಲ್ಲದೆ ರೂಪವನ್ನೂ ಕೊಡುತ್ತದೆ.) ಮನುಷ್ಯ ಬುದ್ಧಿ ಅಭೌತವೂ ಅಮೂರ್ತವೂ ಅಮರವೂ ದೇಹದಿಂದ ಬೇರೆಯಾದದ್ದೂ ಆಗಿದೆ. ವಿಶ್ವಾತ್ಮದಿಂದ ಬೇರ್ಪಟ್ಟು, ತಾತ್ಕಾಲಿಕವಾಗಿ ಒಂದು ವ್ಯಕ್ತಿಯ ದೇಹದಲ್ಲಿ ಅಂತರ್ಗತವಾಗಿದ್ದು, ಮರಣಾನಂತರ ಮತ್ತೆ ವಿಶ್ವಾತ್ಮದಲ್ಲಿ ಲಯವಾಗುತ್ತದೆ. ಆತ್ಮ ದ್ರವ್ಯಕ್ಕೆ ಚೈತನ್ಯ ಕೊಡುವ ಶಕ್ತಿ. ಅದು ಬುದ್ಧಿಯಿಂದ ಬೇರೆ.

ಇಬ್ನ್‌ಉರ್‌ರುಷ್‌ದಿಗೂ ಇಬ್ನ್‌ಸೀನನಿಗೂ ಹಲವೆಡೆ ವಿರೋಧಾಭಿಪ್ರಾಯಗಳಿದ್ದು, ಇಬ್ನ್‌ಸೀನನ ಮೇಲೆ ಕೆಲವು ಆಪ

ವಾದಗಳನ್ನೂ ಹೊರಿಸಿದ್ದಾನೆ. ಇಬ್ನ್‌ಏಸೀನನು ಅರಿಸ್ಟಾಟಲಿನ ಹೆಸರಿನಲ್ಲಿ ಸ್ವಕಲ್ಪಿತ ತತ್ತ್ವಗಳನ್ನು ಪ್ರತಿಪಾದಿಸಿದ್ದಾನೆಂದು ಇವನು ಆಕ್ಷೇಪಿಸಿದ್ದಾನೆ.

೧೩ನೆಯ ಶತಮಾನದಲ್ಲಿ ಇಮಾಮ್ ರಾಜಿ, ಸ್ಹರ್‌ನಿಜಿ, ಖವಾಜ್‌ಜಿ, ಅಭರಿ, ಕರೆಬಿ, ನಸಜ್ಜಿ, ಉರ್ಮಾವಿ, ಸಮರ್‌ಕಂದಿ, ಅಮೆಂದಿ, ಷರಸ್ಜೋರಿ, ಮೊಹಿಯುದ್ದೀನ್ ಅರಬ್ಬಿ, ಅಬ್ದುಲ್‌ಹಯ್—ಇವರೇ ಮೊದಲಾದ ತಾತ್ತ್ವಿಕರು ಆದರು. ಮಯ್‌ಮೂನಿ ಎಂಬ ಹೆಸರಿನಿಂದ ಬಳಕೆಯಾಗಿರುವ ಮೂಸನೇ ಮೊದಲಾದ ಯೆಹೂದ್ಯ ವಿದ್ವಾಂಸರು ಮುಸ್ಲಿಂ ತತ್ತ್ವಗಳನ್ನು ಪಾಶ್ಚಾತ್ಯಭಾಷೆಗಳಿಗೆ ಮರುನುಡಿಸಿ ಹರಡಿದರು. ೧೪ನೆಯ ಶತಮಾನದಲ್ಲಿ ಹಿಲ್ಲಿ, ಇಸ್ಫಹಾನಿ, ಕುತ್‌ಬುದ್ದೀನ್‌ರಾಜಿ, ಷುಸ್ತರಿ, ಮರ್‌ಜೂಬಿ, ಬೊಖಾರಿ ಇದ್‌ಜಿ, ಹರವಿ, ಷಿರಾಜೀ—ಮೊದಲಾದವರೂ; ೧೫ನೆಯ ಶತಮಾನದಲ್ಲಿ ಜುರ್‌ಜಾನಿ, ತಫ್ತ್‌ತಾಸನಿ, ಅಭರಿ, ಫನಾರಿ—ಮೊದಲಾದವರೂ; ೧೬ನೆಯ ಶತಮಾನದಲ್ಲಿ ಗಯಾಸುದ್ದೀನ್ ಷಿರಾಜಿ, ಷರಾನಿ, ದವ್ವಾನಿ—ಮೊದಲಾದವರೂ ಆಗಿಹೋದರು.

## ಮುಸ್ಲಿಂ ನೀತಿಶಾಸ್ತ್ರ

ಮುಸ್ಲಿಂ ದಾರ್ಶನಿಕರು ನೀತಿ ಶಾಸ್ತ್ರವನ್ನು 'ಹಿಕ್‌ಮತ್-ಎ ಅಮಲಿ' (ಪ್ರಾಯೋಗಿಕ ದರ್ಶನ ಅಥವಾ ಕಾರ್ಯಾತ್ಮಕ ತತ್ತ್ವ) ಎಂದು ಕರೆದಿದ್ದಾರೆ. ಶಾಸ್ತ್ರ ರೀತಿಯಾಗಿ ವಿವೇಚನೆಮಾಡಿ ನೀತಿ ವ್ಯವಸ್ಥೆಮಾಡುವ ಗ್ರಂಥಗಳೆಂದೂ ಇಸ್ಲಾಂ ಪೂರ್ವದ ನೀತಿಗಳು, ಸಂಪ್ರದಾಯಗಳು, ಕುರಾನ್ ವಚನಗಳು—ಮೊದಲಾದ ಆಧಾರದ ಮೇಲೆ ಕ್ರೋಡೀಕೃತವಾದುವೆಂದೂ ನೀತಿ ಗ್ರಂಥಗಳನ್ನು ಎರಡಾಗಿ ವಿಂಗಡಿಸಬಹುದು. ಇಸ್ಲಾಂ ಪೂರ್ವದ ಅರಬ ಜನರ ಸಾಮಾನ್ಯ ಶೀಲಸ್ವಭಾವಗಳೆಂದರೆ—ಧೈರ್ಯ, ಕಷ್ಟಸಹನೆ, ಸ್ವಾಮಿಭಕ್ತಿ, ಪ್ರಾಮಾಣಿಕತೆ, ದಾನ, ಅತಿಥಿಸತ್ಕಾರ, ಸ್ತ್ರೀರಕ್ಷಣೆ—ಮೊದಲಾದುವು. ಇಸ್ಲಾಂ ಧರ್ಮ ಬೋಧಿಸಿದ ದೊಡ್ಡ ನೀತಿಯೆಂದರೆ ಮಿತಾಚರಣೆ.

ನೀತಿಕಾರರಲ್ಲಿ ನಮಗೆ ತಿಳಿದುಬಂದಿರುವ ಮಟ್ಟಿಗೆ ಮೊದಲನೆಯವನು ಝೊರಾಸ್ಟರ್ ಧರ್ಮದಿಂದ ಇಸ್ಲಾಮಿಗೆ ಧರ್ಮಾಂತರನಾದ ಇಬ್ನ್‌ಎ ಮುಕಫ್ಫ ಎಂಬ ಇರಾನಿಯನ್ನನು. ಇವನು ತನ್ನ 'ದುರ್ರ ಅಲ್‌ಯತೀಮ' ಎಂಬ ಗ್ರಂಥದಲ್ಲಿ ನೀತಿ ವಿಚಾರಮಾಡಿದ್ದಾನೆ. ಅಲ್ಲದೆ, ಪಲ್ಲವಿಗೆ ಭಾಷಾಂತರವಾಗಿದ್ದ ಹಿಂದೂ ಪಂಚತಂತ್ರವನ್ನು ಅರಬ್ಬಿಗೆ ಭಾಷಾಂತರಿಸಿದ್ದಾನೆ. ಹುನೇಯ್‌ನ್ ಅಥವಾ ಅವನ ಮಗ ಇಸ್ಹಾಕನು ಅರಿಸ್ಟಾಟಲಿನ ನೀತಿಶಾಸ್ತ್ರವನ್ನು ಭಾಷಾಂತರಿಸಿದ್ದಾನೆ. "ಪರಿಶುದ್ಧತಾ ಸೋದರರು" ಎಂಬವರು (ಬ್ರೆದ್ರೆನ್ ಆಫ್ ಪ್ಯೂರಿಟಿ) ತಮ್ಮ ಬೃಹತ್‌ಕೋಶದಲ್ಲಿ ನೀತಿಯಮೇಲೆ ಒಂದು ಅಧ್ಯಾಯವನ್ನು ಸೇರಿಸಿದ್ದಾರೆ. ಇವರ ಪ್ರಕಾರ ಮನುಷ್ಯನ ಶೀಲಸ್ವಭಾವಗಳು ದೇಹರೂಪ, ವಾಯುಗುಣ, ಗ್ರಹಪ್ರಭಾವ, ಮತ್ತು ಶಿಕ್ಷಣಗಳನ್ನು ಅವಲಂಬಿಸಿವೆ. ಇಬ್ನ್ ಮಿಸ್ಕವಯ್, ಇಬ್ನ್‌ಸೀನ, ಇಬ್ನ್ ಉರ್‌ರುಷ್‌ದ್—ಮೊದಲಾದವರೂ ತಮ್ಮ ದರ್ಶನಗ್ರಂಥಗಳಲ್ಲಿ ಪ್ರಾಸಂಗಿಕವಾಗಿ ನೀತಿ ವಿಷಯವನ್ನೂ ವಿಚಾರಮಾಡಿದ್ದಾರೆ. ಆದರೆ, ನಾಸಿರುದ್ದೀನ್ ತೂಸಿ (ಸು. ಕ್ರಿ. ಶ. ೧೨೦೦) ಈ ವಿಷಯದಲ್ಲಿ ವಿಶೇಷ ವ್ಯವಸಾಯಮಾಡಿ, ಗ್ರೀಕ್ ಬರಹಗಾರರಂತೆ ವ್ಯವಸ್ಥಾರೂಪದ 'ಅಖ್‌ಲಾಕ್ ಎ ನಾಸಿರಿ' ಎಂಬ ನೀತಿ ಗ್ರಂಥವೊಂದನ್ನು ಬರೆದಿದ್ದಾನೆ.

ಜಲಾಲುದ್ದೀನ್ ದವ್ವಾನಿ ಎಂಬ ಪ್ರಸಿದ್ಧ ನೀತಿಕಾರನು ನಾಸಿರುದ್ದೀನ್ ಗ್ರಂಥವನ್ನು ವಿಸ್ತರಿಸಿ ಉತ್ತಮಗೊಳಿಸಿ 'ಅಖ್‌ಲಾಕ್ ಎಜಲಾಲಿ' ಎಂಬ ಪ್ರಸಿದ್ಧ ನೀತಿ ಗ್ರಂಥವನ್ನು ಬರೆದಿದ್ದಾನೆ. ಇದು ಒಟ್ಟಿನಲ್ಲಿ ಸ್ಥೂಲವಾಗಿ ಮೂರು ಭಾಗಗಳಾಗಿದೆ ಎನ್ನಬಹುದು. ಮೊದಲನೆಯದು ವ್ಯಕ್ತಿ ನೀತಿಯನ್ನು ಕುರಿತದ್ದು. ಇದರಲ್ಲಿ ಕರ್ಮ, ಕರ್ಮಮೂಲ, ಧರ್ಮ, ಪಾಪ, ಪುಣ್ಯ, ಮನೋವ್ಯಾಧಿ ಮತ್ತು ಅದರ ಚಿಕಿತ್ಸೆ, ಬುದ್ಧಿ—ಮೊದಲಾದ ವಿಷಯಗಳನ್ನು ಪ್ರತಿಪಾದಿಸಿದೆ. ಎರಡನೆಯದು ಕುಟುಂಬ ಅಥವಾ ಗೃಹನೀತಿಯನ್ನು ಕುರಿತದ್ದು. ಇದರಲ್ಲಿ ಮದುವೆ, ಮಕ್ಕಳು, ಶಿಕ್ಷಣ, ಉದ್ಯೋಗ, ತಾಯಿತಂದೆಗಳ ಕರ್ತವ್ಯ, ಸೇವಕರು, ವರಮಾನ, ಮೊದಲಾದ ವಿಷಯಗಳನ್ನು ಪ್ರತಿಪಾದಿಸಿದೆ.

ಮೂರನೆಯದು ರಾಜ್ಯನೀತಿಯನ್ನು ಕುರಿತದ್ದು. ಇದರಲ್ಲಿ ರಾಜ, ಆಡಳಿತ, ಕಟ್ಟಳೆ, ಪ್ರಜಾಧರ್ಮ, ನಾಗರಿಕತೆ—ಮೊದಲಾದ ವಿಷಯಗಳನ್ನು ಪ್ರತಿಪಾದಿಸಿದೆ.

ಇವನು ಮನುಷ್ಯಬುದ್ಧಿಯನ್ನು ಕುರಿತು, ಅದು ಮುಖ್ಯವಾಗಿ ಮೂರು ಮುಖನಾಗಿ ಪ್ರವರ್ತಿಸುತ್ತದೆಂದು ಹೇಳುತ್ತಾನೆ. ಮೊದಲನೆಯದು ಕಾರ್ಯಕಾರಣವನ್ನು ತರ್ಕಿಸುವ ಬುದ್ಧಿಶಕ್ತಿ. ಇದೇ ಪ್ರಧಾನಶಕ್ತಿ. ಸಮಸ್ತ ಭಾವನೆ, ವಿವೇಚನೆಗಳಿಗೂ ಇದೇ ಮೂಲ. ಎರಡನೆಯದು ರಕ್ಷಣಶಕ್ತಿ. ಇದು ಧೈರ್ಯ, ಕ್ರೋಧ, ರಾಗ, ಮೊದಲಾದವುಗಳಿಗೆ ಮೂಲ. ಮೂರನೆಯದು ತೃಷ್ಣಾಶಕ್ತಿ. ಇದು ಹಸಿವು, ಕಾಮ, ಮೊದಲಾದವುಗಳಿಗೆ ಮೂಲ. ಈ ಪ್ರತಿಯೊಂದು ಶಕ್ತಿಯನ್ನೂ ನೇರವಾಗಿ ಅಥವಾ ತಪ್ಪಾಗಿ ಉಪಯೋಗಿಸಬಹುದು. ನೇರವಾದ ಬಳಕೆಯಿಂದ ಒಳ್ಳೆಯ ದಾರಿಗೂ ತಪ್ಪು ಬಳಕೆಯಿಂದ ಕೆಟ್ಟದಾರಿಗೂ ಬೀಳುತ್ತೇವೆ. ಉದಾಹರಣೆಗೆ—ತರ್ಕಶಕ್ತಿ ಜ್ಞಾನರೂಪದಲ್ಲಿ, ರಕ್ಷಣಶಕ್ತಿ ಧೈರ್ಯರೂಪದಲ್ಲಿ, ತೃಷ್ಣಾಶಕ್ತಿ ಮಿತಿ ಮತ್ತು ಔದಾರ್ಯರೂಪಗಳಲ್ಲಿ ವ್ಯಕ್ತವಾಗಬಹುದು—ಅಥವಾ ತರ್ಕಶಕ್ತಿ ಅಜ್ಞಾನದಲ್ಲಿ, ರಕ್ಷಣಶಕ್ತಿ ಕ್ರೌರ್ಯ ಅಥವಾ ಹೇಡಿತನದಲ್ಲಿ, ತೃಷ್ಣಾಶಕ್ತಿ ಭೋಗಲಾಲಸೆಯಲ್ಲಿ ಮುಳುಗಿ ಕೆಡಲೂಬಹುದು. ಜ಼ೊರಾಸ್ಟರ್ ಧರ್ಮದ ಪ್ರಕಾರವೂ ಪ್ರತಿಯೊಂದು ಶಕ್ತಿಗೂ ಎರಡು ಮುಖಗಳುಂಟು. ಒಂದು ಒಳ್ಳೆಯದು, ಮತ್ತೊಂದು ಕೆಟ್ಟದ್ದು. ಪರಶಕ್ತಿಯಲ್ಲಿ ಕೂಡ ಎರಡುಂಟು. ಒಂದು 'ಅಹುರ', (ಸ್ಪೆಂತ ಮೈನ್ಯು) ಮತ್ತೊಂದು 'ಅಹ್‌ರಿಮನ್.' (ಅಂಗ್ರಮೈನ್ಯು) ಒಂದು ಒಳ್ಳೆಯದು, ರಚನಾತ್ಮಕ, ಮತ್ತು ಧರ್ಮಿ. ಮತ್ತೊಂದು ಕೆಟ್ಟದ್ದು, ನಾಶಕರ ಮತ್ತು ಅಧರ್ಮಿ. ಈ ದ್ವೈತಭಾವ ಸೃಷ್ಟಿಯ ಪ್ರತಿಯೊಂದರಲ್ಲೂ ಕಂಡುಬರುತ್ತದೆ. ಕೊನೆಗೆ, ಜ಼ೊರಾಸ್ಟರ್ ತಾತ್ವಿಕರು ನುಡಿಯಲ್ಲಿ ಕೂಡ ಎರಡು ಬಗೆಯುಂಟೆಂದು ಸಾಧಿಸತೊಡಗಿದ್ದಾರೆ. ಪ್ರತಿಯೊಂದು ಅರ್ಥಕ್ಕೂ ದೈವೀಶಬ್ದವೊಂದೂ ಆಸುರೀ ಶಬ್ದವೊಂದೂ ಇದೆಯೆಂದು ಹೇಳಹೊರಟರು. ಉದಾಹರಣೆಗೆ ಕಿವಿಗೆ ದೈವೀಶಬ್ದ 'ಗವೋಶ';

ಅಸುರೀಶಬ್ದ 'ಕರಿನ' (ಕರ್ಣ). ಮಗನಿಗೆ ದೈವೀಶಬ್ದ 'ಪುತ್ರ'; ಅಸುರೀ ಶಬ್ದ 'ಹೋನೊ'.

ಮೇಲೆ ಹೇಳಿದ ಮೂರು ಶಕ್ತಿಗಳ ಸಾಮರಸ್ಯದಿಂದ ಜೀವನ ಧರ್ಮಮಾರ್ಗದಲ್ಲಿ ಸಾಗುತ್ತದೆ. ಈ ಸಾಮರಸ್ಯದ ಮರ್ಮವೆಂದರೆ ಮಿತಾಚರಣೆ ಅಥವಾ ಮಾಧ್ಯಮಿಕತೆ. ಕೆಲವರು ಸೃಷ್ಟಿಯ ಅಸ್ತಿತ್ವಕ್ಕೆ ಕೂಡ ಈ ಪುಣ್ಯಶಕ್ತಿ ಪಾಪಶಕ್ತಿಗಳ ಸಮತೂಕ ಅಗತ್ಯವೆಂದು ಪ್ರತಿಪಾದಿಸಿದ್ದಾರೆ. ಆದರೆ, ಈ ಮಧ್ಯಸ್ಥಿತಿಯನ್ನು ಅಥವಾ ಮಿತಿಯನ್ನು ಗೊತ್ತುಪಡಿಸುವುದು ಬಹು ಕಷ್ಟ. ಉದಾಹರಣೆಗೆ: ಸರಿಯಾದ ಧೈರ್ಯ ಮಧ್ಯಸ್ಥಿತಿ ಎನ್ನಬಹುದು. ಅದರ ಒಂದು ಕೊನೆಯಲ್ಲಿ ಹುಚ್ಚು ಸಾಹಸವೂ ಮತ್ತೊಂದು ಕೊನೆಯಲ್ಲಿ ಹೇಡಿತನವೂ ಇರುತ್ತದೆ. ಇವೆರಡೂ ದುರ್ಗುಣಗಳೆ. ಇದೇ ರೀತಿಯಲ್ಲಿ ಸರಿಯಾದ ನ್ಯಾಯ ಮಧ್ಯಸ್ಥಿತಿ ಎನ್ನಬಹುದು. ಅದರ ಒಂದು ಕೊನೆ ಕ್ರೌರ್ಯ ಅಥವಾ ದಬ್ಬಾಳಿಕೆ. ಮತ್ತೊಂದು ಕೊನೆ ಪೌರುಷವಿಲ್ಲದ ಅಡಿಯಾಳುತನ. ಆದರೆ, ಇವುಗಳಲ್ಲೆಲ್ಲ ಸರಿಯಾದ ಮಾಧ್ಯಮಿಕತೆ ಯಾವುದು, ಒಂದೇ ಗುಣ ಯಾವಾಗ ಸುಗುಣವಾಗುತ್ತದೆ, ಯಾವಾಗ ದುರ್ಗುಣವಾಗುತ್ತದೆ, ಎಂದು ಹೇಳುವುದು ಬಹಳ ಕಷ್ಟ.

ಉದಾಹರಣರೂಪವಾಗಿ, ಕೆಲವು ವಿಷಯಗಳ ಮೇಲೆ ದವಾನಿಯ ಅಭಿಪ್ರಾಯಗಳನ್ನು ಸ್ಥೂಲವಾಗಿ ತಿಳಿಸಬಹುದು. ಹೆಂಗಸರ ವಿಷಯದಲ್ಲಿ ಅವರನ್ನು ಎಲ್ಲರ ಕಣ್ಣಿಗೂ ಬೀಳದಂತೆ ಮರೆಯಾಗಿಟ್ಟಿರುವುದೂ, ಗೋಷ ಅನುಸರಿಸುವುದೂ ಅವಶ್ಯಕವೆಂದೂ, ಅಲ್ಲದೆ ಅದು ಅವರಿಗೆ ಗೌರವವೆಂದೂ ಹೇಳುತ್ತಾನೆ. ರಾಜರ ವಿಷಯದಲ್ಲೂ ಮತ್ತು ಇತರರ ವಿಷಯದಲ್ಲಿ ಕೆಲವು ವಿಶೇಷ ಸಂದರ್ಭಗಳಲ್ಲೂ ಹೊರತು ಇವನು ಬಹು ಪತ್ನೀತ್ವವನ್ನು ಒಪ್ಪುವುದಿಲ್ಲ. ಗಂಡ ಹೆಂಡಿರು ದೇಹ ಆತ್ಮಗಳಂತೆ ಇರಬೇಕು. ಒಂದು ಆತ್ಮ ಎರಡು ದೇಹಗಳನ್ನು ಹೇಗೆ ತಾಳಲಾರದೋ ಹಾಗೆಯೇ ಒಬ್ಬನು ಇಬ್ಬರು ಹೆಂಡಿರನ್ನು ಪ್ರೀತಿಸಲಾರ. ಗಂಡಹೆಂಡಿರು ಅನ್ಯೋನ್ಯ ಅನುರಕ್ತರಾಗಿರಬೇಕಾದರೂ, ಮೂರು ವಿಷಯಗಳಲ್ಲಿ ಮಾತ್ರ ಗಂಡ ಬಹು ಜಾಗರೂಕನಾಗಿರಬೇಕು. ಮೊದ

ಲನೆಯದು ಅತಿಪ್ರೇಮವಿರಕೂಡದು; ಎರಡನೆಯದು ಮುಖ್ಯ ವಿಷಯಗಳಲ್ಲಿ ಹೆಂಡತಿಯೊಡನೆ ಸಲಹೆ ನಡೆಸಬಾರದು; ಮೂರನೆಯದು ತನ್ನ ಆಸ್ತಿಯ ವಿಷಯವಾದ ಮತ್ತು ಇತರ ಮರ್ಮಗಳನ್ನು ಅವಳಿಗೆ ಬಿಟ್ಟುಕೊಡಕೂಡದು. ಮಕ್ಕಳ ವಿಷಯದಲ್ಲಿ ಏಳನೆಯ ವಯಸ್ಸಿನಿಂದ ಶಿಕ್ಷಣ ನಡೆಯಬೇಕೆಂದೂ, ಮೊದಲು ನಡತೆ, ತರುವಾಯ ಊಟ ಉಡುಪು, ತರುವಾಯ ಸಮಾಜ ವ್ಯವಹಾರ, ಕೊನೆಯದಾಗಿ ಶಾಸ್ತ್ರಾಭ್ಯಾಸ—ಈ ರೀತಿಯಾಗಿ ಶಿಕ್ಷಣ ನಡೆಯಬೇಕೆಂದೂ ಹೇಳುತ್ತಾನೆ. ಹೆಂಗಸಿನ ವಿಷಯದಲ್ಲಿ, ಶೀಲವಂತಳಾದ ಹೆಂಡತಿ, ತಾಯಿ, ಅಥವಾ ಸೋದರಿ ಆಗಿರಬೇಕಾದರೆ ಎಷ್ಟು ಬೇಕೋ ಅಷ್ಟು ವಿದ್ಯೆ ಸಾಕೆಂದೂ, ಮನೆಯ ಕೆಲಸಕ್ಕೆ ಬೇಕಾದ ತಿಳಿವು ಬಂದಿದ್ದರೆ ಸಾಕೆಂದೂ, ಓದುಬರಹ ಬೇಕಾಗಿಲ್ಲವೆಂದೂ, ಪ್ರಾಪ್ತವಯಸ್ಕಳಾದ ಮೇಲೆ ಮದುವೆಯಾಗಿ ಒಕ್ಕಲುಮಾಡುವುದೇ ಅವಳ ಧರ್ಮವೆಂದೂ ಹೇಳುತ್ತಾನೆ. ಪಿತೃಭಕ್ತಿ ವಿಷಯದಲ್ಲಿ, ಒಬ್ಬನಿಗೆ ತಂದೆಯ ಸ್ಥಾನದಲ್ಲಿ ಮೂರು ಜನರಿರುತ್ತಾರೆಂದು ಹೇಳುತ್ತಾನೆ—ಜನ್ಮ ಕೊಟ್ಟವನು, ವಿದ್ಯೆ ಕೊಟ್ಟವನು, ಮಗಳು ಕೊಟ್ಟವನು. ಈ ಮೂವರನ್ನೂ ಭಕ್ತಿ ವಿಶ್ವಾಸಗಳಿಂದ ಕಾಣಬೇಕು. ರಾಜ್ಯನೀತಿ ವಿಷಯದಲ್ಲಿ ಇವನು ರಾಜಪ್ರಭುತ್ವ ಪಕ್ಷಪಾತಿ. ದೊರೆ ನೆಲದ ಮೇಲೆ ದೇವರ ಪ್ರತಿನಿಧಿ. ಪ್ರಜೆಗಳಿಗೆಲ್ಲ ಅರಸನೇ ಶರಣು. ರಾಜಭಕ್ತಿ ಪ್ರಜಾಭಕ್ತಿಗಳು ನೆಲಸಿರಬೇಕು. ಪರಮೋತ್ತಮವಾದ ರಾಜ್ಯಭಾರ ಪೈಗಂಬರನ ರಾಜ್ಯಭಾರ. ಅದಕ್ಕೆ ಎರಡನೆಯದಾದ್ದು, ಮೊದಲನೆಯ ನಾಲ್ಕು ಕಲೀಫರದು. ದಕ್ಷನಾದ ರಾಜನೊಬ್ಬನು ಸಿಕ್ಕದೆ ಹೋದರೆ, ಹಲವು ಜ್ಞಾನಿಗಳೂ ಸಾಧುಗಳೂ ಸಹಕರಿಸಿ ಆಡಳಿತ ನಡಸುವುದು ಮೇಲೆಂದು ಇವನ ಅಭಿಪ್ರಾಯ. ದವ್ವಾನಿ ಪ್ರಜೆಗಳನ್ನು ಸ್ಥೂಲವಾಗಿ ಪುರಾತನ ಹಿಂದೂ ಪದ್ಧತಿಯಂತೆ ನಾಲ್ಕು ವರ್ಗ ಅಥವಾ ಜಾತಿಗಳನ್ನಾಗಿ ವಿಂಗಡಿಸುತ್ತಾನೆ. ಮೊದಲನೆಯ ಜಾತಿಯವರು ಜ್ಞಾನಿಗಳು (ಬ್ರಾಹ್ಮಣರು); ಎರಡನೆಯ ಜಾತಿಯವರು ಆಯುಧಪಾಣಿಗಳು (ಕ್ಷತ್ರಿಯರು); ಮೂರನೆಯವರು ವ್ಯಾಪಾರಗಾರರು, ಕೆಲಸಗಾರರು

ಮೊದಲಾದವರು (ವೈಶ್ಯರು); ನಾಲ್ಕನೆಯವರು ಬೇಸಾಯಗಾರರು (ಶೂದ್ರರು).

ಮುಸ್ಲಿಂ ನೀತಿಶಾಸ್ತ್ರ ವಿಷಯವಾಗಿ ಬರೆದವರಲ್ಲಿ ಹೆಸರಾದವರಲ್ಲಿ ಕೊನೆಯವನು ಹುಸ್ಸೇನ್‌ವಾಯೆಸ್ (ಸ. ಕ್ರಿ. ಶ. ೧೫೦೫). ಇವನು "ಅಖ್‌ಲಾಕೆ ಮೊಹ್‌ಸನಿ" ಎಂಬ ಗ್ರಂಥ ಬರೆದಿದ್ದಾನೆ. ಇದರಲ್ಲಿ ಸ್ವತಂತ್ರಮಾರ್ಗವಾಗಲಿ, ವಿಶೇಷ ಸಂಗತಿಯಾಗಲಿ ಕಂಡು ಬರುವುದಿಲ್ಲ.

೧೬ನೆಯ ಶತಮಾನದ ಆದಿಯ ವೇಳೆಗೆ ಇರಾನಿನಲ್ಲಿ ಒಂದು, ಇಂಡಿಯದಲ್ಲಿ ಒಂದು, ಈ ರೀತಿಯಾಗಿ ಎರಡು ದೊಡ್ಡ ಮುಸ್ಲಿಂ ಸಾಮ್ರಾಜ್ಯಗಳು ಕಟ್ಟಿದುವು. ಅಲ್ಲದೆ ತುರ್ಕಿಯ ಉಸ್ಮಾನ್ ಸಾಮ್ರಾಜ್ಯವೂ ತನ್ನ ಮೇಲ್ಮೆಲೆ ಮುಟ್ಟಿತ್ತು. 'ಮೂರ್' ಸಾಮ್ರಾಜ್ಯ ಕೊನೆಗಂಡು, ಮುಸ್ಲಿಂ ಸಂಸ್ಕೃತಿಯು ಕೇಂದ್ರ ಪೂರ್ವದ ಕಡೆಗೆ ನಡೆಯಿತು. ಈ ಮೂರು ಸಾಮ್ರಾಜ್ಯಗಳ ದೊರೆಗಳೂ ವಿದ್ಯೆಕ್ಕೆ ಆಶ್ರಯದಾತರಾಗಿ ದೇಶಕಾಲಾನುಸಾರವಾಗಿ ಸಂಸ್ಕೃತಿಯನ್ನು ಬೆಳಸಿಕೊಂಡು ಬಂದರು. ಇರಾನಿನಲ್ಲಿ ಸಫವಿ ದೊರೆಗಳು ಷಿಯಾಮತವನ್ನು ಅವಲಂಬಿಸಿದರು. ನಾಮಮಾತ್ರ ಕಲೀಫನಾಗಿದ್ದ ಕೊನೆಯ ಅಬ್ಬಾಸಿ ಕಲೀಫನನ್ನು ಉರುಳಿಸಿ ತಾವೇ ಕಲೀಫಗಿರಿಯನ್ನು ತಾಳಿದ ತುರ್ಕೀಸುಲ್ತಾನರನ್ನು ಈ ಇರಾನ್ ದೊರೆಗಳು ಒಪ್ಪಿಕೊಳ್ಳಲಿಲ್ಲ. ಇದರಿಂದ ಇಸ್ಲಾಮಿನಲ್ಲಿ ದೊಡ್ಡ ಒಡಕು ಉಂಟಾಯಿತು. ಇರಾನ್ ದೊರೆಗಳು ಷಿಯಾದೇವತಾಶಾಸ್ತ್ರಜ್ಞರಿಗೆ ಉತ್ತೇಜನ ಕೊಟ್ಟದ್ದು ಮಾತ್ರವಲ್ಲದೆ, ಸುನ್ನಜುಮಾತ್ ಪಂಗಡದವರನ್ನೂ ಸೂಫಿಗಳನ್ನೂ ಕಡೆಗಣಿಸಿ, ಹಿಂಸೆಕೊಟ್ಟು, ಹಲವರನ್ನು ಗಡೀಪಾರು ಮಾಡಿದರು. ಇದರಿಂದ ಸಫವಿ ಕಾಲದ ಇರಾನಿನಲ್ಲಿ ಹಲವು ಜನ ಷಿಯಾದೇವತಾಶಾಸ್ತ್ರಜ್ಞರು ಕಂಡು ಬಂದರೂ ಕೆಲವರು ಮಾತ್ರ ದಾರ್ಶನಿಕರಿದ್ದಾರೆ. ಇಂಡಿಯದಲ್ಲಿ ಮೊಗಲರು ವಿದ್ಯೆ ಕಲೆಗಳಿಗೆ ಪ್ರೋತ್ಸಾಹ ಕೊಟ್ಟು, ಸೂಫಿಗಳನ್ನು ಗೌರವಿಸಿದರೂ, ದರ್ಶನ ವಿಷಯದಲ್ಲಿ ಉದಾಸೀನರಾಗಿದ್ದರೆಂದೇ ಹೇಳಬೇಕು. ಇಂಡಿಯದ ದಾರ್ಶನಿಕರಲ್ಲಿ ಹೆಸರು ಹೇಳಬಹುದಾದವರು—ಅಕ್ಬರನ ಮಂತ್ರಿ

ಅಬುಲ್‌ಫೈಸ್ಸಲ್, ಸಯಾಲ್‌ಕೋಟಿ, ಹಸನ್‌ಬಿಹಾರಿ—ಮೊದಲಾದವರು ಇರಾನ್ ಮತ್ತು ಮಧ್ಯ ಏಷ್ಯಗಳಲ್ಲಿ ಹೆಸರಾದ ತಾತ್ವಿಕರು—ಗಿಯಾಸುದ್ದೀನ್‌ಷಿರಾಸ್ಸಿ (ಸ. ಕ್ರಿ. ಶ. ೧೫೪೨), ಹರೋೕರವಿ (ಸ. ಕ್ರಿ. ಶ. ೧೬೦೫), ಮಿರ್‌ದಾಮಾದ್ (ಸ. ಕ್ರಿ. ಶ. ೧೬೧೦) ಮನಾವಿ (ಸ. ಕ್ರಿ. ಶ. ೧೬೨೨), ಮಿರ್ ಅಬುಲ್‌ಕಾಸಿಮ್‌ಫಿಂದರಸ್ಕಿ, ಮುಲ್ಲಾ ಮೊಹ್‌ಸಿನ್‌ಫೈಯ್‌ಸ್ ಕಾಷಿ, ಮುಲ್ಲಾ ಅಬ್ದುರ್‌ರಸ್ಸಾಕ್ ಲಹೀಜಿ, ಮುಲ್ಲಾಸದ್ರುದ್ದೀನ್ ಷೀರಾಸ್ಸಿ ಮೊದಲಾದವರು.

ಮುಸ್ಲಿಂ ದರ್ಶನದ ಅವನತಿ: ೧೭, ೧೮, ೧೯ನೆಯ ಶತಮಾನಗಳು ಏಷ್ಯದಲ್ಲಿ ಕತ್ತಲೆಯ ಕಾಲ ಎನ್ನಬಹುದು. ರಾಜಕೀಯ ಬಲ ಮಾತ್ರವಲ್ಲದೆ, ಜ್ಞಾನಬಲವೂ ಕುಗ್ಗಿತು. ಅದರಲ್ಲೂ ಮುಸ್ಲಿಂ ದೇಶಗಳಲ್ಲಿ ಅಜ್ಞಾನ, ಅನಾಯಕತೆ, ಅಂತಃಕಲಹ, ನೈರಾಶ್ಯಗಳು ತಲೆದೋರಿ ಸಂಸ್ಕೃತಿ ಬೆಳೆಯುವುದಕ್ಕೆ ಅವಕಾಶವಿಲ್ಲವಾಯಿತು. ಮೊಗಲ್ ರಾಜ್ಯ ಉರುಳಿತು. ತುರ್ಕೀ ಸಾಮ್ರಾಜ್ಯ ಯೂರೋಪ್ ಬಲಗಳ ಮುಂದೆ ನಿಲ್ಲಲಾರದೆ ಹೋಯಿತು. ಜ್ಞಾನಜ್ಯೋತಿ ಮುಸ್ಲಿಮರಿಂದ ಯೂರೋಪ್ ಜನಾಂಗಗಳ ಕೈ ಸೇರಿತು. ಆದರೂ, ೧೯ನೆಯ ಶತಮಾನದಲ್ಲಿ ಕೆಲವು ತಾತ್ವಿಕರು ಆದರು. ಹಿಂದಿನವರ ಪಂಕ್ತಿಗೆ ಸೇರತಕ್ಕವರಲ್ಲದಿದ್ದರೂ ಅವರಲ್ಲಿ ಮುಖ್ಯರಾದ ಕೆಲವರ ಹೆಸರನ್ನು ಇಲ್ಲಿ ಹೇಳಬಹುದು—ಸಯದ್‌ಜಮಾಲುದ್ದೀನ್ (ಆಫ್ಘಾನಿ ಎಂಬ ಹೆಸರಿನಿಂದ ಬಳಕೆಯಾಗಿದ್ದಾನೆ), ಷಾವಲಿಯುಲ್ಲಹ್, ಹಾಜಿಮುಲ್ಲಾಹಾದಿಸಬ್‌ಸವಾರಿ, ಮಿರ್ಜಾ ಅಬ್ದುಲ್‌ಹಸ್ಸನ್‌ಜಿಲ್‌ವಹ್, ರಸ್ಸಾತಲ್‌ಷೀಕ್, ಸರ್ ಮಹಮ್ಮದ್ ಇಕ್‌ಬಾಲ್—ಮೊದಲಾದವರು. ಇವರಲ್ಲಿ ಕೆಲವರ ವಿಷಯವನ್ನು ಸಂಗ್ರಹವಾಗಿ ಹೇಳುತ್ತದೆ.

ಹಾಜಿಮುಲ್ಲಾಹಾದಿಸಬ್‌ಸವಾರಿ (ಕಿ. ಶ. ೧೭೯೭—೧೮೭೮). ಇವನು ೧೯ನೆಯ ಶತಮಾನದ ಇರಾನ್ ದಾರ್ಶನಿಕರಲ್ಲಿ ಶ್ರೇಷ್ಠನೆಂದು ಎಣಿಕೆಯಾಗಿದ್ದಾನೆ. ದರ್ಶನದಲ್ಲಿ ಮಾತ್ರವಲ್ಲದೆ ತರ್ಕಶಾಸ್ತ್ರ ನ್ಯಾಯಶಾಸ್ತ್ರಗಳಲ್ಲಿಯೂ ಪಂಡಿತನಾಗಿದ್ದನು. 'ಇಸ್‌ರಾರ್‌ಉಲ್ ಹಿಕಮ್' ಎಂಬ ದರ್ಶನಗ್ರಂಥವನ್ನೂ ಜಲಾಲುದ್ದೀನ್‌ರೂಮಿಯ ಮಸ್ನವಿ

ಗ್ರಂಥಕ್ಕೆ ವ್ಯಾಖ್ಯಾನವನ್ನೂ, ಮನ್‌ಸ್ಲೂಮಃ ಎಂಬ ತರ್ಕಗ್ರಂಥವನ್ನೂ, ಇನ್ನೂ ಹಲವು ಗ್ರಂಥಗಳನ್ನೂ ರಚಿಸಿದ್ದಾನೆ. ಇವನ ದರ್ಶನ ಶುದ್ಧ ದರ್ಶನ ತತ್ವಗಳ ಮತ್ತು ಸೂಫಿಗಳ ಅನುಭಾವ ತತ್ವಗಳ ಮಿಶ್ರಣ, ಕೊನೆಗೆ, ಅದು ಮತಧರ್ಮ ತತ್ವದಲ್ಲಿ ಕೊನೆಗೊಳ್ಳುತ್ತದೆ. ಉದ್ಧರಣ ಕ್ಕೂ ಇಬ್‌ನ್‌ಸಿನ, ಸುಹ್ರವರ್ದಿ—ಇವರ ಗ್ರಂಥಗಳಿಂದಲೂ ಕುರಾನಿನಿಂದಲೂ ವಾಕ್ಯಗಳನ್ನು ಎತ್ತಿಕೊಟ್ಟಿದ್ದಾನೆ. ವಿಶ್ವದ ಉತ್ಪತ್ತಿಯನ್ನು (ಹೊಮ್ಮುಗೆಯನ್ನು) ಕುರಿತು ಒಂದು ಸ್ವಾರಸ್ಯವಾದ ಉಪಮಾನ ಕೊಟ್ಟಿದ್ದಾನೆ. ಒಂದು ದೀಪದಿಂದ ಹೊರಟ ಬೆಳಕು ದೂರ ಹೋಗುತ್ತ ಹೋಗುತ್ತ ಹೊಳಪು ಕಡಮೆಯಾಗುವಂತೆ, ಆದಿಕಾರಣವಾದ ಮೂಲ ತತ್ವದಿಂದ ಆರಂಭಿಸಿದ ಉತ್ಪತ್ತಿ ಹೋಗುತ್ತ ಹೋಗುತ್ತ ವಿವಿಧ ಸ್ವರೂಪ ತಾಳುತ್ತದೆ. ಸಬ್‌ಸ್ವವಾರಿ ತರ್ಕ ವಿಷಯದಲ್ಲಿ ಇಬ್‌ನ್ ಸಿನ ಮತ್ತು ಸುಹ್ರವರ್ದಿಯರ ಅಭಿಪ್ರಾಯಗಳನ್ನೇ ವಿಂಗಡಿಸಿ ಕ್ರೋಡೀಕರಿಸಿದ್ದಾನೆ. ಇವನು ಆತ್ಮಶಕ್ತಿಯನ್ನು ಎರಡು ಪ್ರಧಾನಭಾಗಗಳನ್ನಾಗಿ ಮಾಡಿದ್ದಾನೆ. ಒಂದು ಅಮೂರ್ತ, ಅಭೌತವೂ ಮತ್ತೊಂದು ಭೌತ, ಭೌತಾತ್ಮಕ್ಕೆ ರಕ್ಷಣ, ಪ್ರತ್ಯುತ್ಪತ್ತಿ ಶಕ್ತಿಗಳೂ, ಪಂಚೇಂದ್ರಿಯ ಶಕ್ತಿಗಳೂ ಉಂಟು. ಅಮೂರ್ತ ಆತ್ಮಕ್ಕೆ ಆದಿ ಇರುವುದರಿಂದ ಒಂದು ಕಡೆ ದ್ರವ್ಯಕ್ಕೂ, ಆದರೆ ಅಮರವಾದದ್ದರಿಂದ ಮತ್ತೊಂದು ಕಡೆ ಪರಮಾತ್ಮನಿಗೂ ಸಂಬಂಧವಿದೆ. ಅದು ಇಂದ್ರಿಯಗಳ ಸಹಾಯವಿಲ್ಲದೆಯೆ ವಿಶ್ವಭಾವಗಳನ್ನು ಗ್ರಹಿಸಬಲ್ಲುದು. ಅಮೂರ್ತ ಆತ್ಮ ವಿಶ್ವಬುದ್ಧಿಯ ಪ್ರತಿಬಿಂಬವಾದ್ದರಿಂದ ಅದಕ್ಕೆ ಭೌತಸಾಧನ ಬೇಕಾಗಿಲ್ಲ. ಅಮೂರ್ತ ಭಾವನೆಗಳಿಗೆಲ್ಲ ಅದು ಆಧಾರಸ್ಥಾನ. ಮನುಷ್ಯನು ಸ್ವಭಾವತಃ ಸುಗುಣ ದುರ್ಗುಣಗಳೆರಡನ್ನೂ ಉಳ್ಳವನು. ಶ್ರದ್ಧಾಭಕ್ತಿಗಳಿಂದಲೂ ನಿಯಮಾಚಾರಗಳಿಂದಲೂ ದುರ್ಗುಣಗಳನ್ನು ಕಳೆದುಕೊಂಡು ಸುಗುಣಗಳನ್ನು ಮೆರೆದು ಪರಿಶುದ್ಧನಾಗಬೇಕು. ಸುಗುಣ ಮಾತ್ರ ದೇವರಿಂದ ಬಂದದ್ದು, ದುರ್ಗುಣ ಮನುಷ್ಯಕೃತ ಎಂಬ ತತ್ವವನ್ನು ಇವನು ಒಪ್ಪುವುದಿಲ್ಲ.

ಮಿರ್ಜಾ ಅಬುಲ್‌ಹಸ್ಸನ್ ಜಿಲ್‌ವಹ್:–ಇಸ್‌ಫಹಾನ್ ಬಳಿಯ ಅರ್ದಸ್ತಾನಿನವನಾದ ಇವನ ತಂದೆ ಸಿಂಧ್-ಹೈದರಾಬಾದಿಗೆ ಮೊದಲು

ಬಂದು, ತರುವಾಯ ಅಹಮದಾಬಾದಿನಲ್ಲಿ ಕೆಲವು ಕಾಲ ನೆಲಸಿದ್ದನು. ಅಲ್ಲಿದ್ದಾಗ ಸುಮಾರು ಕ್ರಿ. ಶ. ೧೬೨೦–೨೨ ರಲ್ಲಿ ಅಬುಲ್‌ಹಸ್ಸಾನ್ ಹುಟ್ಟಿದನು. ಸುಮಾರು ಏಳುವರ್ಷ ವಯಸ್ಸಾಗಿದ್ದಾಗ ಅಬುಲ್ ಹಸ್ಸಾನನು ತನ್ನ ತಂದೆಯೊಡನೆ ಇರಾನಿಗೆ ಮರಳಿ, ಅಲ್ಲಿ ದರ್ಶನ ವ್ಯಾಸಂಗದಲ್ಲಿ ಜೀವನ ಕಳೆದನು. ಸ್ವತಂತ್ರ ಗ್ರಂಥಗಳನ್ನು ಬರೆಯುದಿದ್ದರೂ, ಹಲವು ಹಿಂದಿನ ಗ್ರಂಥಗಳಿಗೆ ವ್ಯಾಖ್ಯಾನಗಳನ್ನು ಬರೆದಿದ್ದಾನೆ. ಇವನು ಕವಿಯೂ ಆಗಿದ್ದನು.

ಸರ್ ಮುಹಮ್ಮದ್ ಇಕ್‌ಬಾಲ್: ಇವನು ಸುಮಾರು ೨೦೦ ವರ್ಷಗಳ ಕೆಳಗೆ ಇಸ್ಲಾಂ ಮತಕ್ಕೆ ಸೇರಿದ ಕಾಶ್ಮೀರದ ಬ್ರಾಹ್ಮಣ ಪಂಡಿತ ಮನೆತನಕ್ಕೆ ಸೇರಿದವನು. ಇಕ್‌ಬಾಲನು ಸಿಯಾಲ್‌ಕೋಟಿನಲ್ಲಿ ಕ್ರಿ. ಶ. ೧೮೭೭ ರಲ್ಲಿ ಹುಟ್ಟಿದನು. ಇಂಡಿಯದಲ್ಲಿ ವಿದ್ಯಾಭ್ಯಾಸ ಮುಗಿಸಿಕೊಂಡು ಯೂರೋಪಿಗೆ ಹೋಗಿ ಇರಾನಿಯನ್ ದರ್ಶನಶಾಸ್ತ್ರವನ್ನು ಅಭ್ಯಾಸಮಾಡಿ ಪದವಿ ಸಂಪಾದಿಸಿದನು. ಇವನ ಗ್ರಂಥಗಳೆಲ್ಲವೂ ಸಾಮಾನ್ಯವಾಗಿ ಪದ್ಯದಲ್ಲಿವೆ. (ಉದಾಹರಣೆಗೆ: ರುಮೂಸ್‌ಎಬೇಖುದಿ, ಸ್ಟಬೂರ್ ಎಅಜಮ್, ಪಯಾಮ್‌ಎ ಮುಶ್ರಿಕ್, ಜಾವೀದ್ ನಾಮ, ಇಸ್‌ರಾರ್ ಎ ಖುದಿ, ಮೊದಲಾದುವು).

ತನ್ನ ಸಧರ್ಮಿಗಳು ಸೂಫಿ ತತ್ವವನ್ನು ತಪ್ಪು ತಿಳಿದುಕೊಂಡು, ಐಹಿಕ ಸುಖ ಸಂಪತ್ತುಗಳಿಗೆ ಕಷ್ಟಪಡದೆ, ಸೋಮಾರಿಗಳಾಗಿ ಪ್ರಗತಿಯಲ್ಲಿ ಹಿಂದೆ ಬಿದ್ದಿರುವುದನ್ನು ಕಂಡು ಇಕ್‌ಬಾಲನು ಅವರ ಐಹಿಕ ಪ್ರಗತಿಯ ಕಡೆಗೆ ಲಕ್ಷ್ಯಕೊಟ್ಟು, ಹೊಸತತ್ವ ಬೋಧನೆಗೆ ತೊಡಗಿದನು. ಮನುಷ್ಯನು ಬದುಕಬೇಕಾದರೆ ಆತ್ಮನಿರಸನದಿಂದಲ್ಲ, ಆದರೆ ಆತ್ಮಸ್ಥಾಪನೆಯಿಂದ. ಅಪೂರ್ಣಾತ್ಮ ಪೂರ್ಣವಾಗುವುದು ಸ್ವನಿರಸನದಿಂದಲ್ಲ, ಆದರೆ ಸ್ವಪರಿಪೂರ್ಣತೆಯಿಂದ; ಎಂದರೆ, ಸಮಸ್ತ ವಿಷಯದಲ್ಲೂ ತಾನು ಬಲಗೊಳ್ಳುವುದರಿಂದ. ಪೈಗಂಬರನು ಹೇಳಿರುವಂತೆ "ನಿನ್ನ ಶೀಲ ಸ್ವಭಾವಗಳು ದೇವರ ಗುಣಗಳನ್ನು ಹೋಲುವಂತೆ ಮಾಡಿಕೊ" ಎಂಬುದನ್ನು ಎಲ್ಲರೂ ಅನುಸರಿಸಬೇಕು. ದೇವರ ಮುಖ್ಯ ಗುಣ ಶಕ್ತಿ, ಜ್ಞಾನ, ಪ್ರೇಮ, ಚೈತನ್ಯ; ದೌರ್ಬಲ್ಯ, ಅಜ್ಞಾನ, ದ್ವೇಷ, ನಿತ್ರಾಣ

ಅಲ್ಲ. ಆದ್ದರಿಂದ ಜೀವನದ ಸರಿಯಾದ ತತ್ವ ಸ್ವನಿರಸನವಲ್ಲ; ಸ್ವಸ್ಥಾಪನೆ. ತಾನು ಎಂಬುದು ಎರಡು ಸ್ವರೂಪಗಳಲ್ಲಿ ತೋರ್ಪಡಿಸಿಕೊಳ್ಳಬಹುದು. ಒಂದು ತನ್ನ ಪರಿಪೂರ್ಣತೆಯ ಸಾಧನೆಗಾಗಿ, ಸ್ವಸ್ಥಾಪನೆಯ ಸ್ವರೂಪದಲ್ಲಿ; ಇದು ಅತ್ಯಗತ್ಯವಾದ್ದು. ಮತ್ತೊಂದು ಅಹಂಕಾರ ಸ್ವರೂಪದಲ್ಲಿ; ಇದೀಗ ಕೆಟ್ಟದ್ದು. ಈ ತತ್ವಗಳು ಹೊಸದೇನೂ ಅಲ್ಲದಿದ್ದರೂ ಮುಸ್ಲಿಂ ಜಡ ಸಮಾಜ ಮರಳಿ ಎಚ್ಚೆತ್ತುಕೊಳ್ಳಲು ಅತ್ಯಾವಶ್ಯಕವಾಗಿ ಅವನ್ನು ಬೋಧಿಸಬೇಕಾಯಿತು.

# ಅಧ್ಯಾಯ ೧೧

## ಸೂಫಿ ಧರ್ಮದ ಚರಿತ್ರೆ

### ಆದಿ ಸೂಫಿಗಳು ಮತ್ತು ಅವರ ವಚನಗಳು.

ಎಲ್ಲ ಅನುಭಾವಿಗಳೂ—ಇರಾನಿನಲ್ಲಾಗಲಿ ಇಂಡಿಯದಲ್ಲಾಗಲಿ ಅರೇಬಿಯದಲ್ಲಾಗಲಿ ಚೀನದಲ್ಲಾಗಲಿ, ಯೂರೋಪಿನಲ್ಲೇ ಆಗಲಿ ವಿಶ್ವದಲ್ಲೇ ಆಗಲಿ—ದೇವರ ವಿಷಯದಲ್ಲಿ ತಮ್ಮ ಭಕ್ತಿ ಪ್ರೇಮಗಳನ್ನು ಹೆಚ್ಚುಕಡಮೆ ಒಂದೇ ರೀತಿಯಲ್ಲಿ ತೋರಿಸಿದ್ದಾರೆ. ಕಾಲ ದೇಶ ವರ್ತಮಾನಗಳಿಗೆ ಅನುಸಾರವಾಗಿ, ಸಮಾಜ ಸಂಪ್ರದಾಯ ಪ್ರಗತಿಗಳಿಗೆ ಅನುಸಾರವಾಗಿ, ಹಲವೆಡೆಗಳಲ್ಲಿ ಸೂಕ್ಷ್ಮಭೇದಗಳಿರಬಹುದು. ಆದರೆ, ಮೂಲತಃ ಎಲ್ಲರ ಭಾವನೆಗಳೂ ಒಂದೇ ಹೆದ್ದಾರಿಯಲ್ಲಿ ಹರಿದಿವೆ ಎಂದು ಹೇಳಬಹುದು. ಇಸ್ಲಾಂ ಸೂಫಿಗಳು ೮ರಿಂದ ೧೫ನೆಯ ಶತಮಾನಗಳ ವರೆಗಿನ ಕಾಲದಲ್ಲಿ ಆಗಿಹೋದರು. ಸೂಫಿಚರಿತ್ರೆಯನ್ನು (೧) ತಾಪಸ ಜೀವನ, (೨) ತತ್ತ್ವ ಪ್ರತಿಪಾದನೆ, (೩) ಮಠಗಳ ಏರ್ಪಾಡು, (೪) ಇಳಿಗಾಲ ಎಂದು ಸ್ಥೂಲವಾಗಿ ನಾಲ್ಕು ಭಾಗ ಮಾಡಬಹುದು.

ಮೊದಲನೆಯ ಕಾಲ ಪೈಗಂಬರನಿಂದ ಅಬ್ಬಾಸಿಯರ ಏಳಿಗೆಯ ವರೆಗೆ. ಪೈಗಂಬರನ ಮೊದಲ ಅನುಯಾಯಿಗಳು ಇಸ್ಲಾಮಿನಲ್ಲಿ ಶ್ರದ್ಧಾಭಕ್ತಿಗಳುಳ್ಳವರಾಗಿ ತಾಪಸಜೀವಿಗಳಾಗಿದ್ದರು. ಇದರ ಜೊತೆಗೆ ಈ ಸಾಧುಗಳು ಹುಟ್ಟಿನಿಂದ ಬಡವರಾಗಿದ್ದುದರಿಂದ, ಮನೆಮಠಗಳಿಲ್ಲದೆ ಪೈಗಂಬರ್ ಕಟ್ಟಿದ ಮಸೀದಿಯಲ್ಲೇ ವಾಸಮಾಡಿಕೊಂಡಿದ್ದರು. ಜನರು ಇವರನ್ನು ಸೂಫ್ಫ ಎಂದು ಕರೆದರು. ಸುಫ್ಫ ಎಂದರೆ ಮಾಳಿಗೆ ಎಂದು ಅರ್ಥ. ಇವರು ಮಾಳಿಗೆಯ ಮೇಲೆ ಮಲಗುತ್ತಿದ್ದುದರಿಂದ ಈ ಹೆಸರು ಬಂತು. ಕುರಾನ್ ಓದುವುದು, ಧರ್ಮ ಪ್ರಸಂಗ ನಡೆಸುವುದು—ಇವೇ ಮೊದಲಾದುವು ಇವರ ಮುಖ್ಯ ಕೆಲಸವಾಗಿತ್ತು. ಪೈಗಂಬರನೂ ಇತರ ಮುಸ್ಲಿಮರೂ ಇವರನ್ನು ಗೌರವಿಸುತ್ತಿದ್ದರು. ನಾಲ್ಕನೆಯ ಖಲೀಫನೂ

ಪೈಗಂಬರನ ಅಳಿಯನೂ ಆದ ಅಲಿ ಎಳೆಯತನದಿಂದ ಪೈಗಂಬರನಲ್ಲೇ ಬೆಳೆದು, ವಿದ್ಯೆ ಕಲಿತು, ಶ್ರದ್ಧಾಭಕ್ತಿಗಳಲ್ಲಿ ಸುಶಿಕ್ಷಣ ಹೊಂದಿ, ತಾತ್ವಿಕ ಮನೋವೃತ್ತಿಗೆ ಹೆಸರಾಗಿದ್ದನು. ಅವನು ಕೊಂಚ ಕಾಲ ಮಾತ್ರ ಆಳಿದರೂ ಕೂಫ ಮತ್ತು ಸುತ್ತಮುತ್ತಲಿನ ಪ್ರದೇಶಗಳಲ್ಲಿ ಅನೇಕರು ಅವನನ್ನು ಮೆಚ್ಚಿ ಅನುಯಾಯಿಗಳಾದರು. ಕಾಲಕ್ರಮೇಣ ಹೆಚ್ಚು ಕಡಮೆ ಎಲ್ಲ ಸೂಫಿ ಪಂಗಡದವರೂ ಪೈಗಂಬರನ ತರುವಾಯ ಅಲಿಯನ್ನು ತಮ್ಮ ಗುರುವಾಗಿ ಸ್ವೀಕರಿಸಿ, ತಮ್ಮ ಗುರುಪರಂಪರೆಯನ್ನು ಅವನಿಂದ ತರುತ್ತಾರೆ. ಸೂಫಿಗಳಲ್ಲಿ ಗುರುಭಕ್ತಿ ಮತ್ತು ಗುರುಸೇವೆ ಬಹಳ ಹೆಚ್ಚು. ಒವಯ್‌ಸ್ ಕರನಿ ಅಲಿಯನ್ನು ಬಹಳವಾಗಿ ಮೆಚ್ಚಿಕೊಂಡಿದ್ದನು. ಅಲಿ ದಂಡಯಾತ್ರೆ ಹೊರಟಾಗ ತಾನೂ ಅವನೊಡನೆ ಹೋಗಿ ಯುದ್ಧದಲ್ಲಿ ಮಡಿದನು. ಇವನು ಪೈಗಂಬರನನ್ನೂ ಬಹಳ ಭಕ್ತಿಯಿಂದ ಕಾಣುತ್ತಿದ್ದನು. ಒಮ್ಮೆ ಪೈಗಂಬರನಿಗೆ ಉಹದ್ ಕದನದಲ್ಲಿ ಎರಡು ಹಲ್ಲುಗಳು ಉದುರಿಹೋಗಲು, ತಾನೂ ಎರಡು ಹಲ್ಲುಗಳನ್ನು ಕಿತ್ತುಹಾಕಿಕೊಂಡನಂತೆ. ಅಮ್ಮಾರ್ ಯಸೂರ್, ಅಬೂಸ್ಸರ್, ಮಾಲಿಕ್, ಕುಮಯ್‌ಲ್ ಮೊದಲಾದವರು ಅಲಿಯ ಅನುಯಾಯಿಗಳಲ್ಲಿ ಕೆಲವರು. ಈಜಿಪ್ಟ್ ದೇಶದಲ್ಲೂ ಅಲಿಗೆ ಹಲವರು ಅನುಯಾಯಿಗಳಾದರು. ಒಂದು ದೃಷ್ಟಿಯಿಂದ, ಈಜಿಪ್ಟನ್ನು ಸೂಫಿ ಮತಕ್ಕೆ ಎರಡನೆಯ ತವರೆನ್ನಬಹುದು. ಅಲಿಯ ವಿಷಯದಲ್ಲಿ ಜನರ ಗೌರವ ಭಕ್ತಿಗಳು ಎಷ್ಟರಮಟ್ಟಿಗೆ ಹೋಗಿದ್ದುವೆಂದರೆ, ಅವನು ಜೀವಿಸಿದ್ದಾಗಲೇ ಕೆಲವರು ಅವನನ್ನು ದೇವತ್ವಕ್ಕೆ ಏರಿಸಿ ಭಗವಂತನ ಅವತಾರವೆಂದು ನಂಬಿದರು. ಅವನ ಮರಣಾನಂತರ ಈ ಭಾವ ಮತ್ತೂ ಬಲಗೊಂಡದ್ದರಿಂದಲೂ, ಅವನಿಗೂ ಪೈಗಂಬರನಿಗೂ ಇದ್ದ ಹತ್ತಿರ ಸಂಬಂಧದಿಂದಲೂ, ಅವನು ಹೇಳಿದ ಅಥವಾ ಅವನಿಗೆ ಆರೋಪಿಸಿದ ಅಮೃತವಚನಗಳಿಂದಲೂ ಅಲಿ ಸತ್ಯಾನ್ವೇಷಿಗಳಾದ ಸೂಫಿಗಳಿಗೆ ಆದಿಗುರುವಾಗಿ ಪರಿಣಮಿಸಿದನು.

ಮೊದಮೊದಲು ಸೂಫಿಗಳಲ್ಲಿ ಬಹುಮಂದಿ ಇರಾನಿಯನ್ನರಾಗಿದ್ದರು. ಇವರ ನಂತರ ಸಿರಿಯ ಮತ್ತು ಈಜಿಪ್ಟ್ ದೇಶದವರು ಬಂದರು.

ಆದಿಸೂಫಿಗಳು ವಿರಕ್ತ ಜೀವನವನ್ನು ಜೀವಿಸಿ ಕೈಲಾದಷ್ಟು ಸಲ ಮೆಕ್ಕಾ ಯಾತ್ರೆ ಮಾಡಿಕೊಂಡು, ಕೆಲವರು ಊರ ಹೊರಗೆ ವಿಹಾರ (ಆಶ್ರಮ) ಗಳನ್ನು ಕಟ್ಟಿಕೊಂಡು ವಾಸಿಸುತ್ತಿದ್ದರು. ಕ್ರಮೇಣ ಅವರಿಗೆ ಒಂದು ಸಣ್ಣ ಭಕ್ತಮಂಡಲಿಯೂ ಏರ್ಪಡುತ್ತಿತ್ತು. ಅವರು ಯಾವ ಗ್ರಂಥ ಬರೆದಿಲ್ಲ. ಅಥವಾ ಬರೆದಿದ್ದಿರಬಹುದಾದ ಗ್ರಂಥಗಳು ನಮಗೆ ಮುಟ್ಟಿಲ್ಲ. ಆದರೆ, ಅವರನಂತರ ಬಹುಕಾಲದ ಮೇಲೆ ಬಂದ ಅವರ ಜೀವನ ಚರಿತ್ರಕಾರರು ಅವರಿಂದ ಉಕ್ತವಾದುವೆಂದು ಹೇಳಿರುವ ವಚನಗಳು ಸಿಕ್ಕುತ್ತವೆ. ಈ ವಚನಗಳು ನಿಜವಾಗಿ ಅವರವೇ ಎನ್ನುವುದಕ್ಕೆ ಸಾಲುವಷ್ಟು ಪ್ರಮಾಣವಿಲ್ಲ. ಆದರೂ, ಅವುಗಳಲ್ಲಿ ಹಲವಾದರೂ ಅವರವಾಗಿರಬೇಕೆಂದು ಒಪ್ಪಿಕೊಂಡು, ಆ ನುಡಿಗಳು ಅವರ ಬದುಕಿಗೆ ಕನ್ನಡಿ ಎಂದು ಬಗೆಯುವುದಾದರೆ, ಅವರ ಜೀವನ ಇಸ್ಲಾಂ ತತ್ತ್ವ ಮತ್ತು ಪೈಗಂಬರನ ಜೀವನ ಸಂಪ್ರದಾಯಗಳ ಮೇಲೆ ನಿಂತು ಕ್ರೈಸ್ತ ಮತ್ತು ಬೌದ್ಧ ಸಾಧುಗಳ ಪ್ರಭಾವಕ್ಕೆ ಸಿಕ್ಕಿದ್ದಂತೆ ಕಾಣುತ್ತದೆ. ಇರಾನಿನ ಉತ್ತರ ಮತ್ತು ಆಗ್ನೇಯ ಭಾಗಗಳಲ್ಲಿ ಈ ಕ್ರೈಸ್ತ ಮತ್ತು ಬೌದ್ಧ ಸಾಧುಗಳು ಅಲ್ಲಲ್ಲಿ ಹರಡಿಕೊಂಡಿದ್ದರು. ಆದಿ ಇರಾನ್ ಸೂಫಿಗಳಲ್ಲಿ ಹಲವರು ಆ ಪ್ರಾಂತದವರು. ಈ ಸೂಫಿಗಳ ಪೈಕಿ ಕೆಲವರ ವಿಷಯವನ್ನು ಇಲ್ಲಿ ಸಂಕ್ಷೇಪವಾಗಿ ಹೇಳಬಹುದು.

ಹಬೀಬ್ ಅಜಮಿ (ಸ. ಕ್ರಿ. ಶ. ೭೩೮). ಇವನು ಬಡ್ಡಿಗೆ ಹಣ ಕೊಟ್ಟು ದುಡ್ಡು ಮಾಡುತ್ತಿದ್ದನು. ಕೊನೆಗೆ ಬದುಕು ರೋಸಿ ವಿರಕ್ತ ವೃತ್ತಿಯನ್ನು ಕೈಕೊಂಡು, ಯೂಫ್ರಟಿಸ್ ನದಿಯ ದಡದಲ್ಲಿ ಒಂದು ಮಠ ಕಟ್ಟಿಕೊಂಡು ವಾಸಿಸುತ್ತಿದ್ದನು. ವಿದ್ವತ್ಕ್ಕೂ ಭಕ್ತಿಗೂ ಹೆಸರಾಗಿದ್ದ ಹಸನ್‌ಬಸ್‌ರಿ ಎಂಬವನ ಸ್ನೇಹಿತನೂ ಶಿಷ್ಯನೂ ಆಗಿದ್ದನು. ಈ ಹಸನ್‌ಬಸ್‌ರಿ ಅಲಿಯಿಂದ ನೇರವಾಗಿ ಶಿಕ್ಷಣಪಡೆದವನೆಂದು ನಂಬಿಕೆ ಇದೆ. ಇವನ ವಚನಗಳಲ್ಲೊಂದು—"ನಾನು ನನ್ನ ಆತ್ಮವನ್ನು ಪರಿಶುದ್ಧ ಮಾಡಿಕೊಳ್ಳುವುದರಲ್ಲಿ ತೊಡಗಿದ್ದೇನೆ; ಇತರರು ಉಪನ್ಯಾಸ ಕೊಡುವುದರಲ್ಲೂ ಕಾಗದವನ್ನು ಕರಿದುಮಾಡುವುದರಲ್ಲೂ ತೊಡಗಿದ್ದಾರೆ."

ಅಯಾಸ್ಸಿನ ಮಗ ಫ್ಲುಸಯ್‌ಲ್ (ಸ. ಕ್ರಿ. ಶ. ೮೦೩). ಇವನು ಮರ್ವ್‌ದ ನಿವಾಸಿ. ಮರ್ವ್ ಬೌದ್ಧಧರ್ಮ, ಮಾನಿಧರ್ಮ ಮತ್ತು ನೆಸ್ಟೋರಿಯನ್ ಕ್ರೈಸ್ತ ಧರ್ಮಗಳ ಕೇಂದ್ರಗಳಲ್ಲೊಂದು. ಇವನ ವಚನ—"ನಾನು ದೇವರನ್ನು ಪ್ರೀತಿಸುತ್ತೇನೆ. ಆದ್ದರಿಂದ ಅವ ನನ್ನು ಪೂಜಿಸುತ್ತೇನೆ. ಏಕಾಂತದಲ್ಲಿ ಕ್ಷೇಮವುಂಟು. ದೇವರಿಗೆ ಅಂಜುವವನಿಗೆ ಎಲ್ಲರೂ ಅಂಜುತ್ತಾರೆ."

ಅಬೂಅಲೀಸಕೀಕ್ (ಸ. ಕ್ರಿ. ಶ. ೮೧೦). ಬಲ್ಕ್ ದೇಶದವನು. ಇವನು ಇಬ್ರಾಹಿಮ್ ಅಧಮ್‌ನೊಡನೆ ಈ ಕೆಳಗಿನ ಸಂವಾದ ನಡೆಸಿದನಂತೆ—

ಅಬುಅಲೀ: ನಿನ್ನ ಜೀವನೋಪಾಯವೇನು ?

ಇಬ್ರಾಹಿಮ್: ನನ್ನ ಕೈಯಲ್ಲಾದದ್ದನ್ನೆಲ್ಲ ಮಾಡುತ್ತೇನೆ. ದೊರೆತದ್ದಕ್ಕೆ ದೇವರನ್ನು ವಂದಿಸುತ್ತೇನೆ. ದೊರೆಯದಿದ್ದರೆ ಮುಂದೆ ಒಳ್ಳೆಯದಾಗಬಹುದೆಂದು ತಾಳ್ಮೆಯಿಂದ ನಂಬಿಕೊಂಡಿರುತ್ತೇನೆ.

ಅಬುಅಲೀ: ಇದನ್ನು ನಮ್ಮೂರಿನ ನಾಯಿಗಳೂ ಮಾಡುತ್ತವೆ.

ಇಬ್ರಾಹಿಮ್: ಹಾಗಾದರೆ, ನೀನೇನು ಮಾಡುತ್ತೀಯೆ ?

ಅಬೂಅಲೀ: ಏನಾದರೂ ಸಿಕ್ಕಿದರೆ ಬಡಬಗ್ಗರಿಗೆ ಸಹಾಯ ಮಾಡುತ್ತೇನೆ. ಏನೂ ಸಿಕ್ಕದಿದ್ದರೆ ದೇವರನ್ನು ವಂದಿಸುತ್ತೇನೆ.

ಮಾರೂಫ್‌ಕರ್ಖಿ (ಸ. ಕ್ರಿ. ಶ. ೮೨೧). ಇವನು ಷಿಯಾ ಮತೀಯರ ೮ನೆಯ ಇಮಾಮ್‌ಆದ ರೆಸ್ಸ ಎಂಬವನ ಶಿಷ್ಯ. ಇವನ ವಚನ—"ಸೂಫಿ ಈ ಪ್ರಪಂಚದಲ್ಲಿ ದೇವರ ಅತಿಥಿ ಇದ್ದಂತೆ. ಅತಿಥಿಗೆ ತಕ್ಕ ನಡತೆ ಇರಬೇಕು. ಬಡಿಸಿದ್ದನ್ನು ಉಣಬೇಕೆ ಹೊರತು, ಕೇಳುವ ಅಧಿಕಾರವಿಲ್ಲ. ಪ್ರೇಮ ದೇವರು ಕರುಣಿಸುವ ಅನುಗ್ರಹ."

ಬಷರ್‌ಎಹಫ್ಪಿ (ಸ.ಕ್ರಿ.ಶ. ೮೪೧). ಇವನು ಖೊರಾಸಾನಿನವನು. ಇವನ ಮುತ್ತಾತ ಅಲಿಯಿಂದ ಮುಸ್ಲಿಮನಾದನು. ಇವನ ವಚನ— "ದೇವರನ್ನು ಅರಿಯದವನಿಗೆ ಮಹಾ ಕೇಡು. ದೇವರಲ್ಲಿ ಅಕೃತ್ರಿಮ ಮನಸ್ಸುಳ್ಳವನೇ ಸೂಫಿ."

ಖಿಸ್ರುವಯ್‌ನ ಮಗ ಅಹ್‌ಮದ್ (ಸ. ಕ್ರಿ. ಶ. ೮೫೪). ಬಲ್ಖ್ ದೇಶದವನು. ಇವನ ವಚನ—"ಆತ್ಮಕ್ಕೆ ಉಸಿರೆರೆಯುವುದಕ್ಕಾಗಿ ಆತ್ಮವನ್ನು ಕೊಲ್ಲು. ದೇವರು ಸುವ್ಯಕ್ತ; ಅವನನ್ನು ನೋಡದಿದ್ದರೆ ನೀನು ಕುರುಡ, ಅಷ್ಟೆ."

ಜುನ್‌ನೂನ್ ಇಬ್ರಾಹೀಮ್ (ಸ. ಕ್ರಿ. ಶ. ೮೬೦). ಇವನು ಇರಾನ್ ಹೊರಗಿನ ಸೂಫಿಗಳಲ್ಲಿ ಸೂಫೀಮಾರ್ಗ ಪ್ರವರ್ತನಾಚಾರ್ಯನೆಂದು ಹೆಸರುಗೊಂಡಿದ್ದಾನೆ. ಇವನು ನೂಬಿಯನ್ ಜನಧವನು. ಈಜಿಪ್ಟಿನಲ್ಲಿ ವಾಸಿಸುತ್ತಿದ್ದನು. ಇವನ ವಚನ—"ಆರಿಫ್ ಅಥವಾ ಜ್ಞಾನಿ ದೇವರನ್ನು ಸವಿಾಪಿಸಿದಂತೆಲ್ಲ ನಮ್ರನಾಗುತ್ತ ಬರುತ್ತಾನೆ. ದೇವರು ನಮ್ಮ ಆತ್ಮದಲ್ಲಿ ತನ್ನ ಜ್ಯೋತಿಯನ್ನು ಬೆಳಗುವುದೇ ಮಾರಿಫತ್ ಅಥವಾ ಜ್ಞಾನ."

ಮೂಅಸ್‌ಮಗ ಯಾಹ್ಯ (ಸ. ಕ್ರಿ.ಶ. ೮೭೨). ಬಲ್ಖ್ ದೇಶದವನು. ಇವನ ವಚನ—"ನಿಜವಾದ ಪ್ರೇಮಿ ತನ್ನ ಪ್ರೇಮಿ ಕೋರಿದ್ದನ್ನು ಮಾಡುತ್ತಾನೆ". "ಬರಿಯ ತಾಪಸಿ ಮುಂದೆ ಸ್ವರ್ಗಸುಖ ಸಿಕ್ಕುವುದೆಂದು ಈಗ ಇಲ್ಲಿನ ಭೋಗವನ್ನು ತೊರೆಯುತ್ತಾನೆ. ಆದರೆ, ಸೂಫಿ ಸ್ವರ್ಗ ಸುಖವನ್ನೂ ಬಿಟ್ಟವನು." "ತನ್ನ ಪ್ರೇಮಿಯ ಪಕ್ಕದಲ್ಲಿ ಬೇರೊಬ್ಬನನ್ನು ನೋಡುವವನು ಪ್ರೇಮಿಯನ್ನು ನೋಡಲಾರ. ನಿಜವಾದ ಪ್ರೇಮ ಪ್ರೇಮಿಯ ದಯೆ ಕ್ರೌರ್ಯಗಳಿಂದ ಏರಿಳಿಯಲಾರದು."

ಸರೀಅಲ್‌ಸಕತೀ (ಸ. ಕ್ರಿ.ಶ. ೮೬೭). ಇವನ ವಚನ—"ಆತ್ಮ ನಿರ್ಲಿಪ್ತತೆ ಮತ್ತು ಸತ್ಯ ನಿಷ್ಠೆಯೇ ನಿಜವಾದ ಜ್ಞಾನ. ದೇವರು ಒಬ್ಬನೇ ಎಂದರೆ, ನಿನ್ನ ಆತ್ಮ ದೇವರಲ್ಲಿ ಒಂದಾಗಿದೆ ಎಂದರ್ಥ. ಸೂಫಿಯ ಜ್ಞಾನಜ್ಯೋತಿ ಭಕ್ತಿಜ್ಯೋತಿಯನ್ನು ನಂದಿಸಿ ಬಿಡುವುದಿಲ್ಲ".

ಹಾತಿಮ್ ಅಸಂ (ಸ. ಕ್ರಿ.ಶ. ೮೫೧). ಬಲ್ಖ್ ದೇಶದವನು. ಇವನು ಸೂಫಿ ನಾಲ್ಕು ತೆರದ ಸಾವನ್ನು ಅನುಭವಿಸಬೇಕೆಂದು ಹೇಳುತ್ತಿದ್ದನು. (೧) ಬಿಳಿಯ ಸಾವು, ಎಂದರೆ ಹಸಿವು. (೨) ಹಸುರು ಸಾವು, ಎಂದರೆ ಚಿಂದಿ ಹಚ್ಚಡ ಹೊದಕೆ. (೩) ಕರಿಯ ಸಾವು,

ಎಂದರೆ ಕಷ್ಟದಲ್ಲಿ ತಾಳ್ಮೆ. (೪) ಕೆಂಪು ಸಾವು, ಎಂದರೆ ರಾಗ ದ್ವೇಷಗಳ ಸಂಯಮ."

ಬಿಸ್ತಾಮಿನ ಬಾಯಸ್ಸೀದ್ (ಸ. ಕ್ರಿ.ಶ. ೮೭೪). ಖೊರಾಸಾನಿನವನು. ಗ್ರಂಥಗಳನ್ನು ಬಿಟ್ಟುಹೋಗಿದ್ದ ಸೂಫಿಗಳಲ್ಲಿ ಇವನೊಬ್ಬನು. ಇಮಾಮ್‌ಘಸ್ಸಾಲಿ ಇವನ ಗ್ರಂಥಗಳನ್ನು ಉಪಯೋಗಮಾಡಿಕೊಂಡಿದ್ದಾನೆ. ಆದರೆ, ಅವು ಈಗ ದೊರೆತಿಲ್ಲ. ಬಾಯಸ್ಸೀದ್‌ಸೂಫಿ ಮಾತ್ರವಲ್ಲದೆ ದಾರ್ಶನಿಕನೂ ಕವಿಯೂ ದೇವತಾ ಶಾಸ್ತ್ರಜ್ಞನೂ ಆಗಿದ್ದನು. ಇವನ ವಚನ—"ಬಟ್ಟಲು ಹಿಡಿದಿರುವವನೂ ಬಟ್ಟಲಿನ ಕಳ್ಳು ಕಳ್ಳು ಕುಡಿಯುವವನೂ ನಾನೆ. ಒಬ್ಬ ದೇವರಿಂದ ಮತ್ತೊಬ್ಬ ದೇವರನ್ನು ಅರಸುತ್ತ ಹೋದೆ. ಒಳಗಿನಿಂದ ದನಿ ಬಂತು. 'ನೀನೆ ನಾನು'. ತಾನು ಸುಗುಣನೆಂಬ ಅಹಂಕಾರವೇ ಪರಮ ದುರ್ಗುಣ. ಸೂಫಿ ಧರ್ಮವೆಂದರೆ ಭೋಗತ್ಯಾಗ, ಕಷ್ಟಸ್ವೀಕಾರ."

ಇಬ್ರಾಹಿಮ್ ಅಧಮ್ (ಸ. ಕ್ರಿ.ಶ. ೮೭೫). ಇವನು ಮೊದಲು ಝೊರಾಸ್ಟ್ರಿಯನ್ ಧರ್ಮಕ್ಕೂ ತರುವಾಯ ಬೌದ್ಧಧರ್ಮಕ್ಕೂ ಕೇಂದ್ರವಾಗಿದ್ದ ಬಾಲ್ಕ್ ದೇಶದ ಒಬ್ಬ ಶ್ರೀಮಂತ. ತನ್ನ ಸುಖಿ ಸಂಪತ್ತುಗಳನ್ನು ತೊರೆದು ಭಿಕ್ಷುವಾದನು. ಒಂದು ಜನಾಂಗವನ್ನು ಆಳುವುದಕ್ಕಿಂತ ತನ್ನನ್ನು ತಾನು ಆಳಿಕೊಳ್ಳುವುದು ಒಳ್ಳೆಯದು ಎಂದು ಇವನು ಹೇಳುತ್ತಿದ್ದನಂತೆ. ಒಮ್ಮೆ ಬೇರೆ ಊರಿನವನೊಬ್ಬನು ಹತ್ತಿರದ ಮನೆಗೆ ದಾರಿತೋರೆಂದು ಕೇಳಲು, ಇವನು ಮಸಣದ ಕಡೆಗೆ ಕೈ ತೋರಿಸಿದನಂತೆ. ಇವನ ವಚನ—"ಒಂದು ಹೃದಯದಲ್ಲಿ ಎರಡು ಪ್ರೇಮಕ್ಕೆ ಎಡೆಯಿಲ್ಲ. ದೇವರ ಪ್ರೇಮ ಅಥವಾ ಪ್ರಪಂಚದ ಪ್ರೇಮ—ಎರಡರಲ್ಲಿ ಒಂದು ಮಾತ್ರ ಇರಲು ಸಾಧ್ಯ".

ಅಬುಲ್‌ಹುಸೆಯ್‌ನ್‌ನೂರಿ (ಸ. ಕ್ರಿ.ಶ. ೯೦೭). ಖೊರಾಸಾನಿನವನು. ಇವನ ವಚನ—"ದೇವರನ್ನು ದೇವರ ಮೂಲಕ ಮಾತ್ರ ತಿಳಿಯಬಹುದು. ಬುದ್ಧಿ ಸ್ವಯಂ ದುರ್ಬಲವಾದ್ದು. ಆದ್ದರಿಂದ ಅದು ಮಾರ್ಗದರ್ಶಕವಾಗಲಾರದು. ನಾನು ಅವನ ಜ್ಯೋತಿಯನ್ನೇ ನೋಡಿ ಮಗ್ನನಾಗಿ, ಕೊನೆಗೆ ನಾನೂ ಜ್ಯೋತಿಯಾದೆ. ಸಕಲ

ಕಲ್ಮಷವನ್ನು ಕಳೆದುಕೊಂಡ ಪರಿಶುದ್ಧಾತ್ಮನೇ ಸೂಫಿ. ಸೂಫಿ ಐಹಿಕ ಸಂಪತ್ತಿನ ಒಡೆಯನೂ ಅಲ್ಲ, ತೊತ್ತೂ ಅಲ್ಲ. ಯಾವುದಕ್ಕೂ ಅಂಟಿ ಕೊಂಡಿರದೆ ಇರುತ್ತಾನೆ. ಸೂಫಿಧರ್ಮ ಗೊಡ್ಡಾಚಾರವಲ್ಲ, ಶಾಸ್ತ್ರ ದರ್ಶನಗಳ ಅರಿವಲ್ಲ. ಅದು ಪರಿಶುದ್ಧತೆ, ಪರಿಪೂರ್ಣತೆ. ಅದು ಸ್ವಾತಂತ್ರ್ಯ, ಪೌರುಷ, ನಿರ್ಲಿಪ್ತತೆ, ತ್ಯಾಗ—ಸತ್ಯಕ್ಕಾಗಿ ಸ್ವಾರ್ಥ ತ್ಯಾಗ. ಅದು ಪ್ರಪಂಚ ದ್ವೇಷ, ಪರಮಾತ್ಮ ಸ್ನೇಹ".

ನೆಹಾವಂದಿನ ಜುನಯಿದ್ (ಸ. ಕ್ರಿ.ಶ. ೯೧೦). ಇವನು ದೇವತಾ ಶಾಸ್ತ್ರಜ್ಞನೂ ದಾರ್ಶನಿಕನೂ ಆಗಿದ್ದು, ಉಪನ್ಯಾಸ ಚರ್ಚೆ ಗಳಿಗೆ ಆರಂಭಿಸಿದ್ದ ಮೊದಮೊದಲ ಸೂಫಿಗಳಲ್ಲಿ ಒಬ್ಬನು. ಇವನ ವಚನ—"ಜ್ಞಾನದಲ್ಲಿ ಕೇವಲಾನಂದವನ್ನು ಮುಳುಗಿಸುವುದು ಕೇವ ಲಾನಂದದಲ್ಲಿ ಜ್ಞಾನವನ್ನು ಮುಳುಗಿಸುವುದಕ್ಕಿಂತ ಮೇಲು. ದೇವರ ಏಕತ್ವವನ್ನು ಧ್ಯಾನಿಸುವುದೇ ಕೇವಲಾನಂದ. ಜುನಯಿದ್ ಕೊನೆ ಗೊಂಡಮೇಲೂ ಅವನ ನಾಲಗೆಯ ಮೂಲಕ ಮೂವತ್ತು ವರ್ಷಗಳು ದೇವರು ಜನರಿಗೆ ಬೋಧಿಸಿದನು. ಜನರು ತಿಳಿಯಲಿಲ್ಲ. ಸೂಫಿ ಧರ್ಮವೆಂದರೆ—ದೇವರಲ್ಲಿ ಮಡಿಯಬೇಕು, ದೇವರಲ್ಲಿ ಬಾಳಬೇಕು ಸೂಫಿ ಕಾಲಡಿಯ ನೆಲದಂತೆ ಅಥವಾ ಮಳೆಗರೆವ ಮೋಡದಂತೆ ಇರ ಬೇಕು. ಸೂಫಿಯು ಒಳಗು ದೇವರು, ಹೊರಗು ಮನುಷ್ಯ."

ಅಬೂಬಕರ್ ಷಿಬ್ಲಿ (ಸ. ಕ್ರಿ. ಶ. ೯೪೬) ಖೊರಾಸಾನಿನವನು. ಪ್ರಸಿದ್ಧನಾದ ಮನ್‌ಸೂರ್ ಎಹಲ್ಲಾಜನ ಸಹಪಾಠಿ. ಇವನ ವಚನ— "ಮುಕ್ತಿ ಎಂದರೆ ದೇವರ ಹೊರತು ಸಮಸ್ತದಿಂದಲೂ ಬಿಡುಗಡೆ. ಸೂಫಿಗಳು ಸತ್ಯದ ಮಕ್ಕಳು. ದೃಶ್ಯ ಪ್ರಪಂಚವನ್ನು ನಿಜವೆಂದು ನಂಬದಿರುವುದೇ ಸೂಫಿ ಧರ್ಮ. ಸೂಫಿ ಇಹದಲ್ಲಿ ಹುಟ್ಟಿರದವನಂತೆ ಬದುಕಬೇಕು. ಪ್ರಾಣಾಯಾಮ ಇಂದ್ರಿಯ-ನಿಗ್ರಹಗಳೇ ಸೂಫಿಯ ಧರ್ಮ. ಸೃಷ್ಟಿಯನ್ನೆಲ್ಲ ತನ್ನ ಮನೆ ಎಂದು ಸೂಫಿ ತಿಳಿಯಬೇಕು".

ಈ ಮೇಲಿನ ವಚನಗಳಿಂದ ಮೊದಮೊದಲ ಸೂಫಿಗಳ ಸಾಮಾನ್ಯ ಅಭಿಪ್ರಾಯಗಳು ಸ್ಥೂಲವಾಗಿ ತಿಳಿಯುತ್ತವೆ. ಇವು ಇನ್ನೂ ಒಂದು ವ್ಯವಸ್ಥೆಗೆ ಬಂದು ಕಟ್ಟುಪಾಡಾಗಿರಲಿಲ್ಲ. ಮುಖ್ಯ ಲಕ್ಷಣಗಳೆಂದರೆ—

ಪ್ರಪಂಚ ನಿರ್ಲಿಪ್ತತೆ, ಸನ್ಮಾರ್ಗಪ್ರವೃತ್ತಿ, ದೈವಭಕ್ತಿ, ಪೈಗಂಬರ್‌ಭಕ್ತಿ, ಶಾಂತಿ—ಮೊದಲಾದುವು. ಶಿಥಿಲವಾಗಿಯೂ ಸಾಮಾನ್ಯವಾಗಿಯೂ ಇದ್ದ ಈ ಸೂಫಿಧರ್ಮಕ್ಕೆ ಆಧ್ಯಾತ್ಮಿಕ ಮತ್ತು ದಾರ್ಶನಿಕ ತತ್ವಗಳೂ, ಮಾನಸಿಕ ಮತ್ತು ನೈತಿಕ ವಿಚಾರಗಳೂ ಕ್ರಮೇಣ ಬಂದು ಸೇರಿಕೊಂಡುವು. ೧೦–೧೧ ನೆಯ ಶತಮಾನಗಳಲ್ಲಿ ಮುಸ್ಲಿಂ ದೇಶಗಳಲ್ಲೆಲ್ಲ ಪ್ರಚಾರದಲ್ಲಿದ್ದ ದರ್ಶನ, ದೇವತಾಶಾಸ್ತ್ರ, ವ್ಯಾಖ್ಯಾನಮತ, ವಿಜ್ಞಾನವಾದಗಳ ಪ್ರಭಾವ ಸೂಫಿಗಳ ಮೇಲೂ ಬಿತ್ತು. ಇದರಿಂದ ಅವರ ದೃಷ್ಟಿಯೂ ಕೊಂಚ ಮಾರ್ಪಟ್ಟು, ಅವರ ಭಾವಗಳೂ ಒಂದು ನೆಲೆಗೆ ಬಂದುವು. ೧೨–೧೩–೧೪ನೆಯ ಶತಮಾನಗಳಲ್ಲಿ ಸೂಫಿ ಧರ್ಮವ್ಯವಸ್ಥಿಗೊಂಡು ಅಭಿವೃದ್ಧಿಯಾಗುತ್ತ ಬಂತು. ಕೊನೆಕೊನೆಗೆ ಅತಿಗಟ್ಟಿಕೊಂಡು ಪವಾಡಗಳು, ಅತಿಮಾನುಷ ಸಂಗತಿಗಳು, ಕಂಡು ಕೇಳದ ಕಥೆಗಳು ಬಂದು ತುಂಬಿಕೊಂಡವು.

ಸೂಫಿ ಧರ್ಮವನ್ನು ತತ್ವರೂಪಕ್ಕೆ ತಂದು ವ್ಯವಸ್ಥೆಗೊಳಿಸಿದವರಲ್ಲಿ ಮನ್‌ಸೂರಿನ ಮಗ ಹುಸೇನ್ ಒಬ್ಬನು (ಕ್ರಿ.ಶ. ೮೫೮-೯೨೨). ಇವನು ಹಲ್ಲಾಜ್ (ಎಂದರೆ ಪಿಂಜಾರಿ) ಎಂಬ ಹೆಸರಿನಿಂದ ಬಳಕೆಯಾಗಿದ್ದಾನೆ. ಇವನು ದಕ್ಷಿಣ ಇರಾನಿನ ತೂರ್‌ನಲ್ಲಿ ಹುಟ್ಟಿದವನು. ದರ್ಶನವನ್ನು ಅಧ್ಯಯನಮಾಡಿ ಇರಾನ್, ಇಂಡಿಯ, ಮಧ್ಯ ಏಷ್ಯ ಮೊದಲಾದುವನ್ನೆಲ್ಲ ಸಂಚರಿಸಿ ಕೊನೆಗೆ ಬಗ್‌ದಾದ್‌ನಲ್ಲಿ ನೆಲಸಿದನು. ಇವನ ಅಭಿಪ್ರಾಯಗಳು ಸಂಪ್ರದಾಯಬದ್ಧ ವೈದಿಕರಿಗೆ ಸರಿಬೀಳದೆ, ಅದರ ಜೊತೆಗೆ ರಾಜಕೀಯ ಗುಮಾನಿ ವ್ಯಕ್ತಿವೈರಗಳೂ ಸೇರಿಕೊಂಡು, ಆಸ್ಥಾನದಲ್ಲಿ ಪ್ರಬಲರಾಗಿದ್ದ ಕೆಲವರಿಂದ ಬಹಳ ಕಷ್ಟ ಅನುಭವಿಸಿ ತನ್ನ ೬೪ ನೆಯ ವಯಸ್ಸಿನಲ್ಲಿ ಕೊಲೆಯಾದನು. ಇವನು ತವಾಸಿನ್ ಎಂಬ ಗ್ರಂಥವನ್ನೂ ಇನ್ನೂ ಹಲವು ಸಣ್ಣಪುಟ್ಟ ಬರಹಗಳನ್ನೂ ಸೂಫಿ ತತ್ವದ ಮೇಲೆ ಬಿಟ್ಟುಹೋಗಿದ್ದಾನೆ. ಇವನ ತತ್ವ: ಅಭೌತವೂ ಅಮರವೂ ಆದ ದಿವ್ಯಾತ್ಮ ಪಾಶವಾತ್ಮದೊಡನೆ ಸಂಬಂಧ ಹೊಂದಿದರೆ ಅದು ಪರಿಚ್ಛಿನ್ನವಾಗಿ ಕಟ್ಟುಬೀಳುತ್ತದೆ. ಪರವಸ್ತು ಮಾನವಬುದ್ಧಿಯಿಂದ ಭಾವಿಸತಕ್ಕದ್ದಲ್ಲ, ತರ್ಕಿಸತಕ್ಕದ್ದಲ್ಲ. ಅದು ಸಾದೃಶ್ಯವಿಲ್ಲದ್ದು.

ಕಷ್ಟಜೀವನದಿಂದ, ದುಃಖಾನುಭವದಿಂದ ಪರಮಾತ್ಮನಲ್ಲಿ ಐಕ್ಯ ಹೊಂದುವುದು ಸಾಧ್ಯ. ಪ್ರಾರ್ಥನೆಗೆ ಬದಲಾಗಿ ಸತ್ಕರ್ಮಗಳನ್ನು ಮಾಡಿದರೆ ಸಾಕು. ವೈದಿಕರಿಗೆ ಈ ಕೊನೆಯ ಅಭಿಪ್ರಾಯ ಎಲ್ಲಕ್ಕಿಂತಲೂ ದೊಡ್ಡ ತಪ್ಪಾಗಿ ತೋರಿತು.

ಸೂಫಿ ಸಿದ್ಧಾಂತವನ್ನು ಸ್ಥೂಲವಾಗಿ ಈ ರೀತಿ ಸಂಗ್ರಹಿಸಬಹುದು: ವಿಶ್ವೇಕ್ಯೈ ಒಂದೇ ಸತ್ಯ. ಅದೇ ಸತ್ಯವಾದ ಜ್ಞಾನ, ಶಾಶ್ವತ ಜ್ಯೋತಿ, ಪರಮ ಸೌಂದರ್ಯ. ಸ್ವಪ್ರಕಾಶವೇ ಅದರ ಸ್ವಭಾವ. ಈ ಪ್ರಪಂಚ ಬರಿಯ ಮಾಯೆ. ಸೂಫಿಗಳಲ್ಲಿ ಕೆಲವರು ಸೃಷ್ಟಿಯ ಅದ್ವೈತದಲ್ಲಿ ನಂಬಿದ್ದರು. ಕೆಲವರು ಈ ದೃಶ್ಯಬಹುತ್ವವೆಲ್ಲ ಏಕತೆಯ ನಾನಾ ರೂಪಗಳೆಂದು ಎಣಿಸಿದ್ದರು. ದೇವರು ಮಾನವಬುದ್ಧಿಗೆ ಅತೀತನು. ಅವನ ಗುಣಗಳನ್ನು ನೋಡಿದರೆ ಅವನಿಗೆ ಎರಡು ಮುಖ ಉಂಟೆನ್ನಬಹುದು. ಒಂದು ದೃಶ್ಯ, ಮತ್ತೊಂದು ಅದೃಶ್ಯ. ಸೃಷ್ಟಿಯೂ ಸೃಷ್ಟಿಕರ್ತನೂ ಅವನೆ. ಮೂಲತಃ ಅವನು ನಿರ್ಗುಣ, ಅನಿರ್ವಚನೀಯ, ಅಜ್ಞೇಯ. ಆದರೆ, ಅವಿದ್ಯೆ ಮುಸುಕಿದರೆ ಸಗುಣನಾಗುತ್ತಾನೆ. ಈ ಸಗುಣಭಾವಗಳೇ ನಮಗೆ ಕಾಣುವ ದೃಶ್ಯ ಪ್ರಪಂಚ. ಆದರೆ, ಸೂಫಿಗಳಲ್ಲಿ ದ್ವೈತಿಗಳೂ ಇದ್ದರು. ಅವರು ಈ ಪ್ರಪಂಚ ಬರಿಯ ಮಾಯೆಯಲ್ಲ, ಅಜ್ಞಾನವಲ್ಲ; ನಿಜವಾಗಿಯೂ ಸತ್ಯವಾದ ಪರವಸ್ತುವಿನ ವ್ಯಕ್ತಸ್ವರೂಪ ಎಂದು ತಿಳಿದಿದ್ದರು. ಮನುಷ್ಯನು ಪರಮಾತ್ಮನ ಸಕಲ ಗುಣಗಳನ್ನು ತನ್ನಲ್ಲಿ ಅಡಗಿಸಿಕೊಂಡ ಅಣುಸ್ವರೂಪನು. ದೇವರು ಕೇವಲ ಸೌಂದರ್ಯ ಮಯ. ಸೌಂದರ್ಯದ ಸ್ವಭಾವವೆಂದರೆ— ತಾನು ಅರಳಿ ಕಾಣಿಸಿಕೊಳ್ಳಬೇಕು ಮತ್ತು ಎಲ್ಲರೂ ತನ್ನಲ್ಲಿ ಒಲಿಯಬೇಕು ಎಂಬ ಹಾರೈಕೆ. ಇದರಿಂದಲೇ ಸೂಫಿತತ್ವದ ಅಡಿಗಲ್ಲು ಪ್ರೇಮ ಅಥವಾ ಭಕ್ತಿ. ದೇವರನ್ನು ಸಾಧಿಸಲು ಸೂಫಿಗಳು ಇತರ ಎಲ್ಲ ಮಾರ್ಗಗಳಿಗಿಂತಲೂ ಭಕ್ತಿಮಾರ್ಗವನ್ನೇ ಆಯ್ದಿರುತ್ತಾರೆ. ಸೃಷ್ಟಿಗೂ ಅದರ ಸ್ಥಿತಿಗೂ ಪ್ರೇಮವೇ ಕಾರಣ ಎಂಬುದು ಅವರ ಮತ. ಅಜ್ಞೇಯವಾದ ದೇವರನ್ನು ಒಂದು ಪ್ರೇಮವಸ್ತುವನ್ನಾಗಿ ಮಾಡಿ, ಅದರ ಮೂಲಕ ತಿಳಿಯಬಹುದೆಂದು ಅವರು ಹೇಳುತ್ತಾರೆ. ಆ ಕೇವಲ

ಸೌಂದರ್ಯಸ್ವರೂಪದ ಪ್ರತಿಬಿಂಬವೇ ನಮಗೆ ಕಾಣುವ ದೃಶ್ಯ ವೈವಿಧ್ಯ. ಕೇವಲ ಸೌಂದರ್ಯ ಸ್ವರೂಪದಲ್ಲಿ ದೇವರನ್ನು 'ಜಮಾಲ್' ಎಂದೂ, ದೃಶ್ಯಸ್ವರೂಪದಲ್ಲಿ ಹುಸ್ನ್ ಎಂದೂ, ಕರೆಯುತ್ತಾರೆ.

ಮನುಷ್ಯನಿಗೆ ಮೂರು ಸ್ವಭಾವಗಳುಂಟು: (೧) ಇಂದ್ರಿಯ ಸಂಬಂಧವಾದದ್ದು, (೨) ಬುದ್ಧಿ ಸಂಬಂಧವಾದದ್ದು, (೩) ಆತ್ಮಸಂಬಂಧ ವಾದದ್ದು. ಇದನ್ನು ಸ್ಥೂಲವಾಗಿ ಹಿಂದುಗಳ ತಮಸ್ಸು, ರಜಸ್ಸು, ಮತ್ತು ಸತ್ವಕ್ಕೆ ಹೋಲಿಸಬಹುದು. ಈ ಸ್ವಭಾವಗಳಲ್ಲಿ ಯಾವುದಾದರೂ ಒಂದು ಹೆಚ್ಚು ಕಡಮೆಯಾಗಿ ಬೆಳೆಯುವುದರಿಂದ ಗುಣವ್ಯತ್ಯಾಸ ಏರ್ಪಡುತ್ತದೆ. ಮೂರೂ ಸಮರಸವಾಗಿ ಬೆಳೆದು, ಬದುಕು ಒಳ್ಳೆಯ ದಾರಿಯಲ್ಲಿ ನಡೆಯಬೇಕಾದರೆ ಶಿಕ್ಷಣವೂ, ಮಾರ್ಗದರ್ಶನವೂ ಅತ್ಯಾವಶ್ಯಕ. ಇದಕ್ಕೆ ಒಬ್ಬ ಗುರು ಬೇಕೇ ಬೇಕು. ಆದ್ದರಿಂದ, ಸೂಫಿಯ ಮೊದಲನೆಯದೂ ಮುಖ್ಯವೂ ಆದ ಕರ್ತವ್ಯ ಸರಿಯಾದ ಗುರುವನ್ನು ಆಯ್ದು ಅವನಂತೆ ನಡೆಯುವುದು. ಕೆಟ್ಟ ಅಥವಾ ಹೆಣ್ಣಾಗದ ಬುದ್ಧಿಯ ಗುರು ಶಿಷ್ಯನನ್ನು ತಪ್ಪಿಗೆ ಎಳೆದು ಭ್ರಮೆಯಲ್ಲಿ ಮುಳುಗಿಸಬಹುದು. ಇದಕ್ಕಾಗಿಯೇ ಗುರುವನ್ನು ಅರಸಿ ಆಯುವುದರಲ್ಲಿ ಬಹು ಎಚ್ಚರಿಕೆಯಿಂದ ಇರಬೇಕು. ಆದರೆ, ಒಮ್ಮೆ ಆಯ್ದ ಮೇಲೆ ಎಲ್ಲದರಲ್ಲಿಯೂ ತನ್ನ ಪೀರ್ ಅಥವಾ ಗುರುವನ್ನು ಸಂಪೂರ್ಣವಾಗಿ ಅನುಸರಿಸಬೇಕು. ತನ್ನ ಮನಸ್ಸನ್ನು ಗುರುವಿನ ಮನಸ್ಸಿನಲ್ಲಿ ಲೀನಮಾಡಿಬಿಡಬೇಕು.

ಈ ಆಧ್ಯಾತ್ಮ ಶಿಕ್ಷಣವನ್ನು ಬೇರೆ ಬೇರೆ ಅಂತಸ್ತುಗಳಾಗಿ ವಿಂಗಡಿಸಿದೆ. (೧) ಷರಿಯತ್: ಪ್ರಾರ್ಥನೆ, ಉಪವಾಸ, ದಾನ, ಮೆಕ್ಕಾ ಯಾತ್ರೆ ಮೊದಲಾದ ವೈದಿಕ ಆಚಾರ ವ್ಯವಹಾರಗಳನ್ನು ಕೊಂಚವೂ ತಪ್ಪದೆ ಅನುಷ್ಠಾನಮಾಡುವುದು ಸೂಫಿಯ ಮೊದಲನೆಯ ಕರ್ತವ್ಯ. ಈ ರೀತಿ ತನ್ನ ಬದುಕನ್ನು ಸದಾಚಾರದ ಶಿಸ್ತಿನ ಮೂಲಕ ಒಂದು ಹದಕ್ಕೆ ತಂದುಕೊಳ್ಳಬೇಕು. (೨) ತರುವಾಯ ಎರಡನೆಯ ಅಂತಸ್ತಾದ ತರೀಕತ್‌ನಲ್ಲಿ ಈ ವೈದಿಕ ಕರ್ಮಗಳ ಅನುಷ್ಠಾನದ ಜತೆಗೆ ತಾನು ಒಬ್ಬ ಸರಿಯಾದ ಗುರುವನ್ನು (ಪರ್ಷಿಯನ್, ಪೀರ್ ; ಅರಬ್ಬಿ, ಷೇಕ್;) ಅರಸಿ ಅವನಿಂದ ಸರಿಯಾದ ಶಿಕ್ಷಣ ಪಡೆಯಬೇಕು. ಪೀರನ್ನು ಅತ್ಯಂತ

ಭಕ್ತಿಯಿಂದ ಕಂಡು ಎಲ್ಲದರಲ್ಲೂ ಅವನು ಹೇಳಿದಂತೆ ಕೇಳಬೇಕು. ತನ್ನ ಈ ಅಭ್ಯಾಸಕಾಲದಲ್ಲಿ ಪೀರೊಡನೆ ವಾದಿಸದೆ, ಸಂದೇಹಿಸದೆ, ಅವನ ಆಜ್ಞಾವರ್ತಿಯಾಗಿ ಅವನು ಹೇಳಿದ ಕೆಲಸಗಳನ್ನೆಲ್ಲ ಮಾಡಿ, ಕೊನೆಗೆ ತನ್ನ ಮನಸ್ಸನ್ನು ಪೀರಿನ ಮನಸ್ಸಿನಲ್ಲಿ ಲಯಮಾಡುವಷ್ಟು ಅವನಲ್ಲಿ ಭಕ್ತಿಯಿಟ್ಟಿರಬೇಕು. ಇದಕ್ಕೆ ಫನಾಫಿಷೇಕ್ ಅಥವಾ ಶೇಖಿನಲ್ಲಿ ಲಯ ಎಂದು ಹೆಸರು. ಈ ತರೀಕತ್ತಿನ ನಿಯಮಗಳನ್ನೆಲ್ಲ ಸರಿಯಾಗಿ ಪಾಲಿಸಿ ಗುರು ಸಂಪ್ರೀತನಾದರೆ, ಆಗ ಅಭ್ಯಾಸಿಗೆ ಖಿರ್ಕ ಅಥವಾ ಸೂಫಿ ವಸ್ತ್ರ ಕೊಡುತ್ತದೆ. (೩) ಮಾರಿಫತ್ ಅಥವಾ ಜ್ಞಾನ: ಇದರಲ್ಲಿ ಹಿಂದಿನ ನಿಯಮಾನುಷ್ಠಾನಗಳಿಂದ ದೇಹ ಪರಿಶುದ್ಧಿಗೊಂಡು, ಮನಸ್ಸು ಪರಿಪಕ್ವವಾಗಿ, ಆತ್ಮಜ್ಞಾನವುಂಟಾಗುತ್ತದೆ. (೪) ಇದರ ತರುವಾಯ, ಹಕೀಕತ್ ಅವಸ್ಥೆಯಲ್ಲಿ ತಾನು ಸತ್ಯವನ್ನು ಪ್ರತ್ಯಕ್ಷಮಾಡಿಕೊಳ್ಳುತ್ತಾನೆ. ಸೂಫಿಯ ಧ್ಯೇಯ ಆತ್ಮಪರಿಶುದ್ಧಿ, ಮತ್ತು ತನ್ನ ಪ್ರಿಯ ವಸ್ತುವಾದ ಪರಮಾತ್ಮನೊಡನೆ ಐಕ್ಯ. ಇದು ಕೇವಲ ಸ್ವಪ್ರಯತ್ನದಿಂದಲೇ ದೊರೆಯುವುದಿಲ್ಲ. ದೈವಾನುಗ್ರಹವೂ ಬೇಕು. ಮನುಷ್ಯನ ಕರ್ತವ್ಯ ದೇವರನ್ನು ಭಕ್ತಿಯಿಂದ ಸೇವಿಸಿ ಅವನ ಅನುಗ್ರಹವನ್ನು ಎದುರುನೋಡುತ್ತಿರುವುದೇ. ಮನುಷ್ಯನ ಆತ್ಮದಲ್ಲಿ ಬೆಳಕು ತುಂಬಿ ದಿವ್ಯಜ್ಞಾನ ಮೂಡುವುದೇ ಈ ದೈವಾನುಗ್ರಹ.

ಸೂಫಿಗಳು ಜೀವನ ಶಿಕ್ಷಣಕ್ಕಾಗಿ ಯಮನಿಯಮಾದಿ ಆಚಾರ ವ್ಯವಹಾರಗಳನ್ನು ಪಾಲಿಸಿದರೂ, ಉಪವಾಸ ಪ್ರಾರ್ಥನಾದಿ ಕರ್ಮಗಳಿಂದ ದೇವರು ಸಾಧ್ಯನಲ್ಲವೆಂದೂ, ಆತ್ಮ ಪರಿಶುದ್ಧಿಯೊಂದರಿಂದ ಮಾತ್ರ ಸತ್ಯಸಾಧನೆ ಆಗುತ್ತದೆಂದೂ ನಂಬುತ್ತಾರೆ. ಬುದ್ಧಿಯ ಮೂಲಕ ಅನ್ವೇಷಣ, ಮಾನಸಿಕ ಅನುಭವ, ದರ್ಶನಜ್ಞಾನ—ಇವು ಸತ್ಯಾನುಭವಕ್ಕೆ ಸಾಲುವ ಸಾಧನಗಳಲ್ಲವೆಂದೂ, ಭಕ್ತಿಯೂ ಸದ್ಧರ್ಮವೂ ಆವಶ್ಯಕವೆಂದೂ ಸೂಫಿಗಳ ಮತ. ಇದಕ್ಕೆ ಫನಾಫಿಲ್‌ಲಹ್ ಅಥವಾ ದೇವರಲ್ಲಿ ಲಯ ಎಂದು ಹೆಸರು. ಇದು ಒಂದು ಹೊಸ ಮತ್ತು ಶಾಶ್ವತಜೀವನ ಎನ್ನಬಹುದು.

## ಸೂಫಿ ಮಠಗಳು

ಸುಮಾರು ೧೧ನೆಯ ಶತಮಾನದಿಂದ ಸೂಫಿ ಮಠಗಳು ಆಧ್ಯಾತ್ಮ ಶಿಕ್ಷಣಸ್ಥಾನಗಳಾಗಿ ಆರಂಭವಾದುವು ಎನ್ನಬಹುದು. ಕ್ರಮೇಣ ಇವು ಕವಲೊಡೆಯುತ್ತ ಒಡೆಯುತ್ತ, ಪ್ರತಿಯೊಂದು ಮಠವೂ ಪ್ರತ್ಯೇಕ ಸ್ಥಾಪಕನನ್ನುಂಟಾಗಿ ಕೊನೆಗೆ ಪುರಾತನ ಸೂಫಿ ಮಠಗಳಲ್ಲೊಂದಕ್ಕೆ ತನ್ನ ಮೂಲವನ್ನು ತಿದ್ದಿ, ಕಟ್ಟಕಡೆಯಲ್ಲಿ ನಾಲ್ಕನೆಯ ಖಲೀಫ಼ ಅಲಿಯ ಮೂಲಕ ಪೈಗಂಬರನ ವರೆಗೂ ಮೂಲವನ್ನು ತೆಗೆದುಕೊಂಡು ಹೋಗುತ್ತದೆ. ಗಂಡಸರು ಹೆಂಗಸರು ಇಬ್ಬರಿಗೂ ಮಠಕ್ಕೆ ಸೇರಲು ಅವಕಾಶವಿತ್ತು. ಬ್ರಹ್ಮಚರ್ಯೆ, ಅಥವಾ ಅವಿವಾಹಿತಜೀವನಕ್ಕೆ ಎಲ್ಲೋ ಕೆಲವು ಮಠಗಳಲ್ಲಿ ಮಾತ್ರ ಅವಕಾಶವಿತ್ತು. ಹೆಚ್ಚು ಪಾಲು ಮಠಗಳು ಆ ಜೀವನವನ್ನು ಒಪ್ಪುತ್ತಿರಲಿಲ್ಲ. ಶಿಷ್ಯನು ಮೊದಲು ಗುರುವಿನಲ್ಲಿ ಬಂದೊಡನೆಯೆ "ಷೇಖ್ ಆಜ್ಞೆಯನ್ನು ಪಾಲಿಸಿ, ದೇವರನ್ನು ಸೇವಿಸಿ ಆಧ್ಯಾತ್ಮಶಿಕ್ಷಣ ಪಡೆಯುತ್ತೇನೆ" ಎಂದು ಉಳಿದ ಶಿಷ್ಯರ ಇದಿರಿನಲ್ಲಿ ಬಾಯ್ಸ್ ಅಥವಾ ಪ್ರತಿಜ್ಞೆ ಮಾಡಬೇಕು. ಮಠದಲ್ಲಿ ಅನೇಕ ವರ್ಷಗಳು ಇದ್ದು ಅಲ್ಲಿಯ ಕೆಲಸಗಳನ್ನೆಲ್ಲ ಮಾಡಿಕೊಂಡು ಬದುಕು ನಡಸಿ ಶಿಕ್ಷಣ ಪಡೆಯಬೇಕು. ಮುಸ್ಲಿಂ ಪ್ರದೇಶಗಳೆಲ್ಲೆಲ್ಲ ಮಠಗಳು ಬೇಕಾದಷ್ಟು ಹಬ್ಬಿಕೊಂಡಿದ್ದುವು.

## ಸೂಫಿ ಸಂಸ್ಥಾಭೇದಗಳು

ಸೂಫಿ ಸಂಸ್ಥೆಗಳು ಅನೇಕವಾಗಿವೆ. ಇವುಗಳಲ್ಲಿ ಸುಮಾರು ೧೭೫ ಪ್ರಭೇದಗಳವರೆಗೂ ಇವೆ ಎನ್ನಬಹುದು. ಬಹು ಮುಖ್ಯವಾದ ಕೆಲವನ್ನು ಕುರಿತು ಅವುಗಳ ಸ್ಥಾಪನೆ ಮತ್ತು ವ್ಯಾಪನೆಗಳನ್ನು ಇಲ್ಲಿ ಬಹು ಸ್ಥೂಲವಾಗಿ ಹೇಳುತ್ತದೆ.

(೧) ಕಾದರೀಯ : ಇದನ್ನು ಉತ್ತರ ಇರಾನಿನಲ್ಲಿಯ ಗೀಲಾನ್ ಸ್ಥಳದ ಅಬ್ದುಲ್‌ಕಾದರ್ (ಕ್ರಿ. ಶ. ೧೦೭೮-೧೧೬೬) ಸ್ಥಾಪಿಸಿದನು. ಇದು ಜುನಯಿದ್ ಮಠತತ್ತ್ವವನ್ನು ಅವಲಂಬಿಸಿದೆ. ಇದರ ಅನುಯಾಯಿಗಳು ಪ್ರಪಂಚದ ನಾನಾ ಭಾಗಗಳಲ್ಲಿರುತ್ತಾರೆ.

(೨) ನಕ್ಷ್‌ಬಂದಿಯು: ಇದನ್ನು ಖ್ವಾಜಬಹಾಉದ್ದೀನ್ ಮಹಮ್ಮದ್ (ಸ. ಕ್ರಿ. ಶ. ೧೩೮೮) ಸ್ಥಾಪಿಸಿದನು. ಇದರ ಅನುಯಾಯಿಗಳು ಇಂಡಿಯ, ಚೀನ, ತುರ್ಕಿಸ್ಥಾನ, ಜಾವ—ಮೊದಲಾದೆಡೆಗಳಲ್ಲಿ ಇದ್ದಾರೆ. ಇದು "ತಯ್‌ಫೂರಿಯ್ಯ" ಎಂಬ ಮತವನ್ನು ಅವಲಂಬಿಸಿದ್ದು.

(೩) ಷಾಧಿಲೀಯು: ಇದನ್ನು ಅಬೂಮದ್ಯನ್ (ಸ. ಕ್ರಿ. ಶ. ೧೧೯೭) ಸ್ಥಾಪಿಸಿದನು. ಉತ್ತರ ಆಫ್ರಿಕದಲ್ಲಿಯ ಟ್ಯೂನಿಸ್ಸಿನ ಅಲಿಷಾಧಿಲಿ ಬೆಳಸಿದನು. ಇದರ ಅನುಯಾಯಿಗಳು ಉತ್ತರ ಆಫ್ರಿಕ, ತುರ್ಕಿ, ರುಮೇನಿಯಗಳಲ್ಲಿ ಇದ್ದಾರೆ. ಇತರ ಸೂಫಿ ಸಂಸ್ಥೆಗಳಲ್ಲಿರುವಂತೆ ಇದರಲ್ಲಿ ಭಿಕ್ಷಾಟನೆಗೆ ಅವಕಾಶವಿಲ್ಲ. ಪ್ರತಿಯೊಬ್ಬನೂ ತನ್ನ ಜೀವನವನ್ನು ತಾನೇ ದುಡಿದುಕೊಳ್ಳಬೇಕು.

(೪) ನೇಮತುಲ್ಲಹಿಯು: ಇದು ಕಾದಿರೀಯ ಮತ್ತು ಯಾಫೆಯಿಯಗಳಿಂದ ಕವಲಾಗಿ ಬಂದದ್ದು. ಇದರ ಅನುಯಾಯಿಗಳು ಇರಾನಿನಲ್ಲಿದ್ದಾರೆ.

(೫) ಷತ್ತಾರಿಯು: ಇದನ್ನು ಅಬ್ದುಲ್ಲಷತ್ತಾರ್ (ಸ. ಕ್ರಿ. ಶ. ೧೪೧೫) ಸ್ಥಾಪಿಸಿದನು. ಇದರ ಮುಖ್ಯ ಮಠಗಳು ಸುಮಾತ್ರ, ಜಾವ ಇಂಡಿಯಗಳಲ್ಲಿವೆ. ಈ ಸಂಸ್ಥೆಯ ಮುಖ್ಯ ಲಕ್ಷಣಗಳು: (೧) ಸ್ವನಿರಸನದಲ್ಲಿ ನಂಬದೆ ಪ್ರತಿಯೊಬ್ಬನೂ ಸ್ವಾರ್ಥಸ್ಥಾಪನೆಯನ್ನು ಸಾಧಿಸಬೇಕು. ಆತ್ಮನಿರಸನ ತಪ್ಪು ಅಭಿಪ್ರಾಯ. ಮನುಷ್ಯನು ಯಾವಾಗಲೂ "ನಾನು ನಾನೇ" ಎಂದು ಹೇಳುತ್ತಿರಬೇಕು. (೨) ಧ್ಯಾನ ವ್ಯರ್ಥ ಕಾಲಕ್ಷೇಪ. ತಪಸ್ಸಿಗೆ ವಿರೋಧವಿಲ್ಲ. (೩) ಏಕತೆ ಎಂದರೆ ಒಂದನ್ನೇ ಅರಿತು, ಒಂದನ್ನೇ ನೋಡಿ, ಒಂದನ್ನೇ ಹೇಳಿ, ಒಂದನ್ನೇ ಕೇಳುವುದು. (೪) ಲಯ (ಫನ) ಎಂಬುದಿಲ್ಲ. ಏಕೆಂದರೆ—ಲಯಕ್ಕೆ ಎರಡು ಭಾವಗಳು ಬೇಕು. ಒಂದು ಲಯವನ್ನು ಅಪೇಕ್ಷಿಸುವಂಥದು, ಮತ್ತೊಂದು ಯಾವುದರಲ್ಲಿ ಲಯವಾಗಬೇಕೊ ಅದು. ಈ ಎರಡು ಭಾವಗಳೂ ಒಟ್ಟಿಗಿದ್ದರೆ ಅದು ದ್ವೈತವಾಗಿ ಬಿಡುವುದೇ ಹೊರತು ಅದ್ವೈತವಾಗುವುದಿಲ್ಲ. (೫) ಶಾಶವಾತ್ಮ ದೇವರನ್ನು ಸಾಧಿಸಿಕೊಳ್ಳುವುದಕ್ಕೆ ಪ್ರತಿ

ಬಂಧಕವಲ್ಲ. ಸರ್ ಇಕ್‌ಬಾಲಿನ ತತ್ವಗಳೂ ಬಹುಮಟ್ಟಿಗೆ ಈ ಸಂಸ್ಥೆಯ ತತ್ವಗಳನ್ನೇ ಹೋಲುತ್ತವೆ.

(೬) ತಿಜಾನಿಯ: ಇದನ್ನು ಉತ್ತರ ಆಫ್ರಿಕದ ಅಹ್‌ಮದ್ ಸ್ಥಾಪಿಸಿದನು.

(೭) ಸನೂಸೀಯ: ಇದನ್ನು ಅಲೀಉಸ್ ಸನೂಸಿಯ ಮಗ ಷೇಕ್ ಮಹಮ್ಮದನು ಕ್ರಿ. ಶ. ೧೮೩೭ ರಲ್ಲಿ ಸ್ಥಾಪಿಸಿದನು. ಇದು ಕಾದೆರೀಯ ಸಂಸ್ಥೆಯ ಒಂದು ಕವಲು. ಇದರ ಅನುಯಾಯಿಗಳು ಈಶಾನ್ಯ ಆಫ್ರಿಕದಲ್ಲಿದ್ದಾರೆ. ಇದು ಕೇವಲ ಧಾರ್ಮಿಕ ಸಂಸ್ಥೆ ಮಾತ್ರವಾಗಿರದೆ, ಸೈನಿಕ, ರಾಜಕೀಯ ಗುರಿಗಳನ್ನೂ ಉಳ್ಳದ್ದಾಗಿದೆ.

(೮) ರಿಫಾಈ: ಇದನ್ನು ಅಹ್‌ಮದ್ ರಿಫಾಈ (ಕ್ರಿ. ಶ. ೧೧೭೫) ಸ್ಥಾಪಿಸಿದನು.

(೯) ಮೌಲ್ವಿ: ಇದನ್ನು ಜಲಾಲುದ್ದೀನ್ ರೂಮಿ ಸ್ಥಾಪಿಸಿದನು. ಇದರ ಅನುಯಾಯಿಗಳು ತುರ್ಕಿಯಲ್ಲಿದ್ದಾರೆ.

(೧೦) ಚಿಶ್ತಿ: ಇದರ ಸ್ಥಾಪಕ ಮೊಯಿನ್ ಉದ್ದೀನ್ ಚಿಶ್ತಿ. ಇದರ ಅನುಯಾಯಿಗಳು ಬಹು ಪಾಲು ಇಂಡಿಯದಲ್ಲಿದ್ದಾರೆ.

ಬೇರೆ ಬೇರೆ ಮತ ಸಂಸ್ಥೆಗಳಿದ್ದರೂ ಮೂಲ ತತ್ವಗಳಲ್ಲಿ ಒಂದೊಂದಕ್ಕೆ ವ್ಯತ್ಯಾಸವೇನೂ ಇರಲಿಲ್ಲ. ಎಲ್ಲದಕ್ಕೂ ಸಾಮಾನ್ಯವಾದ ಮೂಲ ತತ್ವಗಳು ಯಾವುವೆಂದರೆ—

ದೇವರ ಏಕತೆ ಮತ್ತು ಅವನ ಗುಣ: ದೇವತಾ ಶಾಸ್ತ್ರದ ಪ್ರಕಾರ ಏಕತೆ ಎಂದರೆ ದೇವರು ಒಬ್ಬ ಎಂದು ಅರ್ಥ; ಆದರೆ, ಸೃಷ್ಟಿಕರ್ತನೂ ಸೃಷ್ಟಿಯೂ ಬೇರೆ. ಸೂಫಿಗಳು ಇದನ್ನು ಕೊಂಚ ಮಾರ್ಪಡಿಸಿ ದೇವರನ್ನು ಬಿಟ್ಟು ಉಳಿದ ಯಾವುದೂ ಸತ್ಯವಲ್ಲವೆಂದು—ಎಂದರೆ ಸೃಷ್ಟಿಕರ್ತನೂ ಸೃಷ್ಟಿಯೂ ಒಂದೇ; ಒಂದು ಸತ್ಯ, ಮತ್ತೊಂದು ಅದರ ನೆಳಲು ಎಂದು ಹೇಳಿದರು. ಹಿಂದೆಯೇ ಹೇಳಿರುವಂತೆ ಬಹುಪಾಲು ಸೂಫಿಗಳು ತಮ್ಮ ಸಿದ್ಧಾಂತವನ್ನು ಸೌಂದರ್ಯ ಮತ್ತು ಪ್ರೇಮದ ಅಡಿಗಲ್ಲಮೇಲೆ ಕಟ್ಟಿರುತ್ತಾರೆ. ದೇವರು ಪರಮ ಸೌಂದರ್ಯ ವಸ್ತು. ತಮ್ಮ ಪ್ರೇಮಕ್ಕೆ ಪಾತ್ರ ಅವನೊಬ್ಬನೆ. ಪ್ರೀತಿ ಆತ್ಮದ ಒಲವು.

ಆ ಒಲವು ಆತ್ಮಕ್ಕೆ ಹಿತವಾದ ಬೇರೊಂದರ ಕಡೆಗೆ ಇರಬಹುದು, ಅಥವಾ ತನ್ನ ಕಡೆಗೇ ಇರಬಹುದು. ತನ್ನ ಕಡೆಗೇ ಒಲವು ತಿರುಗಿದಾಗ ಆತ್ಮ ಪರಿಪೂರ್ಣವಾಗುತ್ತದೆ. ಈ ಆತ್ಮಪರಿಪೂರ್ಣದ, ತನ್ಮೂಲಕ ಮುಕ್ತಿಯ, ಪ್ರಬಲ ಇಚ್ಛೆ ಎಲ್ಲ ಜೀವಿಗಳಿಗೂ ಉಂಟು. ಸೌಂದರ್ಯ ಎಂದರೆ ಸಾಮರಸ್ಯ ಮತ್ತು ಪರಿಪೂರ್ಣತೆ. ಇದರಿಂದ, ಸೌಂದರ್ಯ ಪ್ರೇಮಿಗಳೆಲ್ಲರೂ ಪರಿಪೂರ್ಣವಾಗಲು ಸತತ ಪ್ರಯತ್ನ ನಡಸಬೇಕು. ಪರಮಸೌಂದರ್ಯ ದೇವರು. ಆದ್ದರಿಂದ ಅವನು ಪರಮಪರಿಪೂರ್ಣ ವಸ್ತು. ಪರಿಪೂರ್ಣನಾಗಬಯಸುವವನು ಪರಮ ಪರಿಪೂರ್ಣನಾದ ದೇವರನ್ನು ಅನುಕರಿಸಿ, ಕೊನೆಗೆ ಅವನೇ ಆಗಿಬಿಡುವ ಪ್ರಯತ್ನಮಾಡಬೇಕು. ಈ ಪ್ರಯತ್ನವೇ ಪ್ರೇಮ ಎನ್ನುವುದು. ಸೌಂದರ್ಯ ಅನೇಕ ರೂಪಗಳಲ್ಲಿ ಇರುತ್ತದೆ. ಒಂದು ರೂಪ ಮತ್ತೊಂದು ರೂಪಕ್ಕಿಂತ ಹೆಚ್ಚು ಪೂರ್ಣವಾಗಿರಬಹುದು. ಸೌಂದರ್ಯವನ್ನು ದೈಹಿಕ ಮಾನಸಿಕ ಆಧ್ಯಾತ್ಮಿಕ ಎಂದು ಮೂರು ರೀತಿಯಾಗಿ ವಿಂಗಡಿಸಬಹುದು. ಇವು ಮೂರೂ ಪರಮ ಸೌಂದರ್ಯದ ಪ್ರತಿಬಿಂಬಗಳೇ ಆದ್ದರಿಂದ ಸೌಂದರ್ಯ ಪ್ರಿಯರು ಇವು ಮೂರನ್ನೂ ಬಯಸುತ್ತಾರೆ. ಈ ಸೌಂದರ್ಯಾನುಭವಕ್ಕೆ ಮಾರಿಫತ್ ಅಥವಾ ಜ್ಞಾನವೇ ಮೂಲಸಾಧನ. ಈ ಜ್ಞಾನಸಾಧನೆಗೆ ಶ್ರಮವೂ ಶಿಕ್ಷಣವೂ ವ್ಯವಸಾಯವೂ ಆವಶ್ಯಕ. ಆದ್ದರಿಂದ, ಪ್ರೇಮಿಗಳೆಲ್ಲರೂ ತಾಳ್ಮೆಯಿಂದ ಕಷ್ಟಪಟ್ಟು, ಗುರಿ ಸಾಧಿಸುವವರೆಗೂ ವ್ಯವಸಾಯ ಮಾಡಬೇಕು. ಸತ್ಯಸಾಧಕನು ಎಡೆಯಲ್ಲಿ ಬರುವ ತೊಡರುಗಳಿಗೆ, ಕಷ್ಟನಿಷ್ಠುರಗಳಿಗೆ, ಎದೆಗೊಟ್ಟು ಮುಂದೆ ಸಾಗಬೇಕು. ಈ ಪ್ರಪಂಚ ಕಷ್ಟಾನುಭವದ ಸ್ಥಳ. ಈ ಪರೀಕ್ಷೆಯಲ್ಲಿ ಗೆದ್ದವನೇ ದೇವರಿಗೆ ಪ್ರಿಯನು. "ನಾವು ನಿನ್ನನ್ನು ಭಯ, ಹಸಿವು, ನಷ್ಟ—ಇವುಗಳಿಂದ ಪರೀಕ್ಷಿಸಬೇಕು,"— "ಎಡರು ಅಡಸಿದಾಗ ನಾವು ದೇವರಿಂದ ಬಂದವರು, ಅವನಲ್ಲಿಗೇ ಮರಳುತ್ತೇವೆ ಎಂದು ಹೇಳುವವರು ಅವನ ದಯಕ್ಕೂ ಅನುಗ್ರಹಕ್ಕೂ ಪಾತ್ರರಾಗುತ್ತಾರೆ. ಅವರೇ ನೇರವಾದ ದಾರಿಯನ್ನು ಹಿಡಿಯುವವರು" ಎಂದು ಕುರಾನಿನಲ್ಲಿ ಹೇಳಿದೆ. ಹೀಗೆ, ಸೂಫಿ ಈ ಪ್ರಪಂಚದ ಕಷ್ಟ

ನಿಷ್ಠುರಗಳ ಪರೀಕ್ಷೆಯಲ್ಲಿ ಎದೆಗುಂದದೆ ದೇವರಲ್ಲಿ ನಂಬಿಕೆಯಿಟ್ಟು ತೇರ್ಗಡೆಹೊಂದಿದರೆ, ಅವನು ದೇವರ ಹತ್ತಿರಹತ್ತಿರಕ್ಕೆ ಹೋಗುತ್ತಾನೆ. ಹಿಂದೆಯೇ ಹೇಳಿದಂತೆ ಸೌಂದರ್ಯ ಎರಡು ಮುಖವಾದದ್ದು. ಒಂದು ಅಮೂರ್ತವೂ ಪರಿಪೂರ್ಣವೂ ಸತ್ಯವೂ ಆದದ್ದು. ಮತ್ತೊಂದು ಮೂರ್ತವೂ ಅಪೂರ್ಣವೂ ಪ್ರತಿಬಿಂಬವೂ ಆದದ್ದು. ಒಮ್ಮೆಯೇ ಅಮೂರ್ತ ಸೌಂದರ್ಯದ ಉಪಾಸನೆ ಸಾಧ್ಯವಾಗದಿದ್ದರೆ, ಮೂರ್ತ ಸೌಂದರ್ಯದ ಉಪಾಸನೆಯ ಮೂಲಕ ಅದನ್ನು ಸಾಧಿಸಬೇಕು. ಕೊನೆಗೆ ಒಂದು ವ್ಯಕ್ತಿಯ ಅಥವಾ ವಸ್ತುವಿನ ಸೌಂದರ್ಯವನ್ನು ಮೆಚ್ಚಿ, ಅದರಿಂದ ಸೌಂದರ್ಯೋಪಾಸನೆಯ ಅಭ್ಯಾಸ ಮಾಡಿಕೊಂಡು ಮುಂದೆ ಸಾಗಬಹುದು.

ಕಲ್‌ಬ್ ಅಥವಾ ಹೃದಯ:—ಮೂರು ಹೃದಯಗಳುಂಟು. ಒಂದು, ಪಾರ್ಥಿವ ಹೃದಯ. ಇದು ಎಡಗಡೆ ಇದೆ. ಮತ್ತೊಂದು, ಪಾಶವ ಹೃದಯ ಅಥವಾ ಪಾಶವಾತ್ಮ. ಇದು ಬಲಗಡೆ ಇದೆ. ಮೂರನೆಯದು, ನಡುವೆ ಇದೆ. ಇದು ಆಧ್ಯಾತ್ಮಿಕವಾದದ್ದು. ಇದು ಪರವಸ್ತುವನ್ನು ಪ್ರತಿಬಿಂಬಿಸುವ ಕನ್ನಡಿ ಇದ್ದಂತೆ. ಈ ಹೃದಯವನ್ನು ಶುದ್ಧವಾಗಿಟ್ಟುಕೊಂಡರೆಯೇ ಭಗವಂತನ ಸಾನ್ನಿಧ್ಯವನ್ನು ಸೇರಬಹುದು. ಈ ಹೃದಯವನ್ನು ದೇವರ ಬೆಳಕಿನಿಂದ ತುಂಬುವುದೇ ನಿಜವಾದ ಜ್ಞಾನ. ಪೈಗಂಬರನಿಗೆ ಲಭಿಸಿದ ದಿವ್ಯದರ್ಶನ ಈ ಹೃದಯದಲ್ಲಿ ತುಂಬಿದ ಬೆಳಕೆ.

ಮನುಷ್ಯಾತ್ಮ : ಮೂಲತಃ ಮನುಷ್ಯನು ಒಳ್ಳೆಯವನು. ಆದ್ದರಿಂದ, ಅವನು ಮೇಲಕ್ಕೇರಿ ಪರಿಪೂರ್ಣನಾಗಬಹುದು. ಆತ್ಮ ದೇಹದಿಂದ ಬೇರೆಯಾದದ್ದು. ಇದೂ ಸೃಷ್ಟವಾದರೂ ಇದಕ್ಕೆ ರೂಪವಿಲ್ಲ. ಕಾಲದೇಶಗಳನ್ನು ಮೀರಿದ್ದು. ವಿಶ್ವಾತ್ಮವನ್ನು ಹೋಲುತ್ತದೆ. ವಿಶ್ವಾತ್ಮ ವಿಶ್ವದ ಬೃಹದಾಕಾರವಾದರೆ, ಮನುಷ್ಯಾತ್ಮ ಅದೇ ವಿಶ್ವದ ಅಣುವಿನ ಆಕಾರ. ವಿಶ್ವಾತ್ಮ ಸೂರ್ಯನಿದ್ದಂತೆ, ಮನುಷ್ಯಾತ್ಮ ಅದರ ಒಂದು ಕಿರಣವಿದ್ದಂತೆ. ಪಾರ್ಥಿವ ದೇಹದೊಡನೆ ಅದಕ್ಕಿರುವ ಅಸಹಜ ಸಂಪರ್ಕದಿಂದ ಆತ್ಮ ಹಿಂಸೆಗೊಂಡು, ಅದರಿಂದ ಬಿಡುಗಡೆ ಹೊಂದಿ

ತನ್ನ ಮೂಲದಲ್ಲಿ ಐಕ್ಯವಾಗಲು ತವಕಿಸುತ್ತದೆ. ಈ ತವಕ ನಾನಾ ರೂಪದಲ್ಲಿ ವ್ಯಕ್ತವಾಗಬಹುದು.

ಜಲಾಲುದ್ದೀನ್ ರೂಮಿ ಹೇಳುವಂತೆ "ಕೊಳಲ (ಆತ್ಮದ) ದನಿಗೆ ಕಿವಿಗೊಡು. ವಿರಹಯಾತನೆಯ ಕಥೆಯನ್ನು ಅದು ಹೇಳುತ್ತದೆ. 'ಹಾಯಿಬೇರಿಂದ ನಾನು ಬೇರೆಯಾದಂದಿನಿಂದ ನನ್ನ ಗೋಳು ಸ್ತ್ರೀ ಪುರುಷರನ್ನು ಅಳುವಂತೆ ಮಾಡಿತು.' 'ಮೂಲದಿಂದ ಬೇರೆಯಾಗಿ ಬಹುದೂರ ಬಂದ ಪ್ರತಿಯೊಂದೂ ಅವರೊಡನೆ ಒಂದಾಗಿದ್ದ ಕಾಲವನ್ನು ಮತ್ತೆ ಕಾಣಬೇಕೆಂದು ಬಯಸುತ್ತದೆ.' "

ಮರಣ: ಮನುಷ್ಯನ ಕರ್ಮ ಒಳ್ಳೆಯದಾಗಿದ್ದರೆ ಅವನ ಸಾವು ಅವನನ್ನು ದೇವರ ಹತ್ತಿರಕ್ಕೆ ಒಯ್ಯುವ ಹೊಸ ಬಾಳಿನ ಹುಟ್ಟು. ಹಾಗಿಲ್ಲದೆ, ಕರ್ಮ ಕೆಟ್ಟದ್ದಾಗಿದ್ದರೆ ಅವನ ಸಾವು ಅವನನ್ನು ದೇವರಿಂದ ಮತ್ತಷ್ಟು ದೂರ ಕೊಂಡೊಯ್ಯುತ್ತದೆ. ಭಕ್ತನು ತನ್ನ ಬದುಕನ್ನು ಸರಿಯಾಗಿ ನಡಸಿ ದೇವಸಾನ್ನಿಧ್ಯಕ್ಕೆ ತವಕಿಸುತ್ತಿರುವುದರಿಂದ ಸಾವಿಗೆ ಹೆದರುವುದಿಲ್ಲ. ಅಷ್ಟೇ ಅಲ್ಲ, ಸಾವಿನಲ್ಲಿ ನಲಿಯುತ್ತಾನೆ. ಸ್ವರ್ಗ ಅಥವಾ ನರಕ ಎಂದರೆ ತನ್ನ ಪ್ರೇಮವಸ್ತುವಿಗೆ ಹತ್ತಿರ ಅಥವಾ ದೂರ ಎಂದು ಅರ್ಥ. ಒಂದು ಸುಖವನ್ನೂ ಮತ್ತೊಂದು ದುಃಖವನ್ನೂ ತರುತ್ತದೆ.

ದಿವ್ಯದರ್ಶನ ಮತ್ತು ಪವಾಡಗಳು: ದಿವ್ಯ ದರ್ಶನಾವಸ್ಥೆಯಲ್ಲಿ ಪೈಗಂಬರನು ಮಾನವಾವಸ್ಥೆಯನ್ನು ಮೀರಿದ ಅತಿ ಮಾನುಷಾವಸ್ಥೆಯಲ್ಲಿದ್ದು ದಿವ್ಯವಾಣಿಯನ್ನು ಕೇಳುತ್ತಾನೆ. ಅಥವಾ ಸಾಮಾನ್ಯ ಕಣ್ಣಿಗೆ ಕಾಣದ ಮರ್ಮಗಳನ್ನೂ ಭಾವಗಳನ್ನೂ ಕಾಣುತ್ತಾನೆ. ಇಂಥ ದಿವ್ಯದರ್ಶನ ಒಮ್ಮೊಮ್ಮೆ ಇತರ ಜ್ಞಾನಿಗಳಿಗೂ ಬರಬಹುದು. ಕ್ರಮೇಣ ಈ ದಿವ್ಯದರ್ಶನದ ನಂಬಿಕೆಯೊಡನೆ ಪವಾಡಗಳ ನಂಬಿಕೆಯೂ ಕೂಡಿಕೊಂಡು ಬಂತು. ಹಲವು ಸೂಫಿ ಸಾಧುಗಳಿಗೆ ಪವಾಡ ಮೆರೆಯುವುದು, ಮತ್ತೊಬ್ಬನ ಮನಸ್ಸನ್ನು ತಿಳಿಯುವುದು, ಪ್ರೇರಣ ಶಕ್ತಿಯಿಂದ ರೋಗ ಗುಣಪಡಿಸುವುದು—ಇವೇ ಮೊದಲಾದ ಸಾಮರ್ಥ್ಯಗಳು ಉಂಟೆಂದು ಜನರು ನಂಬಿದ್ದರು. ರೂಮಿಯ ಪ್ರಕಾರ ಕಾರ್ಯ

ಕಾರಣ ಸಂಬಂಧ ಎರಡು ರೀತಿಯದು. ಒಂದು ಇಂದ್ರಿಯಗಳ ಮೂಲಕ ತಿಳಿಯಬಹುದಾದದ್ದು. ಮತ್ತೊಂದು ಇಂದ್ರಿಯಗಳ ಮೂಲಕ ಅಥವಾ ಸಾಮಾನ್ಯ ಜನರಿಗೆ ತಿಳಿಯಲು ಸಾಧ್ಯವಿಲ್ಲದೆ, ಆಧ್ಯಾತ್ಮಿಗಳಿಗೆ ಮಾತ್ರ ವೇದ್ಯವಾದದ್ದು. ಪರಮಜ್ಞಾನಿಗಳಿಗೆ ಕೇವಲ ಸ್ವಾಭಾವಿಕವಾದ ಈ ಜ್ಞಾನವೇ ಸಾಮಾನ್ಯರಿಗೆ ಅತಿ ಮಾನುಷವ್ಯಾಪಾರವಾಗಿ ಕಾಣುತ್ತದೆ.

## ಸೂಫಿ ನೀತಿ ನಡೆವಳಿಗಳು

(೧) ಆತ್ಮಾರ್ಪಣ: ಮೊದಲೆ ಹೇಳಿದಂತೆ ಸೂಫಿಚೇಲ ತನ್ನ ಗುರುವನ್ನು ಭಕ್ತಿಯಿಂದ ಸೇವಿಸಿ, ಸಂಪೂರ್ಣವಾಗಿ ಗುರುವಿನ ಆಜ್ಞಾವರ್ತಿಯಾಗಿರಬೇಕು. ಇದೇ ರೀತಿಯಲ್ಲಿ, ಆದರೆ, ಇನ್ನೂ ಪರಿಪೂರ್ಣವಾಗಿ ತನ್ನ ಮನಸ್ಸನ್ನು ದೇವರಲ್ಲಿ ಅರ್ಪಿಸಿ, ದೈವಸಂಕಲ್ಪದೊಡನೆ ಸಮರಸ ಹೊಂದಿ ಬಾಳಬೇಕು.

(೨) ಇಖ್‌ಲಾಸ್ (ನಿಷ್ಕಪಟಭಕ್ತಿ): ಉಳಿದೆಲ್ಲ ಆಸೆಗಳನ್ನೂ ತೊರೆದು ಮಿಕ್ಕ ಪರವಸ್ತುವಿನ ಕಡೆಗೇ ತನ್ನ ಗುರಿ ಇಟ್ಟು, ಅದರ ಹತ್ತಿರಕ್ಕೇ ಹೋಗುತ್ತಿರಬೇಕು. ಇವಕ್ಕೆ ವ್ಯತಿರಿಕ್ತವಾದ್ದೇ 'ರಿಯ' (ಕೃತ್ರಿಮ ಅಥವಾ ಕಪಟಭಕ್ತಿ). ನಿಷ್ಕಪಟಭಕ್ತಿಯ ಸಾಧನೆಗೆ ಸ್ವಾರ್ಥತ್ಯಾಗವೂ, ಇತರ ವಿಷಯ ಪರಾಙ್ಮುಖತೆಯೂ ಆವಶ್ಯಕ. ಈ ಇಖ್‌ಲಾಸ್ ಸಂಪೂರ್ಣವಾಗಿ ಸಾಧನೆಯಾಯಿತೆಂದರೆ 'ತಾನು' ಎಂಬ ಭಾವ ಲಯವಾಗಿ ಬಿಡುತ್ತದೆ.

(೩) ತೌಬ (ಪಶ್ಚಾತ್ತಾಪ): ಎಂದರೆ ಪ್ರಪಂಚದಿಂದ ದೇವರ ಕಡೆಗೆ ಮರಳುವುದು. ಇದು ಪಾಪವನ್ನು ಬಿಡುವುದು ಮಾತ್ರವಲ್ಲ; ಮನಸ್ಸನ್ನು ಪ್ರಾಪಂಚಿಕ ವಿಷಯಗಳಿಂದ ದೇವರ ಕಡೆಗೆ ತಿರುಗಿಸುವುದು. ಮನುಷ್ಯಾತ್ಮ ವಸ್ತುತಃ ಪರಿಶುದ್ಧವಾಗಿದ್ದು, ದೇಹಸಂಬಂಧದಿಂದ ಲಿಪ್ತವಾಗಿ, ಅದರಿಂದ ಬಿಡುಗಡೆ ಹೊಂದುವುದಕ್ಕೆ ಸತತ ಪ್ರಯತ್ನ ನಡಸಿ, ಪಶ್ಚಾತ್ತಾಪ ಮೂಲಕ ಮುಕ್ತಿ ಹೊಂದುತ್ತದೆ.

(೪) ದೈವಭಯ: ಎಂದರೆ—ದೇವರ ಘನತೆಯನ್ನೂ, ಮಹತ್ವವನ್ನೂ ಅರಿತು ನಡೆಯುವುದು.

(೫) ಔದಾರ್ಯ: ಲತೀಫ್ ಎಂಬ ಸಿಂಧೀಸೂಫಿ ಒಬ್ಬನು ಹೇಳಿರುವಂತೆ "ಸತ್ಯವೂ ಪ್ರೇಮವಸ್ತುವೂ ಒಂದೇ ಆಗಿರುವಾಗ, ಮನುಷ್ಯರು ಏಕೆ ಸಾಧನಮಾರ್ಗಗಳನ್ನು ಕುರಿತು ಕಚ್ಚಾಡುತ್ತಾರೆ?" ಲತೀಫನ ಶಿಷ್ಯರಲ್ಲೊಬ್ಬನು ಅವನನ್ನು ಯಾವ ಧರ್ಮವನ್ನು ಅನುಸರಿಸುತ್ತೀಯೆ ಎಂದು ಕೇಳಿದ್ದಕ್ಕೆ "ಮಧ್ಯದ್ದು" ಎಂದನಂತೆ. ಎಂದರೆ— ಎಲ್ಲವನ್ನೂ, ಅಥವಾ ಒಂದನ್ನೂ ಅಲ್ಲ ಎಂಬುದು ಅವನ ಮನೋಭಾವ.

(೬) ತವಕ್ಕುಲ್ (ನಂಬಿಕೆ): ಸೂಫಿ ದೇವರಲ್ಲಿ ಸಂಪೂರ್ಣ ನಂಬಿಕೆಯನ್ನು ಇಟ್ಟಿರಬೇಕು. ಕೆಲವರು ಇದನ್ನು ಅತಿಯಾಗಿ ಮಾಡಿ ತಮ್ಮ ಜೀವನಕ್ಕಾಗಿ ಕೂಡ ಕೆಲಸಮಾಡದೆಯೂ, ಕೊನೆಗೆ ಭಿಕ್ಷಕ್ಕೆ ಕೂಡ ಹೋಗದೆಯೂ, ಆಹಾರ ತನ್ನಷ್ಟಕ್ಕೆ ತಾನೇ ಬರುತ್ತದೆಂದು ಸುಮ್ಮನೆ ಕುಳಿತಿರುತ್ತಿದ್ದರು. ಈ ಭಾವ ಬರಬರುತ್ತ ನಿರುದ್ಯೋಗಕ್ಕೂ ಸೋಮಾರಿತನಕ್ಕೂ ಇಳಿದು ಕೆಟ್ಟಿತು.

(೭) ಸಂಗೀತ: ಆಗಲೇ ಹೇಳಿರುವಂತೆ ಸೂಫಿ ಸೌಂದರ್ಯೋಪಾಸಕ. ಅಂತಃಕರಣವನ್ನು ಸೌಂದರ್ಯದ ಕಡೆಗೆ ಚೋದಿಸಬೇಕು, ಪ್ರಾಪಂಚಿಕ ಸೌಂದರ್ಯ ವಿಶ್ವಸೌಂದರ್ಯಕ್ಕೆ ಸೇತುವೆ ಎಂಬುದು ಸೂಫಿಗಳಲ್ಲಿ ಸಾಮಾನ್ಯವಾದ ನುಡಿ. ಸಂಗೀತವೂ ಒಂದು ತರದ ಸೌಂದರ್ಯವೇ; ನಾದ ಸಮರಸಾತ್ಮಕ ಸೌಂದರ್ಯ. ಇದರಿಂದ ಅನೇಕ ಸೂಫಿಗಳು, ಅದರಲ್ಲೂ ಚಿಸ್ತಿಗಳು ಮತ್ತು ಮೌಲ್ವಿಗಳು, ಸಂಗೀತವನ್ನು ಬಹುವಾಗಿ ಮೆಚ್ಚಿದರು. ಆದರೆ, ಸಂಗೀತದ ಧ್ಯೇಯ ಆಧ್ಯಾತ್ಮ ಭಾವಪ್ರಚೋದನ ಮಾತ್ರ ಆಗಿರಬೇಕು. ಸಂಗೀತವನ್ನು ಸಮಾ ಎಂದು ಕರೆದಿದೆ. ಈ ಗೀತಗಳೆಲ್ಲ ಸಾಮಾನ್ಯವಾಗಿ ಪ್ರೇಮಗೀತಗಳು. ಅವುಗಳನ್ನು ಸಾಂಕೇತಿಕವಾಗಿ ಅರ್ಥಮಾಡಿಕೊಳ್ಳಬೇಕು. ಈ ರಹಸ್ಯಾರ್ಥ ಅವರವರ ಸಂಸ್ಕೃತಿ ಶಿಕ್ಷಣಗಳಿಗೆ ಅನುಸಾರವಾಗಿ ಸ್ಫುರಿಸುತ್ತ ಹೋಗುತ್ತದೆ. ಸೂಫಿಗಳ ನಂಬಿಕೆಯ ಪ್ರಕಾರ ಆನಂದಪರವಶತೆಯ ಅವಸ್ಥೆ ಸಂಗೀತದ ಮೂಲಕವೂ ಬರಬಹುದು. ಕಾಮಕ್ರೋಧಾದಿ ಪಾಶವಭಾವಗಳನ್ನು ಕೆರಳಿಸುವ ನೀಚ ಸಂಗೀತ ಮಾತ್ರ ನಿಷಿದ್ಧ. ಕೆಲವು ಸೂಫಿಸಾಧುಗಳು ಕವಿಗಳೂ, ಗಾಯಕರೂ, ಸಂಗೀತ ಕಲಾಭಿಜ್ಞರೂ ಆಗಿದ್ದರು.

(೮) ಕಷ್‌ಫ್ (ಆಧ್ಯಾತ್ಮ ರಹಸ್ಯ ಪ್ರಕಾಶ): ಇದು ಎರಡು ತರವು. ಒಂದು, ಮಹಾಸ್ಸೆರಹ್. ಇದರಲ್ಲಿ ಬುದ್ಧಿಯೇ ಸಾಧನ. ಎರಡು, ಮುಷಾಹೆದ, ಇದರಲ್ಲಿ ಸ್ವಾನುಭವವೇ ಸಾಧನ.

(೯) ವಜ್‌ದ್ (ಆನಂದಪರವಶತೆ): ಎಂದರೆ—ಪ್ರೇಮವಸ್ತುವಿನ ಆಕಾಂಕ್ಷೆ ಅಥವಾ ಅದರಲ್ಲಿ ತಾತ್ಕಾಲಿಕ ತಲ್ಲೀನತೆ. ಈ ಆನಂದ ಪರವಶಾವಸ್ಥೆ ಪ್ರಾರ್ಥನಾವಸ್ಥೆಗಿಂತ ಮೇಲು. ಮೇಲಿಂದ ಮೇಲೆ ಆನಂದಪರವಶತೆಯಲ್ಲಿ ಇರುವುದನ್ನು ಅಭ್ಯಾಸಮಾಡಿದರೆ, ದೈವಸಂಕಲ್ಪಕ್ಕೆ ನಮ್ಮ ಆತ್ಮವನ್ನು ಸಂಪೂರ್ಣವಾಗಿ ಅರ್ಪಿಸಬಹುದು.

(೧೦) ಆಧ್ಯಾತ್ಮ ಜ್ಞಾನ: ಇದು ಮೂರು ತೆರ. (೧) ಇಲ್ಮುಲ್‌ಯಕೀನ್ ಅಥವಾ ಸಾಧಾರಣ ಜ್ಞಾನ. ಇದರಲ್ಲಿ ಬುದ್ಧಿಯ ಮೂಲಕ ತರ್ಕಿಸಿ ವಿಷಯ ನಿರ್ಣಯಕ್ಕೆ ಬರುತ್ತೇವೆ. (೨) ಐನುಲ್‌ಯಕೀನ್ ಅಥವಾ ಅಸಾಧಾರಣ ಜ್ಞಾನ. ಇದರಲ್ಲಿ ಪ್ರಪಂಚಜ್ಞಾನ ಮರೆತು ಆನಂದಪರವಶರಾಗಿ ಆಧ್ಯಾತ್ಮ ರಹಸ್ಯವನ್ನು ಕಾಣುತ್ತೇವೆ. (೩) ಹಕುಲ್‌ಯಕೀನ್ ಅಥವಾ ಸಾಧಾರಣಾತೀತ (ಸೂಪರ್ ನಾರ್ಮಲ್) ಜ್ಞಾನ. ಇದರಲ್ಲಿ ಸತ್ಯದೊಡನೆ ಒಂದಾಗುತ್ತೇವೆ.

(೧೧) ಹಾಲ್ ಅಥವಾ ಸ್ಥಿತಿ: ಇದು ದೈವಾನುಗ್ರಹದಿಂದ ಲಭಿಸುವ ಮನಸ್‌ಸ್ಥಿತಿ. ಈ ಸ್ಥಿತಿಯಲ್ಲಿ ಮನುಷ್ಯನು ಬಸ್ತ್ ಅಥವಾ ಹೃದಯ ವಿಕಾಸ, ಕಬ್‌ಸ್ ಅಥವಾ ಹೃದಯ ಸಂಕೋಚ, ಅನುಭವಿಸುತ್ತಾನೆ. ಈ ಅನುಗ್ರಹ ಸಂತತವಾಗಿ ಲಭಿಸಿದರೆ, ಆ ಸ್ಥಿತಿ ಮಿಲ್ಕ್ ಅಥವಾ ಸ್ವತ್ತು, ಸ್ವಾಧೀನ ಎನಿಸಿಕೊಳ್ಳುತ್ತದೆ. ಅದು ಶಾಶ್ವತವಾಗಿ ನಿಂತರೆ ಮಕಾಮ್ ಅಥವಾ ಸ್ಥಾಯಿ ಎನಿಸಿಕೊಳ್ಳುತ್ತದೆ.

(೧೨) ತ್ಯಾಗ: ಇದು ಎರಡು ತೆರ. ಒಂದು ಹೊರಗಿನದು, ಮತ್ತೊಂದು ಒಳಗಿನದು. ತ್ಯಾಗವೆಂದರೆ ಪ್ರಾಪಂಚಿಕ ಸುಖ ಪರಾಙ್ಮುಖತೆ. ಸೂಫಿ ತನ್ನ ಇಹಜೀವನದ ಆವಶ್ಯಕತೆಗಳನ್ನು ಆದಷ್ಟು ಕಡಮೆ ಮಾಡಿಕೊಳ್ಳಬೇಕು. ತರುವಾಯ ಆತ್ಮವನ್ನು ವಿಷಯವಸ್ತುಗಳ ಸೆಳೆತದಿಂದ ತಪ್ಪಿಸಿ ಸೆರೆಬಿಡಿಸಬೇಕು. ಇಹಜೀವನ ಪರಜೀವನಕ್ಕೆ ಶಿಕ್ಷಣಸಾಧನವೆಂದು ಸೂಫಿ ತಿಳಿಯಬೇಕು.

(೧೩) ಪಾಪ: ಅಪೂರ್ಣತೆಯೇ ಪಾಪ. ಪಾಪಕ್ಕೆ ಎಳೆಯುವ ವಸ್ತುಗಳೂ ಆತ್ಮದ ಅಪೂರ್ಣತೆಗೆ ಕಾರಣಗಳೇ. ಒಳ್ಳೆಯದು ಪರಿಪೂರ್ಣವಾದದ್ದು. ಅದು ದೇವರಿಂದ ಬಂದದ್ದು. ಇದನ್ನೇ ಬೇರೆ ರೀತಿ ಹೇಳುವುದಾದರೆ, ಪಾಪ ಮನುಷ್ಯ ಸ್ವಭಾವದ ಬೇರ್ಪಾಟು ಅಥವಾ ಕಟ್ಟು ಎನ್ನಬಹುದು.

(೧೪) ಜಿಕ್ರ್ ಅಥವಾ ಜಪ, ಮತ್ತು ಮುರಾಕೆಬ ಅಥವಾ ಧ್ಯಾನ: ಬೇರೆ ಬೇರೆ ಸೂಫಿ ಸಂಸ್ಥೆಗಳು ಬೇರೆ ಬೇರೆ ಜಪವನ್ನು ಅನುಸರಿಸುತ್ತವೆ. ಸ್ಥೂಲವಾಗಿ ಬಾಯಲ್ಲಿ ಗಟ್ಟಿಯಾಗಿ ಉಚ್ಚರಿಸುವ ಮಾರ್ಗವೊಂದು (ಇದನ್ನು 'ಜಲಿ' ಎಂದು ಕರೆಯುತ್ತದೆ); ಮಾನಸಿಕ ಜಪವೊಂದು (ಇದನ್ನು 'ಖಿಫಿ' ಎಂದು ಕರೆಯುತ್ತದೆ) ಎಂದು ಎರಡು ಮಾರ್ಗ ಉಂಟು. ಚಿಸ್ತಿ ಮತ್ತು ಕಾದಿರಿ ಸಂಸ್ಥೆಗಳು ಜಲಿ ಮಾರ್ಗವನ್ನೂ, ನಕ್ಷಬಂದಿ ಸಂಸ್ಥೆ ಖಿಫಿ ಮಾರ್ಗವನ್ನೂ ಅನುಸರಿಸುತ್ತವೆ. ಎಲ್ಲ ಮಾರ್ಗಗಳೂ ಕುರಾನ್ ವಚನವನ್ನೇ ಜಪಮಂತ್ರವನ್ನಾಗಿ ತೆಗೆದುಕೊಂಡಿವೆ. ಜಪ ಹೇಗೆ ನಡಸಬೇಕು, ಆಸನ ಪ್ರಾಣಾಯಾಮಾದಿಗಳು ಹೇಗಿರಬೇಕು ಎನ್ನುವುದರಲ್ಲಿ ಸಂಸ್ಥೆ ಸಂಸ್ಥೆಗೂ ಭೇದವಿದೆ. ಇಂಡಿಯದಲ್ಲಿ ಕೆಲವು ಸಿಂಧಿ ಸೂಫಿಗಳು ಓಂಕಾರವನ್ನು ಜಪಮಂತ್ರವಾಗಿ ಉಪಯೋಗಿಸುತ್ತಾರೆ.

(೧೫) ಫನಾ ಅಥವಾ ಲಯ ಮತ್ತು ಬಕಾ ಅಥವಾ ಸ್ಥಾಪನೆ (ಅಥವಾ ಧಾರಣೆ): ಈ ಎರಡು ಅವಸ್ಥೆಗಳೂ ಆಧ್ಯಾತ್ಮ ಬೆಳವಣಿಗೆಯ ಚರಮದಶೆಗಳು. ಫನ ಎಂದರೆ ಮನಸ್ಸನ್ನು ಹೊರಗಿನಿಂದ ಒಳಸೆಳೆದು ದೇವರ ಕಡೆಗೆ ಒಯ್ದು ತಲ್ಲೀನನಾಗುವುದು. ಬಕ ಎಂದರೆ ದೋಷಮುಕ್ತವೂ ಗುಣಯುಕ್ತವೂ ಆದ ಈ ತಲ್ಲೀನತೆಯ ಅವಸ್ಥೆಯನ್ನು ಶಾಶ್ವತವಾಗಿ ಧಾರಣಮಾಡಿಕೊಂಡಿರುವುದು. ಈ ಅವಸ್ಥೆಯಲ್ಲಿ ಸೂಫಿಯ ಮನಸ್ಸು ದೈವ ಸಂಕಲ್ಪಕ್ಕೆ ಹೊಂದಿಕೊಂಡು, ಅದರ ವ್ಯಾಪಾರಕ್ಕೆ ಸಾಧನವಾಗುತ್ತದೆ.

ಪ್ರಾಣಾಯಾಮ, ಧ್ಯಾನ, ಜಪ, ಭಕ್ತಿ ಪ್ರಧಾನತೆ, ಪರಧರ್ಮ ಸಹಿಷ್ಣುತೆ, ಉಪವಾಸಾದಿ ವ್ರತಗಳು, ತಪಶ್ಚರ್ಯೆ ಮೊದಲಾದ

ವಿಷಯಗಳಲ್ಲಿ ಸೂಫಿಗಳಿಗೂ ಹಿಂದೂ ಯೋಗಿಗಳಿಗೂ ಹೋಲಿಕೆಗಳಿವೆ. ಸೂಫಿ ಧರ್ಮ ಇಸ್ಲಾಂ ಧರ್ಮವನ್ನೂ ಕುರಾನ್ ವಚನಗಳನ್ನೂ ಅವಲಂಬಿಸಿದೆ. ಯೋಗಿಧರ್ಮ ಆರ್ಷೇಯ ಹಿಂದೂ ತತ್ವಗಳನ್ನು ಅವಲಂಬಿಸಿದೆ. ಹೋಲಿಕೆಗಳಿದ್ದರೂ ಕೆಲವು ಭೇದಗಳೂ ಉಂಟು. ಸೂಫಿಗಳೂ ಯೋಗಿಗಳೂ ತಾಪಸಜೀವನದಲ್ಲಿ ನಂಬಿಕೆ ಇಟ್ಟಿದ್ದರೂ, ಅಲ್ಪಸ್ವಲ್ಪರನ್ನು ಬಿಟ್ಟರೆ ಸೂಫಿಗಳು ಬ್ರಹ್ಮಚರ್ಯ (ಅವಿವಾಹಿತ) ಜೀವನವನ್ನು ನಡಸುವುದಿಲ್ಲ. ಸೂಫಿಗಳಲ್ಲಿ ಅವತಾರದ ನಂಬಿಕೆಯಿಲ್ಲ. ಆದರೆ, ದೇವರ ಕಡೆಗೆ ಮಾನವನ ಉತ್ತಾರ (ಏರುವುದು) ಉಂಟು. ಸೂಫಿಗಳು ಮಾನಸಿಕಪೂಜೆ ಮಾತ್ರ ಮಾಡುತ್ತಾರೆ, ಬಹಿರಾಕೃತಿ ಪೂಜೆ ಒಪ್ಪುವುದಿಲ್ಲ. ಸೂಫಿಗಳೂ ಯೋಗಿಗಳೂ ಆಸನ ಪ್ರಾಣಾಯಾಮಾದಿ ಸಾಧನಗಳನ್ನು ಉಪಯೋಗಿಸಿದರೂ ಅವುಗಳ ರೀತಿ ಮತ್ತು ಆಚರಣೆಗಳಲ್ಲಿ ವ್ಯತ್ಯಾಸವಿದೆ. ಸೂಫಿಧರ್ಮ ಆರ್ಯ ಮತ್ತು ಸೆಮಿಟಿಕ್ ಆಧ್ಯಾತ್ಮಧರ್ಮಗಳ ಮಿಶ್ರಣ. ಯೋಗಿಧರ್ಮ ಶುದ್ಧ ಆರ್ಯಧರ್ಮ.

## ಸೂಫಿಧರ್ಮ ವಿಷಯದ ಗ್ರಂಥಗಳು

ಸೂಫಿಧರ್ಮವನ್ನು ಕುರಿತು ಪರ್ಷಿಯನ್ ಮತ್ತು ಉರ್ದು ಭಾಷೆಗಳಲ್ಲಿ ಪದ್ಯಗದ್ಯ ಗ್ರಂಥಗಳಿವೆ.

ಗದ್ಯಗ್ರಂಥಗಳಲ್ಲಿ ಮುಖ್ಯವಾದುವು: (೧) ಅಬುನಸ್‌ರ್‌ಸರ್ರಾಜನ ಕಿತಾಬ್‌ಉಲ್-ಲುಮಾ಼ಫಿತ್-ತಸ್ಸಾವುಫ಼್; (೨) ಅಬುಲ್‌ಕಾಸಿಮ್ ಕುಷಯಿರೀಯ 'ರೆಸಾಲ ಎ ಕುಷಯಿರೀಯ' (೩) ಉಸ್ಮಾನ್ ಮಗ ಅಲಿಯ ಕಷ್‌ಫುಲ್ ಮಹ್‌ಜೂಬ್; (೪) ಇಮಾಮ್ ಘಸ್ಸಾಲಿಯ ಇಹ್ಯಉಲ್ ಉಲೂಮ್; (೫) ಇಬ್‌ನ್‌ಉಲ್ ಅರಬಿಯ ಫುತೂಹಾತ್ ಎಮುಕ್ಕೀಯ ಮತ್ತು (೬) 'ಫುಸುಸುಲ್‌ಹಿಕಮ್'; (೭) ಸುಹರವರ್ದಿಯ 'ಅವಾರಿಫ಼್‌ಉಲ್ ಮುಆರಿಫ಼್'; (೮) ಅಬ್ದುಲ್‌ಕರೀಮ್ ಜೀಲಿಯ 'ಪರಿಪೂರ್ಣಮಾನವ'; (೯) ಅಬ್ದುಲ್ ರಸ್ಸಾಕನ 'ಪಾರಿಭಾಷಿಕ ನಿಘಂಟು'; (೧೦) ಜಾಮಿಯ 'ಲವಾಯ್‌ಹ್'; (೧೧)

ಮಾರ್ಗದರ್ಶನ ಇಲ್ಮುಲ್ ಕಿತಾಬ್. (೧೨) ಸದ್ರುದ್ದೀನ್ ಕೂನವಿಯ ಇನಿಷ್ಟ್ ತಾಹುಲ್ ಘೆಯಿಬ್.

ವ್ಯವಸ್ಥಾರೂಪದಲ್ಲಿ ಸೂಫಿಧರ್ಮವನ್ನು ಪ್ರತಿಪಾದಿಸುವ ಪದ್ಯ ಗ್ರಂಥಗಳಲ್ಲಿ ಪ್ರಸಿದ್ಧವಾದುವು: (೧) ಜಲಾಲುದ್ದೀನ್ ರೂಮಿಯ 'ಮಸ್‌ನವಿ'. ಇರಾಸಿನಲ್ಲಿರುವ ಇದು ಪ್ರಮಾಣಗ್ರಂಥ ಎನ್ನಬಹುದು. (೨) ಫರೀದುದ್ದೀನ್ ಅತ್ತಾರನ 'ಮಂತಕುತ್‌ತಯ್‌ರ್'. (೩) ಸನಾಯ್‌ನ 'ಹದೀಕ'. (೪) ಷಬಿಸ್ತರಿಯ 'ಗುಲ್‌ಷನ್ ಎರಾಸ್ತ್'. (೫) ನಿಜಾಮಿಯ ಐದು ಪ್ರಸಿದ್ಧ ಮಸ್‌ನವಿಗಳು. ಜಾಮಿ, ಅಮೀರ್ ಖುಸ್ರೊ ಮೊದಲಾದವರೂ ಈ ಮಸ್‌ನವಿಗಳನ್ನು ಅನುಕರಿಸಿ ಬರೆದಿದ್ದಾರೆ. ಇವುಗಳಲ್ಲಿ ಬಹುಪಾಲು ಹಲವು ಯೂರೋಪ್ ಭಾಷೆಗಳಿಗೆ ಭಾಷಾಂತರವಾಗಿದೆ.

ಇವುಗಳಲ್ಲಿ ಕೆಲವನ್ನು ಮಾತ್ರ ಕುರಿತು ಸ್ಥೂಲವಾಗಿ ಹೇಳುತ್ತದೆ: ಸರ್ರಾಜ್ ಎಂದು ಪ್ರಸಿದ್ಧನಾಗಿರುವ ತೂಸ್‌ಸ್ಥಳದ ಅಬೂನಸ್‌ರ್ (ಸ. ಕ್ರಿ. ಶ. ೯೮೮) ರಚಿಸಿದ ಕಿತಾಬ್ ಉಲ್‌ಲುಮ್ಮಿಷ್‌ತಸೌವ್ವಫ್. ಇವನು ನೀಷಾಪೂರಿನ ಅಬೂಮುಹಮ್ಮದ್ ಮುರ್‌ತಇಷನ ಶಿಷ್ಯನು. ಇವನು ವಿಸ್ತಾರವಾಗಿ ದೇಶಸಂಚಾರಮಾಡಿ ಹಲವು ಸೂಫಿ ಗ್ರಂಥಗಳನ್ನು ಬರೆದಿದ್ದಾನೆ. ಇವುಗಳಲ್ಲಿ ಮುಖ್ಯವಾದದ್ದು ಮೇಲೆ ಹೇಳಿರುವ ಗ್ರಂಥ. ಈ ಗ್ರಂಥದಲ್ಲಿ ಸೂಫಿ ವಿಷಯಗಳ ಜೊತೆಗೆ ಪ್ರಾಸಂಗಿಕವಾಗಿ ಸಂಪ್ರದಾಯಗಳ ಮತ್ತು ದೇವತಾಶಾಸ್ತ್ರಜ್ಞರ ವಿಷಯವನ್ನೂ ಹೇಳಿದೆ. ಸೂಫಿಗಳು ಇಸ್ಲಾಂ ವಿಷಯದಲ್ಲಿ ಸಂಪ್ರದಾಯಿಗಳೂ ದೇವತಾ ಶಾಸ್ತ್ರಜ್ಞರೂ ಹೇಳುವ ವಿಷಯಗಳನ್ನು ಸಾಮಾನ್ಯವಾಗಿ ಒಪ್ಪಿಕೊಂಡು, ಅದರ ಜೊತೆಗೆ ಭಕ್ತಿಯನ್ನು ಪ್ರಧಾನವಾಗಿ ಸೇರಿಸಿಕೊಂಡು, ವಿಷಯ ಪರಾಙ್ಮುಖತೆಯಿಂದಲೂ, ಆತ್ಮ ಪರಿಶುದ್ಧಿಯಿಂದಲೂ ಹೇಗೆ ಜ್ಞಾನಸಾಧನೆಗೂ ಭಗವತ್ ಸಾಧನೆಗೂ ಪ್ರಯತ್ನಿಸುತ್ತಾರೆ; ಕುರಾನಿನಲ್ಲಿಯ ಉಳಿದ ಬೋಧೆಗಳಿಗಿಂತ ನೈತಿಕ ಬೋಧೆಯಲ್ಲಿ ಸೂಫಿಗಳಿಗೆ ಹೇಗೆ ಮೆಚ್ಚಿಗೆ ಹೆಚ್ಚು; ಈ ನೀತಿಯ ವಚನಗಳಿಂದ ಅವರು ಹೇಗೆ ಅನುಭಾವ ಭಾವನೆಗಳನ್ನು ಕಲ್ಪಿಸಿಕೊಳ್ಳುತ್ತಾರೆ; ಸೂಫಿ

ಗಳಿಗೆ ಪೈಗಂಬರನ ಜೀವನ ಹೇಗೆ ಆದರ್ಶ ಸೂಫಿಯ ಜೀವನ; ಎಂಬಿವೇ ಮೊದಲಾದುವನ್ನು ಈ ಗ್ರಂಥದಲ್ಲಿ ಹೇಳಿದೆ. ಪರವಸ್ತು, ಅದರ ಏಕತೆ; ಜ್ಞಾನ, ಭಕ್ತಿ, ಭಯ, ಭೋಗ, ತ್ಯಾಗ, ಶಾಂತಿ, ಉಪವಾಸಾದಿ ವ್ರತ, ಸಂಗೀತ, ನೃತ್ಯ, ಪವಾಡ, ದರ್ಶನ, ಪಾಪ, ಪುಣ್ಯ—ಇವೇ ಮೊದಲಾದ ವಿಷಯಗಳನ್ನು ಚರ್ಚಿಸಿ ಅಭಿಪ್ರಾಯ ಭೇದಗಳನ್ನು ಹೇಳಿ, ಅವುಗಳ ಮೇಲೆ ತನ್ನ ಟೀಕೆಯನ್ನೂ ಕೊಟ್ಟಿದ್ದಾನೆ.

ಈ ಗ್ರಂಥದಿಂದ ಸ್ಥೂಲವಾಗಿ ಸಂಗ್ರಹಿಸಬಹುದಾದ ಮುಖ್ಯ ವಿಷಯ: ಸೂಫಿ ಮಾತಿನ ಮೂಲಾರ್ಥದಲ್ಲಿ ಭಿನ್ನಾಭಿಪ್ರಾಯವಿದೆ. ಅವರು ಹೊದೆಯುತ್ತಿದ್ದ ಕಂಬಳಿಯಿಂದ ಈ ಮಾತು ಬಂತೆಂದು ಕೆಲವರು ಹೇಳುತ್ತಾರೆ. ಈ ಕಂಬಳಿಯ ಕವುದಿ ಸೂಫಿಗಳು ಆಚರಣೆಗೆ ತಂದದ್ದಲ್ಲ. ಇಸ್ಲಾಂ ಪೂರ್ವದ ಸಾಧುಗಳು ಹೊದೆಯುತ್ತಿದ್ದ ಈ ಕವುದಿಯನ್ನು ಸೂಫಿಗಳೂ ಬಳಸಿದರು ಅಷ್ಟೆ. ಮತ್ತೆ ಕೆಲವರು ಸಫವಿ ಅಥವಾ ಸಫಾ (ಪರಿಶುದ್ಧಿ) ಎಂಬ ಮಾತಿನಿಂದ ನಿಷ್ಪನ್ನಮಾಡುತ್ತಾರೆ.

ಜ್ಞಾನ ಮೂರು ಬಗೆ. ಪರಮಾತ್ಮನನ್ನು ಒಪ್ಪಿಕೊಳ್ಳುವುದು; ಅವನನ್ನು ಸಾಧಿಸುವುದು; ಮತ್ತು ಅವನನ್ನು ಧ್ಯಾನಿಸಿ ಪ್ರತ್ಯಕ್ಷಮಾಡಿಕೊಳ್ಳುವುದು. ಭಕ್ತಿ ಎರಡು ತೆರನಾಗಿರಬಹುದು. ದೇವರ ದಯೆ ಮತ್ತು ಅನುಗ್ರಹಗಳಿಗಾಗಿ ಮಾಡುವ ಸ್ವಾರ್ಥಭಕ್ತಿ; ದೇವರ ಸರ್ವ ಶಕ್ತತ್ವವನ್ನೂ ಸರ್ವ ಜ್ಞಾನಿತ್ವವನ್ನೂ ತಿಳಿದುಕೊಂಡು, ತ್ರಿಕರಣ ಶುದ್ಧಿಯಾಗಿ ಮಾಡುವ ನಿಸ್ವಾರ್ಥ ಭಕ್ತಿ. ಹೀಗೆಯೇ ಭಯವೂ ಎರಡು ತೆರನಾಗಿರಬಹುದು. ಶಿಕ್ಷೆಯ ಭಯ; ಪರಮಾತ್ಮನಿಂದ ಅಗಲಿಕೆಯನ್ನು ಸಹಿಸಲಾರದ ಭಯ. ಆನಂದಪರವಶತೆ ಒಬ್ಬೊಬ್ಬರಲ್ಲಿ ಒಂದೊಂದು ತರದ ವಿಕಾರ ಉಂಟುಮಾಡಬಹುದು. ಕೆಲವರಲ್ಲಿ ಪ್ರಬಲವಾದ ರಾಗೋದ್ರೇಕವನ್ನು ತರಬಹುದು; ಮತ್ತೆ ಕೆಲವರಲ್ಲಿ ನಿಶ್ಚಲ ಶಾಂತಿಯನ್ನು ತರಬಹುದು. ಆನಂದ ಪರವಶತೆಯಲ್ಲಿ ಇಂದ್ರಿಯ ಜ್ಞಾನರಹಿತರಾಗಿರುತ್ತೇವೆಂದು ಕೆಲವು ಸೂಫಿಗಳು ನಂಬುತ್ತಾರೆ. ಆದರೆ, ಅದು ಅಷ್ಟು ಸರಿಯಲ್ಲ. ಏಕೆಂದರೆ ಇಂದ್ರಿಯ ಜ್ಞಾನನಷ್ಟದ ಭಾವವೂ ಒಂದು ಭಾವವೇ ಆಗಿರುವುದರಿಂದ ವೇದನ ಭಾವ ಎಂದೂ ಸಂಪೂರ್ಣ

ವಾಗಿ ನಾಶವಾಗುವುದಿಲ್ಲ. ಸೂಫಿಗಳು ಸಂಗೀತ ದೃಶ್ಯಗಳನ್ನು ಭೋಗಾನುಭವಕ್ಕಾಗಿಯೂ ಕಾಮೋದ್ರೇಕಕ್ಕಾಗಿಯೂ ಒಪ್ಪುವುದಿಲ್ಲ. ಆದರೆ, ಆನಂದಪರವಶತೆಗೆ ಅವು ದಾರಿಮಾತ್ರವೆಂದು ಅವನ್ನು ಮೆಚ್ಚುತ್ತಾರೆ. ಲಯ ಎಂದರೆ—ಮನುಷ್ಯಾತ್ಮದ ನಾಶವಲ್ಲ; ಪರಮಾತ್ಮನಲ್ಲಿ ಲೀನವಾಗುವುದು. ದೇವರು ಹೇಳುವಂತೆ "ನಾನು ನಿನ್ನನ್ನು ಪ್ರೀತಿಸಿ ಅನುಗ್ರಹಿಸಿದಾಗ ನೀನು ನೋಡುವ ಕಣ್ಣು ನಾನು, ನೀನು ಕೇಳುವ ಕಿವಿ ನಾನು." ಇಂದ್ರಿಯ ಪ್ರೇಮವೇ ಪ್ರೀತಿ ವಸ್ತುಗಳನ್ನು ಒಂದಾಗಿ ಬೆರಸುವುದಾದರೆ, ಆಧ್ಯಾತ್ಮಪ್ರೇಮ ಇದನ್ನು ಮತ್ತೂ ಅಧಿಕತರವಾಗಿ ಮಾಡಲೇಬೇಕು.

ಮನೆ, ಮಡದಿ, ಮಕ್ಕಳು, ಅನ್ನ, ಬಟ್ಟೆ, ಇವು ಕೇವಲ ವಿಷಯವಸ್ತುಗಳೆಂದು ಭಾವಿಸಬಾರದು ಎಂಬುದು ಪೈಗಂಬರನ ಹೇಳಿಕೆ. ಜೀವನಕ್ಕೆ ಅವಶ್ಯಕವಾದ ಇವನ್ನು ಹೊರತು ಉಳಿದವನ್ನು ದೇವರ ಸಾಧನೆಗೆ ತೊಡಕುಗಳೆಂದು ಪರಿಗಣಿಸಬೇಕು. ಭೋಗಲಾಲಸೆ ಎಷ್ಟು ಕೆಟ್ಟದ್ದೊ, ಅತಿ ದಾರುಣ ತಾಪಸ ಜೀವನವೂ ಅಷ್ಟೇ ಕೆಟ್ಟದ್ದು. ತಪಶ್ಚರ್ಯೆ ಆತ್ಮಶಿಕ್ಷಣಕ್ಕೆ ದಾರಿಯೇ ಹೊರತು ಗುರಿಯಲ್ಲ. ಕೆಲವರು ಜೀವವನ್ನು ಹಸಿವಿನಿಂದ ಕೊರಗಿಸಿದರೆ ಪಾಶವ ಶಕ್ತಿ ಅಳಿಯುತ್ತದೆಂದು ತಿಳಿದಿದ್ದಾರೆ. ಇದು ಶುದ್ಧ ತಪ್ಪು. ಮಾನವ ದೌರ್ಬಲ್ಯವನ್ನು ನಿರಾಹಾರ ಕಳೆಯಬಾರದು. ಅಷ್ಟೇ ಅಲ್ಲ; ಇತರ ಕರ್ತವ್ಯ ಧರ್ಮಗಳನ್ನು ನಡಸುವುದಕ್ಕೆ ಕೂಡ ದೇಹವನ್ನು ಅಶಕ್ತಮಾಡಿಬಿಡಬಹುದು. ಕೆಲವರು ಜ್ಞಾನಸಾಧನೆಗೆ ಏಕಾಂತ ಜೀವನ ಸಹಕಾರಿಯೆಂದು ನಂಬುತ್ತಾರೆ. ಇದು ಸರಿಯಲ್ಲ. ಏಕೆಂದರೆ—ಪಾಪ ಒಳಗಿನಿಂದ ಹುಟ್ಟುತ್ತದೆಯೆ ಹೊರತು ಹೊರಗಿನಿಂದಲ್ಲ. ಈ ಒಳಗು ಏಕಾಂತದಲ್ಲಿಯೂ ಇದ್ದೇ ಇರುತ್ತದೆ. ಗೋಡೆಹಾಕಿ ಮರಸುವುದಕ್ಕೆ ಆಗುವುದಿಲ್ಲ.

ಕೆಲವು ಸೂಫಿಗಳು ಒಂದು ವಿಧವಾದ ಅವತಾರದಲ್ಲಿ ನಂಬುತ್ತಾರೆ. ಒಂದು ವಿಧವಾದ ಪರಿಣಾಮ ತತ್ವದಲ್ಲೂ ನಂಬುತ್ತಾರೆ. ಪರಿಣಾಮ ಎಂದರೆ ಮೂಲತಃ ಬದಲಾವಣೆಯಲ್ಲ. ಪರಸತ್ಯದ ಪ್ರಕಾಶದಲ್ಲಿ ಮನುಷ್ಯನ ನೈಜಸ್ವಭಾವ ಬೆಳಗುವುದೇ ಪರಿಣಾಮ. ಆದ್ದರಿಂದ

ಫ್ಞನ ಎಂದರೆ ಆತ್ಮನಾಶವಲ್ಲ, ಆತ್ಮಲಯವಲ್ಲ; ಅದು ಆತ್ಮಪ್ರಕಾಶ. ಸೂಫಿಗಳು ಪವಾಡದಲ್ಲಿ ನಂಬುತ್ತಾರೆ. ದೇವತಾ ಶಾಸ್ತ್ರಜ್ಞರು ಪೈಗಂಬರರು ಮಾತ್ರ ಪವಾಡ ಮೆರೆಯಲು ಶಕ್ತರೆಂದು ಹೇಳುತ್ತಾರೆ. ಆದರೆ, ಸೂಫಿಗಳು ಸತ್ಪುರುಷರು ಯಾರಾದರೂ ಪವಾಡ ಮೆರೆಯಬಹುದೆಂದು ನಂಬುತ್ತಾರೆ. ಅಲ್ಲದೆ, ಈ ಇಬ್ಬರ ಪವಾಡಗಳಿಗೂ ವ್ಯತ್ಯಾಸವೂ ಉಂಟು. ಪೈಗಂಬರರು ಇತರರ ನಂಬಿಕೆಗಾಗಿಯೂ, ಸತ್ಪುರುಷರು ಆತ್ಮ ನಂಬಿಕೆಗಾಗಿಯೂ ಅದರ ಮೂಲಕ ದೇವರಲ್ಲಿ ತಮ್ಮ ನಂಬಿಕೆಯನ್ನು ಬಲಪಡಿಸಿಕೊಳ್ಳುವುದಕ್ಕಾಗಿಯೂ ಮೆರೆಯುತ್ತಾರೆ. ಎಲ್ಲದಕ್ಕಿಂತಲೂ ಅದ್ಭುತವಾದ ಪವಾಡವೆಂದರೆ ಪಾಪವನ್ನು ತೊಲಗಿಸಿ ಆತ್ಮ ಪರಿಶುದ್ಧಿಯಿಂದ ಪುಣ್ಯಗಳಿಸುವುದು.

ಮನುಷ್ಯನು ಎಷ್ಟೇ ನಿರ್ದೋಷನೂ ಪಾಪಮುಕ್ತನೂ ಆದರೂ ಮಾನವ ದೌರ್ಬಲ್ಯದಿಂದ ಒಂದೊಂದು ಕಾಲದಲ್ಲಿ ತಪ್ಪುದಾರಿಗೆ ಬೀಳಬಹುದು. ಇದರಿಂದ ಪಾರಾಗಬೇಕಾದರೆ ದೈವಾನುಗ್ರಹ ಹೊರತು ಬೇರೆ ಏನೂ ಇಲ್ಲ. ಪೈಗಂಬರನೂ ಕೂಡ ಪ್ರತಿದಿನವೂ ತಾನು ಮಾಡಬಹುದಾದ ತಪ್ಪುಗಳಿಗೆ ದೇವರಲ್ಲಿ ಕ್ಷಮೆ ಬೇಡುತ್ತಿದ್ದನಂತೆ.

ಆತ್ಮದ ವಿಷಯವಾಗಿ ಹಲವು ಅಭಿಪ್ರಾಯಗಳಿವೆ. ಆತ್ಮ ವಿಶ್ವಜ್ಯೋತಿಯ ಅಂಶವೆಂದು ಕೆಲವರೂ; ಪರವಸ್ತುವಿನ ಅಂಶವೆಂದು ಕೆಲವರೂ; ಆತ್ಮಗಳೆಲ್ಲ ಸೃಷ್ಟವೆಂದು ಕೆಲವರೂ; ಕೆಲವು ಸೃಷ್ಟ ಕೆಲವು ಅಸೃಷ್ಟ ಎಂದು ಕೆಲವರೂ; ಶಾಶ್ವತವೂ ಅಮರವೂ ಎಂದು ಕೆಲವರೂ; ಮುಸ್ಲಿಮ್ ಇತರರಿಗೆ ಒಂದು, ಮುಸ್ಲಿಮರಿಗೆ ಮೂರು, ಪೈಗಂಬರರಿಗೆ ಐದು ಆತ್ಮಗಳು ಇವೆಯೆಂದು ಕೆಲವರೂ; ಪ್ರತಿಯೊಬ್ಬನಿಗೂ ಒಂದು ದಿವ್ಯಾತ್ಮವೂ ಒಂದು ಮನುಷ್ಯಾತ್ಮವೂ ಇವೆಯೆಂದು ಕೆಲವರೂ; ಹೀಗೆ ಒಬ್ಬೊಬ್ಬರು ಒಂದೊಂದು ವಿಧವಾಗಿ ಅಭಿಪ್ರಾಯಪಡುತ್ತಾರೆ. ಗ್ರಂಥಕರ್ತನ ಅಭಿಪ್ರಾಯದಲ್ಲಿ ಎಲ್ಲ ಆತ್ಮಗಳೂ ಸೃಷ್ಟ; ಅವಕ್ಕೂ ದೇವರಿಗೂ ಸಂಬಂಧವಿಲ್ಲ; ಅವು ಅಮರವಲ್ಲ.

ಉಸ್ಮಾನ್‌ಹುಜ್ ವೀರಿಯ ಮಗ ಅಬುಲ್‌ಹಸನ್‌ಅಲಿ (ಸ. ಕ್ರಿ. ಶ. ೧೦೭೨). ಇವನು ಘಸ್ನವಿದ ಹುಜ್‌ವೀರ್‌ನಲ್ಲಿ ವಾಸಮಾಡುತ್ತಿದ್ದದ್ದ

ರಿಂದ ಹುಜ್‌ವಿರಿ ಎಂದೂ ಇವನನ್ನು ಕರೆಯುತ್ತಿದ್ದರು. ಇವನು ಘಜ್ನಿಯ ಸುಲ್ತಾನ್ ಮಹಮ್ಮದನ ಸಮಕಾಲಿಕನು. "ಗಂಜ್‌ಬಕ್ಷ್" (ಅಧ್ಯಾತ್ಮಧನ ವಿತರಣಕಾರ) ಎಂದು ಪ್ರಸಿದ್ಧನಾಗಿದ್ದ, ಹಸನ್‌ಮಗ ಮಹಮ್ಮದನಲ್ಲಿ ಸೂಫಿ ಧರ್ಮವನ್ನು ವ್ಯಾಸಂಗಮಾಡಿದನು. ಅಬುಲ್ ಹಸನ್‌ಅಲಿ ಜುನಯೀದ್ ಮತಾನುಯಾಯಿ. ಸೂಫಿತತ್ವದ ಮೇಲೆ ಹಲವು ಗ್ರಂಥಗಳನ್ನು ಬರೆದಿದ್ದಾನೆ. ಮುಖ್ಯವಾದದ್ದು "ಕಷ್‌ಫುಲ್ ಮಹ್‌ಜೂಬ್". ಇದು ಆಗಲೇ ಪ್ರಸ್ತಾಪಿಸಿರುವ 'ಅಲ್‌ಲುಮ' ಗ್ರಂಥದ ಮಾದರಿಯ ಮೇಲೆ, ಆದರೆ, ಅದರಲ್ಲಿಯ ಕುಂದು ಕೊರತೆಗಳನ್ನು ಕಳೆದು, ಉತ್ತಮರೀತಿಯಲ್ಲಿ ರಚಿಸಿದೆ.

ಕಷ್‌ಫುಲ್ ಮಹ್‌ಜೂಬ್ ಗ್ರಂಥ ೨೫ ಅಧ್ಯಾಯಗಳಲ್ಲಿದೆ. ಅಬು ನಸ್‌ರ್‌ಸರ್‍ರಾಜನಂತೆಯೆ ಹುಜ್‌ವಿರಿಯೂ ಪ್ರತಿಯೊಂದು ವಿಷಯದಲ್ಲಿಯೂ ಇತರರ ಅಭಿಪ್ರಾಯ ಹೇಳಿ ಅದರ ಮೇಲೆ ತನ್ನ ವ್ಯಾಖ್ಯಾನವನ್ನೂ ಸೇರಿಸಿದ್ದಾನೆ. ಅಲ್‌ಲುಮ ಗ್ರಂಥವನ್ನು ವಿಮರ್ಶಿಸುವಲ್ಲಿ ಪ್ರಸ್ತಾಪಿಸಿದ ವಿಷಯಗಳನ್ನು ಬಿಟ್ಟು ಈ ಗ್ರಂಥದಿಂದ ಹೆಚ್ಚಿಗೆ ತಿಳಿಯಬಹುದಾದ್ದನ್ನು ಮಾತ್ರ ಇಲ್ಲಿ ಸಂಗ್ರಹಿಸುತ್ತದೆ.—ಮೊದಲನೆಯ ಅಧ್ಯಾಯದಲ್ಲಿ ದೇವರು, ಸೃಷ್ಟಿ, ಜ್ಞಾನ, ಧರ್ಮ ಮೊದಲಾದುವನ್ನೂ, ಎರಡನೆಯದರಲ್ಲಿ ಅಧ್ಯಾತ್ಮಬಡತನ ಎಂಬ ವಿಷಯವನ್ನೂ, ಮೂರನೆಯದರಲ್ಲಿ ಸೂಫಿಧರ್ಮವನ್ನೂ, ನಾಲ್ಕನೆಯದರಲ್ಲಿ ಖಿರ್‌ಕಹ್ ಅಥವಾ ಸೂಫಿಕವುದಿಯನ್ನೂ ಐದನೆಯದರಲ್ಲಿ ಸಫ್ವತ್ (ಪರಿಶುದ್ಧಿ) ಮತ್ತು ಫಕ್‌ರ್ (ಬಡತನ) ಗಳನ್ನೂ, ಆರರಿಂದ ಹದಿಮೂರನೆಯ ವರೆಗಿನ ಅಧ್ಯಾಯಗಳಲ್ಲಿ ಇಮಾಮ್ ಅಥವಾ ಅಧ್ಯಾತ್ಮನಾಯಕರ, ಅಸ್ಹಾಬ್‌ಏ ಸುಫ್ಫ ಎಂಬ ಸಂಗಾತಿಗಳ ಮತ್ತು ಆ ಕಾಲದ ಪ್ರಸಿದ್ಧ ಸೂಫಿಗಳ ವಿಷಯವನ್ನೂ ಪ್ರಸ್ತಾಪಿಸಿದ್ದಾನೆ. ೧೪ನೆಯ ಅಧ್ಯಾಯದಲ್ಲಿ ಸೂಫಿ ಮತಭೇದಗಳ ವಿಷಯವನ್ನು ಹೇಳಿದ್ದಾನೆ. ಮೂಲತತ್ವಗಳಲ್ಲಿ ಎಲ್ಲವೂ ಒಂದೇ ಆಗಿದ್ದರೂ ಕೆಲವು ಸೂಕ್ಷ್ಮ ವಿಷಯಗಳಲ್ಲಿ, ಆದರಲ್ಲೂ ಕೆಲವು ಪಾರಿಭಾಷಿಕ ಪದಗಳನ್ನು ಅರ್ಥಮಾಡುವುದರಲ್ಲಿ, ಭಿನ್ನಾಭಿಪ್ರಾಯಗಳಿವೆ.

## ಕೆಲವು ಸೂಫಿಮತಗಳು

(೧) ಮಹಾಸಿಬಿಮತ—ಇದರ ಸ್ಥಾಪಕ ಅಸದ್ ಮಹಾಸಬಿಯ ಮಗ ಹಾರಿಸ್. ಇವನು ಮಕಾಮ್ ಅಥವಾ ಸ್ಥಾನ, ಅಹ್‌ವಾಲ್ ಅಥವಾ ಸ್ಥಿತಿ ಎಂಬ ಅರ್ಥಗಳಲ್ಲಿ ಉಪಯೋಗಿಸಬಹುದಾದ ರಿಜ (ತೃಪ್ತಿ) ಎಂಬ ಪದವನ್ನು ಎರಡು ರೀತಿಯಾಗಿ ಉಪಯೋಗಿಸುತ್ತಾನೆ. ಒಂದು, ಮನುಷ್ಯರ ವಿಷಯದಲ್ಲಿ ರಿಜ ಎಂದರೆ ಮನುಷ್ಯನ ಪುಣ್ಯ ಕಾರ್ಯಗಳಿಗೆ ಭಗವಂತನು ಕೊಡುವ ಸತ್ಫಲ. ಎರಡು, ದೇವರಲ್ಲಿ ಮನುಷ್ಯನ ರಿಜ ಎಂದರೆ ಆತ್ಮಾರ್ಪಣ ಮತ್ತು ಭಗವತ್ ಸೇವೆ. ಈ ಮನುಷ್ಯನ ರಿಜ ದೇವರ ಅನುಗ್ರಹವನ್ನು ಅವಲಂಬಿಸಿದೆ. ಈ ರಿಜ ಗುಣದಿಂದ ಮನುಷ್ಯನು ಎಲ್ಲಾ ಅವಸ್ಥೆಗಳಲ್ಲೂ ಸುಖದುಃಖಗಳೆರಡ ರಲ್ಲೂ ತಾಳ್ಮೆಯಿಂದಿರುತ್ತಾನೆ. ಈ ರಿಜ ಜುಹ್‌ದ್ ಅಥವಾ ತ್ಯಾಗಕ್ಕಿಂತ ಉತ್ತಮವಾದದ್ದು. ಏಕೆಂದರೆ, ತ್ಯಾಗ ಔದಾಸೀನ್ಯ ಮೂಲವಾದ್ದು; ರಿಜ ಪ್ರೇಮ ಮೂಲವಾದ್ದು. (ಸ್ಥಾನ ಅಥವಾ ಸ್ಥಿತಿಯ ವಿಷಯದಲ್ಲಿ ಹುಜ್‌ವೀರಿ ನಾನಾ ಅಂತಸ್ತುಗಳನ್ನು—ಪಶ್ಚಾತ್ತಾಪ, ದೇವರ ಕಡೆಗೆ ಒಲವು, ತೊರವು, ದೇವರಲ್ಲಿ ನಂಬಿಕೆ—ಮೊದಲಾದುವನ್ನು ಹೇಳಿ ಒಂದು ಸ್ಥಾನದಿಂದ ಮತ್ತೊಂದು ಸ್ಥಾನವನ್ನು ಕ್ರಮವಾಗಿ ಮುಟ್ಟುತ್ತ ಹೋಗಬೇಕೆಂದೂ, ಈ ಸ್ಥಾನಗಳನ್ನು ಮುಟ್ಟಿ ಸ್ಥಿತಿಯನ್ನು ಅನುಭವಿಸ ಬೇಕೆಂದೂ, ಸ್ಥಾನಗಳನ್ನು ಮುಟ್ಟುವುದು ತನ್ನ ಕರ್ಮವನ್ನು ಅವಲಂಬಿಸಿ ಮನುಷ್ಯಾಯತ್ತವಾದ್ದೆಂದೂ, ಸ್ಥಿತಿಯನ್ನು ಅನುಭವಿಸು ವುದು ದೈವಾನುಗ್ರಹದಿಂದ ಮಾತ್ರವೆಂದೂ ಹೇಳುತ್ತಾನೆ).

(೨) ಕಸ್ಸಾರಿಮತ: ಇದನ್ನು ಅಹಮದ್ ಮಗ ಹಮ್‌ದೂನ್ ಸ್ಥಾಪಿಸಿದನು. ಇವನ ಮೂಲತತ್ತ್ವ ಮನುಷ್ಯನು ತನ್ನ ಒಳ್ಳೆಯ ಗುಣಗಳನ್ನು ಜನರಿಂದ ಮರಸಿಟ್ಟು, ಅದರ ಮೂಲಕ ಜನರು ತನ್ನನ್ನು ಆಡಿಕೊಳ್ಳುವಂತೆಮಾಡಿ, ಹಾಗೆ ಮಾಡುವುದರಿಂದ ತಾನು ದುರಹಂ ಕಾರದಿಂದ ಮೆರೆಯುವುದಕ್ಕೆ ಎಡೆಯಿಲ್ಲದಂತೆ ಮಾಡಿಕೊಂಡು ಜೀವಿಸ ಬೇಕು ಎಂಬುದು. ಈ ಮತಾನುಯಾಯಿಗಳನ್ನು ಮಲಾಮತೀಯ (ನಿಂದ್ಯರು) ಎಂದು ಕರೆಯುತ್ತಿದ್ದರು. ಕಸ್ಸಾರಿಯ ಅಭಿಪ್ರಾಯ

ಮನುಷ್ಯನ ಒಳ್ಳೆಯತನ ದೇವರಿಗೆ ಗೊತ್ತಾಗಿದೆ, ತಾನು ಇತರರಿಗೆ ಅದನ್ನು ತೋರಿಸಬೇಕಾಗಿಲ್ಲ ಎಂಬುದು. ಹೀಗೆ ಅವನ ಅನುಯಾಯಿಗಳು ಜನಾಭಿಪ್ರಾಯಕ್ಕೂ ಸಮಾಜ ಮತ್ತು ಮತಧರ್ಮಗಳ ವಿಷಯದಲ್ಲೂ ಉದಾಸೀನತೆಯಿಂದ ಇರುತ್ತಿದ್ದರು.

(೩) ತಯ್‌ಫೂರಿಮತ: ಇದರ ಸ್ಥಾಪಕ ಖೊರಾಸಾನಿನಲ್ಲಿಯ ಬಿಸ್ತಾಮಿನ ಅಬೂಸಿಯಾದ್ ತಯ್‌ಫೂರ್. ಇವನು ಆಧ್ಯಾತ್ಮ ತಲ್ಲೀನತೆ ಅಥವಾ ಆನಂದಪರವಶತೆಯನ್ನು ಮುಖ್ಯಮಾಡಿದನು. ಇವನ ಅನುಯಾಯಿಗಳು ಕಾವ್ಯಾಭಿರುಚಿಗೂ ಕವನಗಳಿಗೂ ಹೆಸರಾದರು. ಸೂಫಿಗಳಲ್ಲಿ ಕೆಲವರು ಆನಂದಾವೇಶವನ್ನೂ ಮತ್ತೆ ಕೆಲವರು ಶಾಂತಭಾವವನ್ನೂ ಮೆಚ್ಚುತ್ತಾರೆ. ತಯ್‌ಫೂರ್, ಶಾಂತಭಾವಕ್ಕಿಂತ ಆನಂದಾವೇಶವೇ ಮೇಲೆಂದು ಎಣಿಸಿದ್ದನು. ಏಕೆಂದರೆ, ಆನಂದಾವೇಶದಲ್ಲಿ ಮಾನವ ಗುಣಗಳು ಸಂಪೂರ್ಣವಾಗಿ ಅಳಿದು ಆತ್ಮಲಯಕ್ಕೆ ಬಹಳ ಹತ್ತಿರವಾಗುತ್ತವೆ. ಅಲ್ಲದೆ, ಆ ಅವಸ್ಥೆಯಲ್ಲಿ ಮನುಷ್ಯನು ದೈವಸಂಕಲ್ಪಕ್ಕೆ ಸಾಧನಮಾತ್ರದವನಾಗುತ್ತಾನೆ. ಕುರಾನಿನಲ್ಲಿ ಹೇಳುವಂತೆ "ನೀನು ಕೊಲ್ಲಲಿಲ್ಲ, ದೇವರು ಕೊಂದ. ನೀನು ಕಲ್ಲೆಸೆಯಲಿಲ್ಲ, ದೇವರು ಎಸೆದ." ಆದರೆ, ಕೆಲವು ಸೂಫಿಗಳು (ಉದಾಹರಣೆಗೆ— ಜುನಯಿದ್ ಮತದವರು) ಇದನ್ನು ಒಪ್ಪದೆ ಶಾಂತಭಾವವೇ ಉತ್ತಮವೆಂದು ಹೇಳುತ್ತಾರೆ. ಏಕೆಂದರೆ ಆವೇಶ ಸ್ಥಿತಿ ಅಸ್ವಾಭಾವಿಕವೂ ಕ್ಷಣಿಕವೂ ಆದ್ದು. ಆಗ ಇಂದ್ರಿಯಗಳು ಸ್ತಬ್ಧವಾಗಿಬಿಟ್ಟಿರುತ್ತವೆ. ಶಾಂತಭಾವ ಎರಡು ತೆರದ್ದು. ಅಜ್ಞಾನ ಅಥವಾ ಔದಾಸೀನ್ಯದಿಂದ ಹುಟ್ಟಿದ್ದು; ಭಕ್ತಿ ಪ್ರೇಮಗಳಿಂದ ಹುಟ್ಟಿದ್ದು.

(೪) ಜುನಯಿದ್‌ಮತ: ಇದರ ಸ್ಥಾಪಕ ಜುನಯಿದ್. ಇವನು ಮೇಲೆ ಹೇಳಿದಂತೆ ಆವೇಶಪರವಶತೆ ಅಸ್ವಾಭಾವಿಕವೂ ಶಾಂತಭಾವ ಸ್ವಾಭಾವಿಕವೂ ಆದ ಅವಸ್ಥೆ ಎಂಬ ತತ್ತ್ವವನ್ನು ಸ್ವೀಕರಿಸಿ ಶಾಂತಭಾವವನ್ನೇ ಮುಖ್ಯಮಾಡಿದ್ದಾನೆ.

(೫) ನೂರಿ ಮತ: ಇದನ್ನು ಹಸನ್ ಅಹ್‌ಮದ್‌ನೂರಿ ಸ್ಥಾಪಿಸಿದನು. ಈ ಮತದ ಮುಖ್ಯತತ್ತ್ವ ಸ್ವಾರ್ಥತ್ಯಾಗ ಮತ್ತು ಪರಹಿತಚಿಂತನೆ.

(೬) ಸಹ್‌ಲಿಮತ: ಇದರ ಸ್ಥಾಪಕ ಅಬ್ದುಲ್ಲನ ಮಗ ಸಹ್‌ಲ್. ಇದರ ಮುಖ್ಯತತ್ವ ಮುಜಾಹಿದ ಅಥವಾ ತಪಸ್ಸು. ಈ ಮತದವರು ಶಮದಮಾದಿ ಸಂಯಮಗಳಲ್ಲಿ ನಂಬಿಕೆಯುಳ್ಳವರು. ನಫ್ಸ್ ಅಥವಾ ಆತ್ಮ ಪಶುಸ್ವಭಾವದ್ದು. ಅದು ಮನುಷ್ಯನನ್ನು ಪಾಪಕ್ಕೆ ಪ್ರೇರಿಸುತ್ತದೆ. ಈ ದುರಾತ್ಮವನ್ನೂ ದುಷ್‌ಪ್ರೇರಣೆಯನ್ನೂ ತಡೆದು ಹದ್ದಿನಲ್ಲಿಡಬೇಕಾದರೆ ಪಶ್ಚಾತ್ತಾಪ (ಎಂದರೆ, ಮನುಷ್ಯನು ತನ್ನ ದೌರ್ಬಲ್ಯವನ್ನು ತಾನು ಅರಿತುಕೊಳ್ಳುವುದು) ಮತ್ತು ತಪಸ್ಸು ಆವಶ್ಯಕ. ಈ ಪಾಶವಾತ್ಮವಲ್ಲದೆ ಮನುಷ್ಯನಲ್ಲಿ ದಿವ್ಯಾತ್ಮವೂ ಇದೆ. ರಾಗೋದ್ರೇಕವೇ ಮುಖ್ಯ ಲಕ್ಷಣವಾದ ಪಾಶವಾತ್ಮವನ್ನು ತಪಸ್ಸಿನಿಂದ ಸಂಯಮಿಸಿದರೆ ದಿವ್ಯಾತ್ಮ ಬೆಳಗುತ್ತದೆ.

(೭) ಹಕೀಮಿಮತ: ಇದರ ಸ್ಥಾಪಕ ತಿರ್‌ಮಿಸ್ಸಿನ ಮಹಮ್ಮದ್. ಇದರ ಮುಖ್ಯತತ್ವ ವಲಿ ಅಥವಾ ಸಾಧುವಿನಿಂದ ಸರಿಯಾದ ಅಧ್ಯಾತ್ಮ ಶಿಕ್ಷಣ ಪಡೆಯುವುದು. ವಲಿ ಎಂದರೆ ಮಿತ್ರ, ವಿಲಾಯತ್ ಎಂದರೆ ಮೈತ್ರಿ. ವಲಿಗೆ ಪವಾಡ ಮೆರೆಯುವ ಶಕ್ತಿಯುಂಟು. ಪ್ರಾರ್ಥನೆಯಿಂದ ಮಳೆ ಕರಸಬಹುದು, ಕಾಯಿಲೆ ವಾಸಿಮಾಡಬಹುದು. ಇಂಥ ಸಾಧುಗಳು ಜನರ ಕಣ್ಣಿಗೆ ಬೀಳದೆ ಎಷ್ಟೋ ಜನ ಇರುತ್ತಾರೆ.

(೮) ಖರ್ರಾಸ್ಸಿಮತ: ಸ್ಥಾಪಕ ಅಬುಸಯ್ಯದ್ ಖರ್ರಾಸ್. ಇದರ ಮುಖ್ಯತತ್ವ ಲಯ ಮತ್ತು ಸ್ಥಿತಿಯೆಂಬ ಸೂಫಿಪದಗಳನ್ನು ಅಜ್ಞಾನನಾಶ ಮತ್ತು ಜ್ಞಾನಾವಸ್ಥೆಯೆಂದು ಅರ್ಥಮಾಡುವುದು. (ಅಲ್ಲದೆ, ಈ ಪದಗಳಿಗೆ ವ್ಯಕ್ತಿ ಇಚ್ಛೆಯ ಲಯ, ಮತ್ತು ದೈವೇಚ್ಛೆಯಲ್ಲಿ ಸ್ಥಿತಿಯೆಂದು ಅರ್ಥಮಾಡುವುದೂ ಉಂಟು.) ಈ ಸ್ಥಿತಿ ಮೂರು ತೆರದ್ದು. (೧) ಆದ್ಯಂತಯುಕ್ತವಾದ್ದು. ಉದಾಹರಣೆ: ಪ್ರಪಂಚ. (೨) ಆದಿಯುಳ್ಳದ್ದು ಆದರೆ ಅಂತ್ಯವಿಲ್ಲದ್ದು. ಉದಾ: ಪರಲೋಕ ಜೀವನ. (೩) ಆದ್ಯಂತರಹಿತವಾದ್ದು. ಉದಾ: ಪರಮಾತ್ಮ.

(೯) ಖಫೀಫಿ ಮತ: ಸ್ಥಾಪಕ ಶಿರಾಸ್ಸಿನ ಖಫೀಫ್ ಮಗ ಮಹಮ್ಮದ್. ಇದರ ಮುಖ್ಯತತ್ವ ಫಿಸ್ಲ್‌ಲತ್ (ಪರೋಕ್ಷ ಅಥವಾ ವಿಯೋಗ) ಮತ್ತು ಹುಸೂರ್ (ಸಮ್ಮುಖ ಅಥವಾ ಸಾನ್ನಿಧ್ಯ).

ಘಿಸ್ಸ್‌ಲಶ್ ಎಂದರೆ ಮನಸ್ಸನ್ನು ಸಮಸ್ತ ವಸ್ತುಗಳಿಂದಲೂ ಅಗಲಸೆಳೆಯುವುದು. ಹುಜೂರ್ ಎಂದರೆ ಹಾಗೆ ಅಗಲಿಸಿದ ಮನಸ್ಸನ್ನು ದೇವಸಾನ್ನಿಧ್ಯದಲ್ಲಿ ಸೇರಿಸುವುದು.

(೧೦) ಸಯ್ಯಾರಿಮತ: ಸ್ಥಾಪಕ ಮರ್‌ವ್ ಪ್ರಾಂತದ ಸಯ್ಯಾರಿ. ಈ ಮತಕ್ಕೆ ಅನೇಕ ಸೂಫಿಗಳು ಅನುಯಾಯಿಗಳಾಗಿದ್ದಾರೆ. ಇದರ ಮುಖ್ಯತತ್ವ ಜಮ ಅಥವಾ ಸಂಗಮ, ಮತ್ತು ತಫ್ರೀಕ ಅಥವಾ ವಿಯೋಗ. ಜಮ ಎಂದರೆ ದೈವಾನುಗ್ರಹ, ಪ್ರಸಾದ ಅಥವಾ ಧ್ಯಾನ ಎಂದು ಅರ್ಥಮಾಡಬಹುದು. ವಿಯೋಗ ಎಂದರೆ ಐಹಿಕ ವಿಷಯಗಳಿಂದ ತಡೆದಿರುವುದು. ಇದು ಸಂಯಮದಿಂದ ಲಭಿಸುತ್ತದೆ. ಈ ವಿಯೋಗದಿಂದ ದೇವಸಾನ್ನಿಧ್ಯ ಅಥವಾ ಸಂಗಮ ಲಭಿಸುತ್ತದೆ.

ಕಷ್‌ಫುಲ್‌ಮಹ್‌ಜೂಬಿನ ೧೫ನೆಯ ಅಧ್ಯಾಯದಲ್ಲಿ ದೈವಜ್ಞಾನ ಅಥವಾ ಮಾರಿಫತ್ ವಿಷಯವನ್ನು ಪ್ರಸ್ತಾಪಿಸಿದೆ. ದೇವತಾಶಾಸ್ತ್ರಜ್ಞರು ದೇವರ ಯಥಾರ್ಥ ಜ್ಞಾನ ತಿಳಿದರೆ ಸಾಕೆನ್ನುವರು. ಆದರೆ, ಸೂಫಿಗಳು ಜ್ಞಾನಕ್ಕಿಂತ ಸದ್ಭಾವವೇ ಮುಖ್ಯವೆನ್ನುವರು. ಸೂಫಿಗಳು ತರ್ಕವಾದಗಳಿಂದ ಪೂರ್ಣಜ್ಞಾನ ಲಭಿಸುವುದಿಲ್ಲ, ದೈವಜ್ಞಾನ ದೈವಾನುಗ್ರಹದಿಂದಲೇ ಬರಬೇಕು ಎನ್ನುತ್ತಾರೆ. ನಾಲ್ಕನೆಯ ಕಲೀಫ ಅಲಿ ಹೇಳಿರುವಂತೆ "ನಾನು ದೇವರನ್ನು ದೇವರ ಮೂಲಕ ತಿಳಿಯುತ್ತೇನೆ. ದೇವರಲ್ಲದ್ದನ್ನು ದೇವರ ಬೆಳಕಿನಿಂದ ತಿಳಿಯುತ್ತೇನೆ." ದೇಹ ಪ್ರಾಣಾತ್ಮದಿಂದ ಬೆಳಗುತ್ತದೆ. ಆದರೆ ಆತ್ಮ ಭಗವಂತನಿಂದ ಬೆಳಗುತ್ತದೆ. ಆದ್ದರಿಂದ ಆತ್ಮವನ್ನು ದೇವರೊಬ್ಬನೇ ಪ್ರಚೋದಿಸಿ ನಡಸಬಹುದು. ವಾದತರ್ಕಗಳು ಮಾನವ ಬುದ್ಧಿಗತವಾಗಿದ್ದು ಅವನ ದೃಷ್ಟಿಯನ್ನು ದಿವ್ಯಜ್ಯೋತಿಯ ಆಧಾರದಿಂದ ಕವಲಿಸಿ ಹೊರಳಿಸುತ್ತವೆ. ಮಾನವ ಬುದ್ಧಿಗತತರ್ಕ ಇಂದ್ರಿಯಗೋಚರವಸ್ತುಗಳನ್ನು ವಿವೇಚಿಸಲು ಪ್ರಯೋಜನವೇ ಹೊರತು ಇಂದ್ರಿಯಾತೀತನಾದ ದೇವರನ್ನರಿಯಲು ನೆರವಾಗಲಾರದು. ದೇವರನ್ನು ದೇವರ ಅನುಗ್ರಹದಿಂದಲೇ ಅರಿಯಬೇಕು.

ಸಮ ಅಥವಾ ಸಂಗೀತ: ಇಂದ್ರಿಯ ಗೋಚರವಸ್ತುಗಳನ್ನು ಶ್ರವಣ, ದರ್ಶನ, ರುಚಿ, ವಾಸನೆ, ಸ್ಪರ್ಶಗಳಿಂದ ತಿಳಿದುಕೊಳ್ಳಬಹುದು.

ಇವುಗಳಲ್ಲಿ ಒಂದೊಂದು ಶಕ್ತಿ ಒಂದೊಂದಕ್ಕೆ ಸಂದರ್ಭಾನುಗುಣವಾಗಿ ಪ್ರಧಾನವಾಗಿರಬಹುದು. ಬುದ್ಧಿವಂತನಾದ ಮನುಷ್ಯನಿಗೆ ಶ್ರವಣವೇ ಪ್ರಧಾನವಾದದ್ದು. ಕಿವುಡ ಕುರಾನ್ ಗೀತವನ್ನು ಕೇಳಲಾರ. ಮೃಗಗಳು ಕೂಡ ಮಧುರ ನಾದಪ್ರಭಾವಕ್ಕೆ ಒಳಗಾಗುತ್ತವೆ. ಸ್ವರ್ಗದ ನಂದನವೃಕ್ಷಗಳೆಲ್ಲ ಮಧುರ ನಾದದಿಂದ ಮರ್ಮರಿಸುತ್ತವಂತೆ. ತಿಳಿಮನದ ಸರಳ ಹಸುಳೆಗಳೂ ಗೀತದಿಂದ ಮುಗ್ಧರಾಗುತ್ತವೆ. ಹೀಗಿದ್ದರೂ ಸಂಗೀತಾಸ್ವಾದನೆಗೆ ಅನುಕೂಲವೂ ಪ್ರತಿಕೂಲವೂ ಆದ ಸಂಪ್ರದಾಯಗಳು ಬೆಳೆದು ಬಂದಿವೆ. ಸೂಫಿಗಳು ಮೊದಲೇ ಹೇಳಿದಂತೆ ಗಾನಪಕ್ಷಪಾತಿಗಳು. ಅವರ ಪ್ರಕಾರ ಕುರಾನನ್ನೂ ಅನುಭಾವದ ಭಾವಗೀತಗಳನ್ನೂ ಮಧುರನಾದಕ್ಕೆ ಹೊಂದಿಸುವುದರಿಂದ ಆನಂದಾವೇಶ ಉಂಟಾಗುತ್ತದೆ. ಈ ಆನಂದಾವೇಶವೇ ಒಂದು ಧ್ಯೇಯವಾದ್ದರಿಂದ ಸಂಗೀತ ಸ್ವೀಕರಣೀಯವಾದ್ದು.

೧೮ನೆಯ ಅಧ್ಯಾಯದಲ್ಲಿ ಪಶ್ಚಾತ್ತಾಪ ವಿಷಯವನ್ನೂ, ೧೯ನೆಯದರಲ್ಲಿ ಪ್ರಾರ್ಥನೆಯ ವಿಷಯವನ್ನೂ, ಮುಂದಿನ ಅಧ್ಯಾಯಗಳಲ್ಲಿ ಜಕಾತ್ (ಭಿಕ್ಷೆ), ದಾನ, ಧರ್ಮ, ಯಾತ್ರೆ—ಮೊದಲಾದುವನ್ನೂ ಪ್ರಸ್ತಾಪಿಸಿದ್ದಾನೆ. ಸತ್ಯಾನ್ವೇಷಿಗಳೆಲ್ಲರೂ ಕ್ರಮೇಣ ತಮ್ಮ ಗುರಿಯನ್ನು ಸಾಧಿಸಿಕೊಳ್ಳಬಹುದು. ಈ ಸಾಧನೆಯಲ್ಲಿ ಹಿಂದೆಯೇ ಹೇಳಿದಂತೆ ಮುಕಾಮ್ (ಸ್ಥಾನ) ಮತ್ತು ಹಾಲ್(ಸ್ಥಿತಿ)ಗಳಿವೆ. ಪೈಗಂಬರರಲ್ಲಿ ಒಬ್ಬೊಬ್ಬರು ಒಂದೊಂದು ಸ್ಥಾನ ಅಥವಾ ಸ್ಥಿತಿಗೆ ಹೆಸರಾಗಿದ್ದಾರೆ. ಆದಮ್ ಪಶ್ಚಾತ್ತಾಪಕ್ಕೆ; ನೋವ ಪರಿತ್ಯಾಗಕ್ಕೆ; ಅಬ್ರಹಾಮ್ ಆತ್ಮಾರ್ಪಣಕ್ಕೆ; ಮೋಸೆಸ್ ದೇವರ ಕಡೆಗೆ ಮನಃಪರಿವರ್ತನಕ್ಕೆ; ಯೇಸು ಕ್ರಿಸ್ತನು ಪ್ರತ್ಯಾಶೆಗೆ; ಮಹಮ್ಮದ್ ಶುಕ್‌ರ್ ಅಥವಾ ಸ್ತುತಿಗೆ. ಇವನ್ನೆಲ್ಲ ಮೀರಿದ ಚರಮಸ್ಥಿತಿ ಎಂದರೆ ತಮ್‌ಕೀನ್ ಅಥವಾ ಶಾಂತಿ. ಪ್ರತಿಯೊಂದು ಸ್ಥಿತಿಯಲ್ಲಿರುವವನೂ ಒಂದೇ ಗುರಿಯನ್ನಿಟ್ಟುಕೊಂಡು ಅದರ ಸಾಧನೆಗಾಗಿಯೇ ಪ್ರಯತ್ನಿಸಬೇಕು.

ಅಲಿಯ ಮಗ ಮಹಮ್ಮದ್ (ಕ್ರಿ. ಶ. ೧೧೬೫–೧೨೪೦): ಇವನಿಗೆ ಇಬ್‌ನುಲ್ ಅರಬಿ ಎಂದೂ ಹೆಸರು. ಇವನನ್ನು ಷೇಕ್-ಉಲ್-ಅಕ್ಬರ್

ಅಥವಾ ಮಹಾಷೇಕ್ ಎಂದೂ ಕರೆದಿದ್ದಾರೆ. ಇವನು ಸ್ಪೈಯಿನ್ ದೇಶದವನು. ಇವನ ಪೂರ್ವಿಕರು ಅರೇಬಿಯದವರು. ಇವನು ಫರೀದುದ್ದೀನ್ ಅತ್ತಾರ್, ಶಹಬುದ್ದೀನ್ ಸುಹ್ರವರ್ದಿ, ನಜ್ ಮುದ್ದೀನ್‌ರಾಜಿ, ಜಲಾಲುದ್ದೀನ್‌ರೂಮಿ— ಮೊದಲಾದ ಪ್ರಸಿದ್ಧ ಸೂಫಿಗಳ ಸಮಕಾಲಿಕನು. ಇವನು ಸುಮಾರು ೩೦೦ ಗ್ರಂಥಗಳನ್ನು ಬರೆದಿದ್ದನೆಂದು ಪ್ರತೀತಿ ಇದೆ. ಇವುಗಳಲ್ಲಿ ಸುಮಾರು ೧೫೦ ಉಳಿದಿವೆಯೆನ್ನುತ್ತಾರೆ. ಇವುಗಳಲ್ಲಿ ಮುಖ್ಯವಾದುವು ಸೂಫಿತತ್ವದ ಬೃಹತ್ಕೋಶವೆನ್ನಬಹುದಾದ, ೫೬೦ ಅಧ್ಯಾಯಗಳ "ಫುತ್‌ಹಾತ್ ಉಲ್ ಮಕ್ಕೀಯ" ಮತ್ತು ಸೂಫಿತತ್ವದ ಮೇರಿಮೆ ಬರೆದ ೨೭ ಅಧ್ಯಾಯಗಳ "ಫುಸೂಸುಲ್‌ಹಿಕಮ್". ಈ ಎರಡನೆಯ ಪುಸ್ತಕ ಇಂಗ್ಲಿಷ್ ಮೊದಲಾದ ಭಾಷೆಗಳಿಗೆ ಭಾಷಾಂತರವಾಗಿದೆ.

ಇವನು ದೇವತಾಶಾಸ್ತ್ರದಲ್ಲಿ ಜಾಹಿರಿ ಮತವನ್ನೂ, ಸೂಫಿ ಧರ್ಮದಲ್ಲಿ ಖಿಸ್ರ್ ಎಂಬೊಬ್ಬ ಕಾಲ್ಪನಿಕ ಗುರುವನ್ನೂ ಅನುಸರಿಸಿದ್ದಾನೆ. ಇವನು ಹಿಂದಿನ ಪೈಗಂಬರರೊಡನೆ ಮಾನಸಿಕ ಸಂವಾದಗಳನ್ನು ನಡೆಸುತ್ತಿದ್ದನಂತೆ. ಇವನ ತತ್ವಗಳೆಲ್ಲ ಸಾಮಾನ್ಯ ಸೂಫಿತತ್ವಗಳೇ. ಆದರೆ, ಅವನ್ನು ವಿಂಗಡಿಸಿ ವಿಶದೀಕರಿಸಿ ವಿಸ್ತರಿಸಿದ್ದಾನೆ. ಫುಸೂಸುಲ್ ಹಿಕಮಿನ ೨೭ ಅಧ್ಯಾಯಗಳು ಒಂದೊಂದೂ ಒಬ್ಬೊಬ್ಬ ಪೈಗಂಬರನ ಹೆಸರಿನಲ್ಲಿ ಬರೆದಿವೆ. ಹೇಳುವ ಕ್ರಮ ಕೊಂಚ ಕೃತಕವೂ ತೊಡಕೂ ಆಗಿದ್ದು ವಿಷಯ ತಿಳಿಯುವುದು ಕಷ್ಟವಾಗಿದೆ.

ಮೊದಲನೆಯ ಅಧ್ಯಾಯ ಆದಮ್‌ಜ್ಞಾನ ಎಂಬುದು: ಇದರಲ್ಲಿ ಮನುಷ್ಯನ ವಿಚಾರ ಹೇಳಿದೆ. ಆದಮ್ ನೆಲದ ಮೇಲೆ ದೇವರ ಪ್ರತಿನಿಧಿ. ಮನುಷ್ಯನು ವಿಶ್ವದ ಅಡಕವಾಗಿದ್ದು ಸೃಷ್ಟಿಗೆ ಶಿಖರಪ್ರಾಯನಾಗಿದ್ದಾನೆ. ದೇವದೂತರು ಕೇವಲ ದಿವ್ಯಶಕ್ತಿರೂಪಗಳು. ಪ್ರಪಂಚದ ಜನರೆಲ್ಲ ಒಂದೇ ತವರಿನವರು.

ಮೂರನೆಯ ಅಧ್ಯಾಯ ನೋಹ ಹೆಸರಿನದು. • ಇದರಲ್ಲಿ ತಷ್ಬೀಹ್ ಅಥವಾ ಸಾದೃಶ್ಯ ವಿಚಾರ ಹೇಳಿದೆ. ದೇವರನ್ನು ವಿಶ್ವದಿಂದ ಭಿನ್ನಮಾಡಲೂ ಆಗದು: ವಿಶ್ವದೊಡನೆ ಅಭಿನ್ನಮಾಡಲೂ

ಆಗದು. ಸೃಷ್ಟಿಯೂ ಸೃಷ್ಟಿಕರ್ತನೂ ಬೇರೆಯಲ್ಲ; ಆದರೆ, ಒಂದೂ ಅಲ್ಲ.

ನಾಲ್ಕನೆಯದು ಇದ್ರೀಸ್‌ನ ಜ್ಞಾನ ಎಂಬುದು. ಇದರಲ್ಲಿ ಮಾನವನ ಆಧ್ಯಾತ್ಮ ಉನ್ನತಿ ಹೇಳಿದೆ.

ಐದನೆಯದು ಅಬ್ರಹಾಮ್ ಹೆಸರಿನಲ್ಲಿದೆ. ಇವನು ಅತಿಥಿ ಸತ್ಕಾರಕ್ಕೆ ಹೆಸರಾಗಿದ್ದನು. ಇದರಲ್ಲಿ ದೇವರು ಪ್ರಪಂಚಪೋಷಕನಾಗಿರುವ ವಿಷಯ ಹೇಳಿದೆ. ಮನುಷ್ಯನು ತನ್ನನ್ನು ತಾನು ಅರಿಯುವುದರಿಂದ ದೇವರನ್ನು ಅರಿಯಬಹುದು. ಸೃಷ್ಟಿಯ ಸ್ಥಿತಿ ದೇವರಿಂದ ಮತ್ತು ದೇವರಲ್ಲಿ.

ಆರನೆಯದು ಇಸ್ಹಾಕ್ ಅಥವಾ ಐಸಕ್‌ನ ಜ್ಞಾನವನ್ನು ಕುರಿತದ್ದು. ಇದರಲ್ಲಿ ಆಲಮ್-ಎ-ಮಿಥಾಲ್ ಅಥವಾ ಭಾವಪ್ರಪಂಚದ ವಿಷಯ ಹೇಳಿದೆ.

ಏಳನೆಯದು ಇಸ್ಮಾಯೀಲಿನ ಜ್ಞಾನವನ್ನು ಕುರಿತದ್ದು. ಇದರಲ್ಲಿ ದೇವರ ಒಂದೊಂದು ಗುಣವನ್ನೂ ಕುರಿತ ನಾಮಮಾಹಾತ್ಮ್ಯವನ್ನು ಹೇಳಿದೆ. ಎಲ್ಲವೂ ದೇವರ ಹೆಸರುಗಳೆ. ಸೈತಾನನೂ ಈ ನಾಮಾವಳಿಯಲ್ಲಿ ಸೇರಿದ್ದಾನೆ.

ಎಂಟನೆಯದು ಯಾಕೂಬ್ ಅಥವಾ ಜೇಕಬ್ಬಿನ ಜ್ಞಾನ ಕುರಿತದ್ದು. ಇದರಲ್ಲಿ ಪ್ರಸಿದ್ಧ ಧರ್ಮಬೋಧಕರು ಬೋಧಿಸಿದ ಧರ್ಮವನ್ನು ಇಸ್ಲಾಂ ಎಂಬ ಹೆಸರಿನಲ್ಲಿ ಹೇಳಿದೆ. ಇಸ್ಲಾಂ ಎಂದರೆ ದೈವ ಸಂಕಲ್ಪಕ್ಕೆ ಆತ್ಮಾರ್ಪಣ ಎಂದು ಅರ್ಥ. ಧರ್ಮ ದೇವರಿಂದ ಬಂದು ಮನುಷ್ಯನಲ್ಲಿ ನೆಲಸಿದೆ. ಮನುಷ್ಯನ ತಪ್ಪು ತಿಳಿವಳಿಕೆಯಿಂದ ಹುಟ್ಟಿಕೊಂಡ ಅಪಧರ್ಮಗಳೂ ಉಂಟು. ವೈದ್ಯನು ರೋಗಿಯ ವಯಸ್ಸು, ಸ್ಥಿತಿ—ಮೊದಲಾದುವನ್ನು ನೋಡಿ ಚಿಕಿತ್ಸೆ ಮಾಡುವಂತೆ ಧರ್ಮೋದ್ಧಾರಕರು ಕಾಲ, ದೇಶ, ವರ್ತಮಾನಗಳಿಗೆ ಅನುಗುಣವಾಗಿ ಧರ್ಮಬೋಧೆ ಮಾಡುತ್ತಾರೆ.

ಒಂಬತ್ತನೆಯದು ಯೂಸುಫ್ ಅಥವಾ ಜೋಸೆಫ್ಫನ ಜ್ಞಾನ ಕುರಿತದ್ದು. ಇದರಲ್ಲಿ ಜಗನ್ಮಿಥ್ಯಾ ವಿಷಯ ಹೇಳಿದೆ. ಬದುಕು ಒಂದು

ಕನಸು. ಕನಸು ಕನಸೊಳಗೆ ಕನಸು. ಮನುಷ್ಯನು ಈ ಕನಸಿನಿಂದ ಎಚ್ಚೆತ್ತುಕೊಳ್ಳುವುದು ಪರಜನ್ಮದಲ್ಲಿ.

ಹತ್ತನೆಯದು, ಹೂದ್‌ನ ಜ್ಞಾನವನ್ನು ಕುರಿತದ್ದು. ಇದರಲ್ಲಿ ಬಹುತ್ವದಲ್ಲಿ ಏಕತ್ವದ ವಿಷಯವನ್ನೂ ಭಗವಂತನ ಸರ್ವಶಕ್ತತ್ವವನ್ನೂ ಹೇಳಿದೆ. ಪಾಪ ಶಾಶ್ವತವಾದ ಕೊರತೆ ಅಲ್ಲ. ಅದು ಒಂದು ವ್ಯಾಧಿ ಇದ್ದಂತೆ. ವ್ಯಾಧಿ ಅನುಭವಿಸಿ ಮತ್ತೆ ಗುಣ ಹೊಂದುವಂತೆ ಮನುಷ್ಯನು ಪಾಪದ ಫಲ ಅನುಭವಿಸಿ ಅದರಿಂದ ಬಿಡುಗಡೆ ಹೊಂದಬಹುದು. ಎಲ್ಲರಿಗೂ ದೈವಾನುಗ್ರಹ ಲಭಿಸಿ, ಎಲ್ಲರಿಗೂ ಮುಕ್ತಿ ದೊರೆಯುತ್ತದೆ. ಒಳ್ಳೆಯವರು ಕೆಟ್ಟವರು ಇಬ್ಬರೂ ನರಕ ಅನುಭವಿಸಬೇಕು. ಒಳ್ಳೆಯವರು ಬೇಗ ಮುಕ್ತರಾಗುತ್ತಾರೆ; ಕೆಟ್ಟವರು ಕೊಂಚ ತಡೆದು.

ಹನ್ನೊಂದನೆಯದು ಸಾಲಿಹ್‌ನ ಜ್ಞಾನ ಕುರಿತದ್ದು. ಇದರಲ್ಲಿ ತ್ರಿತತ್ವದ ಏಕತ್ವ ಹೇಳಿದೆ.

ಹನ್ನೆರಡನೆಯದು ಶುಐಬ್‌ನ ಜ್ಞಾನ ಕುರಿತದ್ದು. ಇದರಲ್ಲಿಯ ವಿಷಯ ಜ್ಞಾತೃವಿನ ಹೃದಯ. ಭಕ್ತನ ಹೃದಯದಲ್ಲಿ ದೇವರು ನೆಲಸಿರುವಾಗ ಅಲ್ಲಿ ಮತ್ತೊಂದಕ್ಕೆ ಎಡೆಯಿರಕೂಡದು. ಭಗವಂತನ ಸಿಂಹಾಸನವನ್ನೂ ಅದರ ಮೇಲಿದ್ದವನನ್ನೂ ತನ್ನ ಒಂದು ಕಿರುಮೂಲೆಯಲ್ಲಿ ಅಡಗಿಸಿಕೊಳ್ಳಬಲ್ಲುದಾದವನ್ನು ವಿಶಾಲವಾದ್ದು ಸೂಫಿಯ ಹೃದಯ ಎಂದು ಬಸ್ತಾಮಿನ ಬಾಯಜೀದ್ ಹೇಳಿದ್ದಾನೆ. ಅಲ್ಲದೆ, ಸೂಫಿಯ ಹೃದಯ ವಜ್ರ ಉಂಗುರದ ಗೂಡಿದ್ದಂತೆ. ಆ ಗೂಡು ವಜ್ರದ ಆಕಾರಕ್ಕೆ ಸರಿಯಾಗಿರಬೇಕು. ಹಾಗೆಯೇ ಸೂಫಿಯ ಹೃದಯ ದಿವ್ಯಜ್ಯೋತಿಗೆ ತಕ್ಕಂತಿರಬೇಕು, ಎಂದರೆ ದೇವರ ಜ್ಯೋತಿ ಸೂಫಿಯ ಹೃದಯ ಎಷ್ಟು ಹಿರಿದೊ ಅಷ್ಟು ಬೆಳಗುತ್ತದೆ.

ಹದಿಮೂರನೆಯದು ಲೂತನ ಜ್ಞಾನ ಕುರಿತದ್ದು. ವಿಷಯ— ಹಿಮ್ಮತ್ ಅಥವಾ ಇಚ್ಛಾಶಕ್ತಿ. ಮನುಷ್ಯನ ಜೀವನದಲ್ಲಿ ಮೂರು ಅವಸ್ಥೆಗಳಿವೆ. ಮೊದಲನೆಯದು ದೌರ್ಬಲ್ಯ, ಎರಡನೆಯದು ಶಕ್ತಿ. ಮೂರನೆಯದು ಮತ್ತೆ ದೌರ್ಬಲ್ಯ. ಇದನ್ನೇ ಅಧ್ಯಾತ್ಮರೀತಿಯಲ್ಲಿ

ಹೇಳುವುದಾದರೆ ಮೊದಲನೆಯದು ಅಜ್ಞಾನ, ಎರಡನೆಯದು ಜ್ಞಾನ, ಮೂರನೆಯದು ಈ ಜ್ಞಾನೋದಯದ ಫಲವಾಗಿ, ತಾನು ಅಣು ಮಾತ್ರದವನೆಂಬ ದೈನ್ಯಭಾವ. ಈ ಕೊನೆಯ ಅವಸ್ಥೆಯಲ್ಲಿ ಮಾನವೇಚ್ಛೆ ದೈವೇಚ್ಛೆಗೆ ಸಂಪೂರ್ಣವಾಗಿ ಅರ್ಪಿತವಾಗಿ ಹೋಗಿರುತ್ತದೆ. ಮನುಷ್ಯನು ಸ್ವಭಾವತಃ ದುರ್ಬಲನು. ಅವನಿಗೆ ಶಕ್ತಿ ದೈವದತ್ತವಾದ್ದು.

ಹದಿನಾಲ್ಕನೆಯ ಅಧ್ಯಾಯ ಎಸ್ರಾವಿನ ಜ್ಞಾನವನ್ನು ಕುರಿತದ್ದು. ಇದರಲ್ಲಿ ಜ್ಞಾನವಿಷಯವನ್ನೂ, ಕಸ್ಸಾ (ದೈವವಿಧಿ) ಮತ್ತು ಕದರ್ (ಆಳೆದುಕೊಡುವುದು) ಇವುಗಳ ಅರ್ಥವನ್ನೂ ಹೇಳಿದೆ. ಜ್ಞಾನ ಎರಡು ತೆರದ್ದು. ಮನುಷ್ಯಬುದ್ಧಿಲಬ್ಧವಾದದ್ದು, ಮತ್ತು ದಿವ್ಯ ದರ್ಶನಲಬ್ಧವಾದ್ದು. ಇಬ್ನೇ ಅರಬಿಯ ಪ್ರಕಾರ ಕಸ್ಸಾ ಎಂದರೆ ದೈವವಿಧಿ. ಕದರ್ ಎಂದರೆ ಆ ವಿಧಿ ಪರಿಪಾಕಕ್ಕೆ ಬರುವ ಕಾಲ.

ಹದಿನೈದನೆಯದು ಯೇಸುವಿನ ಜ್ಞಾನವನ್ನು ಕುರಿತದ್ದು. ವಿಷಯ—ದ್ರವ್ಯ, ಆತ್ಮ ಮತ್ತು ದೈವ, ಈ ತತ್ವತ್ರಯ. ಗೇಬ್ರಿಯೇಲ್‌ನು ಒಬ್ಬ ಯುವಕನ ವೇಷದಲ್ಲಿ ಬಂದು ದೇವರ ಹೆಸರನ್ನು ಮೇರಿಯ ಎದೆಯಲ್ಲಿ ಉಸಿರಿದನಂತೆ. ಆದರಿಂದ ಯೇಸು ಹುಟ್ಟಿದನು. ಹೀಗೆ ಯೇಸು ಮೇರಿಯಲ್ಲಿ ಹುಟ್ಟಿದ್ದರಿಂದ ಭೂತಮಯನೂ, ಗೇಬ್ರಿಯಲ್ ಉಸಿರಿ ಹುಟ್ಟಿದ್ದರಿಂದ ಭಾವಮಯನೂ ಮತ್ತು ದೇವಾತ್ಮಮಯನೂ ಆದನು. ಕುರಾನಿನ ಪ್ರಕಾರ ದೇವರ ಉಸಿರಿಂದ ಹುಟ್ಟಿದ್ದು ಯೇಸು ಒಬ್ಬನೇ ಅಲ್ಲ. ವಿಶ್ವವೇ ಅವನ ಉಸಿರಿಂದ ಹುಟ್ಟಿತು.

ಹದಿನಾರನೆಯ ಅಧ್ಯಾಯ ಸಾಲೊಮನ್‌ನ ಜ್ಞಾನವನ್ನು ಕುರಿತದ್ದು. ಇದರಲ್ಲಿ ದೈವಾನುಗ್ರಹದ ವಿಷಯ ಹೇಳಿದೆ. ಇದು ಎರಡು ತೆರದ್ದು. ಒಂದು ಸರ್ವಸೃಷ್ಟಿಗೂ ಆಧಾರವಾದ್ದು. ಮತ್ತೊಂದು ಮನುಷ್ಯನ ಆಧ್ಯಾತ್ಮ ಉನ್ನತಿಗೆ ಆಧಾರವಾದ್ದು.

ಹದಿನೇಳನೆಯದು ಡೇವಿಡ್‌ನ ಜ್ಞಾನ ಕುರಿತದ್ದು. ವಿಷಯ—ಪೈಗಂಬರತ್ವ. ಈ ಪೈಗಂಬರತ್ವ ದೈವಾನುಗ್ರಹಕ್ಕೆ ಪಾತ್ರರಾದವರಿಗೆ ಮಾತ್ರ ಲಭಿಸುತ್ತದೆ.

• ಹದಿನೆಂಟನೆಯದು ಯೂನುಸ್‌ನ ಜ್ಞಾನವನ್ನು ಕುರಿತದ್ದು. ವಿಷಯ—ಸರ್ವಭೂತದಯೆ. ಮನುಷ್ಯನು ಆತ್ಮ, ದೇಹ ಮತ್ತು ಶಕ್ತಿಯಿಂದ ಕೂಡಿದವನು. ಮನುಷ್ಯನ ಆತ್ಮ ದೇವರ ಪ್ರತಿಬಿಂಬವಾದದ್ದರಿಂದ ಒಬ್ಬರೂ ಜೀವ ತೆಗೆಯಬಾರದು. ಯಥಾರ್ಥ ಧರ್ಮಬೋಧೆಯನ್ನು ಮಾಡುವಾಗಲೂ ಮನಸ್ಸಿಲ್ಲದವನನ್ನು ನೋಯಿಸಿ ಪೀಡಿಸಬಾರದು. ದೇವಿದ್ ಶತ್ರುದ್ರೋಹಿಗಳನ್ನೆಲ್ಲ ಕೊಂದು ಒಂದು ಗುಡಿಯನ್ನು ಕಟ್ಟಲು ತೊಡಗಿದಾಗ ಅದು ಮತ್ತೆ ಮತ್ತೆ ಉರುಳಿ ಹೋಗಲು ಅವನು ದೇವರಲ್ಲಿ ಮೊರೆಯಿಟ್ಟನು. ದೇವರು "ಕೊಲೆಪಾತಕನ ಕೈಯಿಂದ ಗುಡಿ ಕಟ್ಟಲಾರದು" ಎಂದನು. ಅದಕ್ಕೆ ದೇವಿದ್ "ದೈವನಾಮಗಾನಸ್ಮರಣದಲ್ಲಿಯೇ ಅವರನ್ನು ಕೊಂದೆ" ಎನ್ನಲು, ದೇವರು "ಆದರೂ, ಅವರಿಗೂ ಜೀವ ಕೊಟ್ಟವನು ನಾನೇ" ಎಂದನು. (ಮುಂದೆ ದೇವಿದ್‌ನ ಮಗ ಸಾಲೊಮನ್ ಗುಡಿ ಕಟ್ಟಿದನು).

ಹತ್ತೊಂಬತ್ತನೆಯದು ಅಯ್ಯೂಬ್‌ನ ಜ್ಞಾನ ಕುರಿತದ್ದು. ವಿಷಯ—ಕೇಡಿನಲ್ಲೂ ತಾಳ್ಮೆ.

ಇಪ್ಪತ್ತನೆಯದು ಯಾಹ್ಯ ಅಥವಾ ಜಾನ್ ದಿ ಬಾಪ್ಟಿಸ್ಟನ ಜ್ಞಾನ ಕುರಿತದ್ದು. ಇವರಲ್ಲಿ ಭೋಗತ್ಯಾಗ, ದೈವಭಕ್ತಿ, ಜ್ಞಾನಾನಂದ—ಮೊದಲಾದುವನ್ನು ಹೇಳಿದೆ.

ಇಪ್ಪತ್ತೊಂದನೆಯದು ಜಕರಿಯಾವಿನ ಹೆಸರಿನಲ್ಲಿದೆ. ವಿಷಯ—ದೇವರ ದಯೆ. ಸಮಸ್ತವನ್ನೂ ತಬ್ಬಿರುವ ದೈವಾನುಗ್ರಹ ಮನುಷ್ಯನು ದೇವರ ಕಡೆಗೆ ನಡೆದಾಗ ಹೆಚ್ಚುತ್ತದೆ.

ಇಪ್ಪತ್ತೆರಡನೆಯದು ಇಲ್‌ಯಾಸ್ ಅಥವಾ ಎಲಿಜಾವಿನ ಜ್ಞಾನ ಕುರಿತದ್ದು. ವಿಷಯ—ನಾನಾ ರೂಪಗಳಲ್ಲಿ ದೇವರ ಸಾಧನೆ. ನಿಜವಾದ ಸೂಫಿ ಏಕತ್ವದಲ್ಲಿ ಬಹುತ್ವವನ್ನೂ ಬಹುತ್ವದಲ್ಲಿ ಏಕತ್ವವನ್ನೂ ಸಾಧಿಸಬೇಕು.

ಇಪ್ಪತ್ತಮೂರನೆಯದು ಲುಕ್‌ಮಾನನ್ನು ಕುರಿತದ್ದು. ವಿಷಯ—ಜ್ಞಾನ. ಇದು ಎರಡು ತರ, ಒಂದು ವಾಙ್ಮೂಲಕವ್ಯಕ್ತವಾದದ್ದು.

ಮತ್ತೊಂದು ಅನಿರ್ವಚನೀಯವಾದ ಮೌನಜ್ಞಾನ. ಎರಡನೆಯದೇ ಮೇಲಾದದ್ದು.

ಇಪ್ಪತ್ತನಾಲ್ಕನೆಯ ಅಧ್ಯಾಯ ಹಾರೂನ್ ಜ್ಞಾನವನ್ನು ಕುರಿತದ್ದು. ವಿಷಯ—ವಿಗ್ರಹಾರಾಧನೆ. ಇಲ್ಲಿ ವಿಗ್ರಹಾರಾಧನೆ ಎಂದರೆ, ದೇವರನ್ನು ಅವನ ಗುಣಗಳಿಗೆ ಅನುಸಾರವಾದ ಭಾವಸ್ವರೂಪದಲ್ಲಿ ನೋಡುವುದು. ಪ್ರತಿಯೊಂದು ಆರಾಧ್ಯವಸ್ತುವೂ ದೇವರ ಒಂದು ಗುಣ ಅಥವಾ ಉಪಾಧಿ ಆಗಿರಬಹುದು. ಆದರೆ, ಒಂದೊಂದನ್ನೇ ದೇವರಾಗಿ ಪೂಜಿಸುವುದು ದೇವರಿಗೆ ಒಂದು ಮಿತಿ ಕಲ್ಪಿಸಿದಂತಾಗುವುದೇ ಹೊರತು, ಅವನನ್ನು ಪೂರ್ಣತ್ವದಲ್ಲೂ ಏಕತ್ವದಲ್ಲೂ ಪೂಜಿಸಿದಂತಾಗುವುದಿಲ್ಲ.

ಇಪ್ಪತ್ತೈದನೆಯದು ಮೋಸೆಸ್‌ನ ಜ್ಞಾನ ಕುರಿತದ್ದು. ವಿಷಯ—ಹಿರಿಯ ಹಿತಕ್ಕಾಗಿ ಕಿರಿಯದನ್ನು ಬಲಿ ಕೊಡುವುದು, ಅಥವಾ ಹಿರಿಯ ಹಿತದಲ್ಲಿ ಕಿರಿಯುವೆಲ್ಲ ಸೇರಿಕೊಂಡು ಹೋಗಿರುವುದು. ಮೋಸೆಸ್ಸಿಗಾಗಿ ಹಲವು ಮಕ್ಕಳು ಸಾವಿಗೆ ತುತ್ತಾದರು.

ಇಪ್ಪತ್ತಾರನೆಯ ಅಧ್ಯಾಯ ಖಾಲೆದ್‌ಜ್ಞಾನ ಕುರಿತದ್ದು. ಖಾಲೆದ್ ಇಸ್ಲಾಂಪೂರ್ವದ ಯಮನ್ ದೇಶದ ಒಬ್ಬ ಸಾಧು. ವಿಷಯ—ಸದುದ್ದೇಶವೇ ಸತ್ಯಸಾಧನೆ ಅಲ್ಲ ಎಂಬುದು.

ಇಪ್ಪತ್ತೇಳನೆಯದು ಮಹಮದ್‌ನ ಜ್ಞಾನ ಕುರಿತದ್ದು. ವಿಷಯ—ಪೈಗಂಬರನಿಗೆ ಬಹುಪ್ರಿಯವಾಗಿದ್ದ ಸ್ತ್ರೀ, ಸುಗಂಧ ಮತ್ತು ಪ್ರಾರ್ಥನೆ. ಗಂಡಸು ಹೇಗೆ ದೇವರ ಪ್ರತಿಬಿಂಬವೊ ಹಾಗೆಯೇ ಗಂಡಸಿನ ಪ್ರತಿಬಿಂಬ ಹೆಂಗಸು. ಆದ್ದರಿಂದ, ಗಂಡಸು ದೇವರನ್ನೂ ಹೆಂಗಸನ್ನೂ ಪ್ರೀತಿಸುತ್ತಾನೆ. ಗಂಡಸಿಗೂ ಹೆಂಗಸಿಗೂ ಇರುವ ಸಂಬಂಧ ಪ್ರಕೃತಿಗೂ ಪುರುಷನಿಗೂ (ದೇವರಿಗೂ) ಇರುವಂಥಾದ್ದು. ಸ್ತ್ರೀಪುರುಷರ ಪ್ರೇಮ ಹೀಗಿದ್ದರೆ ಅದು ದಿವ್ಯಪ್ರೇಮವಾಗುತ್ತದೆ. ಪ್ರಾರ್ಥನೆಯೆಂದರೆ ಮನುಷ್ಯನಿಗೂ ದೇವರಿಗೂ ಆಗುವ ಒಂದು ವಿಧವಾದ ಭಾವಸಂಗಮ, ಅಥವಾ ಭಗವದ್‌ದರ್ಶನ. ಇದೇ ಮನುಷ್ಯನ ಅಧ್ಯಾತ್ಮ ಉನ್ನತಿಯ ಚರಮಾವಸ್ಥೆ. ಮುಸ್ಲಿಮರು ಮೂರು ವಿಧವಾಗಿ ಮೆಯ್ಯಿಕ್ಕಿ

ಪ್ರಾರ್ಥನೆ ಮಾಡಬೇಕು. ಮೊದಲನೆಯದು ಕಿಯಾಮ್ ಅಥವಾ ನೆಟ್ಟಗೆ ನಿಂತು. ಇದು ಮನುಷ್ಯನಿಲುವು. ಎರಡನೆಯದು ರುಕು ಅಥವಾ ಅಡ್ಡಬಗ್ಗಿ. ಇದು ಪ್ರಾಣಿನಿಲುವು. ಮೂರನೆಯದು ಸುಜೂದ್ ಅಥವಾ ನೆಲಮುಟ್ಟಿ. ಇದು ಮರದ ನಿಲುವು.

ಇದು ಫ್ಲುಸುಸುಲ್ ಹಿಕಮ್ ಗ್ರಂಥದ ಸಂಗ್ರಹ.

ಫರಿದುದ್ದೀನ್ ಆತ್ತಾರ್: ಇವನು ಇಬ್ನುಲ್ ಆರಬಿಯ ಹಿರಿಯ ಸಮಕಾಲಿಕ, ಇರಾನಿನ ಒಬ್ಬ ದೊಡ್ಡ ಕವಿ ಮತ್ತು ಸೂಫಿ. ನೀಷಾಪೂರ್ ಬಳಿಯ ಕದ್‌ಕಾನ್ ಗ್ರಾಮದಲ್ಲಿ ಕ್ರಿ. ಶ. ೧೧೧೮ರಲ್ಲಿ ಹುಟ್ಟಿದನು. ಕ್ರಿ. ಶ. ೧೨೩೦ರಲ್ಲಿ ಮಂಗೋಲ್ ದಾಳಿಯಲ್ಲಿ ಕೊಲೆಯಾದನು. ಇವನು ಷೇಕ್ ಮಜ್‌ದುದ್ದೀನನ ಶಿಷ್ಯ. ಇವನ ಸುಮಾರು ೩೦ ಗ್ರಂಥಗಳೂ ಪದ್ಯದಲ್ಲಿವೆ. ಮುಖ್ಯವಾದ ಗ್ರಂಥ ಮಂತಕುತ್ ತಾಯ್‌ರ್ ಅಥವಾ ಹಕ್ಕಿಗಳ ನುಡಿ ಎಂಬುದು. ಇದು ಸುಮಾರು ೪,೬೦೦ ಶ್ಲೋಕಗಳುಳ್ಳ ಒಂದು ರೂಪಕ ಕಥೆ. ಈ ಕಾವ್ಯದಲ್ಲಿ ಬರುವ ಹಕ್ಕಿಗಳೆಲ್ಲ ಸತ್ಯಾನ್ವೇಷಿಗಳಾದ ಸೂಫಿಗಳು. ತಿಳಿದಿರುವ ಆದರೆ ಕಣ್ಣಿಗೆ ಕಾಣದ ಸೀಮುರ್ಘ್ ಎಂಬ ಪಕ್ಷಿರಾಜನೇ ಸತ್ಯ. ಈ ಗ್ರಂಥ ಎಲ್ಲ ಸೂಫಿಗಳಿಗೂ ಬಹು ಮೆಚ್ಚಿಗೆಯಾದದ್ದು. ಇದು ಹಲವು ಯೂರೋಪ್ ಭಾಷೆಗಳಿಗೆ ಭಾಷಾಂತರವಾಗಿದೆ.

## ಗ್ರಂಥಸಾರಾಂಶ

ಹಕ್ಕಿಗಳೆಲ್ಲ ದೊರೆಯನ್ನು ಆಯಲು ಸಭೆ ಸೇರಿ, ಹೂಪ್ಪೋಯೆ ಎಂಬುದನ್ನು ಸಭಾಪತಿಯನ್ನಾಗಿ ಮಾಡಿ ಚರ್ಚೆಗಾರಂಭಿಸುತ್ತವೆ. ಈ ಸಭಾಪತಿ ಸೀಮುರ್ಘ್ ಎಂಬ ಪಕ್ಷಿರಾಜ ಒಂದಿದೆ, ಅದು ಪ್ರಪಂಚವನ್ನು ಬಳಸಿರುವ ಕಾಫ್‌ಮಲೆಯಲ್ಲಿ ವಾಸಿಸುತ್ತದೆ, ಅದನ್ನು ಮುಟ್ಟಲು ಏಳು ಕಡಿದು-ಕಣಿವೆಗಳನ್ನು ದಾಯಬೇಕು ಎಂದು ಹೇಳುತ್ತದೆ. ಹಕ್ಕಿಗಳೆಲ್ಲ ಅಷ್ಟು ಕಷ್ಟಸಾಧ್ಯವಾದ ಕೆಲಸಕ್ಕೆ ಕೈ ಹಚ್ಚುವುದು ಸರಿಯೇ ಎಂದು ಚರ್ಚಿಸಿ, ಕೊನೆಗೆ ಹೂಪ್ಪೋಯೆಯಿಂದ ಸರಿಯಾದ ಸಮಾಧಾನ ಹೊಂದಿ, ಪ್ರಯಾಣ ಕೈಕೊಳ್ಳುವುದಕ್ಕೆ ತೀರ್ಮಾನಿಸುತ್ತವೆ. ಮೊದಲನೆಯ ಕಣಿವೆಗೆ ಅನ್ವೇಷಣ ಎಂದು ಹೆಸರು. ಆದರಲ್ಲಿ ಸರಿಯಾದ ದಾರಿ

ಯನ್ನು ಹುಡುಕುವುದರಲ್ಲಿ ನಿರತರಾಗಿರಬೇಕು. ಅದಕ್ಕೆ ತಾಳ್ಮೆಯೂ ಸ್ಥೈರ್ಯವೂ ಆವಶ್ಯಕವಾದುವು. ಅದರಲ್ಲಿ ಹಲವು ಹಕ್ಕಿಗಳು ಸೋತು ಹೋದುವು. ಉಳಿದುವು ಎರಡನೆಯದಾದ ಪ್ರೇಮದ ಕಣಿವೆಗೆ ಹೋದುವು. ಅದು ಮೊದಲನೆಯದಕ್ಕಿಂತಲೂ ಹೆಚ್ಚು ಕಡಿದಾದದ್ದು. ಅಲ್ಲಿ ತನ್ನನ್ನು ಮರೆತು ತನ್ನ ಪ್ರೇಮಿಗಾಗಿ ಬದುಕಬೇಕು. ಅದರಲ್ಲಿ ಬುದ್ಧಿಯ ನೆರವು ಅಷ್ಟಿಲ್ಲ. ಪ್ರೇಮಕ್ಕೂ ಬುದ್ಧಿಗೂ ಅಷ್ಟೇನೂ ಹೊಂದಿಕೆಯಿಲ್ಲ. ಆ ಕಣಿವೆಯಲ್ಲಿ ಮತ್ತಷ್ಟು ಹಕ್ಕಿಗಳು ಸೋತು ನಿಜವಾಗಿ ಹೃದಯದಲ್ಲಿ ಪ್ರೇಮ ತುಂಬಿದ್ದವು ಮಾತ್ರ ಪ್ರೇಮದ ಕಳ್ಳಿನಿಂದ ಮದವೇರಿ, ಭಕ್ತಿಯ ಆವೇಶದಿಂದ ಕೂಡಿ ಮೂರನೆಯದಾದ ಜ್ಞಾನದ ಕಣಿವೆಗೆ ಹೋದುವು. ಅದೂ ಕೇವಲ ಬುದ್ಧಿಬಲದಿಂದ ಹೊಂದಬಹುದಾದ್ದಲ್ಲ. ಪ್ರೇಮಿಯ ಅನುಗ್ರಹ ಮಾತ್ರದಿಂದ ಲಭಿಸತಕ್ಕದ್ದು. ಆದು ಆದ್ಯಂತ ರಹಿತವಾಗಿದ್ದು ಅದರದರ ಎದೆಯ ಹಿಗ್ಗಿಗೆ ತಕ್ಕಂತೆ ಆ ಕಣಿವೆಯ ಬೆಳಕು ತುಂಬುತ್ತದೆ. ಆ ಬೆಳಕಿನಿಂದ ಬೆಳಗಿದ ಹೃದಯದುವು ಪ್ರತಿಯೊಂದು ಅಣುವಿನಲ್ಲೂ ಪರಸೌಂದರ್ಯವನ್ನು ನೋಡಿದುವು. ಆ ಬೆಳಕಿಗೆ ಸಹಿಸಲಾರದೆ ಎಷ್ಟೋ ಹಕ್ಕಿಗಳು ಸೋತು, ಉಳಿದುವು ನಾಲ್ಕನೆಯದಾದ ನಿಸ್ಸಂಗದ (ಅನಾಸಕ್ತಿಯ) ಕಣಿವೆಗೆ ಹೋದುವು. ಅಲ್ಲಿ ದೈಹಿಕ ಆವಶ್ಯಕತೆಗಳನ್ನು ವಿೂರಿ, ಒಡವೆವಸ್ತುಗಳ ಆಸೆಯಿಲ್ಲದೆ ಸಂಪೂರ್ಣ ತ್ಯಾಗಜೀವನದಲ್ಲಿ ನುರಿತು ಐದನೆಯದಾದ ಐಕ್ಯದ ಕಣಿವೆಗೆ ಹೋದುವು. ಅಲ್ಲಿ ಬಹುತ್ವವೆಲ್ಲ ಏಕತ್ವದಲ್ಲಿ ಅಡಗಿ ಹೋಗಿರುವುದನ್ನು ಕಂಡವು. ಮಾನ ಗುಣ, ಹಿರಿದು ಕಿರಿದು, ಮೇಲು ಕೀಳು—ಇವೇ ಮೊದಲಾದ ಸಮಸ್ತ ದ್ವೈತಭಾವಗಳೂ ಅಳಿದು ಹೋದುವು. ಅದರಲ್ಲಿ ತೇರ್ಗಡೆ ಹೊಂದಿದುವು ಆರನೆಯದಾದ ವಿಸ್ಮಯದ ಕಣಿವೆಯನ್ನು ಸೇರಿದುವು. ಅಲ್ಲಿ ಏಕ ಅನೇಕ, ನಾನು ನೀನು, ಎಂಬ ಭೇದಭಾವಗಳೇ ಇಲ್ಲದೆ ತಾವು ಯಾರು, ಯಾರನ್ನು ಪ್ರೀತಿಸುತ್ತೇವೆ, ಯಾತಕ್ಕೆ ಪ್ರೀತಿಸುತ್ತೇವೆ, ತಾವು ನಡೆಯುತ್ತಿರುವ ಧರ್ಮ ಯಾವುದು, ಈ ಏನನ್ನೂ ತಿಳಿಯದೆ ಹೋದುವು. ಅದನ್ನು ದಾಟಿ ಕೆಲವು ಏಳನೆಯದಾದ ಲಯದ ಕಣಿವೆಯನ್ನು ಹೊಕ್ಕವು. ಅಳಿದುಳಿ

ದಿದ್ದ ಸ್ವಪ್ರಜ್ಞೆ ಅಥವಾ ಅಹಂಕಾರ ಅಲ್ಲಿ ಪೂರ್ಣವಾಗಿ ನಾಶವಾಗಿ ಹೋಯಿತು. ಅವು ಕಿವುಡೂ ಮೂಗೂ ಆಗಿಬಿಟ್ಟು ತಮ್ಮ ಪ್ರೇಮ ವಸ್ತು ಒಂದು ಹೊರತು ಮತ್ತೆ ಏನನ್ನೂ ಅರಿಯದೆ ಹೋದುವು. ಸಮಸ್ತ ಪಾರ್ಥಿವದೋಷಗಳನ್ನೂ ಕಳೆದುಕೊಂಡು ಪರಿಶುದ್ಧವಾಗಿ, ಅಮರವಾದ ಆತ್ಮಾಂಶ ಮಾತ್ರ ಉಳಿದು ಶಾಶ್ವತ ಸೂರ್ಯನ ಮಹಾ ಜ್ಯೋತಿಯ ಎದುರಿಗೆ ನಿಂತವು. ಪ್ರಯಾಣ ಕೈಕೊಂಡ ಲಕ್ಷೋಪ ಲಕ್ಷ ಹಕ್ಕಿಗಳಲ್ಲಿ ಈ ದೊರೆಯ ಬೆಳಕನ್ನು ಕಂಡುವು ಮೂವತ್ತು ಮಾತ್ರ. ಈ ಮೂವತ್ತು ಹಕ್ಕಿಗಳೂ ತಾವು ಇಷ್ಟು ನೊಂದು ಹರಸುತ್ತಿದ್ದ ದೊರೆ ಕೊನೆಗೆ ತಾವೇ ಎಂಬುದನ್ನು ಕಂಡುಕೊಂಡು ಆಶ್ಚರ್ಯಚಕಿತ ವಾದುವು. ಅಲ್ಲಿಯವರೆಗೂ ಕಣ್ಮರೆಯಾಗಿದ್ದ ಸೀಮುರ್ಘ್ ಹಕ್ಕಿ ತಾವೇ ಆಗಿ ಮಾರ್ಪಟ್ಟು ಹೋಗಿದ್ದುವು. ಅಷ್ಟೇ ಅಲ್ಲ. ಆ ಮೂವತ್ತೂ ಮೂವತ್ತು ಹೋಗಿ ಒಂದಾಗಿಬಿಟ್ಟಿದ್ದವು. ಕೊನೆಗೆ ಅವುಗಳಿಗೆ ಈ ದನಿ ಕೇಳಬಂತು "ನಾನು ಕನ್ನಡಿ, ನನ್ನಲ್ಲಿ ನೋಡುವವನು ತನ್ನನ್ನೇ ಕಾಣು ತ್ತಾನೆ. ತನ್ನನ್ನು ತಾನು ಸೀಮುರ್ಘ್‌ನನ್ನಾಗಿ ಕಾಣುತ್ತಾನೆ. ಆದರೆ ನಾನು ಸೀಮುರ್ಘನ ಸತ್ವ. ತಾನು ತನ್ನಲ್ಲಿ ಲಯ ಹೊಂದಿ ದರೆ ನನ್ನಲ್ಲಿಯೇ ನೆಲೆಯಾಗಿರುತ್ತಾನೆ. ಕೊನೆಗೆ ನೆಳಲು ನೇಸರಿ ನಲ್ಲಿ ಮರಸಿಹೋಗಿದೆ" ಹೀಗೆ ಜೀವನ ರಹಸ್ಯದ ಸಮಸ್ಯೆ ಪರಿಹಾರ ವಾಗುತ್ತದೆ.

ಜಲಾಲುದ್ದೀನ್ ಕ್ರಿ. ಶ. ೧೨೦೭: ಇವನು ರೂಮಿ ಎಂಬ ಹೆಸರಿನಿಂದ ಪ್ರಸಿದ್ಧನಾಗಿದ್ದಾನೆ. ಬಹಾಉದ್ದೀನನ ಮಗನಾದ ಇವನು ಬಲ್ಕ್ ಸ್ಥಳದವನು. ಇಬ್‌ನುಲ್ ಅರಬಿಯ ಕಿರಿಯ ಸಮಕಾಲಿಕನು. ಇವನ ತಂದೆ ಆಳುವರಸನ ದ್ವೇಷದಿಂದ ದೇಶ ಬಿಟ್ಟು ಸಿರಿಯವನ್ನು ಹೊಕ್ಕನು. ಕೊನೆಗೆ, ಏಷ್ಯಾಮೈನರಿನ ಕೂನಿಯದಲ್ಲಿ ನೆಲಸಿದನು. ಜಲಾಲುದ್ದೀನನು ದೇವತಾಶಾಸ್ತ್ರ ಮತ್ತು ದರ್ಶನಗಳಲ್ಲಿ ದೊಡ್ಡ ವಿದ್ವಾಂಸನಾಗಿದ್ದು, ತನ್ನ ಶಿಷ್ಯನೂ ಸ್ನೇಹಿತನೂ ಆದ ಹುಸಾಮು ದ್ದೀನನ ಸಲಹೆಯ ಮೇಲೆ ತನ್ನ ಪ್ರಸಿದ್ಧ ಗ್ರಂಥವಾದ ಮಸ್ನವಿಯನ್ನು ರಚಿಸಿದನು.

ಮಸ್ನವಿಗ್ರಂಥ ಆರು ಸಂಪುಟಗಳುಳ್ಳದ್ದು. ಕರ್ತೃತ್ವದ ವಿಷಯ ದಲ್ಲಿ ಸಂದೇಹವಿರುವ ಏಳನೆಯ ಅನುಬಂಧವೂ ಒಂದಿದೆ. ಮಸ್ನವಿ ವಿಶ್ವಸಾಹಿತ್ಯ ಗ್ರಂಥಗಳ ಗುಂಪಿಗೆ ಸೇರತಕ್ಕದ್ದೆಂದು ಒಪ್ಪಲಾಗಿದೆ. ಇದರಲ್ಲಿ ೪೭,೦೦೦ ಶ್ಲೋಕಗಳಿವೆ. ದೃಷ್ಟಾಂತ, ಕಥೆ, ಪುರಾಣಸಂಗತಿ, ಕುರಾನ್‌ವಚನ—ಮೊದಲಾದುವುಗಳ ಮೂಲಕ ಸೂಫಿ ಧರ್ಮದ ಸಂಪೂರ್ಣ ಪ್ರತಿಪಾದನೆ ಇದೆ. ಜಲಾಲುದ್ದೀನನು ಇತರರಿಗಿಂತ ಹೆಚ್ಚು ಕ್ರಮಬದ್ಧರೀತಿಯಲ್ಲಿ ಪ್ರೌಢ ತರ್ಕಸರಣಿಯಲ್ಲಿ ಬರೆದಿದ್ದಾನೆ. ಇವನ ಶೈಲಿ ಒಂದು ವಿಶಿಷ್ಟ ರೀತಿಯದಾಗಿದ್ದು, ಒಂದು ವಿಷಯವನ್ನು ಹೇಳುತ್ತಿರುವಾಗ ಅದರೊಡನೆ ದರ್ಶನ, ಮನಶ್ಶಾಸ್ತ್ರ, ಸೂಫಿತತ್ವ, ಮೊದಲಾದ ನಾನಾ ವಿಷಯಗಳನ್ನು ಬೆರಸಿಬಿಟ್ಟು ಒಟ್ಟಿಗೆ ಪರಿಶೀಲಿ ಸುವುದರಿಂದ, ಒಮ್ಮೊಮ್ಮೆ ಪ್ರಸಕ್ತ ವಿಷಯವೇ ತಿಳಿಯದೆ ಹೋಗಿ ಸಾಮಾನ್ಯ ವಾಚಕರಿಗೆ ಕೊಂಚ ಕಷ್ಟವಾಗುತ್ತದೆ. ಅಲ್ಲದೆ, ಇವನು ಹಲವು ಬಳಕೆಯ ಮಾತುಗಳನ್ನು ತೆಗೆದುಕೊಂಡು ಅವಕ್ಕೆ ತನ್ನದೇ ಆದ ವಿಶೇಷಾರ್ಥವನ್ನು ಕೊಟ್ಟು ಮೇಲಿಂದ ಮೇಲೆ ಉಪಯೋಗಿಸು ತ್ತಾನೆ. ಮಸ್ನವಿಯ ಮೇಲೆ ಹಲವು ವ್ಯಾಖ್ಯಾನಗಳು ಹಲವು ಭಾಷೆ ಗಳಲ್ಲಿ ಬರೆವಿವೆ. ಆದರೆ, ಗ್ರಂಥದ ಗಹನತೆಯನ್ನೂ ವಿಸ್ತಾರವನ್ನೂ ಜಟಿಲತೆಯನ್ನೂ ನೋಡಿದರೆ ಇನ್ನೂ ಎಷ್ಟೋ ವ್ಯಾಖ್ಯಾನಗಳಿಗೆ ಎಡೆ ಯಿರುವಂತೆ ತೋರುತ್ತದೆ.

ಜಲಾಲುದ್ದೀನನ ಮತದಂತೆ ಪ್ರೇಮವೇ ಉತ್ತಮೋತ್ತಮವಾದ ಗುಣ. ಮತಕರ್ಮಗಳೂ ಪ್ರಾರ್ಥನಾದಿ ಪೂಜೆಗಳೂ ಒಳ್ಳೆಯವೆ. ಆದರೆ, ಪ್ರೇಮಮೂರ್ತಿಯಾದ ದೇವರು ಮಸೀದಿಯಲ್ಲಿ, ಚರ್ಚಿನಲ್ಲಿ, ಗುಡಿಯಲ್ಲಿ ಇಲ್ಲ. ಪರಿಶುದ್ಧ ಹೃದಯದಲ್ಲಿ ಇದ್ದಾನೆ. ಪಾಪವೆಂಬುದು ಸೃಷ್ಟವಸ್ತುಗಳಲ್ಲಿದೆಯೇ ಹೊರತು ಸೃಷ್ಟಿಕರ್ತನಲ್ಲಿಲ್ಲ. ಮನುಷ್ಯನು ದೈವಸಂಕಲ್ಪಕ್ಕೆ ಒಳಗಾಗಿದ್ದರೂ ಒಂದು ರೀತಿಯಲ್ಲಿ ಇಚ್ಛಾಸ್ವಾತಂತ್ರ್ಯ ವುಳ್ಳವನು. ಮನುಷ್ಯನಿಗೆ ಈ ಸ್ವಾತಂತ್ರ್ಯವಿದ್ದು ತನ್ನ ಕರ್ಮಗಳಿಗೆ ತಾನೇ ಕಾರಣನಾಗಿರದಿದ್ದರೆ ಪಶ್ಚಾತ್ತಾಪಕ್ಕೆ ಎಡೆಯೇ ಇರಲಿಲ್ಲ. ಪಾಪವನ್ನು ದೇವರಿಗೆ ಆರೋಪಿಸಿ ಸೈತಾನ್ ಹೇಳಿದಂತೆ "ನೀನೇ

ನನ್ನನ್ನು ತಪ್ಪಿಗೆಳೆದು ಕೆಡಿಸಿದವನು" ಎನ್ನಬಾರದು. ಮನುಷ್ಯಸಂಕಲ್ಪವನ್ನು ದೈವಸಂಕಲ್ಪಕ್ಕೆ ಸಂಪೂರ್ಣವಾಗಿ ಹೊಂದಿಸುವುದು ಸಂಪೂರ್ಣ ಸ್ವಾತಂತ್ರ್ಯ. ಈ ಸಂಪೂರ್ಣ ಸ್ವಾತಂತ್ರ್ಯ ಬೇರೆ ಯಾವುದೂ ಅಲ್ಲ. ಅದು ಸಂಪೂರ್ಣ ಪ್ರೇಮ.

## ಗ್ರಂಥಸಾರಾಂಶ

ಕೊಳಲು (ಆತ್ಮ) ತವರಿಂದ ಬೇರೆಯಾಗಿ ಅಗಲಿಕೆಯಿಂದ ನೋಯುತ್ತದೆ. ಮತ್ತೆ ತನ್ನ ತವರು ನೆಲೆಯಲ್ಲಿ ಒಂದುಗೂಡಬೇಕೆಂದು ತವಕಪಡುತ್ತದೆ. ಇಂಥ ತವಕವಿಲ್ಲದವನು ರೆಕ್ಕೆಯಿಲ್ಲದ ಹಕ್ಕಿಯಂತೆ. ಆತ್ಮ ದೇಹದ ಮೂಲಕ ವ್ಯಕ್ತವಾಗುತ್ತದೆ. ಆದರೆ, ಆದರ ನಿಜಸ್ವರೂಪವನ್ನು ಯಾರೂ ಅರಿಯರು. ಆತ್ಮ ತನ್ನ ಮೂಲವಾದ ದೇವರೊಡನೆ ಒಂದಾಗಬೇಕಾದರೆ ಕಷಾಯಗಳ ಕಿಲುಬನ್ನು ತೊಳೆದು ತೆಗೆದು. ಹೃದಯದ ಕನ್ನಡಿಯನ್ನು ಸ್ವಚ್ಛಮಾಡಬೇಕು. ಈ ಆತ್ಮಶಿಕ್ಷಣವನ್ನು ಒಂದು ಕಥೆಯ ಮೂಲಕ ನಿರೂಪಿಸಿದೆ. ಒಬ್ಬ ದೊರೆ (ನಿಜವಾದ ಆತ್ಮ) ತನ್ನ ದಾಸಿಯಲ್ಲಿ (ಪಾಶವಾತ್ಮ) ಮನಸೋತು ಪ್ರೀತಿ ಮಾಡುತ್ತಾನೆ. ಆ ದಾಸಿ ಅವನಿಗೆ ತಿಳಿಯದಂತೆ ಗುಟ್ಟಿನಲ್ಲಿ ಬೇರೊಬ್ಬ ತರುಣನನ್ನು (ವಿಷಯ ವಸ್ತುಗಳನ್ನು) ಪ್ರೀತಿಸುತ್ತಿರುತ್ತಾಳೆ. ಯಾವ ಮದ್ದಿನಿಂದಲೂ (ಬುದ್ಧಿಗತತರ್ಕದಿಂದ) ಅವಳಿಗೆ ರೋಗ ಗುಣವಾಗುವುದಿಲ್ಲ. ಕೊನೆಗೆ ದೊರೆ ದೇವರಲ್ಲಿ ಮರೆಹೊಕ್ಕು, ಒಮ್ಮೆ ಒಬ್ಬ ಸಾಧು ವೈದ್ಯನನ್ನು (ಗುರುವನ್ನು) ಕಾಣುತ್ತಾನೆ. ವೈದ್ಯನು ದೊರೆಗೆ ಹುಡುಗಿಯನ್ನು ಅವಳ ನಲ್ಲನೊಡನೆ ಸುಖವಾಗಿರಲು ಕೆಲವು ದಿವಸ ಬಿಟ್ಟುಬಿಡೆಂದು ಹೇಳುತ್ತಾನೆ. ಆರು ತಿಂಗಳು ಕಾಲ ಅವರು ಹಾಗೆ ವಿಲಾಸದಿಂದ ಮೆರೆಯುತ್ತಿರಲು, ಒಮ್ಮೆ ವೈದ್ಯನು ಆ ಯುವಕನಿಗೆ ಒಂದು ಮದ್ದು ಕೊಟ್ಟದ್ದರಿಂದ ಅವನ ಅಂದಚೆಂದಗಳೆಲ್ಲ ಕೆಡುತ್ತವೆ. ಸೌಂದರ್ಯಕ್ಕೆ ಮನಸೋತು ಪ್ರೀತಿಸುತ್ತಿದ್ದ ಆ ಹುಡುಗಿ ಉದಾಸೀನಳಾಗುತ್ತಾಳೆ. ಕೊನೆಗೆ ಯುವಕನು ಸತ್ತು ಹುಡುಗಿ ಅವನನ್ನು ಪೂರ್ತಿಯಾಗಿ ಮರೆಯುತ್ತಾಳೆ. ಇದರಲ್ಲಿ ಕವಿಯ ಆಶಯ— ಪಾಶವಾತ್ಮವನ್ನು ಕೊಲ್ಲಕೂಡದು; ಆದರೆ, ವಿಷಯ ವಸ್ತುಗಳ ನಿಷ್ಫ

ಯೋಜನವನ್ನು ಕುರಿತು ಮೇಲಿಂದ ಮೇಲೆ ಚಿಂತೆ ಮಾಡುತ್ತ, ಪಾಶವಾತ್ಮವನ್ನು ತಿದ್ದಿ ಹತೋಟಿಯಲ್ಲಿ ಇಟ್ಟುಕೊಳ್ಳಬೇಕು. ಇದರಲ್ಲಿ ಒಬ್ಬ ಗುರು ಆವಶ್ಯಕ. ಗುರುವನ್ನು ಅರಸಿ ನೇಮಿಸಿಕೊಳ್ಳುವುದು ಬಲು ಕಷ್ಟ ಕೆಲಸ. ಎಚ್ಚರಿಕೆಯಿಂದ ಮಾಡಬೇಕು. ಸದ್ಗುರುವಿಂದ ಜೀವನದಲ್ಲಿ ಐಕ್ಯಸಾಮರಸ್ಯಗಳೂ, ಕಪಟ ಗುರುವಿಂದ ಭೇದವೈರಸ್ಯಗಳೂ ಮೂಡುತ್ತವೆ.

ಲಯವನ್ನು ಅಥವಾ ಬಂಧನದಿಂದ ಮುಕ್ತಿ ಪಡೆಯುವ ವಿಷಯವನ್ನು ಕುರಿತು ಈ ಕಥೆಯ ಮೂಲಕ ಹೇಳಿದೆ. ಇರಾನಿನ ವರ್ತಕನೊಬ್ಬನು ಇಂಡಿಯದಿಂದ ತಂದ ಗಿಳಿಯೊಂದನ್ನು ಪಂಜರದಲ್ಲಿಟ್ಟು ಸಾಕುತ್ತಿದ್ದನು. ಒಮ್ಮೆ ಅವನು ಅದನ್ನು ಕುರಿತು "ನಾನು ಇಂಡಿಯಕ್ಕೆ ಹೋಗುತ್ತೇನೆ. ನಿನಗೇನುಬೇಕು" ಎಂದು ಕೇಳಿದನು. "ನಾನು ಇಲ್ಲಿ ಪಂಜರದಲ್ಲಿ ಸೆರೆಸಿಕ್ಕಿ ನಿಮ್ಮನ್ನು ಸೇರಲು ತವಕಿಸುತ್ತಿದ್ದೇನೆ ಎಂದು ಅಲ್ಲಿಯ ಗಿಳಿಗಳಿಗೆ ಹೇಳು" ಎಂದು ಆ ಮುದ್ದುಗಿಳಿ ಹೇಳಿತು. ವರ್ತಕನು ಹಾಗೆಯೇ ಆಗಲೆಂದು ಬಂದು, ಇಂಡಿಯದ ಕಾಡುಗಳಲ್ಲಿ ನಲಿದು ಕೆಲೆಯುತ್ತಿದ್ದ ಹಲವು ಗಿಳಿಗಳನ್ನು ನೋಡಿ ತನ್ನ ಗಿಳಿ ಹೇಳಿದ ಮಾತನ್ನು ನೆನೆಸಿಕೊಂಡು ಅವಕ್ಕೆ ಹೇಳಿದನು. ಆ ಮಾತು ಕೇಳಿ ಒಂದು ಗಿಳಿ ನಡುಗಿ ಕೆಳಗೆ ಬಿದ್ದು ಸತ್ತುಹೋಯಿತು. ವರ್ತಕನು ತನ್ನೂರಿಗೆ ಮರಳಿ ಈ ವಿಷಯವನ್ನು ತನ್ನ ಮುದ್ದು ಗಿಳಿಗೆ ಹೇಳಲು ಅದೂ ಕೆಳಗೆ ಬಿದ್ದು ಸತ್ತುಹೋಯಿತು. ಅದನ್ನು ನೋಡಿ ಬಲು ನೊಂದು ಪಂಜರ ತೆರೆದು ಗಿಳಿಯನ್ನು ಹೊರಕ್ಕೆಸೆದನು. ಒಡನೆಯೇ ಗಿಳಿ ರೆಕ್ಕೆ ಬಡಿದೆದ್ದು ಒಂದು ಮರದ ಕೊಂಬೆಯ ಮೇಲೆ ಹಾರಿ ಕುಳಿತುಕೊಂಡಿತು.

ಸೂಫಿ ಬಡತನವನ್ನು ಕೈಕೊಳ್ಳುತ್ತಾನೆ. ಐಹಿಕ ಸುಖಸಂಪತ್ತುಗಳ ಬಡತನವಲ್ಲ; ದೈವಪ್ರಸಾದ ತನಗೆ ಸಾಲದೆಂದು ಮತ್ತೂ ಅಪೇಕ್ಷಿಸುವ ಬಡತನ. ಈ ದೈವಾನುಗ್ರಹ ಲಭಿಸಬೇಕಾಗಿದ್ದರೆ ಸ್ವಾರ್ಥಬುದ್ಧಿ ಸಂಪೂರ್ಣವಾಗಿ ಅಳಿದಿರಬೇಕು. ಒಮ್ಮೆ ಒಬ್ಬನು ತನ್ನ ಕೆಳೆಯನ ಮನೆಗೆ ಹೋಗಿ ಕದ ತಟ್ಟಿದನು. ಒಳಗಿನಿಂದ ಯಾರು ಎಂದು

ಕೇಳಲು "ನಾನು" ಎಂದನು. ಕದ ತೆರೆಯಲಿಲ್ಲ. ಅವನು ಹೊರಟು ಹೋಗಿ ಕೊಂಚ ಹೊತ್ತು ಬಿಟ್ಟು ಬಂದು ಮತ್ತೆ ತಟ್ಟಿದನು. ಒಳಗಿನಿಂದ ಮತ್ತೆ ಯಾರು ಎಂಬ ಪ್ರಶ್ನೆ ಬರಲು "ನೀನು" ಎಂದು ಉತ್ತರ ಕೊಟ್ಟನು. ಆಗ ಬಾಗಿಲು ತೆರೆಯಿತು.

ಮನುಷ್ಯನು ತನ್ನ ಕರ್ಮಗಳನ್ನೆಲ್ಲ ದೇವರ ಪ್ರೀತ್ಯರ್ಥವಾಗಿ ಮಾಡಬೇಕೇ ಹೊರತು ತನ್ನ ಕಾಮಕ್ರೋಧಗಳ ಪೂರೈಕೆಗಾಗಿ, ಸ್ವರ್ಗಸುಖಕ್ಕಾಗಿ ಮಾಡಬಾರದು. ನಾಲ್ಕನೆಯ ಕಲೀಫ಼ ಅಲಿ ಒಬ್ಬ ಕಾಫ಼ರನನ್ನು ಸೋಲಿಸಿ, ಅವನನ್ನು ಕಡಿಯಲು ಕತ್ತಿಯೆತ್ತಿದಾಗ ಕಾಫ಼ರನು ಅವನ ಮುಖದ ಮೇಲೆ ಉಗುಳಿಬಿಟ್ಟನು. ಅಲಿ ಅದರಿಂದ ಕೆರಳಿ ಅವನನ್ನು ಬೇಗ ಕಡಿದುಬಿಡುವುದಕ್ಕೆ ಬದಲು ಸುಮ್ಮನೆ ನಿಂತುಬಿಟ್ಟನು. ಕಾಫ಼ರನಿಗೆ ಆಶ್ಚರ್ಯವಾಗಿ ಕಾರಣ ಕೇಳಲು, ಅಲಿ ಹೇಳಿದನು: "ದೇವರ ದಾರಿ ನಡೆಯಲೆಂದು ನಿನ್ನನ್ನು ವಿರೋಧಿಸಿ ಕಡಿಯುವುದಕ್ಕೆ ಬಂದೆನು. ನೀನು ನನ್ನನ್ನು ಉಗುಳಲು ನನ್ನ ನಿಸ್ಸ್ವಾರ್ಥ ಕರ್ತವ್ಯದೊಂದಿಗೆ ಹಗೆ ತೀರಿಸಿಕೊಳ್ಳುವ ಕ್ರೋಧ ಬುದ್ಧಿಯೂ ಬೆರೆತು ನನ್ನ ನಿರ್ಮಲವಾದ ಆಶೆಯು ಸ್ವಾರ್ಥಸಾಧನೆಯ ಇಚ್ಛೆಯಿಂದ ಕಳಂಕಗೊಂಡಿತು."

ಜಲಾಲುದ್ದೀನ್‌ರೂಮಿ ಇತರ ಸೂಫ಼ಿಗಳಂತೆಯೇ ಮಾನವ ಜೀವನದಲ್ಲಿ ಹೃದಯವೇ ಮುಖ್ಯವೆಂದು ಎಣಿಸಿದ್ದನು. ಇದು ಅಭೌತವೂ ಜ್ಯೋತಿರ್ಮಯವೂ ಆಗಿದ್ದು ನಿಜವಾದ ಆತ್ಮಕ್ಕಿಂತ ಕೀಳೂ ಪಾಶವಾತ್ಮಕ್ಕಿಂತ ಮೇಲೂ ಆಗಿರುತ್ತದೆ. ಇದರ ಎರಡು ಮುಖಗಳಲ್ಲಿ ಒಂದು ದಿವ್ಯಾತ್ಮದ ಕಡೆಗೂ ಮತ್ತೊಂದು ಪಾಶವಾತ್ಮದ ಕಡೆಗೂ ತಿರುಗಿದ್ದು, ದಿವ್ಯಾತ್ಮದಿಂದ ತಾನು ಬೆಳಗಿ ಮತ್ತೆ ತಾನು ಪಾಶವಾತ್ಮವನ್ನು ಬೆಳಗುತ್ತದೆ. ಇದನ್ನು ಗಾಜಿನ ಬುರುಡೆಯಲ್ಲಿ ಉರಿಯುವ ದೀಪಕ್ಕೆ ಹೋಲಿಸಬಹುದು. ನಿಜವಾದ ಆತ್ಮ ಒಳಗಿನ ಉರಿ. ಹೃದಯ ಗಾಜಿನ ಬುರುಡೆ. ಪಾಶವಾತ್ಮವೇ ಎಣ್ಣೆ. ದೇಹ ದೀಪವಿಟ್ಟಿರುವ ಗೂಡು.

ಸೃಷ್ಟಿ ನಾನಾ ಪ್ರಕಾರ ಕಂಡುಬಂದರೂ ಅದು ಒಂದೇ. ಕಡಲ ಮೇಲಿನ ತೆರೆಗಳ ಹೊರಳಿನಿಂದ ಕಡಲು ಭಿನ್ನಸ್ವರೂಪ ತಾಳಿ ಬೇರೆ

ಬೇರೆಯಾಗಿ ಕಂಡುಬಂದರೂ ಅದು ಹೇಗೆ ಒಂದೇಯೋ ಹಾಗೆ. ತಷ್ಬೀಹ್ (ಸಗುಣಾರಾಧನೆ ಅಥವಾ ಮೂರ್ತಿಯ ಆರಾಧನೆ) ಮತ್ತು ತನ್‌ಸ್ಜೀಹ್ (ನಿರ್ಗುಣಾರಾಧನೆ ಅಥವಾ ಅಮೂರ್ತಿಯ ಆರಾಧನೆ)ಗಳ ವಿಷಯದ ತೊಡಕನ್ನು ವಿವರಿಸಿ, ಯಾವ ಒಂದನ್ನೇ ಸಮರ್ಥಿಸುವವಾದ ತಪ್ಪೆಂದೂ ಪರವಸ್ತು ಮಾನವ ಭಾವನಾತೀತವೆಂದೂ, ಒಂದು ದೃಷ್ಟಿಯಿಂದ ಅವನು ರೂಪರಹಿತನೆಂದೂ ಮತ್ತೊಂದು ದೃಷ್ಟಿಯಿಂದ ಎಲ್ಲ ರೂಪಗಳಲ್ಲಿಯೂ ಕಾಣುತ್ತಾನೆಂದೂ ಹೇಳುತ್ತಾನೆ. ಇಂದ್ರಿಯ ಬಂಧನದಿಂದ ಮುಕ್ತರಾಗಿ ಪರಿಶುದ್ಧ ಅಂತಃಕರಣವುಳ್ಳವರು ತಮ್ಮ ಒಳಗಿನ ಸ್ವಚ್ಛ ಕನ್ನಡಿಯಲ್ಲಿ ದಿವ್ಯ ಚಕ್ಷುಸ್ಸಿನಿಂದ ಆತ್ಮದ ನಿಜಸ್ವರೂಪವನ್ನು ಕಂಡರಿಯಬಹುದು.

ದೇವರು ಸೌಂದರ್ಯ; ಸೌಂದರ್ಯವನ್ನು ಪ್ರೀತಿಸುತ್ತಾನೆ, ದೇವರ ಸೌಂದರ್ಯವನ್ನು ಪ್ರೀತಿಸುವವರೆಲ್ಲರೂ, ಪ್ರಣಯಿಯಿಂದ ಬರುವ ಕಷ್ಟಗಳನ್ನೆಲ್ಲ ಸಹಿಸುವ ಪ್ರಣಯಿಯಂತೆ, ದೇವರಿಂದ ಬರುವ ಕಷ್ಟಗಳನ್ನೆಲ್ಲ ತಾಳ್ಮೆಯಿಂದ ಸಹಿಸಬೇಕು. ಇದನ್ನು ಕವಿ 'ಲಕ್ಮನ್' ಕಥೆಯಿಂದ ವಿಶದಪಡಿಸಿದ್ದಾನೆ. ಲಕ್‌ಮನ್ನನ್ನು ಕಂಡರೆ ಅವನ ಒಡೆಯನಿಗೆ ಬಹಳ ಪ್ರೀತಿ ಗೌರವಗಳಿದ್ದುವು. ಒಮ್ಮೆ ಆ ಒಡೆಯನಿಗೆ ಯಾರೊ ಒಂದು ಕಲ್ಲಂಗಡಿ ಹಣ್ಣನ್ನು ತಂದುಕೊಟ್ಟರು. ಅವನು ಅದನ್ನು ಹೆಚ್ಚಿ ಪ್ರೀತಿಯಿಂದ ಲಕ್‌ಮನ್ನಿಗೆ ಒಂದು ಹೋಳು ಕೊಡಲು, ಲಕ್‌ಮನನು ಸಂತೋಷದಿಂದ ತಿಂದನು. ಅವನ ಸಂತೋಷವನ್ನು ನೋಡಿ ಮತ್ತೊಂದು ಹೋಳನ್ನು ಹೆಚ್ಚಿಕೊಟ್ಟನು. ಅದನ್ನು ತುಂಬ ಸಂತೋಷದಿಂದ ತಿನ್ನಲು, ಹೀಗೆಯೇ ಹೋಳ ಮೇಲೆ ಹೋಳು ಹೆಚ್ಚಿ ಕೊಡುತ್ತ ಬಂದನು. ಕೊನೆಗೆ ಒಂದು ಸಣ್ಣ ಚೂರು ಮಾತ್ರ ಉಳಿಯಿತು. ಅದರ ರುಚಿಯನ್ನಾದರೂ ನೋಡೋಣವೆಂದು ತಾನು ಬಾಯಲ್ಲಿ ಹಾಕಿಕೊಂಡನು. ಅದು ಬಲು ಕಹಿಯಾಗಿತ್ತು. ಒಡನೆಯೇ ಬಲು ನೊಂದುಕೊಂಡು ಲಕ್‌ಮನ್ನನ್ನು ಅಷ್ಟು ಕಯ್ಯಾದ ಹಣ್ಣನ್ನು ತಿನ್ನುವುದರಲ್ಲಿ ತೋರಿಸಿದ ನಲಿವಿಗೆ ಕಾರಣ ಕೇಳಲು, ಅವನು "ನಿನ್ನ ಕೈಯಿಂದ ಎಷ್ಟೋ ಸಿಹಿ ಪದಾರ್ಥಗಳನ್ನು ತಿಂದಿದ್ದೇನೆ. ನೀನು

ಕೊಟ್ಟ ಕಹಿ ಪದಾರ್ಥವನ್ನು ತಿನ್ನದಿರುವುದು ಹೇಗೆ" ಎಂದನು. ಈ ಉದಾಹರಣೆಯಿಂದ ಗ್ರಂಥಕರ್ತನು ಪ್ರೇಮದ ಮೂಲಕ ವಸ್ತುಗಳ ಗುಣ ಹೇಗೆ ಮಾರ್ಪಡುತ್ತದೆಂದು ತಿಳಿಸಿ, ಕಹಿ ಸೀಯಾಗುವುದೂ, ತಾಮ್ರ ಹೊನ್ನಾಗುವುದೂ, ದೊರೆ (ಪ್ರಣಯಿಗೆ) ತೊತ್ತಾಗುವುದೂ ಈ ಪ್ರೇಮದಿಂದಲೇ ಎಂಬುದನ್ನು ತೋರಿಸಿದ್ದಾನೆ.

ದೇವರು ನಿಷ್ಕಪಟ ಪ್ರೇಮವನ್ನು ಮೆಚ್ಚುತ್ತಾನೆಯೇ ಹೊರತು ಬರಿಯ ಕುರುಡು ಕರ್ಮವನ್ನಲ್ಲ. ಮೋಸೆಸ್ ಪ್ರಾರ್ಥನೆಗೂ ದೇವರೊಡನೆ ಮಾತನಾಡುವುದಕ್ಕೂ ತನ್ನ ಮಲೆಯ ಕಡೆಗೆ ಹೋಗುತ್ತಿದ್ದಾಗ ದಾರಿಯಲ್ಲಿ ಒಮ್ಮೆ ಒಬ್ಬ ಕುರುಬರ ಹುಡುಗನನ್ನು ಕಂಡನು. ಆ ಹುಡುಗನು ದೇವರನ್ನು ಕುರಿತು "ಓ ಒಡೆಯ ನೀನೆಲ್ಲಿದ್ದೀಯೆ? ನಾನು ನಿನ್ನ ಸೇವೆ ಮಾಡಬೇಕು, ನಿನ್ನ ಕೆರ ಹೊಲಿಯಬೇಕು, ನಿನ್ನ ತಲೆ ಬಾಚಿ ಹೇನು ತೆಗೆಯಬೇಕು, ನಿನ್ನ ಬಟ್ಟೆ ಒಗೆಯಬೇಕು, ನಿನಗೆ ಹಾಲು ತರಬೇಕು, ನಿನ್ನ ಕೈ ಮುತ್ತಿಡಬೇಕು, ನಿನ್ನ ಕಾಲು ನೀವಬೇಕು, ನಿನ್ನ ಮನೆ ಗುಡಿಸಬೇಕು, ನನ್ನ ಕುರಿಯನ್ನೆಲ್ಲ ನಿನಗೆ ಬಲಿ ಕೊಡಬೇಕು" ಎಂದು ಇದೇ ಮೊದಲಾಗಿ ಅಜ್ಞನಂತೆ ಒದರುತ್ತಿದ್ದನು. ಇದನ್ನು ಕಂಡು ಮೋಸೆಸ್ "ಯಾರನ್ನು ಕುರಿತು ಹೀಗೆ ಹೇಳುತ್ತಿದ್ದೀಯೆ" ಎಂದು ಕೇಳಲು, ಹುಡುಗನು "ಸ್ವರ್ಗಮರ್ತ್ಯಗಳನ್ನು ಸೃಷ್ಟಿಸಿದವನನ್ನು" ಎಂದನು. ಮೋಸೆಸ್ ಅದನ್ನು ಕೇಳಿ ಕೆರಳಿ ಅವನನ್ನು ಕಾಫರನೆಂದು ಬಯ್ದು, ತನ್ನ ಪ್ರಾರ್ಥನೆಯ ಸ್ಥಳಕ್ಕೆ ಹೊರಟು ಹೋದನು. ಅಲ್ಲಿ ದೇವರು ಅವನನ್ನು ಕುರಿತು "ನನ್ನ ಸೇವಕನನ್ನು ನನ್ನಿಂದ ನೀನು ಅಗಲಿಸಿಬಿಟ್ಟೆ. ನನ್ನಲ್ಲಿ ಪ್ರೀತಿಯುಳ್ಳವರನ್ನು ನನಗೆ ಬೆಸೆಯುವುದಕ್ಕಲ್ಲದೆ ನನ್ನಿಂದ ಬಿಚ್ಚುವುದಕ್ಕಲ್ಲ, ನಿನ್ನನ್ನು ಕಳುಹಿದ್ದು. ನನ್ನಿಂದ ನನ್ನವರನ್ನು ಅಗಲಿಸಬೇಡ. ಅಗಲಿಕೆಯುಂಟುಮಾಡುವುದು ಮಹಾ ಪಾಪ. ಪ್ರತಿಯೊಬ್ಬನಿಗೂ ಅವನವನಿಗೆ ತಕ್ಕಂತೆ ಉಪಾಸನೆಯ ಮಾರ್ಗವನ್ನು ನಾನು ತೋರಿಸಿದ್ದೇನೆ. ನಿನಗೆ ಸವಿಜೇನಾದದ್ದು ಮತ್ತೊಬ್ಬನಿಗೆ ನಂಜಾಗಿರಬಹುದು. ನಾನು ಹೊರಗಿನ ನುಡಿಯನ್ನು ಕೇಳುವುದಿಲ್ಲ. ಹೃದಯದ ಒಳಗನ್ನು ನೋಡುತ್ತೇನೆ. ನನ್ನ ಭಕ್ತರ

ಪ್ರಾರ್ಥನೆಯಿಂದ ಲಾಭ ಪಡೆಯಬೇಕೆಂಬ ಆಸೆ ನನಗಿಲ್ಲ. ಅವರಿಗೆ ಅನುಗ್ರಹ ಕರುಣಿಸುವುದೇ ನನ್ನ ಆಶಯ. ಹಿಂದುಗಳು ತಮಗೆ ತೋರಿದ ರೀತಿಯಲ್ಲಿ, ಸಿಂಧಿಗಳು ತಮಗೆ ತೋರಿದ ರೀತಿಯಲ್ಲಿ, ಹೀಗೆ ಒಬ್ಬೊಬ್ಬರೂ ತಮತಮಗೆ ತೋರಿದ ದಾರಿಯಲ್ಲಿ ನನ್ನನ್ನು ಪ್ರಾರ್ಥಿಸುತ್ತಾರೆ. ಅವರ ಸ್ತೋತ್ರಕ್ಕೆ ಮೇಲಾದವನು ನಾನು. ಅವರ ಹೃದಯದ ಒಳಗನ್ನು ಮಾತ್ರ ನಾನು ನೋಡುತ್ತೇನೆ. ನೀನು ಅವರ ಹೊರನುಡಿ ಕೇಳುತ್ತೀಯೆ. ಪ್ರೀತಿಯ ಬೆಳಕು ಉರಿಯುತ್ತಿರುವ ಹೃದಯ ನನಗೆ ಬೇಕು. ಪ್ರೇಮ ತುಂಬಿರಲು ರೂಪ ಗಣ್ಯವಲ್ಲ. ಓ ಮೋಸೆಸ್! ಹೊರಗಿನ ವೇಷ ಮೆಚ್ಚುವವರೇ ಬೇರೆ. ಒಳಗೆ ನನಗಾಗಿ ಕುದಿಯುವವರೇ ಬೇರೆ. ಕಾಬದಲ್ಲಿ 'ಕಿಬ್ಲ' ಇಲ್ಲ (ಪ್ರಾರ್ಥನ ಮಂದಿರದಲ್ಲಿ ಯಾವ ಕಡೆ ತಿರುಗಿಕೊಳ್ಳಬೇಕು ಎಂಬ ನಿಯಮವಿಲ್ಲ)" ಎಂದನು. ಇದನ್ನೇ ಪೈಗಂಬರನ ಜೀವನದ ಒಂದು ಸಂಗತಿಯಲ್ಲಿ ಕಾಣಬಹುದು. ಒಮ್ಮೆ ಅವನ ಹೆಂಡತಿ ಆಯಿಷ ಅವನನ್ನು "ಸ್ಥಳದ ಶುದ್ಧಾಶುದ್ಧತೆಯನ್ನೂ ನೋಡದೆ ಸಿಕ್ಕಿದೆಡೆಯಲ್ಲಿ ಏಕೆ ಪ್ರಾರ್ಥನೆ ಮಾಡುತ್ತೀಯೆ" ಎಂದು ಕೇಳಲು, ಮಹಮ್ಮದ್ "ನನ್ನ ಪ್ರಾರ್ಥನಾಸ್ಥಳವನ್ನು ದೇವರೇ ಶುದ್ಧಮಾಡಿ ಪವಿತ್ರವಾಗಿಡುತ್ತಾನೆ" ಎಂದನಂತೆ.

ಪ್ರತಿಯೊಬ್ಬರ ಗುರಿ ಒಂದೇ ಆಗಿದ್ದರೂ, ದಾರಿ ಬೇರೆ ಬೇರೆಯಾಗಿರುವುದರಿಂದ ಒಬ್ಬರೊಡನೊಬ್ಬರು ಹೋರಾಡುತ್ತಾರೆ ಎಂಬುದನ್ನು ಒಂದು ಸಣ್ಣ ದೃಷ್ಟಾಂತದ ಮೂಲಕ ತಿಳಿಸಿದೆ. ಒಬ್ಬ ತುರ್ಕಿಯವನು, ಒಬ್ಬ ಅರೇಬಿಯದವನು, ಒಬ್ಬ ಇರಾನಿನವನು, ಒಬ್ಬ ರೋಮಿನವನು, ಈ ನಾಲ್ವರಿಗೂ ಒಂದು ದಿರ್‌ಹಮ್ ನಾಣ್ಯ ಸಿಕ್ಕಿತು. ಒಬ್ಬರ ಭಾಷೆ ಒಬ್ಬರಿಗೆ ತಿಳಿಯದೆ ಆ ನಾಣ್ಯವನ್ನು ವ್ಯಯಮಾಡುವ ವಿಷಯದಲ್ಲಿ ಜಗಳ ಹುಟ್ಟಿತು. ಇರಾನಿನವನು ಅಂಗೂರ್ ಬೇಕೆಂದೂ, ಅರೇಬಿಯದವನು ಇನಬ್ ಬೇಕೆಂದೂ, ತುರ್ಕಿಯವನು ಉಸ್ಸುಮ್ ಬೇಕೆಂದೂ, ರೋಮಿನವನು ಇಸ್ತಿಫ್ಹಿಲ್ ಬೇಕೆಂದೂ ಕಾದಾಡುತ್ತಿರಲು, ಈ ನಾಲ್ಕು ನುಡಿಗಳನ್ನೂ ಬಲ್ಲ ದಾರಿಗನೊಬ್ಬನು ತನ್ನ ಕೈಗೆ ನಾಣ್ಯ

ತೆಗೆದುಕೊಂಡು, ದ್ರಾಕ್ಷಿಯನ್ನು ತಂದು ತೋರಿಸಲು ಆಗ ಅವರು ಪ್ರತಿಯೊಬ್ಬರಿಗೂ ಬೇಕಾಗಿದ್ದದ್ದು ದ್ರಾಕ್ಷಿಯೇ ಆಗಿದ್ದರೂ ಒಬ್ಬರ ನುಡಿ ಒಬ್ಬರಿಗೆ ತಿಳಿಯದೆ ಹೋಗಿ ಹೋರಾಡಿದ್ದು ತಿಳಿಯಿತು.

ಮಸ್ನವಿಯು ಹಲವೆಡೆಗಳಲ್ಲಿ ಪರಿಣಾಮ ವಾದದ ಪ್ರಸ್ತಾಪವಿದೆ. ಖನಿಜ, ಸಸ್ಯ, ಮೃಗಗಳ ಅವಸ್ಥೆಯಿಂದ ಕ್ರಮೇಣ ದಾಟಿ ಮನುಷ್ಯನು ಪರಿಣಾಮ ಹೊಂದುತ್ತಾನೆ. ಈ ಮಾನವ ಅವಸ್ಥೆಗೆ ಮೀರಿದ ಅವಸ್ಥೆಗಳೂ ಉಂಟು. ಒಂದೆಡೆಯಲ್ಲಿ ಮನುಷ್ಯನಾಗಿ ಸತ್ತು ದಿವ್ಯಪುರುಷನಾಗಿ ಹುಟ್ಟುತ್ತಾನೆ. ಕಾಲಕ್ರಮೇಣ ಅದನ್ನೂ ಮೀರಿ ತನ್ನ ಮೂಲದಲ್ಲಿ ಐಕ್ಯನಾಗಿಬಿಡುತ್ತಾನೆ" ಎಂದು ಹೇಳಿದ್ದಾನೆ.

ಸಾದುದ್ದೀನ್ ಮಹಮ್ಮದ್ ಷಬಿಸ್ತರಿ (ಕ್ರಿ.ಶ. ೧೨೫೦-೧೩೨೦). ಇವನು ಇರಾನಿನ ತಬ್‌ರೀಸ್ಟ್ ಬಳಿಯ ಷಬಿಸ್ತರ್ ಗ್ರಾಮದವನು. ಜಲಾಲುದ್ದೀನನ ಕಿರಿಯ ಸಮಕಾಲಿಕನು. ಇವನ ಮುಖ್ಯ ಗ್ರಂಥ ಸಾವಿರ ಶ್ಲೋಕಗಳುಳ್ಳ "ಗುಲ್‌ಷನ್ ಎರಾಸ್ಟ್" ಎಂಬುದು. ಜಲಾಲುದ್ದೀನನ ಮಸ್ನವಿಗೆ ಇದು ಎರಡನೆಯದಾದ ಪ್ರಮಾಣಗ್ರಂಥ ಎನ್ನಬಹುದು. ಈ ಗ್ರಂಥಕ್ಕೆ ಷಮ್‌ಸುದ್ದೀನನ ಮಗ ಷೇಖ್‌ಮಹಮ್ಮದನು ವ್ಯಾಖ್ಯಾನ ಬರೆದಿದ್ದಾನೆ. ಈ ಗ್ರಂಥ ಪ್ರಶ್ನೋತ್ತರಗಳನ್ನೊಳಗೊಂಡು ಸಂವಾದ ರೂಪದಲ್ಲಿದೆ. ಇದರಲ್ಲಿಯ ಕೆಲವು ವಿಷಯಗಳನ್ನು ಇಲ್ಲಿ ಪ್ರಶ್ನೋತ್ತರ ರೂಪದಲ್ಲಿಯೇ ಸಂಗ್ರಹಿಸುತ್ತದೆ.

**ಪ್ರ:** ತಫ್ಫುಕ್ಕುರ್ (ಧ್ಯಾನ ಅಥವಾ ಚಿಂತನೆ) ಎಂದರೆ ಏನು?

**ಉ:** ಅಸತ್ತಿನಿಂದ ಅಥವಾ ನಿಜವಲ್ಲದ್ದರಿಂದ ಸತ್ತಿಗೆ ಅಥವಾ ನಿಜವಾದದ್ದಕ್ಕೆ ಹೋಗಿ ಮುಟ್ಟುವುದು. ವಿಶಿಷ್ಟದಲ್ಲಿ ವಿಶ್ವಸತ್ಯ ಕಾಣುವುದು.

**ಪ್ರ:** ಸರಿಯಾದ ಭಾವನೆ ಯಾವುದು; ತಪ್ಪಾದ ಭಾವನೆ ಯಾವುದು?

**ಉ:** ದೇವರ ಗುಣಗಳನ್ನೂ ನಾಮಗಳನ್ನೂ ಧ್ಯಾನಿಸುವುದೇ ಸರಿಯಾದ ಭಾವನೆ. ಹಾಗಲ್ಲದೆ ಅವನ ಮೂಲವನ್ನು ವಸ್ತುತಃ ಕಂಡರಿಯಲು ಪ್ರಯತ್ನಿಸುವುದೇ ತಪ್ಪು ಭಾವನೆ. ಸೂರ್ಯನನ್ನು

ಕಣ್ಣು ಬಿಟ್ಟು ನೇರವಾಗಿ ನೋಡಿದರೆ ಕಣ್ಣು ಕುಕ್ಕಿ ಮಂಕಾಗುವುದು. ಆದರೆ, ಅದನ್ನೇ ನೀರಿನಲ್ಲಿ ನೆಳಲಾಗಿ ನೋಡಿದರೆ ತೀಕ್ಷ್ಣತೆ ಕಡಮೆ ಯಾಗಿ ಅದರ ಸ್ವರೂಪ ತಿಳಿದುಬರುತ್ತದೆ. ಹೀಗೆಯೇ ಪರವಸ್ತು ವನ್ನೂ ವಿಶ್ವವೆಂಬ ಕನ್ನಡಿಯಲ್ಲಿ ನೋಡಿ ತಿಳಿಯಬಹುದು.

**ಪ್ರ:** 'ನಾನು' ಎಂದರೇನು?

**ಉ:** ಪರಮ ಅಸ್ತಿತ್ವವನ್ನು ತಿಳಿಸಲು ಮನುಷ್ಯನು 'ನಾನು' ಎಂಬುದನ್ನು ಉಪಯೋಗಿಸುತ್ತಾನೆ. 'ನಾನು' 'ನೀನು' ಎಂಬ ವೆಲ್ಲ ಆ ಅಸ್ತಿತ್ವದ ವಿಕೃತಿಗಳೆ. 'ನಾನು' 'ನೀನು' ಎಂಬವನ್ನು ಳಿದಮೇಲೆ ಮಸೀದಿ, ಸಿನಗಾಗ್, ದೇವಾಲಯ ಎಲ್ಲಾ ಒಂದೆ.

**ಪ್ರ:** ಸತ್ಯವನ್ನರಸುವ ದಾರಿಗನು ಹೇಗಿರಬೇಕು? ಪರಿಪೂರ್ಣ ಮನುಷ್ಯನು ಯಾರು?

**ಉ:** ದಾರಿಗನು ಆತುರದಿಂದ ದಾರಿ ನಡೆದು, ಹೊಗೆ ತೆಗೆದ ಬೆಂಕಿಯಂತೆ ಪರಿಶುದ್ಧನಾಗಿರಬೇಕು. ಕ್ರಮೇಣ ಗೌಣದಿಂದ ಮುಖ್ಯಕ್ಕೆ ಹೋಗಬೇಕು. ಮನುಷ್ಯನು ಮೊದಲು ನಿರ್ಜೀವವಾಗಿದ್ದು, ತರು ವಾಯ ಸಚೇತನನಾಗಿ, ತರುವಾಯ ಸ್ವೇಚ್ಛನಾಗಿ, ಕ್ರಮೇಣ ರಾಗ ದ್ವೇಷಗಳಿಗೆ ಸಿಕ್ಕಿದನು. ಇದು ಅವನ ಬೀಳಿನ ತತ್ತ್ವಳ. ಇದೇ ಅವಸ್ಥೆ ಯಲ್ಲಿದ್ದರೆ ಅವನು ಪಶುಗಿಂತ ಕಡೆ. ಮತ್ತೆ ತನ್ನ ಪೂರ್ವಸ್ವರೂಪ ವನ್ನು ಅರಿತು ಆತ್ಮಬಲದಿಂದ ಮೇಲೇರಿ ನಡೆದರೆ ಪರಿಪೂರ್ಣನಾಗಿ ತನ್ನ ಮೂಲವಾದ ಪರವಸ್ತುವಿನೊಡನೆ ಐಕ್ಯನಾಗುತ್ತಾನೆ.

**ಪ್ರ:** ಏಕತೆಯ ರಹಸ್ಯವನ್ನು ಸಾಧಿಸುವವರು ಯಾರು?

**ಉ:** ಆಧ್ಯಾತ್ಮ ಸಾಧನೆಯ ಬೇರೆ ಬೇರೆ ಮೆಟ್ಟಲುಗಳಲ್ಲಿ ತಳುವಿ ತಂಗದೆ ಕೊನೆಯ ಮೆಟ್ಟಲಾದ ರಹಸ್ಯಭೇದನವನ್ನು ಮುಟ್ಟುವ ವರೆಗೂ ಒಂದೇ ಸಮನೆ ನಡೆಯುವವನೇ ಗುರಿಮುಟ್ಟಿ ಗುಟ್ಟನ್ನರಿಯು ವವನು. ಪರವಸ್ತುವಿನ ಹೊರತು ಮತ್ತೊಂದನ್ನೂ ಅರಿಯದೆ, ಒಪ್ಪದೆ, ಪರವಸ್ತುವಿನ ವ್ಯಕ್ತಿತ್ವದಲ್ಲಿ ಸಮಸ್ತವನ್ನೂ ಕಾಣುವವನೇ ರಹಸ್ಯಭೇದಿ.

**ಪ್ರ:** ಜ್ಞೇಯವೂ ಜ್ಞಾತೃವೂ ಒಬ್ಬನೇ ಆದರೆ ಈ ಹಿಡಿಮಣ್ಣಿನ ಮನುಷ್ಯನು ಬಯಸುವದೇನನ್ನು?

ಉ: ಪರವಸ್ತುವನ್ನುಳಿದು ಜ್ಞೇಯವೂ ಇಲ್ಲ ಜ್ಞಾತೃವೂ ಇಲ್ಲ. ಹಿಡಿಮಣ್ಣಿನ ಮನುಷ್ಯನು ಸೂರ್ಯಜ್ಯೋತಿಯಿಂದ ಬೆಳಕು ಪಡೆಯ ಬೇಕು. ಈ ದಿನ (ಈ ಜನ್ಮದಲ್ಲಿ) ಪರವಸ್ತುವಿನ ಗುಣಗಳನ್ನು ಅರಿತರೆ ನಾಳೆ (ಪರಜನ್ಮದಲ್ಲಿ) ಅದರ ಮೂಲಸ್ವರೂಪವನ್ನು ಅರಿಯಬಹುದು. ಬುದ್ಧಿಮಾತ್ರವಲ್ಲದೆ ಆಧ್ಯಾತ್ಮರಹಸ್ಯವನ್ನು ಭೇದಿಸುವ ಶಕ್ತಿಯೂ ಒಂದುಂಟು.

ಪ್ರ: ಸತ್ಯ ಅಸತ್ಯಗಳ ವಿವೇಚನೆ ಹೇಗೆ? 'ಅನುಲ್‌ಹಕ್' (ನಾನೇ ಸತ್ಯ) ಎನ್ನುವುದು ಯಾವುದು?

ಉ: ಪರಸತ್ಯದ ವ್ಯಕ್ತಸ್ವರೂಪವೇ ಅನುಲ್‌ಹಕ್. ಪರಿಪೂರ್ಣನಲ್ಲದವನು ಯಾರೂ ಅನುಲ್‌ಹಕ್ ಎನ್ನಲಾರ. ಅಣುರೇಣುಗಳೂ ಮರಗಳೂ ದೈವಪ್ರೇಮದಿಂದ ಆವಿಷ್ಟವಾಗಿ ಅನುಲ್‌ಹಕ್ (ನಾನೇ ಸತ್ಯ, ನಾನೇ ದೇವರು) ಎನ್ನಬಹುದು. ಹಾಗೆಯೇ ಪರಿಪೂರ್ಣ ಮನುಷ್ಯನೂ ಅನುಲ್‌ಹಕ್ ಎನ್ನಬಹುದು. ನಾನು, ನೀನು, ಅವನು ಎಂಬ ಭಾವನೆಗಳೆಲ್ಲ ಅಳಿದು ಒಂದೇ ಪರಸತ್ಯವಿರುತ್ತದೆ.

ಪ್ರ: ಮನುಷ್ಯನನ್ನು ವಾಸೆಲ್ (ಸಂಯುಕ್ತ) ಎಂದು ಏಕೆ ಕರೆಯುತ್ತದೆ? ಅವನು ಹೇಗೆ ದಾರಿ ನಡೆದು ಸತ್ಯವನ್ನು ಮುಟ್ಟಬಹುದು?

ಉ: ಪ್ರಾಪಂಚಿಕ ವಿಷಯಗಳ ನಿಸ್ಸಂಗವೇ ದೇವರೊಡನೆ ಸಂಗ. ಸ್ವಾರ್ಥದ ಪರಾಙ್ಮುಖತೆಯೇ (ಹಗೆಯೇ) ದೇವರ ಅಭಿಮುಖತೆ (ಕೆಳೆ). ಅಸ್ತಿತ್ವದ ಗೌಣಾಂಶಗಳೂ ಉಪಾಧಿಗಳೂ ಕಳೆದಮೇಲೆ ಮುಖ್ಯ ಅಥವಾ ಮೂಲ ಮಾತ್ರ ಉಳಿಯುತ್ತದೆ. ಇಹ ಪರಲೋಕಗಳೆರಡರ ಅಸ್ತಿತ್ವವೂ ಅಶಾಶ್ವತವೆ. ಸ್ವರ್ಗ ಕೂಡ ಕೊನೆಯಲ್ಲಿ ಅಳಿದುಹೋಗಿ ಸತ್ಯವೊಂದೇ ಉಳಿಯುತ್ತದೆ. ಈ ಪ್ರಪಂಚದ ಕನಸು ಮುಗಿಯುವುದೇ ಪರಮಾತ್ಮನೊಡನೆ ಐಕ್ಯ.

ಪ್ರ: ದೂರ, ಹತ್ತಿರ ಎಂದರೇನು?

ಉ: ದೇವರ ಬೆಳಕು ತನ್ನ ಮೇಲೆ ಬೆಳಗುವುದೇ ಹತ್ತಿರ. ಆ ಬೆಳಕಿನಿಂದ ಹೊರಗಿರುವುದೇ ದೂರ.

**ಪ್ರ:** ನುಡಿಯೇ ಕರೆಯಾದ ಕಡಲು ಯಾವುದು? ಅದರ ಆಳದ ಮುತ್ತು ಯಾವುದು?

**ಉ:** ಜೀವನ ಅಥವಾ ಅಸ್ತಿತ್ವವೇ ಆ ಕಡಲು. ನುಡಿ ಅದರ ಕರೆ. ಅಕ್ಷರ ಚಿಪ್ಪು. ಅರಿವು ಮುತ್ತು. ನಿಜವಾದ ಅರಿವುಳ್ಳವರು ಪ್ರಪಂಚವನ್ನು ಪ್ರೀತಿಸುವುದಿಲ್ಲ. ಅವರ ಹೃದಯ ಸ್ವಚ್ಛವಾಗಿದ್ದು, ಅದರಲ್ಲಿ ಸತ್ಯವನ್ನು ತಿಳಿಯಬರುತ್ತದೆ.

**ಪ್ರ:** ಪೂರ್ಣಕ್ಕಿಂತ ಹೆಚ್ಚಿದ ಭಾಗ ಯಾವುದು?

**ಉ:** ಸಮಗ್ರ ದೃಶ್ಯಪ್ರಪಂಚವನ್ನು ಮೀರಿಸಿರುವುದು ಅದರ ಭಾಗವಾದ ಪರವಸ್ತು. ಸೃಷ್ಟಿಬಹುತ್ವ ಆ ಪರಮ ಏಕವನ್ನು ಅಡಗಿಸಿಕೊಂಡಿದೆ.

**ಪ್ರ:** ಶಾಶ್ವತವೂ ಸೃಷ್ಟಿಯೂ ಹೇಗೆ ಬೇರೆಯಾಯಿತು? ಒಂದು ದೇವರು, ಮತ್ತೊಂದು ಪ್ರಪಂಚ, ಹೇಗೆ ಆಯಿತು?

**ಉ:** ಅವು ಬೇರೆಯಾಗಿಲ್ಲ. ದೇವರು ಎಲ್ಲದರಲ್ಲೂ ಇದ್ದಾನೆ. ದ್ವೈತಭಾವ ಬರಿಯ ಮಾಯೆ. ಪ್ರಪಂಚವೆಂಬುದು ಒಂದು ಕಾಲ್ಪನಿಕ ಪಕ್ಷಿ ಇದ್ದಂತೆ. ಅಸ್ತಿತ್ವವಿಲ್ಲದ ಹೆಸರುಮಾತ್ರವಿರುವ ಒಂದು ಪಕ್ಷಿ.

**ಪ್ರ:** ಕಳ್ಳು, ಕುಡಿತ, ಕಳ್ಳಂಗಡಿಗಳ ವಿಷಯ ಏನು?

**ಉ:** ದೈವಭಕ್ತಿಯ ಕಳ್ಳು ಕುಡಿದವನು ಶುದ್ಧ ಚಾರಿತ್ರನಿಗಿಂತ ಮೇಲು. ವಿಶ್ವವೇ ಒಂದು ಕಳ್ಳಂಗಡಿ. ಪ್ರತಿಯೊಂದು ಅಣುವಿನ ಹೃದಯವೂ ಒಂದೊಂದು ಕಳ್ಳುಬಟ್ಟಲು. ಭೂಮಿ, ಸ್ವರ್ಗ, ದೇವತೆ, ಆತ್ಮ—ಸಮಸ್ತವೂ ಈ ಕಳ್ಳು ಕುಡಿದು ಮೈಮರೆತಿವೆ. ಈ ಕಳ್ಳು ಕುಡಿದ ಮೇಲೆ ಅಳಿವು, ಉಳಿವು, ಭಕ್ತಿ ಕರ್ಮ ಯಾವುದೂ ಇಲ್ಲ. ಈ ಕಳ್ಳಂಗಡಿಯಲ್ಲಿ ಕಾಫಿರ್, ಮುಸ್ಲಿಂ ಎಂಬ ಭೇದವಿಲ್ಲ.

ಇಬ್ರಾಹಿಮ್ ಜೀಲಿಯ ಮಗ ಅಬ್ದುಲ್ ಕರೀಮ್: (ಕ್ರಿ. ಶ. ೧೩೬೫-೧೪೦೬/೧೭). ಇವನು ಉತ್ತರ ಇರಾನಿನವನು. ಇಂಡಿಯದಲ್ಲಿ ಕೆಲವು ಕಾಲ ಇದ್ದದ್ದಾಗಿ ಬರೆಯುತ್ತಾನೆ. ಯಮನ್, ಅರೇಬಿಯ ಪ್ರಾಂತಗಳಲ್ಲೂ ಇದ್ದಿರಬೇಕು. ಸೂಫಿ ಧರ್ಮದ ಮೇಲೆ ಸುಮಾರು ೨೦ ಗ್ರಂಥಗಳನ್ನು ಇವನು ಬರೆದಿದ್ದಂತೆ ತಿಳಿಯುತ್ತದೆ.

ನಮಗೆ ಉಳಿದುಬಂದಿರುವುದರಲ್ಲಿ 'ಇನ್‌ಸಾನ್ ಎಕಾಮಿಲ್' ಅಥವಾ ಪರಿಪೂರ್ಣ ಮಾನವ ಎಂಬುದು ಮುಖ್ಯವಾದದ್ದು.

ಗ್ರಂಥ ವಿಷಯದ ಸಂಗ್ರಹ: ಪರವಸ್ತು ಒಂದೆ. ಅದು ಕೇವಲ ಭಾವಮಯ. ಅದರ ಹೊರ ಮುಖವೇ ಪ್ರಪಂಚ. ದ್ವೈತಭಾವದಲ್ಲಿ ಅದು ಸೃಷ್ಟಿ ಮತ್ತು ಸೃಷ್ಟಿಕರ್ತ; ವ್ಯಕ್ತ ಮತ್ತು ಅವ್ಯಕ್ತ ಭಗವಂತನು ನಾನಾ ಭಾವಗಳಲ್ಲಿ ನಾನಾ ಹೆಸರುಗಳಿಂದ ವ್ಯವಹಾರ ಹೊಂದಿದ್ದಾನೆ. ಭಾವ ಮತ್ತು ಅಭಾವ, ಭಗವಂತ ಮತ್ತು ವಿಶ್ವ—ಇವುಗಳು ಭಿನ್ನ ಭಾವಗಳಲ್ಲ. ನೀರು ಮತ್ತು ನೀರ್ಗಲ್ಲು ಇದ್ದಂತೆ. ಭಗವಂತನ ನಾನಾ ಗುಣಗಳ ಮತ್ತು ನಾಮಗಳ ಸಮುದಾಯವೇ ವ್ಯಕ್ತಪ್ರಪಂಚ. ಈ ರೂಪ, ಗುಣ, ಭಾವಗಳು ಕಿರಿಯಳತೆಯಲ್ಲಿ ಮನುಷ್ಯನಲ್ಲಿ ಅಡಗಿ ಮೂಡಿರುತ್ತವೆ. ಭಗವಂತನ ಮುಖ್ಯ ಗುಣಗಳೆಂದರೆ—ಜಮಾಲ್ (ಸೌಂದರ್ಯ), ಜಲಾಲ್ (ಶಕ್ತಿ, ಮಹತ್ವ), ಕಮಾಲ್ (ಪರಿಪೂರ್ಣತೆ), ಹಯಾತ್ (ಜೀವನ), ಇಲ್‌ಮ್ (ಜ್ಞಾನ), ಇರಾದಹ್ (ಇಚ್ಛೆ), ಕುದ್‌ರತ್ (ಶಕ್ತಿ), ಕಲಾಮ್ (ವಾಕ್), ಸಮಿಾ (ಮಹಚ್ಛ್ರವಣ), ಬಸೀರ್ (ಮಹದ್ ವೀಕ್ಷಣ). ಪ್ರತಿಯೊಂದು ದಿವ್ಯ ನಾಮವೂ ಮನುಷ್ಯ ಹೃದಯವನ್ನು ಬೆಳಗುತ್ತದೆ. ಇದರಿಂದ ಆ ನಾಮಕ್ಕೆ ತಕ್ಕ ಮನುಷ್ಯಭಾವ ಪರಿಶುದ್ಧವಾಗುತ್ತದೆ. ಮೇಲಿನ ದಶೆಗಳಲ್ಲಿ ಗುಣಗಳು ಹೃದಯವನ್ನು ಬೆಳಗಿ ಪರಿಶುದ್ಧಮಾಡುತ್ತವೆ. ಪರಿಶುದ್ಧ ಮನುಷ್ಯನು ಭಗವಂತನ ಪಡಿಯಚ್ಚಿದ್ದಂತೆ; ಭಗವದ್ ಗುಣಗಳನ್ನು ಪ್ರತಿಬಿಂಬಿಸುವ ಕನ್ನಡಿಯಿದ್ದಂತೆ; ಸೃಷ್ಟಿಗೂ ಸೃಷ್ಟಿಕರ್ತನಿಗೂ ಮಧ್ಯಸ್ಥನಿದ್ದಂತೆ. ತಾನು ದಿವ್ಯಜ್ಯೋತಿಯಿಂದ ಬೆಳಗಿ, ಪ್ರಪಂಚವನ್ನು ತಾನು ಬೆಳಗುತ್ತಾನೆ. ಪರಿಪೂರ್ಣ ಮನುಷ್ಯನು ಪ್ರಪಂಚದ ಉಸಿರು, ಆತ್ಮ. ತಾನು ಪ್ರಕಟಮಾಡಿಕೊಳ್ಳಬೇಕಾಗಿಲ್ಲ. ಅವನು ಇರುವದೇ ಪ್ರಪಂಚದಲ್ಲಿ ಧರ್ಮವನ್ನೂ ಸಾಮರಸ್ಯವನ್ನೂ ತರುತ್ತದೆ. ಅಂಥ ಮನುಷ್ಯನು ಪ್ರಪಂಚ ಸುತ್ತುವ ಅಚ್ಚಿದ್ದಂತೆ.

ದೇವರ ಸಿಂಹಾಸನವನ್ನು ಎಂಟು ದೇವದೂತರು ಹೊತ್ತಿದ್ದಾರಂತೆ. ಹೀಗೆಯೇ ಮಾನವಹೃದಯಸಿಂಹಾಸನವನ್ನು ಎಂಟು ಶಕ್ತಿ

ಗಳು ಹೊತ್ತಿವೆ. ಅಕ್‌ಲ್ (ಬುದ್ಧಿ), ವಹ್‌ಮ್ (ರಾಗ), ಫ್ಲಿಕ್‌ರ್ (ಚಿಂತನ), ಖಿಯಾಲ್ (ಭಾವನ), ಮುಸ್ಸವೆರಹ್ (ರೂಪಗ್ರಹಣ), ಹಾಫ್ಲಿಸ್ಸಹ್ (ಜ್ಞಾಪಕ), ಸ್ಸಾಕೆರಹ್ (ಸ್ಮರಣ), ನಫ್ಸ್ (ಆತ್ಮ). ಮನುಷ್ಯನ ಹೃದಯ ದೇವರ ಸಿಂಹಾಸನವಿದ್ದಂತೆ; ಕಾಬ (ಗುಡಿ) ಇದ್ದಂತೆ; ದೇವರು ಪ್ರತಿಬಿಂಬಿಸುವ ಕನ್ನಡಿಯಿದ್ದಂತೆ. ಈ ಕನ್ನಡಿಯ ಒಂದು ಮುಖ ದೇವರಿಗೆ ಎದುರಾಗಿ ಅವನ ಕಳೆಯನ್ನು ಪ್ರತಿಬಿಂಬಿಸುತ್ತದೆ. ಆದರ ಹಿಂಭಾಗ ಬೆಳಕಿಗೆ ಮರೆಯಾಗಿರುತ್ತದೆ. ಆದರೆ, ಮನುಷ್ಯನ ಪರಿಪೂರ್ಣಾವಸ್ಥೆಯಲ್ಲಿ ಹಿಮ್ಮುಖ, ಮುಮ್ಮುಖಗಳೆರಡೂ ಒಂದೇ ಸಮನೆ ಬೆಳಗಿ ದೇವಕಳೆಯನ್ನು ಪ್ರತಿಬಿಂಬಿಸುತ್ತವೆ.

ಧರ್ಮ ಮತ್ತು ಉಪಾಸನೆಯ ವಿಷಯದಲ್ಲಿ ಅಬ್ದುಲ್‌ಕರೀಮ್ ಜೀಲಿ ಹಲವು ಮತಗಳನ್ನು ಹೇಳಿದ್ದಾನೆ. ವಿಗ್ರಹಪೂಜೆ, ಭೂತಪೂಜೆ, ಭಾವಪೂಜೆ—ಮೊದಲಾದುವನ್ನೂ, ದ್ವೈತಿಗಳು, ಅಗ್ನಿಪೂಜಕರು, ಪ್ರಕೃತಿ ಉಪಾಸಕರು, ಬ್ರಾಹ್ಮಣರು, ಯೆಹೂದ್ಯರು, ಕ್ರೈಸ್ತರು, ಮುಸ್ಲಿಮರು—ಮೊದಲಾದವರನ್ನೂ, ಕುರಿತು ಹೇಳಿದ್ದಾನೆ. ದೇವರಲ್ಲಿ ನಂಬಿಕೆಯಿಲ್ಲವೆಂದು ಹೇಳುವವರು ಕೂಡ ಯಾವುದೋ ಒಂದು ರೀತಿಯಲ್ಲಿ ಅವನನ್ನು ನಂಬಿಯೇ ಇರುತ್ತಾರೆಂದು ಅವನ ಮತ.

ನೂರುದ್ದೀನ್‌ಜಾಮಿ: (ಕ್ರಿ. ಶ. ೧೪೧೪-೧೪೯೨). ಇವನು ತನ್ನ ಕಾಲದ ಪ್ರಸಿದ್ಧ ಕವಿ, ದೇವತಾಶಾಸ್ತ್ರಜ್ಞ ಮತ್ತು ಸೂಫಿಗಳಲ್ಲಿ ಒಬ್ಬನು. ಇವನ ಪೂರ್ವಿಕರು ಇಸ್‌ಫಹಾನ್ ಬಳಿಯ ದಷ್‌ತ್‌ನಿಂದ ವಲಸೆ ಹೊರಟು ಖೊರಸ್ಸಾನಿನ ಜಾಮ್‌ನಲ್ಲಿ ನೆಲಸಿದರು. ಜಾಮಿ ವಿಪುಲವಾಗಿ ಗದ್ಯಪದ್ಯಗಳಲ್ಲಿ ನಾನಾ ವಿಷಯಗಳ ಮೇಲೆ ಬರೆದಿದ್ದಾನೆ. ಇವನ ಗ್ರಂಥಗಳಲ್ಲಿ ಮುಖ್ಯವಾದುವು—(೧) ನಫಹಾತ್‌ಉಲ್-ಉನ್‌ಸ್ ಎಂಬ ಸೂಫಿ ಸಾಧುಗಳ ಜೀವನ ಚರಿತ್ರೆ (ಇದನ್ನು ಹಲವು ಪೌರಸ್ತ್ಯ ಮತ್ತು ಪಾಶ್ಚಾತ್ಯ ವಿದ್ವಾಂಸರು ಉದ್ಧರಿಸಿದ್ದಾರೆ). (೨) ಇರಾಕಿಯ ಲಮಆತ್ ಎಂಬ ಸೂಫಿ ಗ್ರಂಥದ ಮೇಲಿನ ಅಷಾತ್‌ಉಲ್‌ಲಮಆತ್ ಎಂಬ ವ್ಯಾಖ್ಯಾನ. (೩) ಸಂಗೀತ ವಿಷಯದ ಒಂದು ಗ್ರಂಥ. (೪) ಸಾದಿಯ ಗುಲಿಸ್ತಾನ್ ಕೃತಿಯನ್ನು ಅನುಸರಿಸಿ ಬರೆದ ಬಹಾರಿ

ಸ್ತಾನ್ ಎಂಬ ಗ್ರಂಥ. (೫) ಸನಾಯಿಾಯ ಹದೀಕ ಎಂಬ ಗ್ರಂಥ ವನ್ನು ಅನುಸರಿಸಿ ಬರೆದ ಸಿಲ್‌ಫಿಲತುಸ್ಸ್ ಸ್ಸಹಬ್ ಎಂಬ ಗ್ರಂಥ. (೬) ಇಬ್‌ನ್‌ಎ ಅರಬಿಯ ಫ್ಲುಸೂಸುಲ್‌ಹಿಕಮ್ ಗ್ರಂಥದ ಲವಾಮೆ ಎಂಬ ವ್ಯಾಖ್ಯಾನ. (೭) ಸದ್ರುದ್ದೀನ್‌ಕೂನವಿಯ ನುಸೂಸ್ ಗ್ರಂಥದ ಮೇಲಿನ ನಕ್‌ದುನ್ ನುಸೂಸ್ ಎಂಬ ವ್ಯಾಖ್ಯಾನ. (೮) ಲವಾಯೆಹ್ ಎಂಬ ಗ್ರಂಥ. ಇದು ಸೂಫಿ ಧರ್ಮದ ಮೇಲಿನ ಗ್ರಂಥ. ಮೂವತ್ತು ಲವಾಯೆಹ(ಮಿಂಚು)ಗಳಾಗಿ ಭಾಗವಾಗಿದೆ.

## ವಿಷಯಸಂಗ್ರಹ

ಲಾಯೆಹ ೧: ಮನುಷ್ಯನು ಒಂದೇ ದೇವರನ್ನು ಭಕ್ತಿಯಿಂದ ಪ್ರೀತಿಸಲೆಂದು ದೇವರು ಅವನಿಗೆ ಒಂದೇ ಹೃದಯ ಕೊಟ್ಟಿದ್ದಾನೆ.

೨: ತಫ್ರಿಕ, ಅಥವಾ ವಿಕರ್ಷಣ ಎಂದರೆ ಪ್ರಪಂಚದ ಸಂಗ. ಜಮೀಯತ್ ಅಥವಾ ಸಂಚಯ ಎಂದರೆ ನಿಸ್ಸಂಗ ಮತ್ತು ದೇವಧ್ಯಾನ.

೩: ದೇವರನ್ನು ಬಿಟ್ಟು ಮತ್ತೆ ಯಾರ ಮೇಲೂ ನಮ್ಮ ದೃಷ್ಟಿ ನೆಡಬಾರದು.

೪: ದೇವರ ಹೊರತು ಉಳಿದುವೆಲ್ಲ ಅಳಿಯಬೇಕು. ಕಾಮ ಕ್ರೋಧಗಳು ನಿಷ್ಫಲವಾದುವು. ಅವುಗಳಿಂದ ಮನಸ್ಸು ಕಳಚಿ ಶಾಶ್ವತ ನಾದ ದೇವರಲ್ಲಿ ನೆಡಬೇಕು.

೫: ದೇವರು ಪರಮ ಸೌಂದರ್ಯ. ಕಣ್ಣಿಗೆ ಕಾಣುವ ನಾನಾ ರೂಪದ ಸೌಂದರ್ಯಗಳೆಲ್ಲ ಅವನ ಕೇವಲ ಸೌಂದರ್ಯದ ರಶ್ಮಿ ಯಿದ್ದಂತೆ.

೬: ಮನುಷ್ಯನು ತನ್ನ ದೇಹಕಾರಣದಿಂದ ಪಾರ್ಥಿವನೂ, ಆತ್ಮ ಕಾರಣದಿಂದ ಅಪಾರ್ಥಿವನೂ ಆಗಿದ್ದು, ಒಂದೊಂದರ ಕಡೆಗೆ ಒಲಿದ ಹಾಗೆಲ್ಲ ಪ್ರಾಪಂಚಿಕ ಅಥವಾ ಆಧ್ಯಾತ್ಮಿಕ ಮಾರ್ಗದಲ್ಲಿ ನಡೆಯು ತ್ತಾನೆ. ಜಲಾಲುದ್ದೀನನು ತನ್ನ ಮಸ್ನವಿಯಲ್ಲಿ ಹೇಳಿರುವಂತೆ "ಓ ತಮ್ಮ! ನೀನು ಭಾವನಾಮಯ. ನಿನ್ನ ಭಾವ ಗುಲಾಬಿಯಾಗಿದ್ದರೆ ನೀನು ಗುಲಾಬಿ. ಮುಳ್ಳಾಗಿದ್ದರೆ ನೀನು ಮುಳ್ಳು. ಆಗ, ನೀನು ಬೆಂಕಿಗೆ ಸೌದೆಯಾಗತಕ್ಕವನು." ಮನುಷ್ಯನು ದೇವರಲ್ಲಿ ತಲ್ಲೀನ

ನಾಗುವವರೆಗೂ ಅವನನ್ನೇ ಧ್ಯಾನಿಸಿ ಅನುಲ್‌ಹಕ್ (ನಾನೇಸತ್ಯ) ಎಂಬ ಭಾವ ಹೋಗಿ, ಹೂವುಲ್‌ಹಕ್ (ಅವನು ಸತ್ಯ) ಎಂಬ ಭಾವ ಬರಬೇಕು.

೭: ನಿನ್ನ ಹೃದಯ ದೇವಭಾವನೆಯಿಂದ ಎಂದೂ ಬರಿದಾಗಿ ಇರದಿರಲಿ. ಬರುವಾಗ, ಹೋಗುವಾಗ, ನುಡಿಯುವಾಗ, ಮಲಗುವಾಗ, ತಿನ್ನುವಾಗ, ಕೇಳುವಾಗ, ಮೂರು ಹೊತ್ತೂ ಅವನನ್ನೇ ನೆನೆ.

೮: ಕರ್ಮದಲ್ಲಿ ಮಾತ್ರವಲ್ಲದೆ ಭಾವದಲ್ಲೂ ದೇವರೊಡನೆ ಐಕ್ಯದಿಂದ ನಡೆದು "ನಾನು" ಎಂಬ ಭಾವ ಅಳಿದು, ನಿನ್ನ ಎದೆ ತುಂಬ ದೇವರು ತುಂಬಿರುವಂತೆ ಬಾಳು.

೯: ಪರಸತ್ಯದ ಬೆಳಕಿನಲ್ಲಿ "ನಾನು" ಎಂಬ ಭಾವನೆ ಪೂರ್ತಿಯಾಗಿ ಅಳಿದು, ಆ ಭಾವನೆ ಅಳಿಯಿತೆಂಬ ಭಾವನೆಯೂ ಇಲ್ಲದೆ ಪರಮಾತ್ಮನಲ್ಲಿ ಲೀನವಾಗು.

೧೦: ಐಕ್ಯ ಎಂದರೆ ಸತ್ಯವೊಂದರ ಹೊರತು ಉಳಿದೆಲ್ಲದರಿಂದ ಮನಸ್ಸು ತೆಗೆದು ಪರಿಶುದ್ಧವಾಗಿಟ್ಟಿರುವುದು. ಐಕ್ಯ, ಒಂದು ದೇವರಲ್ಲಿ ನಂಬುವುದಲ್ಲ. ದೇವರೂ ನಾನೂ ಒಂದೇ ಎಂದು ಭಾವಿಸುವುದು.

೧೧: ಪ್ರಪಂಚ ಸಂಗವಿರುವವರೆಗೂ ದೇವರೊಡನೆ ಭಾವಸಮಾಗಮ ಆಗಲಾರದು, ರಾಗದ್ವೇಷಗಳನ್ನು ಉಳಿದರೆಯೇ ದೇವರ ಧ್ಯಾನ ಸಾಧ್ಯ.

೧೨: ಭಕ್ತನು ಧ್ಯಾನದಲ್ಲಿ ಸುಖ ಕಂಡಾಗ, ಆ ಭಾವವನ್ನು ಬಲಗೊಳಿಸಿಕೊಂಡು ಕಾಲಕ್ರಮೇಣ ಅದು ತನ್ನ ಸಹಜಪ್ರಕೃತಿಯಾಗುವಂತೆ ಮಾಡಿಕೊಳ್ಳಬೇಕು.

೧೩: ಹಕ್ ಅಥವಾ ಸತ್ಯ ಅಜ್ಞೇಯವಾದ್ದು, ಮಾನವ ಬುದ್ಧಿಗೆ ನಿಲುಕದ್ದು. ವ್ಯಕ್ತ ಬಹುತ್ವದಿಂದ ಪರಸತ್ಯಕ್ಕೆ ಚ್ಯುತಿಯಿಲ್ಲ.

೧೪: ಇರುವುದು—ಎಂದರೆ, ಭಾವನಾರೂಪದ ಅಸ್ತಿತ್ವ. ಭೌತವಸ್ತು ಗೌಣ ಅಥವಾ ಉಪಾಧಿ ಮಾತ್ರ. ಕೊನೆಗೆ ಅದು ಲಯವಾಗಿ ಪರಸತ್ಯ ಒಂದೇ ಉಳಿಯುತ್ತದೆ.

೧೫: ದೇವರ ಗುಣಗಳು ಭಾವನೆಯಲ್ಲಿ ಅವನಿಂದ ಬೇರೆಯಾಗಿದ್ದು, ವಸ್ತುತಃ ಅವನೊಡನೆ ಒಂದಾಗಿವೆ. ಎಂದರೆ, ಅವಕ್ಕೆ

ಅವನನ್ನು ಬಿಟ್ಟರೆ ಬೇರೆ ಅಸ್ತಿತ್ವವಿಲ್ಲ. ಅವು ಅವನ ನಾನಾ ಮುಖಗಳು.

೧೬: ನಿಜವಾದ ವಸ್ತು ಕೇವಲ ಏಕರೂಪದ್ದು. ಅದರ ಮೊದಲನೆಯ ಹೊಮ್ಮುಗೆಯಲ್ಲಿ ಇಲ್ಮ್ (ಜ್ಞಾನ), ನೂರ್ (ಪ್ರಕಾಶ), ವುಜೂದ್ (ಅಸ್ತಿತ್ವ) ಮತ್ತು ಹುಸ್ಸೂರ್ (ಸಾನ್ನಿಧ್ಯ) ಎಂಬ ಗುಣಗಳು ಕಂಡುಬಂದುವು. ಎರಡು ಮೂರನೆಯ ಹೊಮ್ಮುಗೆಗಳಲ್ಲಿ ಇವು ಮತ್ತೂ ಬಹುತ್ವವನ್ನು ತಾಳಿ, ಈ ಬಹುತ್ವದಿಂದ ವ್ಯಕ್ತೀಭವನ ಪರಿಪೂರ್ಣಗೊಳ್ಳುತ್ತ ಬಂದು, ಒಳಗಿನ 'ಸತ್ತು' ಅವ್ಯಕ್ತವಾಗುತ್ತ ಬಂತು.

೧೭: ಭೌತಾಭೌತ ರೀತಿಯಲ್ಲಿ, ನಾನಾ ರೂಪಗಳಲ್ಲಿ ಕಾಣುವ ಸಮಸ್ತ ಗುಣಭಾವಗಳೂ ದೇವರ ಏಕತ್ವದಲ್ಲಿ ಅಡಗಿವೆ.

೧೮: ವಸ್ತುಗಳ ತನಿಗುಣಗಳನ್ನು (ವಿಶಿಷ್ಟ ಗುಣಗಳನ್ನು) ಕಳೆಯುತ್ತ ಕಳೆಯುತ್ತ ಪರೀಕ್ಷಿಸಿಕೊಂಡು ಹೋಗಿ ನೋಡಿದರೆ, ಭೇದಭಾವಗಳೆಲ್ಲ ಅಳಿದು ಅಥವಾ ಎಲ್ಲ ಭಾವಗಳೂ ಪರಮಾತ್ಮನ ನಾನಾ ಮುಖಗಳಾಗಿ ಕಂಡುಬಂದು, ಕೊನೆಗೆ ಒಂದೇ ಪರವಸ್ತು ನಿಲ್ಲುತ್ತದೆ. ಒಂದೇ ಪರವಸ್ತು ನಾನಾ ಗುಣಗಳನ್ನು ಧರಿಸಿ ನಾನಾ ರೂಪದಿಂದ ವ್ಯಕ್ತವಾಗುತ್ತದೆ.

೧೯: ಈ ಬಹುತ್ವ ಒಂದರ ಬೇರೆ ಬೇರೆ ಭಾಗಗಳಲ್ಲ. ಅಚ್ಛೇದ್ಯವಾದ ಒಂದರ ನಾನಾ ಭಾವಗಳು.

೨೦: ಹೊರಮುಖವಾಗಿ ವ್ಯಕ್ತವಾಗುವುದರಿಂದಾಗಲಿ ಒಳಮುಖವಾಗಿ ಅಡಗಿಸಿಕೊಳ್ಳುವುದರಿಂದಾಗಲಿ ಪರವಸ್ತುವಿಗೆ ಯಾವ ವಿಧವಾದ ಪರಿಣಾಮವೂ ತಟ್ಟುವುದಿಲ್ಲ.

೨೧: ಕೇವಲಕ್ಕೆ ಸಾಪೇಕ್ಷದ ಆವಶ್ಯಕತೆ ಇಲ್ಲ. ಕೇವಲ ಸತ್ತಿನ ಹೊಮ್ಮುಗೆಗೆ ಸಾಪೇಕ್ಷಕ ಒಂದು ಸಾಧನ ಮಾತ್ರ. ಆದರೆ ಸಾಪೇಕ್ಷದ ಮೂಲಾಧಾರಕ್ಕೇ ಕೇವಲ ಸತ್ತು ಅತ್ಯಗತ್ಯ.

೨೨: ಸೃಷ್ಟಿ ಪರವಸ್ತುವೇ ಆಗಿರಬಹುದು ಅಥವಾ ಪರವಸ್ತುವಿನ ಇಂದ್ರಿಯಗೋಚರ ಗುಣಭಾವಗಳಾಗಿರಬಹುದು.

೨೩: ಪರವಸ್ತು ಸೃಷ್ಟಿಯ ಒಂದೊಂದು ವಸ್ತುವಿನಲ್ಲಿ ಒಂದೊಂದು ಪ್ರಮಾಣದಲ್ಲಿ ವ್ಯಕ್ತವಾಗುತ್ತದೆ. ಒಂದರಲ್ಲಿ ಹೆಚ್ಚು ಅರಳಿಯೂ, ಒಂದರಲ್ಲಿ ಅಡಗಿಯೂ, ಒಂದರಲ್ಲಿ ಸುವ್ಯಕ್ತವಾಗಿಯೂ, ಒಂದರಲ್ಲಿ ಸ್ಪಷ್ಟಗೋಚರವಾಗದೆಯೂ, ಇರಬಹುದು. ಒಂದೇ ಸೂರ್ಯನು ಬೇರೆ ಬೇರೆ ಎಡೆಗಳಲ್ಲಿ ಬೇರೆ ಬೇರೆ ಅಳತೆಯ ಕಾವು ಬೆಳಕುಗಳನ್ನು ಉಂಟುಮಾಡುವಂತೆ.

೨೪: ಮೊದಲೇ ಹೇಳಿದಂತೆ ಪರವಸ್ತು ಒಂದೆ. ಅವನ ನಾನಾ ಭಾವಗಳಲ್ಲಿ ನಾನಾ ನಾಮಗಳಿಂದ ವ್ಯವಹಾರವಿದೆ. ಮೊದಲಲ್ಲಿ ಅವ್ಯಕ್ತನೂ, ಅಮೂರ್ತನೂ ಆಗಿರುತ್ತಾನೆ. ಆಗ ಅವನು ಕತ್ತಲೆಯಲ್ಲಿದ್ದು ಅನಿರ್ವಚನೀಯನಾಗಿರುತ್ತಾನೆ. ಎರಡನೆಯ ದಶೆಯಲ್ಲಿ ಅಕ್ ಲೆಕುಲ್ ಅಥವಾ ವಿಶ್ವಬುದ್ಧಿಯಾಗಿ ವ್ಯಕ್ತಸ್ವರೂಪನಾಗುತ್ತಾನೆ. ಮೂರನೆಯದಾಗಿ ನಫ್ಸ್ ಸೆಕುಲ್ ಅಥವಾ ವಿಶ್ವಾತ್ಮಸ್ವರೂಪದಲ್ಲಿ ವ್ಯಕ್ತನಾಗುತ್ತಾನೆ. ನಾಲ್ಕನೆಯದಾಗಿ, ಉಜೂಬ್ (ವಿಶಿಷ್ಟ) ಸ್ಥಿತಿಯಲ್ಲಿ ನಾನಾ ರೂಪ ಭಾವಗಳನ್ನು ಧರಿಸಿ ವ್ಯಕ್ತನಾಗುತ್ತಾನೆ. ಐದು ಆರನೆಯ ದಶೆಗಳಲ್ಲಿ ಅದೇ ಪರವಸ್ತು ಮೂರ್ತಸ್ವರೂಪಗಳನ್ನು ತಾಳಿ ಕ್ರಮೇಣ ದೃಶ್ಯ ಸೃಷ್ಟಿಯುಂಟಾಗುತ್ತದೆ.

೨೫: ಪರವಸ್ತುವಿನ ನಾನಾ ಮುಖಗಳನ್ನು ದೇಶಕಾಲಾತೀತ ಮತ್ತು ಅಪರಿಚ್ಛಿನ್ನಭಾವದಲ್ಲಿ ಭಾವಿಸಿದರೆ ಅವು ಪರಸತ್ಯದ ಅಭಿನ್ನ ಸ್ವರೂಪದುವಾಗಿಯೂ, ಅವುಗಳ ಪರಿಚ್ಛಿನ್ನಭಾವಗಳಲ್ಲಿ ಪರಿಗಣಿಸಿದರೆ ಬಹುರೂಪದುವಾಗಿಯೂ ಕಾಣುತ್ತವೆ. ಪರಸತ್ಯ ವ್ಯಕ್ತವಾದಮೇಲೆ ಅದನ್ನು ವ್ಯಕ್ತವಿಶ್ವದೊಡನೆಯೂ, ವ್ಯಕ್ತವಾಗುವುದಕ್ಕೆ ಮೊದಲು ಅವ್ಯಕ್ತವಿಶ್ವವನ್ನು ಪರಸತ್ಯದೊಡನೆಯೂ ಒಂದಾಗಿ ಗಣಿಸುತ್ತದೆ.

೨೬: ಪ್ರಪಂಚ ಪ್ರತಿಕ್ಷಣವೂ ಲಯವಾಗಿ ಮತ್ತೆ ಸೃಷ್ಟಿಯಾಗುತ್ತಿದೆ. ಅಚಲ ಪರವಸ್ತುವಿನ ಪ್ರತಿಕ್ಷಣದ ವ್ಯಕ್ತಸ್ವರೂಪದ ತರಂಗ ಪರಂಪರೆಯೇ ಸೃಷ್ಟಿಯೆನ್ನಬಹುದು.

೨೭: ಪಾಪವೆಂಬುದು ಪರಿಪೂರ್ಣತೆಯ ಕೊರತೆ; ಅಥವಾ ಇರಬೇಕಾದದ್ದರ ಅಭಾವ.

೨೮: ಸೃಷ್ಟಿಯ ಪ್ರತಿವಸ್ತುವೂ ಒಂದಲ್ಲ ಒಂದು ತೆರದ, ಒಂದಲ್ಲ ಒಂದು ಮಟ್ಟದ ಜ್ಞಾನವನ್ನು ಪಡೆದೇ ಇರುತ್ತದೆ. ನೀರು ಕೆಳಮಟ್ಟಕ್ಕೆ ಹರಿಯುವುದು ಕೂಡ ಇಂಥ ಒಂದು ತೆರದ ಜ್ಞಾನದಿಂದಲೆ.

೨೯: ಪರಸತ್ಯಸೃಷ್ಟಿಯ ಪ್ರತಿವಸ್ತುವಿನಲ್ಲೂ ಅಂತರ್ಗತವಾಗಿರುವಂತೆ ಪ್ರತಿ ವಸ್ತುವೂ ಪರಸತ್ಯದಲ್ಲಿ ಅಂತರ್ಗತವಾಗಿದೆ. ಹಾಗೆಯೇ ಪರಸತ್ಯದ ಗುಣಭಾವಗಳೂ ವಸ್ತುಗಳಲ್ಲಿ ಸಹಜವಾಗಿವೆ.

೩೦: ದೇವರ (ದಿವ್ಯ) ರಹಸ್ಯ ಎರಡು ರೀತಿಯಾಗಿ ವ್ಯಕ್ತವಾಗಬಹುದು. ಒಂದು, ಅಂತರ್ಮುಖವಾದ ಭಾವಗತ ದರ್ಶನ. ಇದಕ್ಕೆ ಫ್ಲಯಸ್ಸ್ ಎಅಕ್‌ದಸ್ ಅಥವಾ ಅಕ್‌ಲ್ ಎಕುಲ್ (ವಿಶ್ವಬುದ್ಧಿ) ಎಂದು ಹೆಸರು. ಎರಡು, ಬಹಿರ್ಮುಖವಾದ ಮೂರ್ತಭಾವ. ಇದನ್ನು ಸೂಫಿಗಳು ಫ್ಲಯಸ್ಸ್ ಎಮೊಕದ್ದಸ್ ಅಥವಾ ನಫ್ಸ್ ಎಕುಲ್ ಎಂದು ಕರೆಯುತ್ತಾರೆ. ಇದು ಭಗವಂತನ ವ್ಯಕ್ತಸ್ವರೂಪ.

ಇದು ಲವಾಯೆಹೆ ಗ್ರಂಥದ ಸಾರಾಂಶ.

ಸೂಫಿ ಧರ್ಮಪ್ರಚಾರ ಕೇಂದ್ರಗಳಲ್ಲಿ ಇಂಡಿಯವೂ ಒಂದು. ಇಂಡಿಯದ ಪ್ರಾಚೀನ ಸೂಫಿ ಸಾಧುಗಳಲ್ಲಿ ಮೋಯಿನುದ್ದೀನ್‌ಚಿಷ್ತಿ ಒಬ್ಬನು. ಇವನು ಪೂರ್ವ ಇರಾನಿನ ಸೀಯ್‌ಸ್ತಾನಿನ ಚಿಷ್ತ್‌ನಲ್ಲಿ ಹುಟ್ಟಿ, ಬಹುಕಾಲ ಖೊರಸ್ಸಾನಿನಲ್ಲಿ ವಾಸವಾಗಿದ್ದನು. ಇವನು ಬಹಳವಾಗಿ ದೇಶಾಟನೆ ಮಾಡಿ ಅನೇಕ ಸೂಫಿ ಸಾಧುಗಳ ದರ್ಶನ ಮಾಡಿದ್ದನು. ಕ್ರಿ. ಶ. ೧೧೯೨ರಲ್ಲಿ ಇಂಡಿಯಕ್ಕೆ ದಂಡೆತ್ತಿಬಂದ ಷಾಹಬುದ್ದೀನ್ ಘೋರಿಯ ಸೈನ್ಯದೊಡನೆ ಬಂದು, ಅಜ್ಮೀರದಲ್ಲಿ ನೆಲಸಿ ಪ್ರಸಿದ್ಧವಾದ ಚಿಷ್ತಿಸೂಫಿ ಮಠವನ್ನು ಸ್ಥಾಪಿಸಿದನು. ಬಖ್‌ತ್ಯಾರ್ ಎಕಾಕಿ, ಷೇಕ್‌ಫರೀದುದ್ದೀನ್, ಷಕರ್‌ಗಂಜ್, ನಿಸ್ಸಾಮುದ್ದೀನ್ ಔಲಿಯ (ಅಮೀರ್ ಖುಸ್ರೋವಿನ ಪೀರ್—ಗುರು), ಅಲಾವುದ್ದೀನ್ ಅಲೀ ಅಹ್‌ಮದ್‌ಸಾಬೆರ್, ಷೇಕ್‌ಸಲೀಮ್ (ಅಕ್ಬರನ ಪೀರ್—ಗುರು; ಅಕ್ಬರನು ಇವನ ಹೆಸರನ್ನೇ ತನ್ನ ಮಗ ಜಹಾಂಗೀರನಿಗೆ ಇಟ್ಟನು),—ಇವರು ಚಿಷ್ತಿಮಠದ ಪರಂಪರೆಯಲ್ಲಿ ಬಂದವರು. ಚಿಷ್ತಿಮಠ ಕೆಲವು ಕಾಲ ನಡೆದು ಕೊನೆಗೆ ಕ್ಷೀಣಗತಿಗೆ ಬಂದು, ೧೮ನೆಯ ಶತ

ಮಾನದ ಕೊನೆಯಲ್ಲಿ ನೂರ್‌ಮುಹಮ್ಮದ್ ಎಂಬವನ ನಾಯಕತ್ವದಲ್ಲಿ ಮತ್ತೆ ತಲೆಯೆತ್ತಿಕೊಂಡಿತು. ಕಾದೆರಿ, ಸುಹ್ರವರ್ದಿ, ಷತ್ತಾರಿ, ನಕ್‌ಷ್‌ಬಂದಿ ಮತ್ತು ಇವುಗಳ ಹಲವು ಶಾಖೆಗಳು—ಇವು ಇಂಡಿಯದ ಇತರ ಸೂಫಿ ಸಂಸ್ಥೆಗಳು.

ಮೊಗಲ್ ದೊರೆಗಳಲ್ಲಿ ಷಾಜಹಾನ್ ಚಕ್ರವರ್ತಿಯ ಮಗ ದಾರಾಷುಕೊಹ್ ಸೂಫಿ ಧರ್ಮದಲ್ಲಿ ಬಹು ಆಸಕ್ತಿಯುಳ್ಳವನಾಗಿದ್ದನು. ಇವನು ಸೂಫಿ ಧರ್ಮವನ್ನೂ, ಹಿಂದುಗಳ ವೇದಾಂತವನ್ನೂ ವ್ಯಾಸಂಗ ಮಾಡಿ, ಅವುಗಳಲ್ಲಿ ಬಹುಪಾಲು ಹೋಲಿಕೆ ಇರುವುದನ್ನು ತೋರಿಸಲು ಪ್ರಯತ್ನಪಟ್ಟನು. ರಾಮಾಯಣ, ಭಗವದ್ಗೀತೆ, ಉಪನಿಷತ್ತುಗಳನ್ನೇ ಅಲ್ಲದೆ—ಯೋಗವಾಸಿಷ್ಠ—ಮೊದಲಾದ ಗ್ರಂಥಗಳನ್ನೂ ಭಾಷಾಂತರ ಮಾಡಿಸಿದನು. 'ಮಜ್‌ಮಉಲ್ ಬಹ್‌ರಯ್‌ನ್' ಅಥವಾ ಎರಡು ಸಾಗರಗಳ ಸಂಗಮ ಎಂಬ ತನ್ನ ಗ್ರಂಥದಲ್ಲಿ ಸೂಫಿ ಮತ್ತು ವೇದಾಂತ ಧರ್ಮಗಳ ಮೂಲತತ್ವ ಒಂದೇ ಎಂದೂ, ಇರುವ ವ್ಯತ್ಯಾಸಗಳೆಲ್ಲ ಕೇವಲ ನಾಮಮಾತ್ರದವೆಂದೂ ತೋರಿಸಿದ್ದಾನೆ. ಔರಂಗಜೇಬನ ಮಗಳು ಸ್ಲೇಬುನ್ನಿಸಾಬೇಗಮ್ ಸೂಫಿ ಧರ್ಮದಲ್ಲಿ ಆಸಕ್ತಳಾಗಿದ್ದಳು. ಕೊನೆಯ ಮೊಗಲ್ ಚಕ್ರವರ್ತಿ ಅಬೂಸ್ಸಫ಼ರ್ ಬಹದುರ್‌ಷಹ ಉರ್ದುವಿನಲ್ಲಿ ಹಲವು ಸೂಫಿ ಗ್ರಂಥಗಳನ್ನು ಬಿಟ್ಟುಹೋಗಿದ್ದಾನೆ. ಇಂಡಿಯದ ಸೂಫಿಧರ್ಮ ಮುಸ್ಲಿಂ ಮತ್ತು ಹಿಂದೂ ತತ್ವಗಳ ಬೆರಕೆ ಹೊಂದಿಕೆಗಳಿಂದ ಹುಟ್ಟಿ, ಕೊನೆಕೊನೆಗೆ ಬರಿಯ ಮೂಢನಂಬಿಕೆಗಳಲ್ಲಿ ಪರ್ಯವಸಾನವಾಗುತ್ತ ಬಂದಿದೆ.

ಸೂಫಿ ಧರ್ಮ ತಾಪಸ ಜೀವನದಲ್ಲಿ ಮೊದಲಾಗಿ, ಒಂದು ದರ್ಶನ ತತ್ವವಾಗಿ ಪರಿಣಮಿಸಿ, ಕ್ರಮೇಣ ಅನುಭಾವವಿದ್ಯೆಯಾಗಿ ಪರ್ಯವಸಾನ ಹೊಂದಿ, ಕರ್ಮವ್ರತಾದಿಗಳು ಹೆಚ್ಚಿಕೊಂಡು ಸೋಮಾರಿ ಬದುಕು, ತಿರಿಪೆ, ಮೋಸಗಳಿಗಿಳಿಯಿತು. ಕೊನೆಕೊನೆಗೆ ಕೊಳ್ಳೆದಂಗೆಗಳಿಗೂ ಆಶ್ರಯಸ್ಥಾನವಾಗಿ ಬೀಳಿಗಿಟ್ಟುಕೊಂಡಿತು. ಸೂಫಿ ಧರ್ಮದ ಬೀಳಿಗೆ ಕಾರಣ: (೧) ತಾಮ ಯಾವುದೋ ಒಂದು ಯೋಚನೆಯ ಮಾರ್ಗ ವನ್ನು ಬಿಟ್ಟು ಹೋಗಲಾರದೆ, ಆ ಮಾರ್ಗದ ಚರಮಸ್ಥಾನ ಮುಟ್ಟಿ

ಮೊಡನೆಯೇ ಮುಂದಕ್ಕೆ ಬೆಳೆಯದೆ, ಹೇಳಿದ್ದನ್ನೇ ಮತ್ತೆ ಮತ್ತೆ ಹೇಳುತ್ತ ಹೊಸದು ಯಾವುದೂ ಇಲ್ಲದೆ ನಿಂತುಹೋದದ್ದು. (೨) ತರುವಾಯ ಬಂದವರ ಭಾವಗಳೂ ತತ್ವಗಳೂ ಬಹು ಗೂಢವೂ ದುರ್ಗಮವೂ ಜಟಿಲವೂ ಆಗಿ ಅರ್ಥ ತಿಳಿಯುವುದೇ ಕಷ್ಟವಾಗಿ ಎಲ್ಲವೂ ತೊಡಕಿಗಿಟ್ಟುಕೊಂಡದ್ದು. (೩) ಪಾಶ್ಚಾತ್ಯ ಸಂಸ್ಕೃತಿಯ ಪ್ರಭಾವದಿಂದ ಅನುಭವಾತ್ಮಕ ಮತ್ತು ಪರೀಕ್ಷಾತ್ಮಕ ಶಾಸ್ತ್ರಗಳ ಪ್ರಾಬಲ್ಯ ಹೆಚ್ಚಿ, ಕೇವಲ ಭಾವನಾಮಯದ ವಿದ್ಯಾವ್ಯಾಸಂಗ ಕಡಮೆಯಾದದ್ದು. (೪) ಇರಾನಿನಲ್ಲಿ ಸಫವಿಯರು ಪ್ರಾಬಲ್ಯಕ್ಕೆ ಬಂದು, ಸಾಮಾಜಿಕ ಮತ್ತು ಧಾರ್ಮಿಕ ವಿಷಯಗಳಲ್ಲಿ ಕ್ರಾಂತಿಯಾದದ್ದು. (೫) ಮಧ್ಯ ಏಷ್ಯದಲ್ಲಿ ರಷ್ಯ ಮುಂದುವರಿದು ಮುಸ್ಲಿಂ ಬಲ ಕುಗ್ಗಿ, ಸೂಫಿ ಧರ್ಮದ ಎರಡು ದೊಡ್ಡ ಕೇಂದ್ರಗಳಾಗಿದ್ದ ಬೊಖಾರ ಮತ್ತು ಖೀವ ಹಾಳಾದದ್ದು. ಸೂಫಿ ಧರ್ಮಪ್ರಚಾರಕ್ಕೆ ಅವಕಾಶವಿತ್ತಿದ್ದ ಉತ್ತರ ಆಫ್ರಿಕ, ಈಜಿಪ್ಟ್, ಸಿರಿಯ, ತುರ್ಕಿ—ಮೊದಲಾದೆಡೆಗಳಲ್ಲಿ ಯೂರೋಪಿನವರ ಪ್ರಭಾವ ಹೆಚ್ಚಿಕೊಂಡದ್ದು. ಇಂಡಿಯದಲ್ಲಿ ಮೊಗಲ್ ಸಾಮ್ರಾಜ್ಯ ಮುರಿದು, ಕ್ರಮೇಣ ಇಂಗ್ಲಿಷ್ ವಿದ್ಯಾಭ್ಯಾಸ ಬಂದು ನೆಲಸಿದ್ದು.

# ಅಧ್ಯಾಯ ೧೨

## ಮುಸ್ಲಿಂ ಅಲ್‌ಕಲಾಮ್ ಅಥವಾ ವ್ಯಾಖ್ಯಾನಮತ

ಮಹಮ್ಮದನ ಮರಣಾನಂತರ ಅವನ ಸಂಗಾತಿಗಳು, ಶಿಷ್ಯರು ಮತ್ತು ಅನುಯಾಯಿಗಳು ಮೆಕ್ಕ ಮತ್ತು ಮದೀನಗಳಲ್ಲಿ ನೆಲಸಿ, ಮಹಮ್ಮದನ ಸಂಪ್ರದಾಯಗಳನ್ನು ಬೆಳಸಿ ನಡಸಿಕೊಂಡು ಬಂದು, ಪ್ರಪಂಚದ ಎಲ್ಲ ಮುಸ್ಲಿಮರಿಗೂ ಧರ್ಮವಿಷಯದಲ್ಲಿ ಪ್ರಮಾಣಪುರುಷ ರಾದರು. ಹೀಗೆಯೇ ಸಾಂಪ್ರದಾಯಿಕರು ಬೆಳೆಯುತ್ತ ಹೋಗಿ, ಕ್ರಮೇಣ ಬಗ್‌ದಾದ್, ಬಸ್ರಾ, ಡಮಾಸ್ಕಸ್‌ಗಳು ವಿದ್ಯಾಕೇಂದ್ರ ಗಳಾಗಿ ಏರ್ಪಟ್ಟಾಗ, ಶುದ್ಧ ದೇವತಾಶಾಸ್ತ್ರಜ್ಞರ ಮಾರ್ಗವೊಂದೂ, ವ್ಯಾಖ್ಯಾನಕಾರರ ಮಾರ್ಗವೊಂದೂ ಏರ್ಪಟ್ಟವು. ಮೊದಲನೆಯವರು ಕುರಾನನ್ನು ಪದಶಃ ಮತ್ತು ಮಹಮ್ಮದನಿಂದ ಬಂದ ಸಂಪ್ರದಾಯದ ಮೇಲೆ ಅರ್ಥ ಮಾಡುತ್ತಿದ್ದರು. ಎರಡನೆಯವರು ಮುಸ್ಲಿಮಿತರರು ಮುಸ್ಲಿಂ ಧರ್ಮವನ್ನು ವಿರೋಧಿಸಿ ಮಾಡುತ್ತಿದ್ದ ವಾದವನ್ನು ಪ್ರತಿ ಭಟಿಸಿ, ಅದರ ಸಮರ್ಥನೆಗೆ ನಿಂತು ತಮ್ಮ ಮಾರ್ಗವನ್ನು ಬೆಳಸುತ್ತ ಬಂದರು. ಇವರ ಮಾರ್ಗ ಮೊದಮೊದಲು ಹೀಗೆ ಮುಸ್ಲಿಂ ಧರ್ಮ ಸಮರ್ಥನಕ್ಕಾಗಿ ಹೊರಟದ್ದು, ಕೊನೆಕೊನೆಗೆ ಅಧ್ಯಾತ್ಮ ತತ್ತ್ವಾನ್ವೇಷಣ ದಲ್ಲಿ ಪರ್ಯವಸಾನಗೊಂಡಿತು.

ಮಹಮ್ಮದನ ಅಂತ್ಯಕಾಲದಲ್ಲಿ ಪ್ರಬಲಕ್ಕೆ ಬಂದ ಕುರಯೀಷ ರನ್ನು ವಿರೋಧಿಸಿ, ಮುಸಯ್‌ಲಮನ ಮುಂದಾಳುತನದಲ್ಲಿ ಖರಿಜಿಗಳು ಒಂದು ಪಕ್ಷ ಏರ್ಪಡಿಸಿಕೊಂಡರು. ಇದು ನಿಜವಾಗಿ ಧರ್ಮಕ್ಕಿಂತಲೂ ಹೆಚ್ಚಾಗಿ ರಾಜಕೀಯ ಕಾರಣದಿಂದ ಏರ್ಪಟ್ಟ ಪಕ್ಷ. ಈ ಪಕ್ಷದವರು ಆಗಾಗ ತಲೆಯೆತ್ತುತ್ತ, ಎತ್ತಿದೊಡನೆ ಆಯಾ ಕಲೀಫರಿಂದ ಅಡಗುತ್ತ ಬಂದರು. ಈ ಪಂಗಡದವರು ಎಷ್ಟು ಪ್ರಯತ್ನಪಟ್ಟರೂ ತಾವು ಪ್ರಬ ಲಕ್ಕೆ ಬಂದು ಜನಾನುರಾಗಿಗಳಾಗಲಿಲ್ಲ. ಏಕೆಂದರೆ, ಸಾಮಾನ್ಯ ಜನರು ಇವರ ಅಭಿಪ್ರಾಯಗಳನ್ನು ಮೆಚ್ಚಿ ಒಪ್ಪಲಿಲ್ಲ. ಅಂತೂ ರಾಜಕೀಯ ಕಾರಣದಿಂದ ಆರಂಭವಾದ ಈ ಚಳವಳಿ ಕ್ರಮೇಣ ಒಂದು ಧರ್ಮ

ಮಾರ್ಗವಾಗಿ ಏರ್ಪಟ್ಟಿತು. ಈ ಮಾರ್ಗದ ಮುಖ್ಯ ಲಕ್ಷಣಗಳೆಂದರೆ— ಕಲೀಫನನ್ನು ಆಯಬೇಕು. ಅವನು ಕುರಯೀಷ್ ಪಂಗಡದವನೇ ಆಗಬೇಕಾಗಿಲ್ಲ. ಯಾವ ಮುಸ್ಲಿಮನೇ ಆಗಲಿ, ಗುಲಾಮನು ಕೂಡ, ಕಲೀಫನಾಗಬಹುದು. ಜನರಿಗೆ ಒಪ್ಪದಿದ್ದರೆ ಒಮ್ಮೆ ಆಯ್ದ ಕಲೀಫನನ್ನು ತೆಗೆದುಹಾಕಬಹುದು. ಕೊನೆಗೆ, ಅವನನ್ನು ಕೊಲ್ಲಲೂಬಹುದು. ಇವರಲ್ಲಿ ಕೆಲವು ಉಗ್ರಪಕ್ಷದವರು ಕಲೀಫನೇ ಬೇಕಾಗಿಲ್ಲವೆಂದೂ, ಅವಶ್ಯಬಿದ್ದಾಗ ಒಬ್ಬ ತಲೆಯಾಳನ್ನು ಆಯ್ದು ಕೆಲಸ ನಡೆಸಿಕೊಳ್ಳಬಹುದೆಂದೂ ವಾದಿಸುವುದಕ್ಕೂ ಹೊರಟರು. ಖಾರಿಜೀಗಳ ಪ್ರಕಾರ ಖಾರಿಜೀಗಳನ್ನು ಒಪ್ಪದ ಮುಸ್ಲಿಮರೆಲ್ಲರೂ ಕಾಫರರು. ಅವರನ್ನು ವಿರೋಧಿಸಿ ಹೋರಾಡಿ ನಾಶ ಮಾಡುವುದು ಖಾರಿಜೀಗಳ ಧರ್ಮ ಕರ್ತವ್ಯ.

ಹೀಗೆ ಉಗ್ರಸ್ವರೂಪ ತಾಳುತ್ತಿದ್ದ ಖಾರಿಜೀ ಪಕ್ಷವನ್ನು ಪ್ರತಿಭಟಿಸಿ ಮುರ್ಜೀಗಳೆಂಬ ಒಂದು ಹೊಸ ಪಂಗಡ ಸಿರಿಯ ಮತ್ತು ಮೆಸೊಪೊಟೇಮಿಯಗಳಲ್ಲಿ ಎದ್ದು, ಅದಕ್ಕೆ ಬಹುಜನ ಅನುಯಾಯಿಗಳಾದರು. ಖಾರಿಜೀ ಪಂಗಡ ಅರೇಬಿಯದ ಒಂದು ಮೂಲೆಗೆ ಒತ್ತಿ ಕೆಲವು ಕಾಲದ ಮೇಲೆ ಸ್ಲಾಹಿರೀ ಎಂಬ ಬೇರೆ ರೂಪ ತಾಳಿ ತಲೆಯೆತ್ತಿತು. ಈ ಹೊಸ ಸ್ಲಾಹಿರೀ ಪಕ್ಷದವರಲ್ಲಿ ಪಡುವಲು ನಾಡಿನ ಇಬ್ನ್ ಎ ಹಸ್ಲಮ್ ಎಂಬವನೂ ಮೂಡಲು ನಾಡಿನ ಇಬ್ನ್ ಎ ತಯ್ಮಿಯ ಎಂಬವನೂ ಪ್ರಸಿದ್ಧ ಲೇಖಕರು. ಈಗಿನ ವಹಾಬಿಗಳೂ ಈ ಸ್ಲಾಹಿರೀ ಮಾರ್ಗಾನುಯಾಯಿಗಳೆಂದೇ ಹೇಳಬಹುದು. ಮುರ್ಜೀಗಳನ್ನು ಇಸ್ಲಾಮಿನ ನಿಷ್ಠ ಪಂಗಡದವರು ಅಥವಾ ನಿಯಮವಾದಿಗಳು (ಪ್ಯೂರಿಟನ್ಸ್) ಎಂದು ಕರೆಯಬಹುದು. ಮುರ್ಜೀಗಳಿಗೂ ಖಾರಿಜೀಗಳಿಗೂ ಹಲವು ವಿಷಯಗಳಲ್ಲಿ ಭೇದವಿಲ್ಲದಿದ್ದರೂ, ಕೆಲವು ವಿಷಯಗಳಲ್ಲಿ ಮುರ್ಜೀಗಳು ತಮ್ಮ ಸ್ವತಂತ್ರ ಅಭಿಪ್ರಾಯಗಳನ್ನೂ ಖಾರಿಜೀಗಳಿಂದ ಭಿನ್ನಭಾವಗಳನ್ನೂ ಪಾಲಿಸಿಕೊಂಡು ಬಂದಿರುತ್ತಾರೆ. ಮುರ್ಜೀಗಳ ಮುಖ್ಯತತ್ವವೆಂದರೆ—ಪೈಗಂಬರನ ಸಂಗಾತಿಗಳ ಭಿನ್ನಾಭಿಪ್ರಾಯಗಳನ್ನೂ, ಕಲೀಫ್ ಪಟ್ಟಕ್ಕೆ ಮೇಲಾಡುವ ಎದುರಾಳಿಗಳ

ಹಕ್ಕು ತೀರ್ಮಾನವನ್ನೂ, ಇದೇ ತೆರದ ಇತರ ಸಂದಿಗ್ಧ ವಿಷಯಗಳನ್ನೂ ದೇವರ ತೀರ್ಪಿಗೆ ಬಿಟ್ಟುಬಿಡಬೇಕು. ಮನುಷ್ಯರ ಕಣ್ಣಿಗೆ ತಪ್ಪಾಗಿ ಕಂಡುಬಂದವನು ದೇವರ ಕಣ್ಣಿನಲ್ಲಿ ಒಪ್ಪಾಗಿಯೇ ನಡೆದಿರಬಹುದು. ಒಬ್ಬ ಮುಸ್ಲಿಮನು ಮತ್ತೊಬ್ಬ ಮುಸ್ಲಿಮನೊಡನೆ ಯಾವ ಕಾರಣದಿಂದಲೂ (ಆತ್ಮರಕ್ಷಣೆಗೆ ಹೊರತು) ಯುದ್ಧ ಮಾಡಕೂಡದು. ದೈವಸಂಕಲ್ಪ ಮನುಷ್ಯಸಂಕಲ್ಪವನ್ನು ಮೀರಿದ್ದು. ಮೊದಲನೆಯ ನಾಲ್ಕು ಕಲೀಫರು ಎಲ್ಲರೂ ಉತ್ತಮರೆ (ಇದನ್ನು ಖಾರಿಜೀಗಳು ಒಪ್ಪುವುದಿಲ್ಲ). ಮನುಷ್ಯರ ತಪ್ಪುಗಳನ್ನು ನೋಡಬೇಕಾದದ್ದು ದೇವರೇ ಹೊರತು ಮನುಷ್ಯನಲ್ಲ. ಇಸ್ಲಾಂ ಧರ್ಮವನ್ನು ವಿರೋಧಿಸುವುದು ಎಂದೂ ನ್ಯಾಯವಲ್ಲ.

ಮುರ್ಜೀಗಳಲ್ಲಿ ಕ್ರಮೇಣ ಕೆಲವು ಸಣ್ಣ ಪುಟ್ಟ ವಿಷಯಗಳಲ್ಲಿ ಭಿನ್ನಾಭಿಪ್ರಾಯಗಳು ಹುಟ್ಟಿ, ಹಲವು ಒಳಪಂಗಡಗಳಾದುವು. ಈ ಮುರ್ಜೀ ಪಂಗಡವಾದ ಮೇಲೆ, ಇನ್ನೂ ಎಷ್ಟೋ ದೇವತಾಶಾಸ್ತ್ರಪಕ್ಷಗಳು ಹುಟ್ಟಿಕೊಳ್ಳುತ್ತ ಬಂದು, ಅಬ್ಬಾಸಿಯರ ಕಾಲದಲ್ಲಿ ಈ ಪಕ್ಷಗಳ ಸಮಸ್ಯೆ ಬಹು ತೊಡಕಿಗಿಟ್ಟುಕೊಂಡಿತು. ಈ ನಾನಾ ಪಕ್ಷಗಳನ್ನೆಲ್ಲ ಅಭಿಪ್ರಾಯಾನುಸಾರ ವಿಂಗಡಿಸಿದರೆ ಸ್ಥೂಲವಾಗಿ ನಾಲ್ಕು ಗುಂಪು ಮಾಡಬಹುದು.

(೧) ಸತ್ಯಾನ್ವೇಷಣಕ್ಕೆ ನಕ್‌ಲ್ ಅಥವಾ ಸಂಪ್ರದಾಯವನ್ನೇ ಮಾರ್ಗವಾಗಿ ಮಾಡಿಕೊಂಡು, ಕುರಾನನ್ನು ಪದಶಃ ಅರ್ಥಮಾಡಿಕೊಂಡು ಹೋಗುತ್ತಿದ್ದ ಮುಸ್ಲಿಂ ವೈದಿಕರ ಪಂಗಡ.

(೨) ಈ ನಕ್‌ಲ್ ಅಥವಾ ಸಂಪ್ರದಾಯದ ಜತೆಗೆ ಅಕ್‌ಲ್ ಅಥವಾ ಬುದ್ಧಿಯನ್ನೂ ಸೇರಿಸಿ, ಎರಡನ್ನೂ ಹೊಂದಿಸಿಕೊಂಡು ಹೋಗುತ್ತಿದ್ದ "ಮುತಕಲ್ಲಿಮೀನ್" ಎಂಬ ವ್ಯಾಖ್ಯಾನಕಾರರ ಅಥವಾ ವಾಗ್ಮಿಗಳ ಪಂಗಡ. ಈ ಪಂಗಡದವರು ವಿದ್ವಾಂಸರೂ ಮೇಧಾವಿಗಳೂ ಆಗಿದ್ದರು.

(೩) ಅಕ್‌ಲ್ ಅಥವಾ ಬುದ್ಧಿಯೊಂದನ್ನೇ ಪ್ರಧಾನ ಮಾಡಿಕೊಂಡು ಹೋಗುತ್ತಿದ್ದ ಹುಕುಮಾ ಅಥವಾ ತಾತ್ವಿಕರ ಪಂಗಡ.

(೪) ಈ ಒಂದರ ಗೋಜಿಗೂ ಹೋಗದೆ ಭಕ್ತಿ, ಶ್ರದ್ಧೆ, ತಪಸ್ಸು—ಮೊದಲಾದ ಮಾರ್ಗ ಹಿಡಿದು ಸರಳಜೀವನದಿಂದ ತೃಪ್ತರಾಗಿ ಆತ್ಮ ಪರಿಶುದ್ಧಿ ಮತ್ತು ಕೇವಲ ಸತ್ಯಾನ್ವೇಷಣಗಳಿಗೆ ಮಾತ್ರ ಮನಸ್ಸು ಕೊಟ್ಟು ಕಷ್ಫ್ (ದರ್ಶನ), ಜಸ್ಬ (ಆವೇಶ) ಮತ್ತು ವಜದ್ (ಆನಂದಪರವಶತೆ) ಇವನ್ನು ಪ್ರಧಾನಮಾಡಿಕೊಂಡು ಹೋದ ಸೂಫಿಗಳ ಪಂಗಡ.

ಈ ನಾಲ್ಕು ಪಂಗಡದವರೂ ತಮ್ಮ ಅಭಿಪ್ರಾಯಗಳನ್ನೂ ಮತಗಳನ್ನೂ ಒಂದು ಕಡೆ ತಾತ್ವಿಕ ದೃಷ್ಟಿಯಿಂದಲೂ, ಮತ್ತೊಂದು ಕಡೆ ಇಸ್ಲಾಂ ಧರ್ಮದೃಷ್ಟಿಯಿಂದಲೂ ಸಮರ್ಥಿಸತೊಡಗಿದರು. ಒಬ್ಬೊಬ್ಬರೂ ತಮತಮಗೆ ಅನುಕೂಲವಾದ ಇಸ್ಲಾಂ ವಚನಗಳನ್ನು ತಮ್ಮ ತಮ್ಮ ಮತಕ್ಕೆ ಬೆಂಬಲವಾಗಿ ಉದ್ಧರಿಸಿ, ಅವನ್ನು ತಮ್ಮ ತಮ್ಮ ಅನುಕೂಲಕ್ಕೆ ತಕ್ಕಂತೆ ಅರ್ಥಮಾಡತೊಡಗಿದರು.

ಮುಸ್ಲಿಂ ವ್ಯಾಖ್ಯಾಕಾರರು ಮೋತಸ್ಸಲ ಮತ್ತು ಅಷಾಏರ ಎಂಬ ಎರಡು ಮುಖ್ಯ ಪಂಗಡದವರಾಗಿ ಏರ್ಪಡುತ್ತಾರೆ. ಈ ಎರಡು ಪಂಗಡಗಳಲ್ಲೂ ಒಳಪಂಗಡಗಳು ಬೇಕಾದಷ್ಟಿವೆ. ಮೋತಸ್ಸಲರು ತಮ್ಮನ್ನು ತವ್‌ಹೀದ್ (ಐಕಮತ್ಯ) ಮತ್ತು ಅದ್‌ಲ್ (ನ್ಯಾಯ) ಪಕ್ಷದವರೆಂದು ಕರೆದುಕೊಂಡಿದ್ದಾರೆ. ಇವರು ತಮ್ಮ ತತ್ವಗಳನ್ನು ಜ್ಞಾನ, ವಿವೇಚನೆಗಳ ಮೇಲೆ ಅವಲಂಬಿಸಿ ಅವನ್ನು ಕುರಾನ್ ವಚನಗಳ ಆಧಾರದಿಂದ ಸಮರ್ಥನ ಮಾಡುತ್ತಾರೆ. ಇವರ ಮುಖ್ಯ ತತ್ವ—ದೇವರೊಬ್ಬನೇ ಶಾಶ್ವತ. ಅವನ ಗುಣಭಾವಗಳು ಅವನಿಂದ ಅಭಿನ್ನವಾದುವು. ಕುರಾನ್ (ದಿವ್ಯವಾಣಿ) ಶಬ್ದರೂಪದಲ್ಲಿ ಸೃಷ್ಟಿಯಾಗಿ, ಪೈಗಂಬರನಿಗೆ ಕಾಲ ದೇಶವರ್ತಮಾನಾನುಸಾರ ಸ್ಥಳೀಯ ಭಾಷೆಯ ಮೂಲಕ ವ್ಯಕ್ತವಾಯಿತು. ಮನುಷ್ಯನಿಗೆ ಸ್ವತಂತ್ರ ಇಚ್ಛಾಶಕ್ತಿಯುಂಟು. ಆದ್ದರಿಂದ ತನ್ನ ಕರ್ಮಗಳಿಗೆ ತಾನೇ ಕರ್ತನಾಗಿ ಪಾಪಕ್ಕೆ ನರಕವನ್ನೂ ಪುಣ್ಯಕ್ಕೆ ಸ್ವರ್ಗವನ್ನೂ ಅನುಭವಿಸುತ್ತಾನೆ. ದೇವರು ಮನುಷ್ಯನ ಕರ್ಮವನ್ನು ಮೊದಲೇ ವಿಧಿಸಿಬಿಟ್ಟಿರುವುದಿಲ್ಲ. ಆದ್ದರಿಂದ ಪಾಪಕ್ಕೆ ದೇವರು ಕರ್ತನಲ್ಲ. ಪಾಪ ಪುಣ್ಯವಿವೇಚನೆಗೆ ಬುದ್ಧಿಯೇ

ಮಾರ್ಗ. ಧರ್ಮಸೂತ್ರಗಳನ್ನು ಬುದ್ಧಿಯ ಮೂಲಕ ತರ್ಕಿಸಿ ವಿವೇಚಿಸಿ ನೋಡಬೇಕೇ ಹೊರತು ಕಣ್ಣು ಮುಚ್ಚಿಕೊಂಡು ನಡೆಯಬಾರದು. ಮಹಾ ಪಾತಕಿಯಾದವನು, ಮುಸ್ಲಿಮನೇ ಆಗಲಿ, ಪಶ್ಚಾತ್ತಾಪಪಡದೆ ಸತ್ತರೆ ಶಾಶ್ವತ ನರಕದಲ್ಲಿ ನರಳುತ್ತಾನೆ. ಬುದ್ಧಿಗೆ ಯುಕ್ತ ತೋರಿದ್ದೇ ನ್ಯಾಯ, ಧರ್ಮ.

ವ್ಯಾಖ್ಯಾನವಾತೀಯರಲ್ಲಿ ಉಗ್ರಪಕ್ಷದವರೆನ್ನಬಹುದಾದ ಈ ಮೋತಸ್ಸಲರಿಗೂ ವೈದಿಕ ಮುಸ್ಲಿಮರಿಗೂ ಇರುವ ಮುಖ್ಯ ಭೇದ:

ವೈದಿಕರು ಒಪ್ಪುವಂತೆ ವಲಿ ಅಥವಾ ಸಾಧುಗಳನ್ನು ಮೋತಸ್ಸಲರು ಒಪ್ಪುವುದಿಲ್ಲ. ಇವರ ಪ್ರಕಾರ ಎಲ್ಲ ಮುಸ್ಲಿಮರೂ ಒಂದೇ. ಒಬ್ಬನು ಮಹತ್ವಗಳಿಸಿ ಪವಾಡಗಳನ್ನು ಮೆರೆಯಬಹುದಾದರೆ ಮತ್ತೊಬ್ಬನೂ ಅದನ್ನು ಮಾಡಬಹುದು. ವೈದಿಕರು ಒಪ್ಪುವಂತೆ ಇವರು ದಿವ್ಯದರ್ಶನವನ್ನು ಒಪ್ಪುವುದಿಲ್ಲ. ಮೂರನೆಯದಾಗಿ ಪುನರುತ್ಥಾನದ ದಿವಸ ಪಾಪಿಗಳ ಪರವಾಗಿ ಪೈಗಂಬರನು ದೇವರಿಗೆ ಮೊರೆಯಿಡುತ್ತಾನೆ ಎಂಬುದನ್ನು ಮೋತಸ್ಸಲರು ಒಪ್ಪುವುದಿಲ್ಲ. ಮನುಷ್ಯನನ್ನು ದೇವರಲ್ಲಿಗೆ ಕೊಂಡೊಯ್ಯಬೇಕಾದರೆ ಮಧ್ಯಸ್ಥಗಾರನು ಬೇಕಾಗಿಲ್ಲ. ದೇವರು ಒಬ್ಬೊಬ್ಬನನ್ನೂ ಅವನವನ ಕರ್ಮಾನುಸಾರ ವಿಚಾರಣೆ ಮಾಡಿ ತೀರ್ಪು ಕೊಡುತ್ತಾನೆ.

ಮೋತಸ್ಸಲರಲ್ಲಿ ಪ್ರಸಿದ್ಧ ಪುರುಷರು ಮತ್ತು ಗ್ರಂಥಕರ್ತರು:

(೧) ಇರಾನಿನ ಅತಾವಿನ ಮಗ ವಾಸಿಲ್: (ಕ್ರಿ. ಶ. ೭೪೮) ಇವನ ಅನುಯಾಯಿಗಳಿಗೆ ವಾಸಿಲೀಯರು ಎಂದು ಹೆಸರು. ವಾಸಿಲನು ಕುರಾನ್ ದೇವಕೃತವಲ್ಲ, ಆದರೆ ಅದು ದಿವ್ಯಪ್ರಚೋದನೆಗೆ ಒಳಗಾದ ಪೈಗಂಬರ್‌ಕೃತ ಎಂದೂ, ಮನುಷ್ಯಬುದ್ಧಿ ಸನಾತನ ಸಂಪ್ರದಾಯಕ್ಕಿಂತ ಮೇಲೆಂದೂ ವಾದಿಸಿದನು. ಇವನ ಪ್ರಕಾರ ಮಹಾ ಪಾತಕ ಮಾಡಿದ ಮುಸ್ಲಿಮನು ಮುಸ್ಲಿಮನಿಗೂ ಕಾಫಿರನಿಗೂ ನಡುವೆ ಇದ್ದಾನೆ.

(೨) ಬಸ್ರದ ಹುಸ್ಸಯ್ನ್‌ಲ್ ಅಲ್‌ಅಲ್ಲಾಫ್: (ಸ. ಕ್ರಿ. ಶ. ೭೨೮) ಇವನ ಅನುಯಾಯಿಗಳಿಗೆ ಹುಸ್ಸಯ್‌ಲೀಯರು ಎಂದು ಹೆಸರು. ಮೋತಸ್ಸಲರಲ್ಲಿ ಗ್ರಂಥ ಬರೆದಿರುವವರಲ್ಲಿ ಇವನೇ ಮೊದಲನೆಯವನೆಂದು

ತಿಳಿದುಬರುತ್ತದೆ. ಇವನು ಒಳ್ಳೆಯ ವಾಗ್ಮಿಯಾಗಿದ್ದು, ತನ್ನ ವಾದ ಶಕ್ತಿಯಿಂದ ಅನೇಕರನ್ನು ಮುಸ್ಲಿಂ ಧರ್ಮಕ್ಕೆ ಒಪ್ಪಿಸಿ ಸೇರಿಸಿದನು. ಇವನು ವಾಸಿಲನ ಶಿಷ್ಯನಾಗಿದ್ದರೂ, ಹಲವು ವಿಷಯಗಳಲ್ಲಿ ಅವನಿಂದ ಭಿನ್ನಾಭಿಪ್ರಾಯಪಟ್ಟು ಬೇರೆ ಮಾರ್ಗವನ್ನು ಸ್ಥಾಪಿಸಿದನು.

(೩) ಸಯ್ಯಾರ್‌ನ ಮಗ ಇಬ್ರಾಹೀಮ್: (ಸ. ಕ್ರಿ. ಶ. ೮೩೫-೪೫) ಇವನು ನಜ್ಜಾಮ್ ಎಂದು ಬಳಕೆಯಾಗಿದ್ದಾನೆ. ಇವನ ಅನುಯಾಯಿಗಳಿಗೆ ನಜ್ಜಾಮೀಯರು ಎಂದು ಹೆಸರು. ಈ ನಜ್ಜಾಮನು ದೇವತಾಶಾಸ್ತ್ರಜ್ಞನೂ ತಾತ್ವಿಕನೂ ಆಗಿದ್ದು, ವಿಪುಲವಾಗಿ ಬರೆದಿದ್ದಾನೆ. ವ್ಯಾಖ್ಯಾನಮತಕಾರರಲ್ಲಿ ಇವನು ದೊಡ್ಡ ಪ್ರಮಾಣಪುರುಷನೆಂದು ಗಣ್ಯನಾಗಿದ್ದಾನೆ. ಇವನ ಮುಖ್ಯ ತತ್ವನೆಂದರೆ: ದಿವ್ಯದರ್ಶನದ ಆಗತ್ಯವಿಲ್ಲದೆಯೇ ಸ್ವಬೋಧೆಯಿಂದಲೂ ಚಿಂತನ ಮನನದಿಂದಲೂ ಸೃಷ್ಟಿಕರ್ತನನ್ನೂ ಪಾಪಪುಣ್ಯ ವಿವೇಚನೆಯನ್ನೂ ಅರಿಯಬಹುದು. ಮನುಷ್ಯನ ಆತ್ಮ, ಹೂವಿನಲ್ಲಿ ಜೇನು ಹರಿಯುವಂತೆ, ಅವನ ದೇಹದಲ್ಲಿ ಹರಿಯುತ್ತದೆ. ದೇವರು ಪಾಪಮಯನಲ್ಲದ್ದರಿಂದ ಜೀವಿಗಳಿಗೆ ಕೇಡುಂಟುಮಾಡಲಾರ. ಒಳ್ಳೆಯದನ್ನು ಮಾತ್ರ ಉಂಟುಮಾಡಬಲ್ಲ. ದೇವರು ಸಮಸ್ತ ಸೃಷ್ಟಿಯನ್ನೂ ಒಮ್ಮೆಯೇ ಮಾಡಿಬಿಟ್ಟಿದ್ದಾನೆ. ಆದರೆ, ಅವುಗಳ ವ್ಯಕ್ತೀಕರಣ ಮಾತ್ರ ಕಾಲಕ್ರಮದಲ್ಲಿ ಒಂದೊಂದಾಗಿ ಆಗುತ್ತದೆ. ಹೀಗೆ, ಮುಂದೆ ಬರಲಿರುವ ಘಟನೆಗಳು ಕೂಡ ಆಗಲೇ ಕಾಲಗರ್ಭದಲ್ಲಿ ಅಡಗಿಕೊಂಡಿವೆ. ಮುಹಮ್ಮದನ ತರುವಾಯದ ಪೈಗಂಬರನು ಆಗಲೆ ದೇವರಿಂದಲೇ ನಿಯಮಿತನಾಗಿರುತ್ತಾನೆ.

(೪) ಅಬ್ಬಾದ್ ಮಗ ಮೂಮರ್: (ಸ. ಕ್ರಿ. ಶ. ೮೪೦) ಇವನು ಪ್ರಸಿದ್ಧ ನೀತಿತತ್ವಜ್ಞ ವಿದ್ವಾಂಸ. ಇವನ ಅನುಯಾಯಿಗಳಿಗೆ 'ಅಷಬ್ ಎ ಮಾನಿ' ಅಥವಾ ಪಾರಮ್ಯವಾದಿಗಳು (ಐಡಿಯಲಿಸ್ಟ್ಸ್) ಎಂದು ಹೆಸರು.

(೫) ಹಯೆತ್ ಮಗ ಅಹ್ಮದ್: ಇವನು ನಜ್ಜಾಮನ ಶಿಷ್ಯ. ಪುನರುತ್ಥಾನದ ದಿವಸ ಮನುಷ್ಯರನ್ನು ಯೇಸು ವಿಚಾರಣೆ ಮಾಡುತ್ತಾನೆ ಎಂಬುದನ್ನು ಇವನು ಒಪ್ಪಿದ್ದಾನೆ. ಪುಣ್ಯಕರ್ಮಿಗಳು

ಸ್ವರ್ಗವನ್ನೂ ಪಾಪಕರ್ಮಿಗಳು ನರಕವನ್ನೂ ಅನುಭವಿಸುತ್ತಾರೆ; ಪುಣ್ಯಪಾಪಮಿಶ್ರಕರ್ಮಿಗಳು ಮತ್ತೆ ಭೂಮಿಗೆ ಇಳಿದು ಮನುಷ್ಯ ಅಥವಾ ಪ್ರಾಣಿಯಾಗಿ ಹುಟ್ಟಿ ಪಾಪಕ್ಕೆ ಪ್ರಾಯಶ್ಚಿತ್ತ ಪಡೆದು ಶುದ್ಧರಾಗಿ ಕೊನೆಗೆ ಮುಕ್ತರಾಗುತ್ತಾರೆ ಎಂಬುದು ಇವನ ನಂಬಿಕೆ.

(೬) ಅಬ್ದುಲ್ ವಹ್ಹಾಬ್ ಮಗ ಅಬುಅಲೀ ಮುಹಮ್ಮದ್: (ಸ.ಕ್ರಿ.ಶ. ೯೧೬) ಇವನು ಜುಬ್ಬಯಿ ಎಂಬ ಹೆಸರಿನಿಂದ ಪ್ರಸಿದ್ಧನಾಗಿದ್ದಾನೆ. ಇರಾನಿನ ಖುಜ್ಜಿಸ್ತಾನಿನವನು. ಮೋತಜ್ಜಲ ತತ್ತ್ವದ ಮೇಲೆ ಗ್ರಂಥ ಬರೆದಿರುವುದಲ್ಲದೆ, ವಿರೋಧಿಗಳ ಮತವನ್ನು ಖಂಡಿಸಿ ಹಲವು ಲೇಖನಗಳನ್ನೂ ಬರೆದಿದ್ದಾನೆ. ಇವನು ಬಸ್ರದ ಯೂಸುಫ್ ಷಹಾಮನ ಶಿಷ್ಯ. ಇವನೂ ಇವನ ಮಗ ಅಬೂ ಹಾಷಿಮನೂ ಇತರ ಮೋತಜ್ಜಲ ವಿದ್ವಾಂಸರಿಂದ ಹಲವು ವಿಷಯಗಳಲ್ಲಿ ಭಿನ್ನಾಭಿಪ್ರಾಯಪಟ್ಟು ತಮ್ಮದೇ ಬೇರೆ ಮಾರ್ಗವನ್ನು ಅನುಸರಿಸಿದರು. ಈ ಅಬೂ ಹಾಷಿಮನು (ಸ.ಕ್ರಿ.ಶ. ೯೩೩) ಬಾಹಾಷಿಮೀಯ ಎಂಬ ಮಾರ್ಗದ ಪ್ರವರ್ತಕನಾದನು.

(೭) ಬಹ್‌ರ್ ಮಗ ಜಾಹಿಜ್ ಎಂದು ಪ್ರಸಿದ್ಧನಾಗಿರುವ ಅಮ್ರ್: (ಸ. ಕ್ರಿ. ಶ. ೮೭೭) ಇವನು ದೊಡ್ಡ ದಾರ್ಶನಿಕನೂ ದೇವತಾಶಾಸ್ತ್ರಜ್ಞನೂ ಗ್ರಂಥಕರ್ತನೂ ಆಗಿದ್ದನು. ಕೇವಲ ಊಹಾಪೋಹಾತ್ಮಕವಾದ ಚರ್ಚೆಯಲ್ಲಿ ಇವನು ನಂಬದೆ, ತನ್ನ ವಾದವನ್ನು ಅನುಭವ ಮತ್ತು ಚರಿತ್ರಾಂಶಗಳ ಮೇಲೆ ಕಟ್ಟಿದ್ದಾನೆ.

(೮) ಅಮ್ರ್ ಮಗ ಹಿಷಾಮ್: ಇವನು ಹಿಷಾಮಿಯ ಮತದ ಪ್ರವರ್ತಕನಾದನು. ಇವನು ಮನುಷ್ಯನ ಸ್ವತಂತ್ರ ಇಚ್ಛಾಶಕ್ತಿಯನ್ನು ಇತರ ಮೋತಜ್ಜಲ ಮತೀಯರಿಗಿಂತಲೂ ಹೆಚ್ಚು ಒತ್ತಿ ಹೇಳಿದ್ದಾನೆ. ಕೊನೆಗೆ, ಕುರಾನಿನಲ್ಲಿ ಹೇಳಿರುವಂತೆ ದೇವರಲ್ಲಿ ನಂಬಿಕೆ ಶ್ರದ್ಧೆ ಕೂಡ ದೇವದತ್ತವಲ್ಲ, ಅದು ಮನುಷ್ಯನ ಬುದ್ಧಿಲಬ್ಧ ಎನ್ನುವವರೆಗೂ ಹೋಗಿದ್ದಾನೆ.

ಇನ್ನೂ ಎಷ್ಟೋ ಜನ ವಿದ್ವಾಂಸರು ಮೋತಜ್ಜಲ ತತ್ತ್ವದ ವಿಷಯವನ್ನು ಕುರಿತು ಬರೆದಿದ್ದಾರೆ. ಆದರೆ, ಎಲ್ಲರನ್ನೂ ಕುರಿತಾಗಲಿ ಎಲ್ಲ

ವನ್ನೂ ಕ್ರೋಡೀಕರಿಸಿ ವ್ಯವಸ್ಥೆಗೆ ತರುವುದಾಗಲಿ ಅಸಾಧ್ಯದ ಮಾತು. ಒಟ್ಟಿನಲ್ಲಿ ಎಲ್ಲ ಮೋತಸ್ಸಲ ಮತೀಯರಿಗೂ ಸಾಮಾನ್ಯವೂ ತಳ ಹದಿಯೂ ಆದ ತತ್ತ್ವವೆಂದರೆ, ಹಿಂದೆಯೇ ಹೇಳಿದಂತೆ, ಇಸ್ಲಾಂ ಧರ್ಮ ತತ್ತ್ವಗಳನ್ನು ವಿವೇಚನಾಪೂರ್ವಕವಾಗಿ ಪರೀಕ್ಷಿಸಿ, ಅವನ್ನು ಬುದ್ಧಿ ಮಾರ್ಗಕ್ಕೆ ಸರಿಹೊಂದಿಸುವುದು. ಇವರು ತಮ್ಮ ವಾದವನ್ನು ಸಮರ್ಥಿ ಸುವುದಕ್ಕಾಗಿ ಕುರಾನ್ ವಚನಗಳನ್ನೇ ಎತ್ತಿ ಹೇಳುತ್ತಾರೆ. ಸಾಮಾನ್ಯ ವಾಗಿ ಇವರು ಉದ್ಧರಿಸುವ ವಚನಗಳಲ್ಲಿ ಕೆಲವು:

"ನಿನಗೆ ಬರುವ ಒಳ್ಳೆಯದೆಲ್ಲ ದೇವರಿಂದ ಬಂದದ್ದು. ತಟ್ಟಿದ ಕೇಡೆಲ್ಲ ನಿನ್ನಿಂದಲೇ ಆದದ್ದು."

"ಪಾಪ ಮಾಡುವವನು ತನ್ನ ಆತ್ಮಕ್ಕೇ ಅಪರಾಧ ಮಾಡು ತ್ತಾನೆ."

"ಅವರ ವಿಧಿ ಬಂದೆಳೆಯುವಾಗ ತಡಮಾಡಲಾರರು. ವಿಧಿಗಿಂತ ಒಂದುಕ್ಷಣ ಮುಂಚೆಯೂ ಹೋಗಲಾರರು."

"ನಾವು (ದೇವರು) ಅವರಿಗೆ ಅನ್ಯಾಯ ಮಾಡಲಿಲ್ಲ. ತಮಗೆ ತಾವೇ ಅನ್ಯಾಯ ಮಾಡಿಕೊಂಡರು."

"ಅಂತಿಮ ದಿನದಲ್ಲಿ ಪ್ರತಿಯೊಂದು ಆತ್ಮವೂ ತನಗೆ ತಾನೇ ವಾದಿಸಬೇಕು. ತನ್ನ ಕರ್ಮಾನುಸಾರವಾಗಿ ಪ್ರತಿಫಲ ಪಡೆಯಬೇಕು."

"ಪ್ರತಿಯೊಬ್ಬನ ಕರ್ಮವೂ ಅವನವನ ಕೊರಳಿಗೇ ಕಟ್ಟಿದೆ."

"ಅಣುಮಾತ್ರ ಪುಣ್ಯ ಮಾಡಿದವನೂ ಅಣುಮಾತ್ರ ಪಾಪ ಮಾಡಿದವನೂ ಪುಣ್ಯಪಾಪಗಳಿಗೆ ತಕ್ಕ ಫಲ ಉಂಡೇ ಉಣ್ಣುತ್ತಾನೆ."

"ಒಳ್ಳೆಯ ದಾರಿಯಲ್ಲಿ ನಡೆಯುವವನು ಸ್ವಪ್ರೇರಣೆಯಿಂದಲೇ ನಡೆಯುತ್ತಾನೆ. ಹಾಗೆಯೇ, ಕೆಟ್ಟ ದಾರಿಯಲ್ಲಿ ನಡೆಯುವವನೂ ತನ್ನಿಂದಲೇ ಹಾಗೆ ನಡೆಯುತ್ತಾನೆ."

"ಒಬ್ಬ ಪಾಪಿ ಮತ್ತೊಬ್ಬನ ಪಾಪದ ಹೊರೆಯನ್ನು ಹೊರುವು ದಿಲ್ಲ."

"ಮನುಷ್ಯನು ಸಾಧಿಸಿದ ಹೊರತು ಯಾವುದೂ ಲಭಿಸುವುದಿಲ್ಲ. ಸಾಧನೆಗೆ ತಕ್ಕ ಫಲ ದೊರೆತೇ ದೊರೆಯುತ್ತದೆ."

ಅಷಾಎರರು: ಮೋತಸ್ಲಲರು ಬುದ್ಧಿಮಾರ್ಗದಲ್ಲಿಯೇ ಬಹು ದೂರ ಮುಂದುವರಿದು, ಅತಿಸೂಕ್ಷ್ಮಭೇದಕವಾದ ಇವರ ವಾದಸರ ಣಿಯೂ ಪ್ರತಿಪಾದನ ರೀತಿಯೂ ಜನಸಾಮಾನ್ಯಕ್ಕೆ ಹಿಡಿಯದೆ ಹೋಗಿ, ವಿದ್ವಾಂಸರಿಗೂ ಜನಸಾಮಾನ್ಯಕ್ಕೂ (ಅದರಲ್ಲೂ ಮೋತಸ್ಲಲ ವಿದ್ವಾಂಸ ರಿಗೂ ವೈದಿಕರಿಗೂ) ಅಂತರ ಏರ್ಪಟ್ಟಿತು. ಇದರಿಂದ ಅಬುಲ್ ಹಸನ್ ಅಷರಿ ಎಂಬವನ ನೇತೃತ್ವದಲ್ಲಿ ಅಷಾಎರ ಎಂಬ ಒಂದು ಹೊಸ ಮಾರ್ಗ ಏರ್ಪಟ್ಟಿತು. ಜನಸಾಮಾನ್ಯಕ್ಕೆ ಹಿಡಿಯುವಂತೆ ಕುರಾನ್ ತತ್ವಗಳನ್ನು ವಿವರಿಸಿ ಬೋಧಿಸುವುದೇ ಈ ಮತೀಯರ ಮುಖ್ಯ ಉದ್ದೇಶವಾಗಿತ್ತು. ಇವರು ಶುದ್ಧ ವೈದಿಕ ಮತಕ್ಕೂ ಮೋತ ಸ್ಲಲರ ಪರಮತಾತ್ವಿಕ ಮತಕ್ಕೂ ನಡುವಣ ಮಾರ್ಗವನ್ನು ಹಿಡಿದರು. ಮೋತಸ್ಲಲರಂತೆಯೇ ಅಷಾಎರರೂ ತಮ್ಮ ವಾದಸಮರ್ಥನೆಗೆ ಕುರಾನ್ ವಚನಗಳನ್ನೇ ಉದ್ಧರಿಸತೊಡಗಿದರು.

ಅಷಾಎರರ ಮುಖ್ಯ ತತ್ವವೆಂದರೆ: ದೇವರು ಮನ ಬಂದಂತೆ ಮಾಡುತ್ತಾನೆ. ಅವನು ಸರ್ವತಂತ್ರ ಸ್ವತಂತ್ರಪ್ರಭು. ದೇವೇಚ್ಛೆಯೇ ಧರ್ಮ. ಬುದ್ಧಿಬಲದಿಂದ ಐಹಿಕಜ್ಞಾನ ಪಡೆಯಬಹುದೇ ಹೊರತು ಪರ ಧರ್ಮವನ್ನು ತಿಳಿಯುವುದಕ್ಕಾಗುವುದಿಲ್ಲ. ದೇವರ ಗುಣಭಾವಗಳು ಬೇರೆಯಾದದ್ದರಿಂದ ಸೃಷ್ಟಿಗೂ ಸೃಷ್ಟಿಕರ್ತನಿಗೂ ಹೋಲಿಕೆಯಿಡಲಾ ಗುವುದಿಲ್ಲ. ದೈವಸಂಕಲ್ಪದಿಂದಲೇ ಪಾಪಪುಣ್ಯಗಳೆರಡೂ ಹೊರಡು ತ್ತವೆ. ಮನುಷ್ಯನು ಸಾಧನಮಾತ್ರದವನು. ನಿಜವಾದ ಕಾರ್ಯ ಕರ್ತ ದೈವೇಚ್ಛೆ. ವಸ್ತುತಃ ಒಳ್ಳೆಯದು ಕೆಟ್ಟದ್ದು ಎನ್ನುವುದು ಯಾವುದೂ ಇಲ್ಲ. ದೇವರ ಧರ್ಮ ಮನುಷ್ಯರ ಧರ್ಮಕ್ಕೆ ಸರಿಬರದೆ ಇದ್ದರೂ ಇರಬಹುದು. ದೇವರು ಒಳ್ಳೆಯದಕ್ಕೆ ಶಿಕ್ಷೆಯನ್ನೂ ಕೆಟ್ಟ ದ್ದಕ್ಕೆ ಸತ್ಫಲವನ್ನೂ ಕೊಡಬಹುದು. ಕೆಲವರನ್ನು ಒಳ್ಳೆಯ ದಾರಿ ಯಲ್ಲೂ ಕೆಲವರನ್ನು ಕೆಟ್ಟ ದಾರಿಯಲ್ಲೂ ಒಯ್ಯಬಹುದು. ಇಷ್ಟಾನಿಷ್ಟ ಗಳೂ, ಸದಸತ್ತುಗಳೂ, ಕಸ್ಸಾ ಮತ್ತು ಕದರ್ (ವಿಧಿ ಮತ್ತು ದೈವ ನಿಯಾಮಕ) ಇವುಗಳ ಅನುಸಾರವಾಗಿ ಬಂದು ಒದಗುತ್ತವೆ. ಅಂತ್ಯ ವಿಚಾರಣ ದಿನದಲ್ಲಿ ದೇವರು ನಂಬಿದ್ದವರಿಗೆ ಮಾತ್ರ ಕಾಣಿಸಿಕೊಳ್ಳು,

ತ್ತಾನೆ. ಆ ದಿನ ಪ್ರತಿಯೊಬ್ಬರ ಪಾಪಪುಣ್ಯಗಳನ್ನೂ ತೂಗಲಾಗುತ್ತದೆ. ಆದರೆ ಮುಸ್ಲಿಮರು ಪಾಪ ಮಾಡಿದರೂ ಅವರು ನಂಬದವರಲ್ಲಿ ಸೇರುವು ದಿಲ್ಲ. ಪೈಗಂಬರನು ಪಾಪಕರ್ಮಿಗಳ ಪರವಾಗಿ ದೇವರಲ್ಲಿ ಮೊರೆ ಯಿಟ್ಟು ಕೆಲವು ಪಾಪಿಗಳನ್ನು ನರಕಶಿಕ್ಷೆಯಿಂದ ಬಿಡಿಸುತ್ತಾನೆ. ಸ್ವರ್ಗ ನರಕಗಳು ವಾಸ್ತವಿಕವಾದುವು. ಮುನ್‌ಕ್ಕರ್ ಮತ್ತು ನಕೀರ್ ಎಂಬ ಇಬ್ಬರು ದೇವದೂತರು ಮನುಷ್ಯನು ಸತ್ತಮೇಲೆ, ಗೋರಿಯಲ್ಲಿ ಅವ ನನ್ನು ಇಸ್ಲಾಂ ಧರ್ಮದ ಪ್ರಕಾರ ಪ್ರಶ್ನೆಮಾಡಿ ವಿಚಾರಿಸುತ್ತಾರೆ.

ಅಷಾಏರಿ ಮತದಲ್ಲಿ ಹಲವು ವಿದ್ವಾಂಸರು ಆಗಿಹೋದರು. ಇವ ರಲ್ಲಿ ಕೆಲವರನ್ನು ಮಾತ್ರ ಕುರಿತು ಸ್ಥೂಲವಾಗಿ ಹೇಳುತ್ತದೆ.

(೧) ಇಸ್ಮಾಯಿಲ್ ಮಗ ಅಬು ಹಸನ್ ಅಲಿ: ಇವನು ಅಷರಿ ಎಂದು ಪ್ರಸಿದ್ಧನಾಗಿದ್ದಾನೆ. ಇವನಿಂದಲೇ ಅಷಾಏರ ಎಂದು ಈ ಮತಕ್ಕೆ ಹೆಸರಾದದ್ದು. ಇವನು ಕ್ರಿ. ಶ. ೯ನೆಯ ಶತಮಾನದ ಅಂತ್ಯದಲ್ಲಿ ಬಸ್ರದಲ್ಲಿ ಜನಿಸಿದನು. ಅಬೂಮೂಸ ಅಷರಿಯ ಸಂತತಿ ಯವನು. ಮೋತಸ್ಸಲಮತದ ಅಬ್ದುಲ್‌ವಹ್ಹಾಬ್ ಜುಬ್ಬಯಿಯ ಶಿಷ್ಯನಾಗಿದ್ದು, ಅವನ ಬೋಧೆಯಿಂದ ತೃಪ್ತನಾಗದೆ, ಮೊದಲೇ ಹೇಳಿ ದಂತೆ ಶುದ್ಧ ವೈದಿಕ ಮತಕ್ಕೂ ಮೋತಸ್ಸಲರ ಪರಮ ತಾತ್ವಿಕ ಮತಕ್ಕೂ ನಡುವಣ ಮತವಾದ ಅಷಾಏರ ಮತವನ್ನು ಪ್ರಚಾರಕ್ಕೆ ತಂದನು. ಇವನು ಬಹು ವಿಪುಲವಾಗಿ ಬರೆದು ಸುಮಾರು ನೂರು ಗ್ರಂಥಗಳನ್ನು ರಚಿಸಿದ್ದಾನೆ. ಆದರೆ, ನಮಗೆ ಐದು ಗ್ರಂಥಗಳು ಮಾತ್ರ ಉಳಿದು ಬಂದಿವೆ. ಈ ಮತದ ಮುಖ್ಯ ತತ್ವಗಳನ್ನು ಮೊದಲೇ ಹೇಳಿರುವು ದರಿಂದ, ಇವನು ತನ್ನ ಗ್ರಂಥದಲ್ಲಿ ಪ್ರತಿಪಾದಿಸಿರುವುದನ್ನು ಇಲ್ಲಿ ಹೇಳು ವುದು ಅನಾವಶ್ಯಕ.

(೨) ಅಬೂಬಕ್‌ರ್ ಬಕಿಲಾನಿ: (ಸ. ಕ್ರಿ. ಶ. ೧೦೨೫) ಇವನು ಅಷರಿಯ ಶಿಷ್ಯ; ಮತ್ತು ಅಷಾಏರ ತತ್ವವಿಷಯದಲ್ಲಿ ಪ್ರಮಾಣಪುರುಷ ನೆಂದು ಗಣ್ಯನಾಗಿದ್ದಾನೆ

(೩) ಅಬೂಸಾಹಿಕ್ ಇಸ್‌ಫೆರಾಯುನಿ: (ಸ. ಕ್ರಿ. ಶ. ೧೦೪೦) ಇವನು ದೊಡ್ಡ ವಿದ್ವಾಂಸನೂ ದೇವತಾಶಾಸ್ತ್ರಜ್ಞನೂ ಆಗಿದ್ದು, ಮಧ್ಯ

ಮತ್ತು ಪೂರ್ವ ಇರಾನಿನಲ್ಲಿ ಬಹು ಪ್ರಸಿದ್ಧಿಗೆ ಬಂದು, ಹಲವು ಗ್ರಂಥಗಳನ್ನು ಬರೆದಿದ್ದಾನೆ. ಇವನ ಪ್ರಕಾರ ಮನುಷ್ಯಕರ್ಮಗಳು ದೈವೇಚ್ಛೆ ಮತ್ತು ಮನುಷ್ಯೇಚ್ಛೆ ಕೂಡಿ ಆಗುತ್ತವೆ. ಪಾಪಪುಣ್ಯಗಳ ವಿವೇಚನೆ ಕೇವಲ ಮಾನವ ಬುದ್ಧಿಯಿಂದಲೇ ಸಾಧ್ಯವಲ್ಲದ್ದರಿಂದ, ದರ್ಶನಲಬ್ಧ ವಿಧಿಗಳನ್ನು ಪಾಲಿಸಿ ನಡೆಯಬೇಕು. ತೊತ್ತು ಒಡೆಯನನ್ನು ಸೇವಿಸುವಂತೆ ಮನುಷ್ಯನು ದೇವರನ್ನು ಸೇವಿಸಬೇಕು.

(೪) ಅಬ್ದುಲ್ ಮಲಿಕ್ ಜುವಯ್ನಿ: (ಕ್ರಿ. ಶ. ೧೦೪೧–೧೧೦೦) ಇವನು ಮೊದಲು ತನ್ನ ತಂದೆಯಲ್ಲೂ ತರುವಾಯ ಅಬುಲ್ ಕಾಸಿಮ್ ಇಸ್‌ಕಾಫ್ಲಿಯಲ್ಲೂ ವ್ಯಾಸಂಗ ಮಾಡಿದನು. ಮೆಕ್ಕ ಮತ್ತು ಮದೀನಗಳ ಮಧ್ಯದಲ್ಲಿ ವಾಸಿಸುತ್ತಿದ್ದದ್ದರಿಂದ ಇವನನ್ನು ಇಮಾಮ್ ಉಲ್‌ಹರ್‌ಮಯ್ನ್ ಎಂದು ಕರೆಯುತ್ತಿದ್ದರು. ಇವನು ಸುಮಾರು ಮೂವತ್ತು ವರ್ಷಗಳು ನಿಷಾಪುರಿನ ನಿಸ್ಸಾಮಿಯ್ಯ ವಿದ್ಯಾಲಯದ ಮುಖ್ಯಾಧಿಕಾರಿಯಾಗಿದ್ದನು. ಇವನು ಅಷಾಎರ ದೇವತಾಶಾಸ್ತ್ರಜ್ಞನಾಗಿದ್ದರೂ ಕೆಲವು ಸ್ವತಂತ್ರಾಭಿಪ್ರಾಯಗಳನ್ನೂ ಇಟ್ಟುಕೊಂಡಿದ್ದನು.

(೫) ಅಬ್ದುಲ್‌ಕರೀಮ್ ಷರಸ್ತಾನಿಯ ಮಗ ಮುಹಮ್ಮದ್: (೧೨ನೆಯ ಶತಮಾನ) ಇವನ ಪ್ರಸಿದ್ಧಗ್ರಂಥ 'ಮಿಲಲ್‌ವನ್ ನಹ್‌ಲ್' ಇದು ಗ್ರೀಕ್ ಮತ್ತು ಮುಸ್ಲಿಂ ಧರ್ಮಗಳ, ಮತಗಳ ಮತ್ತು ತತ್ವಗಳ ವಿಷಯವನ್ನು ಕುರಿತದ್ದು.

(೬) ಇಮಾಮ್ ಫಖ್‌ರುದ್ದೀನ್ ರಾಜ್ಹಿ (ಕ್ರಿ. ಶ. ೧೧೬೬–೧೨೦೯) ಇವನು ಅಷಾಎರ ಮತದ ಪ್ರಸಿದ್ಧ ಲೇಖಕರಲ್ಲೊಬ್ಬನು. ದೇವತಾಶಾಸ್ತ್ರವಿಷಯದಲ್ಲಿ ಷಾಫ್ಲಯ್ ಮತಾನುಯಾಯಿಯಾಗಿದ್ದನು. ಇವನ ಮುಖ್ಯ ತತ್ವ ಮನುಷ್ಯನು ಸ್ವತಂತ್ರನಲ್ಲ; ದೇವರ ಅಧೀನ ಎಂಬುದು.

(೭) ಘಸ್ಸಾಲಿ ಎಂದು ಪ್ರಸಿದ್ಧನಾಗಿರುವ ಹುಜ್ಜತುಲ್ ಇಸ್ಲಾಮ್ ಇಮಾಮ್ ಮುಹಮ್ಮದ್: (ಕ್ರಿ. ಶ. ೧೦೫೩–೧೧೧೭) ಇವನು ತನ್ನ ಎಳೆಯ ವಯಸ್ಸಿನಲ್ಲಿ ಬಹಳ ಪ್ರಖ್ಯಾತನಾಗಿ, ಬಗ್‌ದಾದಿನ ನಿಸ್ಸಾಮಿಯ್ಯ ವಿದ್ಯಾಶಾಲೆಯಲ್ಲಿ ಅಧ್ಯಾಪಕನಾಗಿ ನಿಯಮಿತನಾದನು.

ಇವನು ನೀತಿ, ತರ್ಕ, ದರ್ಶನ, ದೇವತಾಶಾಸ್ತ್ರ—ಮೊದಲಾದ ನಾನಾ ವಿಷಯಗಳ ಮೇಲೆ ಸುಮಾರು ೭೦ ಗ್ರಂಥಗಳನ್ನು ಬರೆದಿದ್ದಾನೆ. ಇವುಗಳಲ್ಲಿ ಮುಖ್ಯವಾದುವು: (೧) "ಅಲ್‌ಮುನ್ ಕಸ್‌ಮಿನ್ ಅಸ್ ಸ್ಥಲಲ್" (ತಪ್ಪಿನಿಂದ ಬಿಡಿಸಿ ಕಾಪಾಡುವವನು); (೨) "ತಹಾಫ್ಲ ತುಲ್‌ಫ್ಲಿಲಿಸಫ್ಲ" (ದಾರ್ಶನಿಕರ ಧ್ವಂಸ); (೩) "ಮಿಸಾನ್ ಉಲ್ ಅಮಲ್" ಎಂಬ ತರ್ಕಗ್ರಂಥ; (೪) "ಅಹ್ಯ ಉಲ್‌ಉಲುಮ್" (ಧರ್ಮಶಾಸ್ತ್ರ ಪುನರುಜ್ಜೀವನ); (೫) "ವಾಜಿಸ್" ಎಂಬ ದೇವತಾ ಶಾಸ್ತ್ರ ಗ್ರಂಥ; (೬+೭) "ಮುಹ್‌ಕುನ್‌ನಸ್ಸರ್" ಮತ್ತು ಮೆಯಾ ರುಲ್ ಇಲ್‌ಮ್" ಎಂಬ ತರ್ಕಗ್ರಂಥಗಳು; (೮) "ಮಕ್‌ಸದುಲ್ ಫ್ಲಿಲಿಸಫ್ಲ" ಎಂಬ ತರ್ಕ, ಪ್ರಕೃತಿಶಾಸ್ತ್ರ, ಆಧ್ಯಾತ್ಮಶಾಸ್ತ್ರ,—ಮೊದಲಾದ ಹಲವು ವಿಷಯಗರ್ಭಿತವಾದ ಗ್ರಂಥ.

ತಾನೇ ಹೇಳಿಕೊಂಡಿರುವಂತೆ ಘಸ್ಸಾಲಿ ನಾನಾ ಮಾರ್ಗಗಳಿಂದ ಸತ್ಯಾನ್ವೇಷಣ ಮಾಡಿದವನು. ದೇವತಾಶಾಸ್ತ್ರ ಮತ್ತು ವ್ಯಾಖ್ಯಾನ ಮತೀಯರ ದರ್ಶನಗಳಿಂದ ಮೊದಲುಮಾಡಿ, ಅಲ್ಲಿ ತೃಪ್ತಿಹೊಂದದೆ ಇಸ್ಮಾಯೀಲಿಯ ಬಾತಿನೀಯ ಮೊದಲಾದ ಮತಗಳನ್ನು ಪ್ರವೇಶಿಸಿ ಅಲ್ಲೂ ತೃಪ್ತಿ ಹೊಂದದೆ, ಶುದ್ಧ ದರ್ಶನವನ್ನು ಹೊಕ್ಕು ಅಲ್ಲೂ ತೃಪ್ತಿ ಹೊಂದದೆ, ಕೊನೆಗೆ ಸೂಫ್ಲಿಧರ್ಮದ ಮರೆಹೊಕ್ಕು, ಅದರಲ್ಲಿಯೇ ನೆಲಸಿ ನೆಮ್ಮದಿ ಕಂಡನು. ಇತರ ವ್ಯಾಖ್ಯಾನ ಮತೀಯರಂತೆ ಇವನೂ ತನ್ನ ತತ್ವವನ್ನು ದೇವರೇ ಪರಮೇಷ್ಠಿ, ಪರಮಭಾವನೆ ಮತ್ತು ಸೃಷ್ಟಿ ಕರ್ತ ಎಂಬ ನಂಬಿಕೆಯ ಮೇಲೆ ಅವಲಂಬಿಸಿದನು. ದೇವರು ಮನುಷ್ಯ ನನ್ನು ದ್ರವ್ಯ ಮತ್ತು ಆತ್ಮದ ಸಂಘಟನೆಯಿಂದ ಸೃಷ್ಟಿಸಿ ಉಸಿರೆರೆದವನು ಎಂಬುದು ಇವನ ನಂಬಿಕೆ. ಹೀಗೆ ಮನುಷ್ಯನ ಆತ್ಮ ಅಪೂರ್ಣವೂ ಅಭೌತವೂ ಆಗಿದ್ದು, ಪರಮಾತ್ಮನಾದ ದೇವರ ಪಡಿನೆಳಲಿನಂತಿರು ವುದು. ಹಲವು ವಿಷಯಗಳಲ್ಲಿ ಇವನು ಅಷಾಎರ ತತ್ವಗಳನ್ನೇ ಅನು ಸರಿಸಿರುವುದರಿಂದ ಇವನನ್ನು ಅಷಾಎರ ಮತಾನುಯಾಯಿಗಳಲ್ಲಿ ಸೇರಿ ಸಿದೆ. ಆದರೆ, ಇವನು ಕೆಲವು ವಿಷಯಗಳಲ್ಲಿ ಶುದ್ಧ ದಾರ್ಶನಿಕ ತತ್ವ ಗಳನ್ನೊ ಅಥವಾ ಸೂಫ್ಲಿ ತತ್ವಗಳನ್ನೊ ಅನುಸರಿಸಿದ್ದಾನೆ. ಸದಸದ್

ವಿವೇಚನೆ ಬುದ್ಧಿಯ ಮೂಲಕ ಲಭಿಸುವುದಿಲ್ಲವೆಂಬುದನ್ನು ಇವನು ಒಪ್ಪಲಿಲ್ಲ. ಅಲ್ಲದೆ, ಅಷಾಏರರು ಹೇಳುವಂತೆ ಸೃಷ್ಟಿ ಗುರಿಯಿಲ್ಲದ್ದು, ಅರ್ಥವಿಲ್ಲದ್ದು, ದೇವರ ಲೀಲೆ ಮಾತ್ರದ್ದು ಎಂಬುದನ್ನೂ ಒಪ್ಪಲಿಲ್ಲ. ಇವನ ಪ್ರಕಾರ ಪರಲೋಕದ ಸುಖದುಃಖಗಳು ಕೇವಲ ಮಾನಸಿಕ ಅನುಭವಗಳು; ತಪ್ಪಿಗೆ ಶಿಕ್ಷೆ ಕೊಡುವವನು ದೇವರಲ್ಲ; ಮನುಷ್ಯನು ತನ್ನನ್ನು ತಾನೇ ಶಿಕ್ಷಿಸಿಕೊಳ್ಳುತ್ತಾನೆ; ಮನುಷ್ಯನು ಸತ್ತ ಮೇಲೂ ಅವನಿಗೆ ಆಲೋಚನಾಶಕ್ತಿಯಿದ್ದು, ಇಹಜನ್ಮದ ವಾಸನಾನುಸಾರ ಮುಂದೆಯೂ ಯೋಚಿಸತೊಡಗುತ್ತಾನೆ, ಸತ್ತವನ ಪುನರುತ್ಥಾನ ಅದೇ ಶರೀರದಲ್ಲಾಗಬೇಕಾಗಿಲ್ಲ; ಬೇರೆ ಶರೀರದಲ್ಲೂ ಆಗಬಹುದು. ಘಸ್ಸಾಲಿ ಪೈಗಂಬರರ ವಿಷಯವನ್ನು ಪ್ರಸ್ತಾಪಿಸುವಾಗ, ಮನುಷ್ಯನು ಅಜ್ಞಾನದಿಂದ ಜ್ಞಾನಕ್ಕೆ ಕ್ರಮೇಣ ಪರಿಣಾಮ ಹೊಂದುವುದನ್ನು ಹೇಳಿ, ಇತರರಿಗಿಲ್ಲದ ಅಸಾಧಾರಣಶಕ್ತಿ ಪೈಗಂಬರರಿಗೆ ಇದ್ದು ಆ ಶಕ್ತಿಯ ಮೂಲಕ ಅವರು ಪ್ರಕೃತಿ ರಹಸ್ಯವನ್ನು ಭೇದಿಸಿ ಕೆಲಸ ನಡಸುತ್ತಾರೆಂದೂ, ಆ ಗುಟ್ಟು ಅರಿಯದವರಿಗೆ ಆ ಕೆಲಸಗಳು ಅತಿಮಾನುಷವಾಗಿ ಕಾಣುತ್ತವೆಂದೂ ಹೇಳುತ್ತಾನೆ. ಪೈಗಂಬರರು ಆತ್ಮರೋಗವನ್ನು ಗುಣಪಡಿಸುವ ಆಧ್ಯಾತ್ಮ ವೈದ್ಯರೆಂದು ಘಸ್ಸಾಲಿಯ ನಂಬಿಕೆ.

ಘಸ್ಸಾಲಿ ಇರಾನಿನ ಪ್ರಸಿದ್ಧ ವ್ಯಾಖ್ಯಾನಮತೀಯರಲ್ಲಿ ಕೊನೆಯವನು. ಇವನ ಬರವಣಿಗೆಯಿಂದ ಇಸ್ಲಾಂ ಧರ್ಮದಲ್ಲಿ ದೇವತಾಶಾಸ್ತ್ರ ದರ್ಶನವನ್ನು ಮುಟ್ಟಿನಿಂತಿತು. ಮುಂದೆ ಬಂದ ಮಂಗೋಲಿಯನ್ ಮತ್ತು ಸಫವಿಕಾಲಗಳಲ್ಲಿ ಇರಾನ್ ಮತ್ತು ಇಂಡಿಯಗಳಲ್ಲಿ ಹಲವು ವಿದ್ವಾಂಸರು ಆಗಿಹೋದರೂ, ಘಸ್ಸಾಲಿಯನ್ನು ಮೀರಿಸಿದವರಾಗಲಿ ಮುಟ್ಟಿದವರಾಗಲಿ ಒಬ್ಬರೂ ಇಲ್ಲ. ಸಫವಿಯರ ಕಾಲದಲ್ಲಿ ಸದ್‌ರುದ್ದೀನನ ಶಿಷ್ಯನಾದ ಮುಲ್ಲಾ ಅಬ್ದುರ್‌ರಸ್ಸಾಕ್ ಲಾಹಿಜೀ "ಗೌಹರ್‌ಎ ಮುರಾದ್" ಎಂಬ ಗ್ರಂಥವನ್ನು ಬರೆದಿದ್ದಾನೆ. ಇದರಲ್ಲಿ ಷಿಯಾಮತದೃಷ್ಟಿ ಕಂಡು ಬರುತ್ತದೆ. ಇಂಡಿಯದಲ್ಲಿ ಡೆಲ್ಲಿಯ ಷಹವಲೀಯುಲ್ಲ ಎಂಬ ವಿದ್ವಾಂಸನು (ಹು. ಕ್ರಿ. ಶ. ೧೭೦೩) ದೇವತಾಶಾಸ್ತ್ರದ ವಿಷಯದ ಮೇಲೆ ಗ್ರಂಥಗಳನ್ನು ಬರೆದಿದ್ದಾನೆ. ಇವನ

ಮುಖ್ಯಗ್ರಂಥ "ಹುಜ್ಜತುಲ್ಲಾಹ್ ಏಬಾಲಿಗ" ಎಂಬುದು. ಈ ಗ್ರಂಥದಲ್ಲಿ ದೈವನಿಯಾಮಕದ ಅಚಲತೆ, ಆತ್ಮದ ಸತ್ಯ, ಪಾಪಪುಣ್ಯಗಳ ಫಲ, ಅಂತ್ಯ ಮಹಾವಿಚಾರಣೆ, ಪೈಗಂಬರನ ಅಧಿಕಾರ, ಸರ್ವಧರ್ಮಗಳ ಮೂಲ, ಧರ್ಮಗಳಲ್ಲಿ ಮೇಲೆ ಮಾತ್ರ ತೋರುವ ಪರಸ್ಪರ ಭೇದ, ಪರಿಪೂರ್ಣಧರ್ಮದ ಆವಶ್ಯಕತೆ—ಇವೇ ಮೊದಲಾದುವನ್ನು ಕುರಿತು ಹೇಳಿದ್ದಾನೆ.

ಹಿಂದೆಯೇ ಹೇಳಿದಂತೆ ಮೋತಸ್ಸಲರೂ ಅಷಾಎರರೂ ಇಬ್ಬರೂ ತಮ್ಮ ತಮ್ಮ ವಾದಗಳಿಗೆ ಬೆಂಬಲವಾಗಿ ಕುರಾನ್ ವಚನಗಳನ್ನು ಎತ್ತಿಕೊಂಡಿದ್ದಾರೆ. ಮೋತಸ್ಸಲರು ಎತ್ತಿ ಹೇಳಿರುವ ವಚನಗಳಲ್ಲಿ ಕೆಲವನ್ನು ಹಿಂದೆ ಕೊಟ್ಟಿದೆ. ಅಷಾಎರರು ಉದ್ಧರಿಸುವ ವಚನಗಳಲ್ಲಿ ಕೆಲವನ್ನು ಇಲ್ಲಿ ಕೊಡುತ್ತದೆ.

"ದೇವರೇ! ನೀನು ನಿನಗೆ ಇಷ್ಟ ಬಂದವರಿಗೆ ರಾಜ್ಯ (ಅಧಿಕಾರ) ಕರುಣಿಸುತ್ತೀಯೆ. ಇಷ್ಟ ಬಂದವರಿಂದ ಅದೇ ರಾಜ್ಯ (ಅಧಿಕಾರ) ವನ್ನು ಕಿತ್ತುಕೊಳ್ಳುತ್ತೀಯೆ."

"ಅವರಿಗೆ (ಮನುಷ್ಯರಿಗೆ) ಒಳ್ಳೆಯದು ಬಂದರೆ ದೇವರಿಂದ ಬಂತು ಎನ್ನುತ್ತಾರೆ. ಕೆಟ್ಟದ್ದು ಬಂದರೆ ದೇವರಿಂದ ಬಂತು ಎನ್ನುತ್ತಾರೆ. ಎಲ್ಲವೂ ದೇವರಿಂದಲೇ."

"ಅವನಿಗೆ (ದೇವರಿಗೆ) ಇಷ್ಟ ಬಂದವರನ್ನು ಕ್ಷಮಿಸುತ್ತಾನೆ; ಇಷ್ಟ ಬಂದವರನ್ನು ಶಿಕ್ಷಿಸುತ್ತಾನೆ."

"ದೇವರು ತನ್ನ ಇಷ್ಟ ಬಂದವರಿಗೆ ಸಂಪತ್ತನ್ನು ಅನುಗ್ರಹಿಸುತ್ತಾನೆ."

"ಮೊದಲೇ ನಾವು (ದೇವರು) ವಿಹಿತ ಮಾಡದೆ ಇರುವುದು ಯಾವುದೂ ಇಲ್ಲ. ಪ್ರತಿಯೊಂದನ್ನೂ ಉದ್ದೇಶಪೂರ್ವಕವಾಗಿಯೇ ಸುಪ್ರಮಾಣವಲ್ಲಿ ಸೃಷ್ಟಿಸಿದ್ದೇವೆ."

"ನಿನ್ನ ಒಡೆಯು ತನ್ನ ಮನಸ್ಸಿಗೆ ಬಂದದ್ದನ್ನು ಮಾಡುತ್ತಾನೆ."

"ನಿನ್ನ ಮನ ಬಂದವರನ್ನು ತಪ್ಪಿಗೆಳೆಯುತ್ತೀಯೆ. ನಿನ್ನ ಮನ ಬಂದವರನ್ನು ಮೇಲೆ ನಡಸುತ್ತೀಯೆ."

ಇಸ್ಲಾಂ ವ್ಯಾಖ್ಯಾನ ಮತೀಯರು—ಮೋತಸ್ಸಲಾ ಮತ್ತು ಅಷಾಎರರಿಬ್ಬರೂ—ಇರಾನಿ ಮತ್ತು ಗ್ರೀಕ್ ತತ್ವಾನುಯಾಯಿಗಳ ವಾದವನ್ನು ಪ್ರತಿಭಟಿಸಿ ಇಸ್ಲಾಂತತ್ವ ಸ್ಥಾಪನೆ ಮಾಡಿ ಇಸ್ಲಾಂ ಧರ್ಮಕ್ಕೆ ಬಹು ಉಪಕಾರ ಮಾಡಿದ್ದಾರೆ. ಇವರ ಪ್ರತಿಭಟನೆ ಕೆಲವು ವಿಷಯಗಳಲ್ಲಿ ಗ್ರೀಕ್ ದರ್ಶನವನ್ನು ನೇರವಾಗಿ ಕುರಿತದ್ದೂ, ಮತ್ತೆ ಕೆಲವು ವಿಷಯಗಳಲ್ಲಿ ಕೆಲವು ಮುಸ್ಲಿಂ ವಿದ್ವಾಂಸರೆ ಉತ್ಪನ್ನಮಾಡಿ ಗ್ರೀಕ್ ದಾರ್ಶನಿಕರಿಗೆ ಆರೋಪಿಸಿದ್ದ ತತ್ವಗಳನ್ನು ಕುರಿತದ್ದೂ ಆಗಿರುತ್ತದೆ. ಸ್ಟೊರಾಸ್ಟರ್ ಧರ್ಮ, ಯೆಹೂದ್ಯ ಧರ್ಮ, ಕ್ರೈಸ್ತಧರ್ಮ, ಮಾನಿ ಧರ್ಮ—ಮೊದಲಾದ ಪುರಾತನ ಧರ್ಮಗಳನ್ನು ಮಾತ್ರವೇ ಅಲ್ಲದೆ, ಇಸ್ಲಾಮಿಗಳಲ್ಲೇ ತಲೆಯೆತ್ತಿದ್ದ ಖಾರಿಜಿ, ಷಿಯಾ, ಇಸ್ಮಾಯೀಲಯ—ಮೊದಲಾದ ನವೀನ ಮತಗಳನ್ನೂ ಪ್ರತಿಭಟಿಸಿ ವಾದಿಸಿದ್ದಾರೆ. ಕಲೀಫ್ಗರು ಮತ್ತು ದೊರೆಗಳು ಕೆಲವರು ಮೋತಸ್ಸಲ ಪಕ್ಷವನ್ನೂ ಮತ್ತೆ ಕೆಲವರು ಅಷಾಎರ ಪಕ್ಷವನ್ನೂ ವಹಿಸಿ ಆಶ್ರಯದಾತರಾಗುತ್ತಿದ್ದರು.

ಮೋತಸ್ಸಲರಿಗೂ ಅಷಾಎರರಿಗೂ ಇರುವ ಮುಖ್ಯ ವ್ಯತ್ಯಾಸವೆಂದರೆ: ಮೋತಸ್ಸಲರು ಬುದ್ಧಿವಾದಿಗಳು ಮತ್ತು ಭಾವವಾದಿಗಳು. ಅಷಾಎರರು ಸಂಪ್ರದಾಯಿಗಳು ಮತ್ತು ಪ್ರತ್ಯಕ್ಷವಾದಿಗಳು. ಮೋತಸ್ಸಲರ ಪ್ರಕಾರ ಅಜ್ಞಾನವೆಂಬುದು ಜ್ಞಾನದ ಅಭಾವ ಮಾತ್ರ. ಅಷಾಎರರ ಪ್ರಕಾರ ಅಜ್ಞಾನ ಸ್ವತಂತ್ರವಾದ ವ್ಯಕ್ತಿ. ಮೋತಸ್ಸಲರ ಪ್ರಕಾರ ದೇವರು ಗುಣಾತೀತನೂ, ವರ್ಣನಾತೀತನೂ ಆಗಿರುವುದರಿಂದ ದೇವವರ್ಣನಾತ್ಮಕವಾದ ಕುರಾನ್ ವಚನಗಳನ್ನು ಲಕ್ಷಣಾರ್ಥದಲ್ಲಿ ತೆಗೆದುಕೊಳ್ಳಬೇಕು. ಅಷಾಎರರ ಪ್ರಕಾರ ವಾಚ್ಯಾರ್ಥವೇ ಪ್ರಧಾನವಾದದ್ದು ಮತ್ತು ಸರಿಯಾದದ್ದು.

ಈ ಮೋತಸ್ಸಲ ಮತ್ತು ಅಷಾಎರ ಎಂಬ ಎರಡು ದೊಡ್ಡ ಮತಗಳೇ ಅಲ್ಲದೆ, ಇನ್ನೂ ಹಲವು ಮತಗಳು ಪ್ರಚಾರದಲ್ಲಿದ್ದುವು.

(೧) ದಹ್‌ರಿಯು : (ದಹ್‌ರ್=ಕಾಲ) ಇವರು ಪ್ರಪಂಚ ಆದ್ಯಂತರಹಿತವೆಂದು ನಂಬಿದ್ದರು. ಪುನರುತ್ಥಾನ, ಅಂತ್ಯಮಹಾವಿಚಾರಣೆ ಮೊದಲಾದುವುಗಳನ್ನು ಒಪ್ಪಲಿಲ್ಲ. ಇಹಜನ್ಮ ಬಿಟ್ಟರೆ ಬೇರೆ

ಯಾವ ಜನ್ಮವೂ ಇಲ್ಲ; ಸತ್ತನಂತರ ಪೂರ್ಣ ನಾಶವಾಗಿಬಿಡುತ್ತೇವೆ; ಎಂಬುದು ಇವರ ನಂಬಿಕೆ. ಈ ಭಾವನೆ ಬಲುಪಾಲು ಅರೇಬಿಯಕ್ಕೆ ಸಿರಿಯದಿಂದ ಬಂದಿರಬಹುದು. ಇಮಾಮ್ ಘೆಸ್ಸಾಲಿ ಈದಹ್‌ರಿಯರಲ್ಲೂ ಒಳಪಂಗಡಗಳನ್ನು ಹೇಳುತ್ತಾನೆ.—ಸೃಷ್ಟಿಕರ್ತನಿಲ್ಲ, ಪ್ರಪಂಚ ಅನಾದಿ ಮತ್ತು ಅನಂತ ಎನ್ನುವರ ಪಂಗಡ; ಸೃಷ್ಟಿಕರ್ತನುಂಟು, ಆದರೆ ಜೀವ ಮತ್ತು ಆತ್ಮಗಳು ಭೂತಗಳ ಸಂಘಟನೆ; ಮರಣದಲ್ಲಿ ಅವು ವಿಘಟನವಾಗಿಬಿಡುತ್ತವೆ ಎನ್ನುವರ ಪಂಗಡ—ಇವೇ ಮೊದಲಾದ ಹಲವು ಪಂಗಡಗಳನ್ನು ಹೇಳಿದ್ದಾನೆ. ಇಬ್ನ್‌ಏಹಸ್ಸಮ್ಮನು ಈ ದಹರಿಗಳನ್ನು ನಿರೀಶ್ವರವಾದಿಗಳೆಂದೂ, ಅವರು ತಮ್ಮ ಇಷ್ಟಕ್ಕೆ ಅಡ್ಡಿಯಾದದ್ದು ಕೆಟ್ಟದ್ದು ಅಥವಾ ಪಾಪ, ಅನುಕೂಲವಾದ್ದದ್ದು ಒಳ್ಳೆಯದು ಅಥವಾ ಪುಣ್ಯ ಎಂದು ನಂಬಿದ್ದರೆಂದೂ ಹೇಳುತ್ತಾನೆ.

(೨) ಕರಾಮಿತ: ಈ ಪಂಗಡದವರು ಮುಯ್‌ಮೂನ್ ಮಗ ಅಬ್ದುಲ್ಲನ (೧೦ನೆಯ ಶತಮಾನ) ಅನುಯಾಯಿಗಳು. ಇವನು ಇರಾನಿನವನು. ಇವನ ಪ್ರಕಾರ ಮನುಷ್ಯನ ಧ್ಯೇಯ ವಿಶ್ವಬುದ್ಧಿಯೊಡನೆ ಐಕ್ಯ—ಹೊಂದುವುದೆ. ಈ ಐಕ್ಯ ದೈವಪ್ರಸಾದದ ಮೂಲಕ ಮಾತ್ರ ಸಾಧ್ಯ. ಪೈಗಂಬರರು ವಿಶ್ವಾತ್ಮದ ವ್ಯಕ್ತಸ್ವರೂಪಿಗಳು. ಆದಿ ಪೈಗಂಬರನು ಆ್ಯಡಮ್, ಕೊನೆಯ ಪೈಗಂಬರನು ಮಹಮ್ಮದ್. ವಿಶ್ವಯೆಂಬುದು 'ನೂರ್‌ಕಾಹೆರ್' (ವಿಜಯಿಾಪ್ರಕಾಶ) ಮತ್ತು 'ನೂರ್ ಎಸ್ವಲಾಮಿ' (ತಮಃಪ್ರಕಾಶ) ಎಂಬ ಎರಡು ಜ್ಯೋತಿಗಳ ವ್ಯಕ್ತಸ್ವರೂಪ. ವಿಜಯಿಾಪ್ರಕಾಶದ ವ್ಯಕ್ತಸ್ವರೂಪವೇ ವಿಶ್ವಬುದ್ಧಿ. ಈ ವಿಶ್ವಬುದ್ಧಿಯೇ ಕ್ರಮೇಣ ಪೈಗಂಬರರ ಮತ್ತು ಇಮಾಮರ ಬುದ್ಧಿಯಾಗಿ ಆವಿರ್ಭವಿಸುತ್ತದೆ. ತಮಃಪ್ರಕಾಶವೇ ದ್ರವ್ಯ. ಇದು ನಾನಾ ರೂಪಗಳನ್ನು ತಾಳಿ ಸೂರ್ಯ, ಚಂದ್ರ, ನಕ್ಷತ್ರ, ಭೂಮಿ ಮೊದಲಾಗಿ ಪರಿಣಮಿಸುತ್ತದೆ. ಇದು ನಶ್ವರವಾದ್ದು.

(೩) ಇಸ್ಮಾಯೀಲೀಯ: ಮೊದಲನೆಯ ಆರು ಇಮಾಮರ ಅನುಯಾಯಿಗಳು. ಇವರ ಮುಖ್ಯ ತತ್ವ: ವಿಶ್ವಬುದ್ಧಿ ಕ್ರಮೇಣ ವಿಶ್ವಾತ್ಮ, ಆದಿದ್ರವ್ಯ, ಭೂತವಸ್ತು—ಈ ರೀತಿಯಾಗಿ ಪರಿಣಾಮ ಹೊಂದುತ್ತದೆ.

ದೇಶ ಮತ್ತು ಕಾಲ ಅದಿಧರ್ಮಗಳು. ಮನುಷ್ಯನ ಮೋಕ್ಷವೆನ್ನುವುದು ವಿಶ್ವಬುದ್ಧಿಯೊಡನೆ ಐಕ್ಯ. ಈ ಐಕ್ಯವನ್ನು ವಿಶ್ವಬುದ್ಧಿಯ ವ್ಯಕ್ತ ಸ್ವರೂಪವಾದ 'ನಾತಿಕ್' (ವಕ್ತೃ) ಮೂಲಕವೂ, ವಿಶ್ವಾತ್ಮದ ವ್ಯಕ್ತ ಸ್ವರೂಪವಾದ 'ಅಸಾಸ್' (ಆಧಾರ) ಅಥವಾ 'ಸಾಮಿತ್' (ಮೌನ) ಮೂಲಕವೂ ಸಾಧಿಸಬೇಕು. 'ನಾತಿಕ್' ದೇವವಾಣಿಯನ್ನೂ 'ಅಸಾಸ್' ಅದರಲ್ಲಿ ಅಡಗಿರುವ ಅರ್ಥವನ್ನೂ ವ್ಯಕ್ತಪಡಿಸುತ್ತದೆ. ಆ್ಯಡಮ್, ನೋವ, ಅಬ್ರಹಮ್, ಮೋಸೆಸ್, ಯೇಸು, ಮುಹಮ್ಮದ್—ಇವರು ವಕ್ತೃಗಳು. ಷೀಸ್, ಸಾಮ್, ಇಸ್ಮಾಯೀಲ್, ಹಾರೂನ್, ಪೀಟರ್, ಅಲಿ—ಇವರು ಸಾಮಿತ್ತರು.

(೪) ನುಸಯ್‌ರಿಗಳು: ಇವರು ಷಿಯಾ ಪಂಗಡದ ಒಂದು ಶಾಖೆ; ಇರಾನಿನವರು. ಇವರ ಸಂಖ್ಯೆ ಅಷ್ಟು ಹೆಚ್ಚಾಗಿಲ್ಲ. ಇವರಲ್ಲಿ ಬಹು ಮಂದಿ ಸಿರಿಯದಲ್ಲಿದ್ದಾರೆ. ಇವರ ಮತದಲ್ಲಿ ಪುರಾತನ ಆರ್ಯ ಭಾವನೆಗಳು ಕಂಡುಬರುತ್ತವೆ. ಪರಮಾತ್ಮನೊಬ್ಬನೇ; ಆದರೆ, ಯುಗ ಭೇದದಿಂದ ನಾನಾ ಅವತಾರಗಳನ್ನು ತಾಳುತ್ತಾನೆ; ಪಾಪಿಗಳು ಮತ್ತೆ ಇಹಲೋಕದಲ್ಲಿ ಹುಟ್ಟುತ್ತಾರೆ.—ಇವೇ ಮೊದಲಾದುವು ಹಿಂದೂ ನಂಬಿಕೆಗಳನ್ನು ಹೋಲುತ್ತವೆ. ಆದರೆ, ಕ್ರೈಸ್ತರು ಅಥವಾ ಮುಸ್ಲಿಮರು ಮನುಷ್ಯರಾಗಿಯೂ ಉಳಿದವರು ಪ್ರಾಣಿಗಳಾಗಿಯೂ ಹುಟ್ಟುತ್ತಾರೆ ಎಂಬುದು ಇವರ ನಂಬಿಕೆ. ಇವರು ವಿಧಿಯನ್ನು ಒಪ್ಪುವುದಿಲ್ಲ.

(೫) ಖುರ್ರಮೀಯರು: ಇವರು ಇರಾನಿನ ಬಸ್ಸ್‌ಸ್ಥಳದ ಬಾಬಕ್ ಖುರ್ರಮಿಯ ಅನುಯಾಯಿಗಳು. ಕೊನೆಯ ಉಮಯ್ಯಾ ಕಲೀಫ್ಷನನ್ನು ಸೋಲಿಸಿ ಅಬ್ಬಾಸಿ ಕಲೀಫ್ಷರಿಗೆ ಬೆಂಬಲಕೊಟ್ಟ ಅಬುಲ್‌ಮುಸ್ಲಿಂ ಖುರಾಸ್ಸಾನಿ ಕೊಲೆಯಾದ ಮೇಲೆ ಈ ಮತ ಹುಟ್ಟಿಕೊಂಡಿತು. ಇವರಲ್ಲಿ ಕೆಲವರು ಫ್ಲಾತಿಮಳನ್ನು ತಮ್ಮ ಆಧ್ಯಾತ್ಮಗುರುವಾಗಿ ಸ್ವೀಕರಿಸಿದರು. ಇವರ ಮುಖ್ಯ ತತ್ತ್ವವೆಂದರೆ: ಎಲ್ಲಾ ಧರ್ಮಪ್ರವರ್ತಕರೂ ಭಾಷಾಭೇದ, ಮಾರ್ಗಭೇದಗಳಿಂದ ಬೇರೆಬೇರೆಯಾಗಿ ಕಂಡರೂ ಒಂದೇ ಪರವಸ್ತುವಿಂದ ಪ್ರೇರಿತರಾಗಿದ್ದಾರೆ. ತನ್ನ ಧರ್ಮಕ್ಕೆ ಅಡ್ಡಿ ಬಂದ ಹೊರತು ಯಾವನನ್ನೂ ಹಿಂಸಿಸಬಾರದು. ಕೊಲೆ ಕೆಟ್ಟದ್ದು.

ಇವರು ಸ್ಟೋರಾಸ್ಟರ್ ಧರ್ಮಿಗಳಂತೆ ತಮ್ಮ ಸಿದ್ಧಾಂತವನ್ನು ಬೆಳಕು ಮತ್ತು ಕತ್ತಲೆ ಎಂಬ ಮೂಲತತ್ವಗಳ ಮೇಲೆ ಅವಲಂಬಿಸಿದರು.

(೬) ಹುರೂಫಿ ಮತ: ಇದರ ಪ್ರವರ್ತಕ ಉತ್ತರ ಇರಾನಿನ ಅಸ್ತರಾಬಾದಿನ ಫಜ಼್‌ಲುಲ್ಲ (೧೪ನೆಯ ಶತಮಾನದ ಅಂತ್ಯ). ತುರ್ಕಿಯಲ್ಲಿ ಇದರ ಶಾಖೆಯೊಂದು ಏರ್ಪಟ್ಟಿತು. ಇವರ ಮತಪ್ರಕ್ರಿಯೆಗಳು ಅಷ್ಟೇನೂ ಹೆಚ್ಚಾಗಿಲ್ಲ. ಪ್ರತಿ ಬೆಳಗ್ಗೆಯೂ ಎದ್ದೊಡನೆ ತಮ್ಮ ಗುರುವಿನ ದರ್ಶನಮಾಡಿಕೊಂಡು ಅವನು ಕೊಡುವ ಮದ್ಯ, ರೊಟ್ಟಿ ಮತ್ತು ಬೆಣ್ಣೆಯ ಪ್ರಸಾದ ತೆಗೆದುಕೊಳ್ಳುವುದು. ಅಲ್ಲದೆ, ಇವರಲ್ಲಿ ಒಂದು ರೀತಿಯ ಪಾಪನಿವೇದನೆಯೂ (ಕನ್‌ಫೆಷನ್) ಉಂಟು.

ಮೊದಲೇ ಹೇಳಿದಂತೆ, ವ್ಯಾಖ್ಯಾನಮತ ಧರ್ಮ ಮತ್ತು ದರ್ಶನಗಳ ಸಮನ್ವಯಕ್ಕಾಗಿ ಆರಂಭವಾಯಿತು. ಅದು ಎರಡನ್ನೂ ಅವಲಂಬಿಸಿದ್ದರೂ ಪ್ರಧಾನವಾಗಿ ಧರ್ಮಪಕ್ಷ ಸಮರ್ಥನೆಯನ್ನೇ ಹೆಗ್ಗುರಿಯಾಗಿ ಮಾಡಿಕೊಂಡಿತು. ಧರ್ಮಸಮರ್ಥನೆಗೆ ಸಾಧಕವಾದ ಕಡೆಗಳಲ್ಲಿ ದರ್ಶನ ತತ್ವಗಳನ್ನು ಒಪ್ಪುತ್ತಲೂ ಬಾಧಕವಾದ ಕಡೆಗಳಲ್ಲಿ ಅವನ್ನು ಖಂಡಿಸುತ್ತಲೂ ಬಂತು. ವ್ಯಾಖ್ಯಾನಮತೀಯರು ದ್ರವ್ಯ, ಆತ್ಮ, ವಿಧಿ, ದೈವಪ್ರೇರಣೆ, ದಿವ್ಯದರ್ಶನ, ಪವಾಡ—ಮೊದಲಾದುವನ್ನು ಕುರಿತು ಚರ್ಚಿಸಿದ್ದಾರೆ. ಬೇರೆಬೇರೆಯವರ ಭಿನ್ನಾಭಿಪ್ರಾಯಗಳ ವಿವರಣೆಗೆ ಹೋಗದೆ ಈ ವ್ಯಾಖ್ಯಾನಮತೀಯರ ಸಾಮಾನ್ಯ ಅಭಿಪ್ರಾಯಗಳನ್ನು ಇಲ್ಲಿ ಸ್ಥೂಲವಾಗಿ ಸಂಗ್ರಹಿಸುತ್ತದೆ.

(೧) ದ್ರವ್ಯ: ಇದು ಪರಮಾತ್ಮನೊಂದಿಗೆ ಸಹಭಾವಿ. ತನ್ನ ಪರಿಶುದ್ಧ ಅವಸ್ಥೆಯಲ್ಲಿ ಇದು ಶಕ್ತಿಮಾತ್ರವಾಗಿದ್ದು, ರೂಪತಾಳಿ ವಸ್ತುವಾಗಿ ಪರಿಣಮಿಸುತ್ತದೆ. ದ್ರವ್ಯ ಒಟ್ಟಿನಲ್ಲಿ ಆದಿದ್ರವ್ಯ, ರೂಪ, ದೇಹ, ಆತ್ಮ (ಜೀವಾತ್ಮ), ಬುದ್ಧಿ—ಎಂದು ವಿಭಾಗವಾಗಿದೆ. ಅಣುವಾದಿಗಳು ಇದನ್ನು ಒಪ್ಪದೆ ಇವೆಲ್ಲವೂ ಅಣುಗಳ ಪರಸ್ಪರ ಸಂಘಟನೆಯಿಂದಾದುವು, ಪ್ರಪಂಚ ಅಸಂಖ್ಯಾತ ಅಣುಗಳಿಂದ ಘಟಿತವಾದದ್ದು ಎಂದು ವಾದಿಸುತ್ತಾರೆ. ಇವರು ದಾರ್ಶನಿಕರ ದ್ರವ್ಯವಾದವನ್ನೂ ಏಕೆ ಒಪ್ಪುವುದಿಲ್ಲವೆಂದರೆ—ದ್ರವ್ಯ ಭಗವಂತನೊಡನೆ ಸಹಭಾವಿಯಾದರೆ,

ಅದಕ್ಕೆ ಚ್ಯುತಿಯಿಲ್ಲವಾಗಿ ಪ್ರಪಂಚ ಅನಂತವಾಗಿಬಿಟ್ಟು, ಪುನರುತ್ಥಾನ ತತ್ವಕ್ಕೆ ವಿರೋಧ ಬರುತ್ತದೆ. ಆದರೆ, ಅಣುವಾದವನ್ನು ಒಪ್ಪಿದರೆ ಈ ಸಮಸ್ಯೆ ಪರಿಹಾರವಾಗಿ ಬಿಡುತ್ತದೆ. ಅಣುವಾದದ ಪ್ರಕಾರ ಪ್ರಪಂಚಕ್ಕೆ ಅನಂತತ್ವವಿಲ್ಲ. ವಸ್ತುಗಳ ಉತ್ಪತ್ತಿ ಮತ್ತು ನಾಶ ಎಂದರೆ ಅಣುಗಳ ಸಂಘಟನೆ ವಿಘಟನೆಗಳೇ. ಕಾಲವೂ ಕೂಡ ಈ ಅಣುಗಳ ಒಂದು ರೀತಿಯ ಚಲನೆ ಮಾತ್ರ. ಆತ್ಮವೂ ಕೂಡ ಸೂಕ್ಷ್ಮ ಅಣುಗಳಿಂದ ಘಟಿತವಾದದ್ದು. ದೇವರು ಪ್ರತಿಕ್ಷಣವೂ ಈ ಅಣುಗಳನ್ನು ಸೃಷ್ಟಿಮಾಡುತ್ತಲೂ ಲಯಮಾಡುತ್ತಲೂ ಇದ್ದಾನೆ ದೇವರಿಂದ ಈ ಅಣುಗಳು ಸೃಷ್ಟಿಯಾಗುತ್ತ ಹೋಗುವವರೆಗೂ ಜಗತ್ತು ನಡೆದು, ಸೃಷ್ಟಿಯಾಗುವುದು ನಿಂತರೆ ಜಗತ್ತು ಬರಿದಾಗಿ ಕೊನೆಗೊಳ್ಳುತ್ತದೆ.

(೨) ಆತ್ಮ: ಆತ್ಮ ದೇವರು ಮನುಷ್ಯನಲ್ಲಿ ಉಸಿರಿದ ಉಸಿರು. ಅದರ ಸ್ಥಾನ ಮಾನವಹೃದಯ. ಅದು ಸದಸದ್‌ಗುಣಪೂರಿತವಾದ್ದು. ಅದರ ಉಚ್ಚಸ್ವರೂಪವಾದ ಇಚ್ಛಾಶಕ್ತಿ ಈ ಸದಸದ್‌ಗುಣಗಳನ್ನು ನಿಯಂತ್ರಿಸುತ್ತದೆ. ವ್ಯಕ್ತಿಯ ಇಚ್ಛೆ ವಿಶ್ವದ ಇಚ್ಛೆಗೆ ಅಧೀನವಾದದ್ದು. ಸಾವು ದೇಹಕ್ಕೂ ಆತ್ಮಕ್ಕೂ ಆಗುವ ಅಗಲಿಕೆ.

(೩) ವಿಧಿ: ವಿಧಿಯ ನಂಬಿಕೆ ಬಹು ಪುರಾತನವಾದ್ದು. ಪುರಾತನ ಇರಾನಿನ ಸ್ವರ್ವಾನರು ಕಾಲ ಎಲ್ಲದಕ್ಕಿಂತಲೂ ಬಲವತ್ತರವೆಂದು ನಂಬಿದ್ದರು. ಈ ಕಾಲವನ್ನೇ ಕೆಲವರು ವಿಧಿಯೆಂದು ಕರೆದರು. ಕೆಲವರು ಪ್ರಪಂಚವನ್ನು ದೇವರು ಸೃಷ್ಟಿಗೆ ಮೊದಲೇ ಇದ್ದ ಆದಿದ್ರವ್ಯದಿಂದ ಸೃಷ್ಟಿಸಿದನೆಂದೂ, ಆ ಆದಿದ್ರವ್ಯವೇ ವಿಧಿಯೆಂದೂ ಹೇಳಿದರು. ಹೀಗೆ ಕೆಲವರು ವಿಧಿಯನ್ನೂ ಆದಿದ್ರವ್ಯವನ್ನೂ ಒಂದಾಗಿ ಭಾವಿಸಿದ್ದರು. ಇಸ್ಲಾಂಪೂರ್ವದ ಅರಬರಲ್ಲೂ ಈ ವಿಧಿಯ ನಂಬಿಕೆ ಬಲವಾಗಿತ್ತು. ಕುರಾನ್ ವಚನಗಳು ಕೂಡ ಮನುಷ್ಯನ ಅಸಹಾಯತೆ ಮತ್ತು ದೈವವಿಧಿಯ ಬಲವನ್ನು ಹೇಳುತ್ತವೆ. ಆದರೆ, ಪೈಗಂಬರನು ದೈವಬಲವನ್ನು ಒಪ್ಪಿದನೇ ಹೊರತು ನಕ್ಷತ್ರಾದಿ ಗ್ರಹಗಳಿಗೆ ಮನುಷ್ಯನ ಮೇಲೆ ಅಧಿಕಾರವಿದೆಯೆಂಬ ದೃಷ್ಟಿಯಲ್ಲಿ ವಿಧಿಯನ್ನು ಒಪ್ಪಲಿಲ್ಲ. (ನಾಲ್ಕನೆಯ ಕಲೀಫನು ಸಿರಿಯದ ಮೇಲೆ ದಂಡೆತ್ತಿ ಹೊರಟಾಗ

ಜೋಯಿಸನು ಮುಹೂರ್ತ ಚೆನ್ನಾಗಿಲ್ಲವೆಂದು ಹೇಳಲು, ಕಲೀಫನು ಕೆಟ್ಟ ಮುಹೂರ್ತವನ್ನು ನನ್ನ ಖಡ್ಗ ಸುಮುಹೂರ್ತವನ್ನಾಗಿ ಮಾಡುತ್ತದೆ ಎಂದನಂತೆ.)

(೪) ದೈವಪ್ರೇರಣೆ: ಇದು ನಾನಾ ತೆರದ್ದು. ಪದಾರ್ಥಗಳ ಸಹಜ ಪ್ರವೃತ್ತಿಯೂ ಒಂದು ತೆರದ ದೈವಪ್ರೇರಣೆಯೇ. ಇದು ಚೇತನಾಚೇತನ ವಸ್ತುಗಳೆರಡರಲ್ಲೂ ಕಂಡುಬರುತ್ತದೆ. ಮನುಷ್ಯನಲ್ಲಿ ಈ ಪ್ರೇರಣೆ ಸದ್‌ಭಾವನೆಯ ರೂಪವನ್ನು ತಾಳುತ್ತದೆ. ಪೈಗಂಬರರ ದೈವಪ್ರೇರಣೆ ಐದು ತೆರದ್ದು. (೧) ಅಂತಃಪ್ರೇರಣೆ. (೨) ಕನಸಿನ ಮೂಲಕ ಪ್ರೇರಣೆ (ಅಬ್ರಹಾಮನು ತನ್ನ ಮಗನನ್ನು ಬಲಿಕೊಟ್ಟಂತೆ ಕನಸು ಕಂಡದ್ದು). (೩) ದಿವ್ಯದರ್ಶನ (ಮಹಮ್ಮದನಿಗೆ ಲಭಿಸಿದ್ದು). (೪) ಪ್ರಧಾನ ದೇವದೂತನಾದ ಗೇಬ್ರಿಯೆಲ್ ಕಣ್ಣಿಗೆ ಕಾಣಿಸಿಕೊಳ್ಳದೆಯೇ ಆತ್ಮವನ್ನು ಚೋದಿಸುವುದು. (೫) ಪ್ರಧಾನ ದೇವದೂತನಾದ ಗೇಬ್ರಿಯೆಲ್ ಮನುಷ್ಯ ರೂಪದಲ್ಲಿ ಕಾಣಿಸಿಕೊಂಡು ಪ್ರೇರಿಸುವುದು. ಇಬ್‌ನ್‌ಖಲದೂನ್ ಎಂಬ ದಾರ್ಶನಿಕನು ದಿವ್ಯದರ್ಶನವನ್ನು ದೃಶ್ಯಪ್ರಪಂಚದಿಂದ ದೃಷ್ಟಿ ಸೆಳೆದು ಒಳಮುಖವಾಗಿ ಅದೃಶ್ಯಪ್ರಪಂಚದ ಧ್ಯಾನದಲ್ಲಿ ಲೀನವಾಗಿದ್ದು ಸಾಧಾರಣ ಮನಸ್ಸಿಗೆ ಗೋಚರವಾಗದ ನಿಗೂಢ ಸತ್ಯವನ್ನು ಕಾಣುವ ಸ್ಥಿತಿ ಎಂದು ಹೇಳಿದ್ದಾನೆ. ಸೂಫಿಗಳು ಪ್ರೇರಕವೂ ಪ್ರೇರಿತವೂ ಒಂದೇ ಎಂದು ಹೇಳುತ್ತಾರೆ. ಪೈಗಂಬರನಿಗೆ ಬರುವ ದಿವ್ಯದರ್ಶನ ಅಥವಾ ಪ್ರೇರಕಶಕ್ತಿ ಎಂದರೆ, ಅಂತರ್ಗತವಾದ ಸ್ವಶಕ್ತಿಯೇ ಮೂರ್ತಿಗೊಂಡು ಸ್ಪಷ್ಟಗೋಚರವಾಗುವುದು. ಹೀಗೆಯೇ ಯಮದೂತರು ಕೂಡ ಮನುಷ್ಯನ ನಶ್ವರಪ್ರಕೃತಿಯ ಮೂರ್ತಸ್ವರೂಪವೇ ಹೊರತು ಬೇರೆಯಲ್ಲ. ಜಲಾಲುದ್ದೀನ್ ರೂಮಿ ಇದನ್ನೇ ಬೇರೆ ಬಗೆಯಲ್ಲಿ ಹೇಳಿದ್ದಾನೆ. ಹೇಗೆ ಕನಸಿನಲ್ಲಿ ಹೇಳುವವನೂ ಕೇಳುವವನೂ ಒಬ್ಬನೇ ಆಗಿರುತ್ತಾನೆಯೋ, ಹಾಗೆಯೇ ದಿವ್ಯದರ್ಶನ ಅಥವಾ ದಿವ್ಯಪ್ರೇರಣೆಯಲ್ಲೂ ದರ್ಶನ ದರ್ಶಕರೆರಡೂ ಒಂದೇ. ಪೈಗಂಬರನ ಮೇರಾಜ್ ಅಥವಾ ಪರಿಸಿಕ್ರಮಣ ಅಥವಾ ಸ್ವರ್ಗಾರೋಹಣ ಕೂಡ ಈ ರೀತಿಯ ಕೇವಲ ಧ್ಯಾನದ ಚರಮಾವಸ್ಥೆ ಮಾತ್ರ ಎಂಬುದು

ಕೆಲವರ ಮತ. (ಆದರೆ, ಸಂಪ್ರದಾಯಿಗಳು ಇದನ್ನು ಒಪ್ಪದೆ ಸ್ವರ್ಗಾರೋಹಣವನ್ನು ವಾಸ್ತವಾರ್ಥದಲ್ಲಿ ತೆಗೆದುಕೊಳ್ಳುತ್ತಾರೆ. ಇವರ ಪ್ರಕಾರ ಮಹಮ್ಮದನ 'ಮೇರಾಜ್' ಅಥವಾ ಸ್ವರ್ಗಾರೋಹಣ: ಗೇಬ್ರಿಯೆಲ್ ಪ್ರಧಾನ ದೇವದೂತನು ಬಂದು ಪೈಗಂಬರನ ಹೃದಯವನ್ನು ತೊಳೆದು, ನಂಬಿಕೆ ಅರಿವುಗಳನ್ನು ತುಂಬಿ, ದಿವ್ಯಜ್ಞಾನವೆಂಬ 'ಬುರ್ರಾಕ್' ಶ್ವೇತ ಪ್ರಾಣಿಯ ಮೇಲೆ ಕೂರಿಸಿ, ತಾನೂ ಜತೆಗೊಂಡು ಆಕಾಶದಲ್ಲಿ ಕೊಂಡು ಹೋದನು. ದಾರಿಯಲ್ಲಿ ಪೈಗಂಬರನು ದೇವರ ಅದ್ಭುತಗಳನ್ನೂ ಹಿಂದಿನ ಪೈಗಂಬರರನ್ನೂ ಕಂಡು ಅವರ ಧರ್ಮಸಾರವನ್ನು ಗ್ರಹಿಸಿದನು. ಗೇಬ್ರಿಯೆಲ್ ಸಿದ್ರತಲ್ ಮುನ್‌ತಹ ಎಂಬ ಮರದವರೆಗೂ ಜತೆಯಲ್ಲೇ ಹೋಗಿ ಅಲ್ಲಿಂದ ಮುಂದಕ್ಕೆ ಜತೆಗೊಳ್ಳಲಾರದೆಹೋದನು. ಮುಂದಕ್ಕೆ ಪೈಗಂಬರನೊಬ್ಬನೇ ಇಂದ್ರಿಯ ಪ್ರಪಂಚವನ್ನು ಮೀರಿ ಅತೀಂದ್ರಿಯ ಪ್ರಪಂಚದಲ್ಲಿ ದೇವಸಾನ್ನಿಧ್ಯದಲ್ಲಿ ಎರಡಂಬಿನ ದೂರದಲ್ಲಿ ನಿಂತನು). ಅಂತಃಪ್ರೇರಣೆ ಯಾವಾಗಲೂ ದೈವಪ್ರೇರಣೆಯೇ ಆಗಿರಬೇಕಾಗಿಲ್ಲ. ಅದು 'ವಹಿ' ಮತ್ತು 'ಇಲ್‌ಹಾಮ್' ಎಂಬ ಸತ್ ಪ್ರವರ್ತಕ ದೈವಪ್ರೇರಣೆಯಾಗಿರಬಹುದು. ಅಥವಾ 'ವಿಸ್‌ವಾಸ್' ಎಂಬ ದುಷ್ಪ್ರವರ್ತಕ ಸೈತಾನೀ ಪ್ರೇರಣೆಯಾಗಿರಬಹುದು.

(೫) ಪವಾಡಗಳು: ಕುರಾನ್ ದಿವ್ಯದರ್ಶನಲಬ್ಧವಾದ್ದು ಎಂಬುದನ್ನು ಬಿಟ್ಟರೆ, ಪೈಗಂಬರನು ಯಾವ ಪವಾಡಗಳನ್ನೂ ಹೇಳಿಲ್ಲ. ಜಲಾಲುದ್ದೀನ್ ರೂಮಿ ತನ್ನ ಮಸ್ನವಿಯಲ್ಲಿ ಕಾರ್ಯಕಾರಣಭಾವ ಎರಡು ತೆರದ್ದು—ಸಾಧಾರಣ ಮಾನವ ಇಂದ್ರಿಯಗೋಚರವಾದದ್ದು, ಸಾಧಾರಣ ಮನಸ್ಸಿಗೆ ಅಗೋಚರವಾಗಿದ್ದು ಅಧ್ಯಾತ್ಮಜ್ಞಾನಿಗಳಿಗೆ ಮಾತ್ರ ಗೋಚರವಾದದ್ದು—ಎಂದೂ, ಅಧ್ಯಾತ್ಮಜ್ಞಾನಿಗಳಿಗೆ ಸಹಜವಾಗಿ ಗೋಚರವಾಗುವುದನ್ನು ಸಾಮಾನ್ಯರು ಪವಾಡಗಳೆಂದು ಕರೆಯುತ್ತಾರೆಂದೂ ಹೇಳಿದ್ದಾನೆ. ಆದರೆ, ಕೆಲವು ವ್ಯಾಖ್ಯಾನಮತೀಯರೂ, ಹಾಗೆಯೇ ದೇವತಾ ಶಾಸ್ತ್ರಜ್ಞರೂ, ಇದನ್ನು ಒಪ್ಪದೆ, ಪವಾಡಗಳು ಅಮಾನುಷವೂ ಅಸ್ವಾಭಾವಿಕವೂ ಪೈಗಂಬರನಿಗೆ ದೈವದತ್ತವಾದ ಅನನ್ಯಸಾಮಾನ್ಯ ಶಕ್ತಿಯೂ ಆದುವೆಂದು ವಾದಿಸುತ್ತಾರೆ.

ಪವಾಡಗಳು ಎರಡು ತೆರದವು—ಒಂದು ಮೋಜಿಸ್ಸೆ ಅಥವಾ ದಿವ್ಯ; ಮತ್ತೊಂದು ಇಸ್ತದ್ರಾಜ್ ಅಥವಾ ಸ್ಯೆತಾನಿ. ಈ ಸ್ಯೆತಾನಿ ಪವಾಡವೇ ಕಣ್ಣುಕಟ್ಟು ಅಥವಾ ಇಂದ್ರಜಾಲ. ಕೆಲವು ಮುಸ್ಲಿಮರ ಪ್ರಕಾರ ಪೈಗಂಬರ್ ಎನ್ನಿಸಿಕೊಳ್ಳಬೇಕಾದವನು ಪವಾಡಗಳನ್ನು ಮೆರೆಯಲೇ ಬೇಕಾಗಿಲ್ಲ. ಅವನ ದಿವ್ಯಬೋಧನೆಯೇ ಒಂದು ದೊಡ್ಡ ಪವಾಡ.

## ಅಧ್ಯಾಯ ೧೩

# ಮುಸ್ಲಿಂ ದೇವತಾಶಾಸ್ತ್ರ ಮತ್ತು ನ್ಯಾಯಶಾಸ್ತ್ರ

ಕುರಾನ್ ವಚನಗಳನ್ನು ಸ್ಥೂಲವಾಗಿ (೧) ಆಧ್ಯಾತ್ಮಿಕ ಮತ್ತು ಭಾವಾತ್ಮಕ ವಿಷಯವಾದುವು, (೨) ನೀತಿ ಮತ್ತು ಅನುಭಾವಿ ವಿಷಯವಾದುವು, (೩) ದೇವರ ಗುಣ, ನಂಬಿಕೆ, ಪುನರುತ್ಥಾನ—ಇವೇ ಮೊದಲಾದ ವಿಷಯಗಳನ್ನು ಕುರಿತವು, (೪) ಆಚಾರ, ಕರ್ಮ, ವ್ಯವಹಾರ, ನ್ಯಾಯ, ಮೊದಲಾದುವನ್ನು ಕುರಿತವು—ಎಂದು ವಿಂಗಡಿಸಬಹುದು. ಇದರಲ್ಲಿ ಮೊದಲನೆಯದನ್ನು ದಾರ್ಶನಿಕರೂ, ಎರಡನೆಯದನ್ನು ಸೂಫಿಗಳೂ, ಮೂರನೆಯದನ್ನು ವ್ಯಾಖ್ಯಾನಮತೀಯರೂ, ನಾಲ್ಕನೆಯದನ್ನು ದೇವತಾ ಶಾಸ್ತ್ರಜ್ಞರೂ ವಿಶೇಷವಾಗಿ ವ್ಯಾಸಂಗ ಮಾಡಿ ಬೆಳಸಿಕೊಂಡು ಬಂದಿದ್ದಾರೆ. ಇಲ್ಲಿ ನಾಲ್ಕನೆಯವರಾದ ದೇವತಾ ಶಾಸ್ತ್ರಜ್ಞರ ವಿಚಾರವನ್ನು ಕೊಂಚಮಟ್ಟಿಗೆ ಮಾಡುತ್ತದೆ.

ಆದಿ ಮುಸಲ್ಮಾನರ ಜೀವನ ಬಹು ಸರಳವಾಗಿದ್ದು ಅವರ ಆವಶ್ಯಕತೆಗಳು ಬಹು ಸ್ವಲ್ಪವಾಗಿದ್ದದ್ದರಿಂದ ಅವರಿಗೆ ಕೊಟ್ಟ ನ್ಯಾಯನಿಯಮಾದಿ ಕಟ್ಟಳೆಗಳೂ ಬಹು ಸರಳವೂ ಸ್ವಲ್ಪವೂ ಆಗಿದ್ದವು. ಈ ನ್ಯಾಯ ಸೂತ್ರಗಳು ಬಹು ಅಡಕವಾಗಿದ್ದದ್ದರಿಂದ ಅವುಗಳಿಗೆ ವ್ಯಾಖ್ಯಾನ ಮಾಡುವ ಆವಶ್ಯಕತೆಯೂ ಬಂತು. ಇದನ್ನು ಮೊದಮೊದಲು ಪೈಗಂಬರನೇ ಮಾಡಿದ್ದರಿಂದ, ಪೈಗಂಬರನೇ ಕುರಾನಿಗೆ ಆದಿವ್ಯಾಖ್ಯಾನಕಾರನೆನ್ನಬಹುದು. ಪೈಗಂಬರನು ಸತ್ತನಂತರ ಮೆಕ್ಕ ಮತ್ತು ಮದೀನಗಳಲ್ಲಿದ್ದ ಅವನ ಸಂಗಾತಿಗಳೂ ಪ್ರತ್ಯಕ್ಷ ಅನುಯಾಯಿಗಳೂ ಕುರಾನ್ ವಚನಗಳಿಗೆ ಅರ್ಥಮಾಡುವುದರಲ್ಲಿ ಅಧಿಕಾರಿಗಳೂ ಪ್ರಮಾಣಪುರುಷರೂ ಆದರು.

ಮುಸ್ಲಿಂ ದೇವತಾಶಾಸ್ತ್ರದ ಚರಿತ್ರೆಯನ್ನು ಸ್ಥೂಲವಾಗಿ ಐದು ಭಾಗ ಮಾಡಬಹುದು. (೧) ಪೈಗಂಬರನು ಕುರಾನ್ ಉಪದೇಶಕ್ಕೆ ಮೊದಲು ಮಾಡಿದಂದಿನಿಂದ ಅವನ ಮರಣದವರೆಗಿನ ಕಾಲ

(ಕ್ರಿ.ಶ. ೬೦೮-೬೩೨). (೨) ಮೊದಲನೆಯ ನಾಲ್ಕು ಕಲೀಫ್ಗರ ಆಳಿಕೆ (ಕ್ರಿ. ಶ. ೬೩೨-೬೬೧). (೩) ಉಮಯ್ಯ ಕಲೀಫ್ಗರ ಆಳಿಕೆ (ಕ್ರಿ.ಶ. ೬೬೧-೭೫೦). (೪) ಅಬ್ಬಾಸಿ ಕಲೀಫ್ಗರ ಆಳಿಕೆ (ಕ್ರಿ. ಶ. ೭೫೦-೧೨೫೮). (೫) ಆರಬೀ ತರರ ಕಾಲ (ಕ್ರಿ. ಶ. ೧೨೫೮ ರಿಂದ ಈಚೆಗೆ). ಮೊದಲನೆಯ ಕಾಲದಲ್ಲಿ ಪೈಗಂಬರನು ಕುರಾನ್ ಉಪದೇಶಮಾಡಿ ಶಿಷ್ಯರಿಗೆ ತಾನೇ ನೇರವಾಗಿ ಅರ್ಥಹೇಳಿ ಶಿಕ್ಷಣ ಕೊಟ್ಟನು. ಎರಡನೆಯ ಕಾಲದಲ್ಲಿ ಉಪದೇಶ ವಚನಗಳನ್ನೆಲ್ಲ ಕ್ರೋಢೀಕರಿಸಿ ಒಂದು ವ್ಯವಸ್ಥೆಗೆ ತಂದು ಕುರಾನ್ ವಚನಗಳನ್ನು ಈಗಿರುವಂತೆ ಅಧ್ಯಾಯಕ್ರಮದಲ್ಲಿ ವಿಂಗಡಮಾಡಿತು. ಮೊದಲನೆಯ ನಾಲ್ಕು ಕಲೀಫ್ಗರು ಸಾಧಿಸಿದ ದೊಡ್ಡ ಕೆಲಸವೆಂದರೆ— ಕುರಾನ್ ವಚನಗಳನ್ನು ಅಧ್ಯಾಯರೂಪಕ್ಕೆ ಇಳಿಸಿದ್ದು.

ಕುರಾನ್ ಎಂಬುದು 'ಕರ' ಎಂದರೆ ಓದುವುದು ಎಂಬ ಶಬ್ದ ದಿಂದ ಬಂದದ್ದು. ಕುರಾನಿಗೆ ಅಲ್‌ಫ್ಗುರ್‌ಕಾನ್ (ವಿವೇಚಕ ಅಥವಾ ಪೈಶೇಷಿಕ), ಕಲಾಮುಲ್ಲಾಹ್ (ದೇವರ ನುಡಿ), ಕಿತಾಬ್ (ಗ್ರಂಥ), ನೂರ್ (ಬೆಳಕು), ಅಲ್‌ಹುದ (ಮಾರ್ಗದರ್ಶನ) ಎಂದೂ ಹೆಸರು ಗಳುಂಟು. ಕುರಾನನ್ನು ಎಲ್ಲ ಪಂಗಡದ ಮುಸ್ಲಿಮರೂ ಶ್ರದ್ಧಾಭಕ್ತಿ ಗಳಿಂದ ಕಾಣುತ್ತಾರೆ. ಕೈಕಾಲು ತೊಳೆಯದೆ ಗ್ರಂಥವನ್ನು ಮುಟ್ಟು ವುದೂ ಇಲ್ಲ. ಅದರ ವಚನಗಳನ್ನು ಯಂತ್ರಗಳಲ್ಲಿ ಬರೆದು ಕಟ್ಟಿಕೊಳ್ಳು ತ್ತಾರೆ. ಕುರಾನ್ ದೇವವಾಣಿ, ಅಪೌರುಷೇಯವಾದ್ದು, ದೇವದೂತ ಲಿಖಿತವಾದ್ದು, ತರುವಾಯ ಪೈಗಂಬರನಿಗೆ ಉಪದೇಶವಾದದ್ದು ಎಂದೂ, ಸಮಗ್ರ ಕುರಾನ್ ದೇವರಿಂದ ಒಮ್ಮೆಯೇ ರಚಿತವಾಗಿ, ಅದು ಸ್ವರ್ಗ ದಲ್ಲಿ ಇದ್ದು, ಸಂದರ್ಭಾನುಸಾರ ಗೇಬ್ರಿಯೆಲ್ ಎಂಬ ಪ್ರಧಾನ ದೂತನ ಮೂಲಕ ಪೈಗಂಬರನಿಗೆ ಉಪದೇಶವಾಯಿತು ಎಂದೂ ಮುಸ್ಲಿಮರು ನಂಬುತ್ತಾರೆ. ಕುರಾನಿನ ಬೇರೆಬೇರೆ ಭಾಗಗಳು ಸುಮಾರು ೨೩ ವರ್ಷ ಗಳಲ್ಲಿ ಮಹಮ್ಮದನಿಂದ ಜನರಿಗೆ ಉಪದೇಶವಾದುವು.

ಕುರಾನ್ ೩೦ ಜುಸ್ಸ್‌ಗಳಾಗಿಯೂ ೧೧೪ ಸೂರ ಅಥವಾ ಅಧ್ಯಾಯಗಳಾಗಿಯೂ ವಿಂಗಡವಾಗಿದೆ. ಕೆಲವು ಅಧ್ಯಾಯಗಳು ದೊಡ್ಡವು ಕೆಲವು ಚಿಕ್ಕವು. ಕುರಾನ್‌ವಚನಗಳನ್ನು ಕಾಲ ಕ್ರಮಾನು

ಸಾರವಾಗಿ ಜೋಡಿಸದೆ ವಿಷಯಾನುಸಾರವಾಗಿ ಜೋಡಿಸಿದೆ. ಅಬೂ ಬಕ್‌ರ್‌ನ ಅಪ್ಪಣೆಯ ಪ್ರಕಾರ ಮಾಡಿದ ಮೊದಲನೆಯ ಸಂಕಲನದ ಪ್ರತಿ ಒಂದು ಪೈಗಂಬರನ ವಿಧವೆ ಹಫ್ಸ್‌ಸಳ ಹತ್ತಿರವಿತ್ತು. ಇನೆಯ ಕಲೀಫ ಉಸ್ಮಾನಿನ ಅಪ್ಪಣೆಯ ಮೇಲೆ ಇದು ಮತ್ತೆ ಪರಿಷ್ಕೃತವಾಯಿತು. ಈ ಪರಿಷ್ಕರಣ ಕಾರ್ಯದಲ್ಲಿ ಮೊದಲನೆಯ ಸಂಕಲಕನಾಗಿದ್ದ, ಸಾಬಿತ್ ಮಗ ಸೆಯ್‌ದ್ದನೂ ಜುಬೆಯ್‌ರ ಮಗ ಅಬ್ದುಲ್ಲ, ಆಸ್ ಮಗ ಸಯ್‌ದ್, ಹಾರಿಸ್ ಮಗ ಅಬ್ದುರ ರಹ್‌ಮಾನ್—ಇವರೂ ತೊಡಗಿದ್ದರು. ಈ ಪ್ರಮಾಣ ಸಂಕಲನ ಏರ್ಪಟ್ಟಮೇಲೆ ಅದರ ಪ್ರತಿಗಳನ್ನು ಮುಂದಿನ ಉಪಯೋಗಕ್ಕಾಗಿ ಎಲ್ಲ ಇಸ್ಲಾಂ ದೇಶಗಳಿಗೂ ಕಳುಹಿ, ಅಲ್ಲಿಯವರೆಗೆ ಜನರಲ್ಲಿದ್ದ ಹರುಕುಮುರುಕು ಪ್ರತಿಗಳನ್ನೆಲ್ಲ ಕೂಡಿಸಿ ಸುಡಿಸಿದರು.

ಕುರಾನಿನ ಅಧ್ಯಾಯಗಳ ಹೆಸರುಗಳಲ್ಲಿ ಕೆಲವು ವ್ಯಕ್ತಿಗಳನ್ನು ಕುರಿತದ್ದೂ, ಕೆಲವು ಘಟನೆಗಳನ್ನು ಕುರಿತದ್ದೂ, ಕೆಲವು ಕಥೆಗಳನ್ನು ಕುರಿತದ್ದೂ, ಕೆಲವು ವರ್ಣಮಾಲೆಯ ಅಕ್ಷರಗಳನ್ನು ಕುರಿತದ್ದೂ ಆಗಿವೆ. ಉದಾಹರಣೆಗೆ—ಒಂದನೆಯದು ಅಲ್ ಫಾತೆಹ ಅಥವಾ ಪ್ರಾರಂಭ. ಇದಕ್ಕೆ ಇದರಲ್ಲಿಯ ಮೊದಲನೆಯ ಶಬ್ದವಾದ 'ಅಲ್‌ಹಮ್‌ದ್' ಎಂಬ ಹೆಸರಿದೆ. ಎರಡನೆಯದು 'ಅಲ್‌ಬಕರ' ಅಥವಾ ಹಸು. ಇದರಲ್ಲಿ ಒಂದು ಕೊಲೆಯನ್ನು ಕಂಡುಹಿಡಿಯುವುದಕ್ಕಾಗಿ ಮೋಸೆಸ್ ಗೋಬಲಿ ಕೊಟ್ಟದ್ದನ್ನು ಹೇಳಿದೆ. ಮೂರನೆಯದು 'ಅಲ್ ಇಮ್‌ರಾನ್'. ಇದು ಒಂದು ಕುಲದ ಹೆಸರು. ನಾಲ್ಕನೆಯದು 'ಅನ್‌ನಿಸಾ' ಅಥವಾ ಸ್ತ್ರೀ. ಇದರಲ್ಲಿ ಮದುವೆ ಮುಂತಾದ ವಿಚಾರವಿದೆ. ಐದನೆಯದು 'ಅಲ್ ಮಾಯ್‌ದಹ್' ಅಥವಾ ಅನ್ನ. ಆರನೆಯದು 'ಅಲ್ ಅನ್‌ಆಮ್' ಅಥವಾ ದನಕರುಗಳು. ಏಳನೆಯದು 'ಅಲ್ ಅರಫ್' ಅಥವಾ ಉಚ್ಚಸ್ಥಾನಗಳು. ಎಂಟನೆಯದು 'ಅಲ್ ಅನ್‌ಫಾಲ್' ಅಥವಾ ಪ್ರಾಪ್ತಿ. ಒಂಭತ್ತನೆಯದು 'ಬೆರತ್' ಅಥವಾ ಅವಧ್ಯತೆ. ೧೦, ೧೧, ೧೨,—೧೪, ೨೧, ೭೨, ೭೧—ಇವು ಪೈಗಂಬರರಾದ ಯೂನುಸ್ (ಜೊನಾಹ್), ಹೂದ್, ಯೂಸುಫ್ (ಜೋಸೆಫ್), ಇಬ್ರಾಹೀಮ್ (ಅಬ್ರಹಾಮ್),

ಲೊಕ್‌ಮಾನ್, ಮಹಮ್ಮದ್, ನೋವ ಇವರ ಹೆಸರಿನವು. ವರ್ಣ ಮಾಲೆಯ ಅಕ್ಷರಗಳ ಹೆಸರುಗಳಿರುವ ಅಧ್ಯಾಯಗಳು ೨೯ ಇವೆ. ಎಷ್ಟೋ ಅಧ್ಯಾಯಗಳು ಪರ್ವತ, ನಕ್ಷತ್ರ, ಸೂರ್ಯ, ಚಂದ್ರ, ಗಿಡ, ಪ್ರಾಣಿ—ಮೊದಲಾದ ಹೆಸರುಗಳಲ್ಲಿ ಇವೆ.

ಕುರಾನಿನ ಬಂಧ ಪದ್ಯವೂ ಅಲ್ಲ ಒಣ ಗದ್ಯವೂ ಅಲ್ಲ. ಸಾಮಾನ್ಯ ವಾಗಿ ವಾಕ್ಯಗಳು ಅಂತ್ಯ ಪ್ರಾಸದಲ್ಲಿ ಮುಕ್ತಾಯವಾಗುತ್ತವೆ. ಪದ್ಯ ವಲ್ಲದಿದ್ದರೂ ಪದ ಜೋಡಣೆಯಲ್ಲಿ ಒಂದು ಅಳತೆಯೂ ತಾನವೂ ಇದೆ. ಕುರಾನ್ ಅಧ್ಯಾಯಗಳನ್ನು ಮದೀನ ಕಾಲದುವು, ಮೆಕ್ಕಾ ಕಾಲದುವು ಎಂದು ಎರಡು ಭಾಗವಾಗಿ ವಿಂಗಡಿಸಿದೆ. ಮೆಕ್ಕಾ ಅಧ್ಯಾಯಗಳಲ್ಲಿ ವಾಕ್ಯಗಳು ಚಿಕ್ಕವೂ ಅಡಕವೂ ಭಾವೋತ್ತೇಜಕವೂ ಆಗಿದ್ದು ದೇವರ ಏಕತೆ, ವಿಗ್ರಹಾರಾಧನೆಯ ಖಂಡನೆ, ಅಂತ್ಯಮಹಾ ವಿಚಾರಣೆ, ಸ್ವರ್ಗ ನರಕಗಳ, ಸುಖದುಃಖಗಳ ವಿಮರ್ಶೆ ಮೊದಲಾದ ವಿಷಯಗಳನ್ನು ಹೇಳಿದೆ. ಅಲ್ಲಲ್ಲಿ ಪ್ರಕೃತಿ ಸೌಂದರ್ಯವರ್ಣನೆಗಳೂ ಕಂಡುಬರುತ್ತವೆ. ಮದೀನ ಅಧ್ಯಾಯಗಳು ಹಲವೆಡೆ ಮೆಕ್ಕ ಅಧ್ಯಾಯಗಳ ವಿಷಯವನ್ನೇ ಹೆಚ್ಚು ವಿವರವಾಗಿ ಹೇಳುತ್ತವೆ. ವಾಕ್ಯಗಳು ಹೆಚ್ಚು ಗದ್ಯರೂಪ ದುವು. ಅಧ್ಯಾಯಗಳೂ ಉದ್ದವಾದುವು. ಇವುಗಳಲ್ಲಿ ಸೇರಿಸಿರುವ ಹೆಚ್ಚಿನ ಅಂಶವೆಂದರೆ ಆಚಾರವ್ಯವಹಾರ, ನ್ಯಾಯಸೂತ್ರಗಳು, ಸಮಾಜ ಸಂಸ್ಕರಣ, ಮುಸ್ಲಿಮರಿಗೂ ಕುರಮೀಷ್ ಮತ್ತು ಯೆಹೂದ್ಯರಿಗೂ ನಡೆದ ಕದನಗಳು, ಕಪಟಿ ಮುಸ್ಲಿಮರು, ಇಸ್ಲಾಂ ಧರ್ಮರಕ್ಷಣೆಯ ಕರ್ತವ್ಯ, ಪುರಾತನ ಪೈಗಂಬರರ ಚರಿತ್ರೆ, ಮೊದಲಾದುವು.

ಕುರಾನಿನ ಶೈಲಿ ಬಹು ಸುಂದರವೂ ಗಂಭೀರವೂ ಆದದ್ದು. ಪೈಗಂಬರನ ಹಗೆಗಳು ಹಲವರು ಇದು ಇಂದ್ರಜಾಲವೆಂದು ಹೇಳು ವಷ್ಟು ಮೋಹಕವಾಗಿತ್ತು. ಈ ವಿಷಯದಲ್ಲಿ ಒಂದು ಸಣ್ಣ ಐತಿಹ್ಯ ವುಂಟು. ಎರಡನೆಯ ಕಲೀಫ಼ ಉಮರನು ಇಸ್ಲಾಂ ಧರ್ಮ ಸ್ವೀಕರಿ ಸುವುದಕ್ಕೆ ಮೊದಲು ಪೈಗಂಬರನನ್ನು ಬಹಳವಾಗಿ ಪ್ರತಿಭಟಿಸುತ್ತಿ ದ್ದನು. ಒಮ್ಮೆ ಅವನನ್ನು ಕೊಲೆಮಾಡಬೇಕೆಂಬ ಸಂಕಲ್ಪದಿಂದ ಮನೆ ಬಿಟ್ಟು ಹೊರಟನು. ದಾರಿಯಲ್ಲಿ ಆಗಲೇ ಇಸ್ಲಾಂ ಸ್ವೀಕರಿಸಿದ್ದ

ಅವನ ಸೋದರಿ ಕೆಲವು ಕುರಾನ್ ವಚನಗಳನ್ನು ಓದುತ್ತಿದ್ದದ್ದನ್ನು ಕಂಡು, ತಾನೂ ತೆಗೆದುಕೊಂಡು ಓದಿ ಮನಸ್ಸು ಕರಗಿ ಮುಸ್ಲಿಮನಾದನು. ಕುರಾನ್ ಕೇವಲ ಶುಷ್ಕ ಉಪದೇಶವಲ್ಲ. ಅಲ್ಲಲ್ಲಿ ವಿಷಯಗಳು ಕಾವ್ಯಶೈಲಿಯಲ್ಲಿ ಮನಮುಟ್ಟುವಂತೆ ರಸವತ್ತಾಗಿ ಹೇಳಿದೆ. ಉದಾಹರಣೆಗೆ ಮಹಾಪ್ರಳಯ ಉಕ್ತವಾಗಿರುವುದನ್ನು ಇಲ್ಲಿ ಕೊಡಬಹುದು—ಮಲೆಯ ಹಾಗೆ ದೋಣಿ (ಆರ್ಕ್) ನೀರಿನ ತೆರೆಗಳ ನಡುವೆ ಹಾಯಿತು. ನೋವ ತನ್ನ ಮಗನನ್ನು ಕೂಗಿ "ಓ ಮಗು! ನಮ್ಮೊಡನೆ ದೋಣಿ ಏರು ಬಾ. ನಂಬದವರೊಡನೆ ಇರಬೇಡ" ಎಂದನು. ಅದಕ್ಕೆ ಮಗನು "ನಾನು ಒಂದು ಬೆಟ್ಟದ ಮೇಲಕ್ಕೆ ಹೋಗುತ್ತೇನೆ. ಅದು ನನ್ನನ್ನು ಪ್ರಳಯದಿಂದ ಕಾಪಾಡುತ್ತದೆ" ಎಂದನು. ನೋವ "ಈ ದಿನ ದೈವಕಟಾಕ್ಷವಿದ್ದವರು ಹೊರತು ಮತ್ತೆ ಯಾರೂ ಉಳಿಯರು" ಎಂದನು. ಒಡನೆಯೇ ಅಲೆಯೊಂದು ಎದ್ದು ಇಬ್ಬರ ನಡುವೆ ಹಾಯ್ದು ಮಗನು ಮುಳುಗಿದನು. ಒಮ್ಮೆಯೇ ಒಂದು ನುಡಿ "ಓ ನೆಲವೇ! ನೀರನ್ನು ನುಂಗಿಕೊ; ಓ ಬಾನೇ! ಮಳೆಯನ್ನು ತಡೆದುಕೊ" ಎಂದು ಕೇಳಿಸಿತು. ನೆರೆ ತೆಗೆದು, ದೈವವಿಧಿ ಪೂರೈಸಿ, ದೋಣಿ ಅಲ್ ಜೌದಿ ಎಂಬ ಮಲೆಯ ಮೇಲೆ ನೆಮ್ಮದಿಯಾಗಿ ನೆಲಸಿತು.

ಮೊದಲನೆಯ ನಾಲ್ಕು ಕಲೀಫರ ಆಳಿಕೆಯಲ್ಲಿ, ಜನರ ನ್ಯಾಯ ನಡೆವಳಿಗಳ ವಿಷಯದಲ್ಲಿ ಪೈಗಂಬರನು ಅನುಸರಿಸುತ್ತಿದ್ದ ಮಾರ್ಗಗಳನ್ನು ಸಂಪ್ರದಾಯವಾಗಿ ಎಣಿಸಿ ಅವನ್ನೆಲ್ಲ ಕೂಡಿಸಿ ಕ್ರೋಡೀಕರಿಸಿತು. ಈ ಸಂಪ್ರದಾಯ ಕ್ರೋಡೀಕರಣದಲ್ಲಿ ಮಹಮ್ಮದನ ಕುಡಿಯವರೂ ಸಂಗಾತಿಗಳೂ ಪ್ರತ್ಯಕ್ಷ ಅನುಯಾಯಿಗಳೂ ನೆರವಾದರು. ಇವರಲ್ಲಿ ಮೊದಲನೆಯ ನಾಲ್ಕು ಕಲೀಫರೂ ಮಹಮ್ಮದನ ವಿಧವೆಯರಾದ ಹಫ್ಸ, ಆಯೆಷ, ಸೈಯ್‌ನೂಬ್, ಸಫೀಯ, ಉಮ್ಮೆಸಲ್‌ಮ ಮೊದಲಾದವರೂ, ಅಬೂಹುರೇರ, ಅಬ್ದುಲ್ಲ, ಮಾಲುಸ್, ಅಬೂ ಮೂಸಾ ಅಷುರಿ, ಉಮ್‌ರ್—ಮೊದಲಾದ ಅವನ ಸಂಗಾತಿಗಳೂ ಮುಖ್ಯರಾದವರು. ಹೀಗೆ ಕ್ರೋಡೀಕರಿಸಿದ ಸಂಪ್ರದಾಯಗಳೇ ನ್ಯಾಯ ವಿಷಯದಲ್ಲಿ ಪ್ರಮಾಣಗಳಾದುವು. ಇನ್ನೂ ಲಿಖಿತ ನ್ಯಾಯ

ಸೂತ್ರಗಳಿರಲಿಲ್ಲ. ತೀರ್ಪನ್ನು ಪ್ರಮಾಣಭೂತವಾದ ಈ ಸಂಪ್ರದಾಯಗಳ ಮೇಲೂ, ಕುರಾನ್ ವಚನಗಳ ಆಧಾರದ ಮೇಲೂ ಕೊಡುತ್ತಿತ್ತು. ಉದಾಹರಣೆಗೆ ಒಮ್ಮೆ ಒಬ್ಬ ಹೆಂಗಸು ತನ್ನ ಮೊಮ್ಮಗನು ಸಾಯಲು ಅವನ ಆಸ್ತಿಯಲ್ಲಿ ತನಗೆ ಪಾಲು ಬರಬೇಕೆಂದು ಕಲೀಫ ಅಬೂಬಕ್ರ್‌ನಲ್ಲಿ ಮೊರೆಯಿಡಲು, ಕಲೀಫನು ಹಾಗೆ ಪಾಲು ಕೇಳುವುದಕ್ಕೆ ಕುರಾನ್ ವಚನಗಳಲ್ಲಿ ಆಧಾರವಿಲ್ಲವೆಂದುಬಿಟ್ಟನು. ಆಗ ಅಲ್ಲಿದ್ದ ಷೋಬನ ಮಗ ಮೊಗೀರನು "ಅಜ್ಜಿಗೆ ಆರನೆಯ ಒಂದು ಪಾಲು ಆಸ್ತಿಯನ್ನು ಮಹಮ್ಮದನು ಕೊಡಿಸಿದ್ದನ್ನು ನಾನು ನೋಡಿದ್ದೇನೆ" ಎಂದನು. ಕಲೀಫನು ಅದಕ್ಕೆ ಬೇರೆ ಸಾಕ್ಷಿಯನ್ನು ಕೇಳಲು ಮುಸ್ಲಾಮನ ಮಗ ಮಹಮ್ಮದನು ಮುಘೀರನನ್ನು ಸಮರ್ಥಿಸಿ ನುಡಿಯಲು, ಕಲೀಫನು ಅದರಂತೆಯೇ ತೀರ್ಪುಕೊಟ್ಟನು. ಸಂಪ್ರದಾಯ ಸ್ವೀಕರಣಕ್ಕೆ ಇಬ್ಬರು ಗಂಡಸರ ಅಥವಾ ನಾಲ್ಕು ಹೆಂಗಸರ ಸಾಕ್ಷಿ ಆವಶ್ಯಕವಾಗಿತ್ತು.

ಮೂರನೆಯದಾದ ಉಮಯ್ಯರ ಕಾಲದಲ್ಲಿ ಈ ಸಂಪ್ರದಾಯಗಳ ಸಂಖ್ಯೆ ಬಹಳ ಹೆಚ್ಚಿಹೋಗಿ, ಮನಸ್ಸಿಗೆ ಬಂದವನು ಮನಸ್ಸಿಗೆ ಬಂದದ್ದನ್ನು ಸಂಪ್ರದಾಯವೆಂದು ಸಾಧಿಸತೊಡಗಿದನು. ಪೈಗಂಬರನ ಕಾಲದಲ್ಲಿ ಜೀವಿಸಿದ್ದ ಪ್ರತಿಯೊಬ್ಬನೂ ಸಂಪ್ರದಾಯಜ್ಞನೆಂದು ಹೇಳಿಕೊಳ್ಳುವ ಸ್ಥಿತಿಗೆ ಬಂತು. ಆದರೂ, ಕೆಲವು ಸಂಪ್ರದಾಯಜ್ಞರು ಸತ್ಯಾನ್ವೇಷಣ ಬುದ್ಧಿಯಿಂದಲೂ ಪರಿಶುದ್ಧ ಧ್ಯೇಯದಿಂದಲೂ ಸಕಾರಣವೂ ಧರ್ಮಸಮ್ಮತವೂ ಆದ ಸಂಪ್ರದಾಯಗಳನ್ನು ಉಳಿದವುಗಳಿಂದ ಬೇರ್ಪಡಿಸತೊಡಗಿದರು. ಹೀಗೆ ಆರಂಭವಾದ ಇವರ ಕೆಲಸ ನಾಲ್ಕನೆಯದಾದ ಅಬ್ಬಾಸಿಯರ ಕಾಲದಲ್ಲಿ ನೆರವೇರಿ ಸಫಲವಾಯಿತು. ಮದೀನ, ಮೆಕ್ಕ, ಕೂಫ, ಬಸ್ರ, ಡಮಾಸ್ಕಸ್, ಈಜಿಪ್ಟ್, ಯಮನ್, ಮೊದಲಾದುವು ದೇವತಾಶಾಸ್ತ್ರಜ್ಞರ ಕೇಂದ್ರಗಳಾದುವು.

ಈ ಸಂಪ್ರದಾಯಜ್ಞರ ಮತ್ತು ದೇವತಾಶಾಸ್ತ್ರಜ್ಞರ ಬೆಳವಣಿಗೆಯ ಜತೆಗೆ ಮತ್ತೊಂದು ಮುಖ್ಯ ವ್ಯಾಸಂಗವೂ ನಡೆದು ಬಂತು. ಅದು ಕುರಾನ್ ಪಠನ. ಬರುಬರುತ್ತ ಕುರಾನ್ ಪಠನವೇ ಒಂದು ಶಾಸ್ತ್ರ ಅಥವಾ ಕಲೆಯಾಗಿ ಪರಿಣಮಿಸಿತು. ಕುರಾನ್ ಪಠನಕಾರರನ್ನು

ಕಾರಿಗಳು (ಓದುಗರು) ಎಂದು ಕರೆಯುತ್ತಾರೆ. ಇಸ್ಲಾಂ ಚರಿತ್ರೆಯಲ್ಲಿ ಏಳು ಮಂದಿ ಕಾರಿಗಳು ಪ್ರಸಿದ್ಧರಾಗಿದ್ದಾರೆ. ಇವರ ರೀತಿಯನ್ನೇ ಇಂದಿಗೂ ಎಲ್ಲ ಮುಸ್ಲಿಮರೂ ಅನುಸರಿಸುತ್ತಾರೆ. ಇವರು—(೧) ಕಸೀರ್‌ಮಗ ಅಬ್ದುಲ್ಲ. (೨) ಅಲ್‌ಉಲ ಮಗ ಅಬೂಉಮ್ರ್. (೩) ಆಮೆರ್‌ಮಗ ಅಬ್ದುಲ್ಲ. (೪) ಅಬಿನ್‌ನುಜುದ್‌ಮಗ ಅಬೂಬಕ್ರ್. (೫) ಹಬೀಬ್ ಮಗ ಹಮ್ಸ. (೬) ಅಬೀನ್‌ಯೀಮ್ ಮಗ ನಾಫೆ. (೭) ಹಮ್‌ಸಕಿಸಾಯ್ ಮಗ ಅಲಿ—ಇವರೆಲ್ಲರೂ ಹಿಜರೀಶಕ ೨ನೆಯ ಶತಮಾನದವರು. ಇವರಲ್ಲಿ ಅರಬರೇ ಅಲ್ಲದೆ ಇರಾನಿಯನ್ನರೂ ಅರಬೀತರರೂ ಇದ್ದರು.

ನಾಲ್ಕನೆಯ ಕಾಲವಾದ ಅಬ್ಬಾಸಿ ಆಳಿಕೆಯಲ್ಲಿ ಇತರ ಮುಸ್ಲಿಂ ಕಲಾಶಾಸ್ತ್ರ ವಿದ್ಯೆಗಳಂತೆಯೆ ದೇವತಾ ಶಾಸ್ತ್ರವೂ ಏಳಿಗೆ ಹೊಂದಿ ಮೇಲ್ನೆಲೆ ಮುಟ್ಟಿತು. ಆ ಕಾಲದಲ್ಲಿ ಪ್ರಸಿದ್ಧ ದೇವತಾಶಾಸ್ತ್ರಜ್ಞರು ಪ್ರಖ್ಯಾತಿಗೆ ಬಂದು ಹಲವು ದೇವತಾಶಾಸ್ತ್ರ ಮತಗಳನ್ನು ಸ್ಥಾಪಿಸಿದರು. ಇವುಗಳಲ್ಲಿ ಸುನ್ನತ್ ಜಮಾತ್ ಪಂಗಡದ ಹನಫಿ, ಷಾಫೆಯ್, ಮಾಲಿಕಿ, ಹನ್‌ಬಲಿ—ಎಂಬ ಮತಗಳೂ; ಷಿಯಾ ಪಂಗಡದ ಇಸ್ನ ಅಷರಿಯ ಜ಼ಯ್‌ದಿಯ, ಇಸ್‌ಮಾಯೀಲಿಯ ಮತಗಳೂ ಪ್ರಸಿದ್ಧವಾದುವು. ದೇವತಾಶಾಸ್ತ್ರ ಒಂದು ವ್ಯವಸ್ಥೆ ತಾಳಿ ಅದರ ವ್ಯಾಸಂಗಕ್ಕೆ (೧) ಕುರಾನ್ ವ್ಯಾಖ್ಯಾನ (ಇಲ್‌ಮ್‌ಲುಲ್ ತಫ್ಸಿರ್), (೨) ಸಂಪ್ರದಾಯ (ಇಲ್‌ಮುಲ್ ಹದೀಸ್), (೩) ಮುಸ್ಲಿಂ ನ್ಯಾಯದ ಮೂಲತತ್ವಗಳು (ಇಲ್‌ಮುಲ್ ಉಸೂಲ್), (೪) ಆಚಾರ ವ್ಯವಹಾರದ ನೀತಿನಿಯಮಗಳು (ಇಲ್‌ಮುಲ್‌ಫಿಖ್), (೫) ವ್ಯಾಖ್ಯಾನ ಮತದ ದೇವತಾಶಾಸ್ತ್ರ (ಇಲ್‌ಮುಲ್ ಅಕಾಯ್‌ದ್), (೬) ತರ್ಕ—ಇವು ಅಂಗಗಳಾಗಿ ಪರಿಣಮಿಸಿದುವು. ಬೇರೆ ಬೇರೆ ಪಂಗಡದ ದೇವತಾಶಾಸ್ತ್ರಜ್ಞರು ಆಚಾರ ವ್ಯವಹಾರದ, ನ್ಯಾಯ ನಿಯಮಗಳ, ಯಥಾರ್ಥ ನಿಷ್ಕರ್ಷೆಯಲ್ಲಿ ಬೇರೆ ಬೇರೆ ದಾರಿ ಹಿಡಿದು ಹೋಗಿದ್ದಾರೆ. ಹನಫಿ ಮತಪ್ರವರ್ತಕನಾದ ಇಮಾಮ್ ಅಬೂಹನೀಫನು ಈ ನಿಷ್ಕರ್ಷೆಯಲ್ಲಿ ಮುಖ್ಯ ಸಾಧನಗಳು—ಮೊದಲು ಕುರಾನ್, ಎರಡನೆಯದು ಸಂಪ್ರ

ದಾಯ; ಮತ್ತು ಕುರಾನ್ ವಚನಗಳ ಆಧಾರದ ಮೇಲೆ ಸಾದೃಶ್ಯ ವಾದದಿಂದ ತರ್ಕಿಸಿದ ಅಭಿಪ್ರಾಯಗಳು, ಆದಿಸಂಗಾತಿಗಳ ಬಹುಮತ ಅಭಿಪ್ರಾಯಗಳು ಆಗಿರಬೇಕೆಂದು ಹೇಳಿದ್ದಾನೆ. ಇಮಾಮ್ ಅಬೂ ಹನೀಫನು (ಕ್ರಿ. ಶ. ೭೦೨) ತನ್ನ ಶಿಷ್ಯರಲ್ಲಿ ೪೦ ಮಂದಿ ಉತ್ತಮರನ್ನು ಆಯ್ದು ಮುಸ್ಲಿಂ ನ್ಯಾಯದ ಕ್ರೋಡೀಕರಣಕ್ಕೆ ಒಂದು ಸಮಿತಿ ಏರ್ಪಡಿಸಿದನು. ಈ ಕೆಲಸ ೩೦ ವರ್ಷಗಳು ನಡೆಯಿತು. ಆದರೆ ಸಮಗ್ರಗ್ರಂಥ ಈಗ ದೊರೆಯದೆ, ಎಲ್ಲೋ ಹರುಕು ಮುರುಕು ಮಾತ್ರ ಇತರ ಗ್ರಂಥಗಳ ಸಹಾಯದಿಂದ ನಮಗೆ ತಿಳಿದುಬರುತ್ತದೆ. ಹನೀಫನ ಮುಖ್ಯತತ್ವ ಇಸ್ತಿಹ್‌ಸಾನ್ ಅಥವಾ ಔಚಿತ್ಯ ಆಗಿತ್ತು.

ಇಮಾಮ್ ಮಾಲಿಕ್ ಮತ್ತೊಬ್ಬ ಪ್ರಸಿದ್ಧ ದೇವತಾ ಶಾಸ್ತ್ರಜ್ಞ. ಇವನ ಮುಖ್ಯತತ್ವ ಸಾರ್ವಜನಿಕ ಮೇಲ್ಮೆ ಅಥವಾ ಮುಸ್ಲಹತ್. ಇವನು ಮುಖ್ಯವಾಗಿ ಸಂಪ್ರದಾಯದ ಮೇಲೂ ಪೈಗಂಬರನು ಆಚರಿಸುತ್ತಿದ್ದ ನಡೆವಳಿಯ ಮೇಲೂ ತನ್ನ ಮತವನ್ನು ಸ್ಥಾಪಿಸಿದ್ದಾನೆ. ಇವನ ಮುವತ್ತ ಎಂಬ ಗ್ರಂಥ ಬಹು ಪ್ರಸಿದ್ಧವಾದ್ದು.

ಇಮಾಮ್ ಮಾಲಿಕನ ಶಿಷ್ಯ ಇಮಾಮ್‌ಷಾಫಿಯ್ ತನ್ನ ಗುರುವಿಗೂ ಇಮಾಮ್‌ಅಬು ಹನೀಫನಿಗೂ ನಡುವಣ ಮಾರ್ಗವನ್ನು ಅನುಸರಿಸಿ ಕುರಾನ್ ವಚನಗಳಿಗೂ ಸಂಪ್ರದಾಯಗಳಿಗೂ ಸಮನ್ವಯವಾಗುವಂತೆ ತನ್ನ ಮತ ಸ್ಥಾಪಿಸಿದನು.

ಇಮಾಮ್ ಅಹ್‌ಮದ್ ಹನ್‌ಬಲ್ ಸುಮಾರು ೫೦,೦೦೦ ಸಂಪ್ರದಾಯಗಳ ಸಂಕಲನ ಒಂದನ್ನು ಮಾಡಿ, ತನ್ನ ಮತವನ್ನು ಆ ಸಂಪ್ರದಾಯಗಳ ಆಧಾರದ ಮೇಲೆ ಸ್ಥಾಪಿಸಿದ್ದಾನೆ. * ವಾಸ್ತವವಾಗಿ ಇಮಾಮ್ ಅಹ್‌ಮದನು ಬರಿಯ ಸಂಪ್ರದಾಯಜ್ಞನೇ ಹೊರತು ಅಷ್ಟಾಗಿ ದೇವತಾ ಶಾಸ್ತ್ರಜ್ಞನಲ್ಲ.

ಈ ನಾಲ್ವರಲ್ಲದೆ ಸುನ್ನತ್ ಜಮಾತ್ ಪಂಗಡದಲ್ಲಿ ಅಬೂಅಬ್ದುರ್ ರಹ್‌ಮಾನ್, ಇಮಾಮ್ ದಾವೂದ್ ಮೊದಲಾದ ಇತರರೂ ಪ್ರತ್ಯೇಕ ಮಾರ್ಗಗಳನ್ನು ಹೂಡಲು ಯತ್ನಿಸಿದರೂ ಇವರುಗಳಿಗೆ ಬೆಂಬಲವಾಗಲಿ ಅನುಯಾಯಿಗಳಾಗಲಿ ದೊರೆಯಲಿಲ್ಲ.

ಇಮಾಮ್ ಅಬೂಹನೀಫನ ಸಮಕಾಲಿಕನಾದ ಇಮಾಮ್ ಜಾಫರ್ ಷಿಯಾದೇವತಾಶಾಸ್ತ್ರಕ್ಕೆ ಮೂಲಪುರುಷ. ಷಿಯಾದೇವತಾ ಶಾಸ್ತ್ರಜ್ಞರು ಮೂಲತತ್ವಗಳಲ್ಲಿ ಸುನ್ನತ್‌ಜಮಾತರನ್ನೇ ಅನುಸರಿಸಿ, ಕೆಲವು ಸೂಕ್ಷ್ಮ ವಿಷಯಗಳಲ್ಲಿ ಮಾತ್ರ ಭಿನ್ನಾಭಿಪ್ರಾಯಪಟ್ಟಿದ್ದಾರೆ. ಈ ಪಂಗಡದವರಲ್ಲಿ ಅಬುನ್‌ನಸ್‌ರ್ ಮಹಮ್ಮದ್, ಅಬೂಅಲಿ ಮಹಮ್ಮದ್, ಸ್ಸರಾರಹ್—ಮೊದಲಾದವರು ಪ್ರಸಿದ್ಧ ಸಂಪ್ರದಾಯಜ್ಞರು. ಸುನ್ನತ್ ಜಮಾತ್ ಪಂಗಡದ ಸಂಕಲನ ಕಾಲದಲ್ಲಿ ಆರು ಜನ ಪ್ರಸಿದ್ಧ ಪುರುಷರಿರುತ್ತಾರೆ. ಅವರ ಆರು ಗ್ರಂಥಗಳು ಸಿಹಾಅ ಸಿತ್ತಹ್ ಅಥವಾ ಯಥಾರ್ಥ ಗ್ರಂಥಗಳು ಎಂದು ಹೆಸರಾಗಿವೆ—

(೧) ಇವನು ಇಸ್‌ಮೆಯೀಲ್‌ಮಗ ಇಮಾಮ್ ಮಹಮ್ಮದನಿಂದ ಕೂಡಿಸಿದುದನ್ನು ಪರಿಷ್ಕರಿಸಿದ್ದಾನೆ. 'ಅಲ್‌ಬುಖಾರಿ' (ಕ್ರಿ. ಶ. ೮೧೦-೮೭೦), (೨) ಇಮಾಮ್ ಮುಸ್ಲಿಮನ (ಕ್ರಿ.ಶ. ೮೨೬-೮೭೩) ಸಂಕಲನ, (೩) ಅಬೂಈಸ ಮಹಮ್ಮದನ (ಕ್ರಿ. ಶ. ೮೩೧-೯೦೧) 'ಅತ್‌ತಿರಿಮಿಸ್ಸಿ' ಸಂಕಲನ, (೪) ಅಬೂದಾವೂದ್ದಿನ (ಕ್ರಿ. ಶ. ೮೨೪-೮೯೭) ಸಂಕಲನ, (೫) ಅಬೂ ಅಬ್ದುರ್ ರಹ್‌ಮಾನನ (ಕ್ರಿ. ಶ. ೯೨೫) ಸಂಕಲನ, (೬) ಅಬೂ ಅಬ್ದುಲ್ಲ ಇಬ್‌ನ್‌ಏಮಾಜ (ಕ್ರಿ.ಶ. ೮೩೧-೮೮೫) ಸಂಕಲನ. ಈ ಸಂಕಲನಗಳೊಂದಿಗೆ ಇಮಾಮ್ ಷಾಫೆಯ್, ಇಬ್‌ನ್‌ಏ ಹನ್‌ಬಲ್, ಇಮಾಮ್ ಮಾಲಿಕ್—ಮೊದಲಾದವರ ಸಂಕಲನಗಳೂ ಯಥಾರ್ಥ ಅಥವಾ ಪ್ರಮಾಣ ಸಂಕಲನಗಳೆಂದು ಸ್ವೀಕಾರವಾಗಿದೆ. ಷಿಯಾ ಪಂಗಡದವರಲ್ಲಿ ಅಬೂಜಾಫರ್ ಮಹಮ್ಮದನ (ಕ್ರಿ. ಶ. ೯೪೧) 'ಕಾಫಿಯ', (೨) ಷೇಖ್ ಮಹಮ್ಮದನ (ಕ್ರಿ. ಶ. ೯೯೧) 'ಮನ್‌ಲಾ ಯಸ್‌ತಹ್‌ಸ್ಸಿರಹುಲ್ ಫಕಿಹ್', (೩) ಷೇಖ್ ಅಬೂಜಾಫರ್ ಮಹಮ್ಮದನ (ಕ್ರಿ. ಶ. ೧೦೬೭) 'ತಹ್‌ಸ್ಸೀಬ್' ಮತ್ತು 'ಇಸ್‌ತಬ್‌ಸರ್', (೪) ಅನ್‌ನಿಜ್ಜಾಷಿಯ ಮಗ ಅಹ್‌ಮದನ (ಕ್ರಿ. ಶ. ೧೦೬೩) 'ಕಿತಾಬ್‌ಉರ್‌ರಿಜಾಲ್'—ಇವು ಪ್ರಸಿದ್ಧವಾಗಿದೆ.

ಐದನೆಯ ಕಾಲ ಮಂಗೋಲರು ಬಗ್‌ದಾದನ್ನು ಹಿಡಿದು ಕೊನೆಯ ಅಬ್ಬಾಸಿ ಕಲೀಫನನ್ನು ಸೆರೆಯಿಟ್ಟುಕೊಂಡು ಮುಸ್ಲಿಂ ರಾಜ್ಯ

ಗಳನ್ನು ಆಕ್ರಮಿಸಿಕೊಂಡಂದಿನಿಂದ ಮೊದಲಾಗಿ ಇಲ್ಲಿಯವರೆಗೂ ನಡೆದುಬರುತ್ತದೆ. ಈ ಕಾಲದಲ್ಲಿ ಮುಖ್ಯವಾಗಿ ಸುನ್ನತ್ ಜಮಾತ್ ಪಂಗಡದ ನಾಲ್ಕು ಮತಗಳ ಸಂಬಂಧವಾದ ಗ್ರಂಥಗಳಿಗೆ ವ್ಯಾಖ್ಯಾನ ಟೀಕೆಗಳು ನಡೆದುವು. ಇರಾನಿನಲ್ಲಿ ಹಿಂದಿನಿಂದ ಬಂದ ಹನಫಿ ಮತ್ತು ಷಾಫೈಯೀ ಮತಗಳ ಪ್ರಾಬಲ್ಯ ಕುಗ್ಗಿ, ಕ್ರಮೇಣ ಷಿಯಾಮತ ರಾಜ್ಯ ಮತವಾಯಿತು. ೧೬ನೆಯ ಶತಮಾನದ ವೇಳೆಗೆ ಇರಾನ್ ಮೂಡಲು ಪಡುವಲು ನಾಡುಗಳಾಗಿ ಒಡೆದು, ಪಡುವಲು ನಾಡು ಅಥವಾ ಈಗಿನ ಇರಾನಿನಲ್ಲಿ ಷಿಯಾಮತವೂ, ಮೂಡಲುನಾಡು ಅಥವಾ ಬೊಖಾರ, ಖೀವ, ಅಫ್ಘಾನಿಸ್ಥಾನ, ಮೊದಲಾದ ಪ್ರಾಂತಗಳಲ್ಲಿ ಸುನ್ನತ್ ಜಮಾತ್ ಮತವೂ ಪ್ರಬಲವಾಗಿದ್ದುವು. ತುರ್ಕಿ, ಈಜಿಪ್ಟ್, ಇಂಡಿಯ ದೇಶಗಳಲ್ಲಿಯೂ, ಸುನ್ನತ್ ಜಮಾತ್ ಮತವೇ ಪ್ರಬಲವಾಗಿತ್ತು. ಮೆಸೊಪೊಟೇಮಿಯ ಕ್ರಮೇಣ ಷಿಯಾಮತ ಪ್ರಚಾರಕ್ಕೆ ಕೇಂದ್ರವಾಯಿತು.

ಈ ಕಾಲದ ಮುಖ್ಯ ಗ್ರಂಥಗಳು: (೧) ಷೇಖ್ ಇಬ್ರಾಹಿಮ್ ಹಲಬಿಯ (ಕ್ರಿ. ಶ. ೧೫೪೯) 'ಮುಲ್‌ತಕಲ್ ಅಭಾರ್'. ಇದು ಸುನ್ನತ್ ಜಮಾತ್ ಪಂಗಡದ ನಾಲ್ಕು ಮತಪ್ರವರ್ತಕರ ದೇವತಾಶಾಸ್ತ್ರ ಅಭಿಪ್ರಾಯಗಳನ್ನು ಕುರಿತದ್ದಾಗಿದ್ದು, ತುರ್ಕಿಯಲ್ಲಿ ನ್ಯಾಯಶಾಸ್ತ್ರಕ್ಕೆ ಆಧಾರಗ್ರಂಥವಾಗಿ ಪರಿಣಮಿಸಿತು. (೨) ಸೈಯ್‌ನುಲ್ ಆಬೇದೀನ್ (ಕ್ರಿ. ಶ. ೧೫೯೨), 'ಬಹ್‌ರುರ್ ರಾಯಿಕ್'. (೩) ಹಲವರು ವ್ಯಾಖ್ಯಾನ ಮಾಡಿರುವ 'ಫ್ಲಿಖುಲ್ ಅಕ್ಬರ್' ಗ್ರಂಥ. (೪) ಅಬೂಬಕ್ರ್ ಮಹಮ್ಮದ್ ಸರ್‌ಖಸಿಯ 'ಅಲ್‌ಮೊಹೀತ್' (೫) ಷೇಖ್ ಬುರ್‌ಹಾನುದ್ದೀನನ (ಕ್ರಿ. ಶ. ೧೨೧೫) 'ಅಲ್‌ಹಿದಾಯಹ್'. (೬) ಈ ಗ್ರಂಥದ ಮೇಲೆ ಷೇಖ್ ಅಕ್ಮಲುದ್ದೀನ್ ಮಹಮ್ಮದನು (ಕ್ರಿ. ಶ. ೧೩೮೪) ಮಾಡಿರುವ 'ಇನಾಯಾಹ್' ವ್ಯಾಖ್ಯಾನ. (೭) ಉಬಯ್‌ದುಲ್ಲನು (ಕ್ರಿ. ಶ. ೧೩೬೭) ವಿಕಾಯಹ್ ಗ್ರಂಥದ ಮೇಲಿನ ಷರ್‌ಹುಲ್ ವಿಕಾಯಹ್ ಎಂಬ ವ್ಯಾಖ್ಯಾನ (ಇದು ಇಂಡಿಯದಲ್ಲಿ ಬಹಳ ಪ್ರಚಾರದಲ್ಲಿದೆ.) (೮) ಈ ಮೇಲಿನ ವ್ಯಾಖ್ಯಾನದ ಮೇಲಿನ

'ಚಲ್‌ಪಿ' ಎಂಬ ಮತ್ತೊಂದು ವ್ಯಾಖ್ಯಾನ. ಇದನ್ನು ಬರೆದವನು ಅಖೀಯೂಸುಫ್ (ಕ್ರಿ. ಶ. ೧೫೭೩). (೯) ಷಮ್‌ಸುದ್ದೀನ್ ಮಹಮ್ಮದನ (ಕ್ರಿ.ಶ. ೧೬೦೭) 'ತನ್‌ವೀರುಲ್ ಆಬ್‌ಸಾರ್'. ಈ ಗ್ರಂಥದ ಮೇಲೆ ಮಹಮ್ಮದ್ ಅಲ್ಲಾವುದ್ದೀನನು (ಕ್ರಿ. ಶ. ೧೬೭೩) ಮಾಡಿರುವ 'ದುರುಲ್ ಮುಖ್‌ತಾರ್' ಎಂಬ ವ್ಯಾಖ್ಯಾನ. (೧೦) ಸಿರಾಜುದ್ದೀನ್ ಮಹಮ್ಮದನ 'ಸಿರಾಜೀಯ್ಯದ್' ಎಂಬ ಗ್ರಂಥ ಮತ್ತು ಅದರ ಮೇಲಿನ ಹಲವು ವ್ಯಾಖ್ಯಾನಗಳು (ಇದು ಇಂಡಿಯದಲ್ಲಿ, ಅದರಲ್ಲೂ ಮುಖ್ಯವಾಗಿ ಹಕ್ಕು ಬಾಧ್ಯತೆಗಳ ನಿರ್ಣಯದಲ್ಲಿ, ಬಳಕೆಯಲ್ಲಿದೆ), (೧೧) ಔರಂಗ ಜೀಬನ ಅಪ್ಪಣೆಯ ಮೇರೆ ಸಂಕಲಿಸಿದ 'ಫ಼ತಾವೇ ಆಲಮ್‌ಗಿರಿ' ಎಂಬ ನ್ಯಾಯಶಾಸ್ತ್ರ ಗ್ರಂಥ (ಇಂಡಿಯದಲ್ಲಿ ಇದು ಪ್ರಮಾಣಗ್ರಂಥವೆಂದು ಸ್ವೀಕಾರವಾಗಿದೆ). ಔರಂಗಜೀಬನ ಮಗಳು ಜ಼ೀಬುನ್ನೀಸ ರಾಜ ಕುಮಾರಿಯ ಅಪ್ಪಣೆಯ ಮೇಲೆ ಇದು ಅರಬ್ಬೀ ಭಾಷೆಯಿಂದ ಪರ್ಷಿಯನ್ನಿಗೂ ಭಾಷಾಂತರವಾಯಿತು. (೧೨) ಟಿಪ್ಪೂಸುಲ್ತಾನನ ಅಪ್ಪಣೆಯ ಮೇಲೆ ಸಂಕಲಿತವಾದ 'ಫ಼ತಾವಾಯೆ ಮಹಮ್ಮದ್' ಎಂಬ ನ್ಯಾಯನಿರ್ಣಯಗ್ರಂಥ. ಇವಲ್ಲದೆ ಇಂಡಿಯದಲ್ಲಿ ಈಚೆಗೆ ಸರ್ ಅಬ್ದುರ್‌ರಹೀಮ್, ಸಯದ್ ಅಮೀರ್ ಅಲಿ, ನೆಯ್‌ಲ್ ಬೇಯ್‌ಲಿ— ಮೊದಲಾದವರು ಮುಸ್ಲಿಂ ನ್ಯಾಯಶಾಸ್ತ್ರ ವಿಷಯದಲ್ಲಿ ಗ್ರಂಥಗಳನ್ನು ಬರೆದಿದ್ದಾರೆ.

ಇರಾನಿನಲ್ಲಿ ಪ್ರಸಿದ್ಧವಾಗಿರುವ ಷಿಯಾಮತೀಯರ ಮುಖ್ಯ ಗ್ರಂಥ ಗಳು: (೧) ಅಹ್‌ಮದ್ ಹಿಲ್ಲಿಯ ಮಗ ಯಾಹ್ಯನ 'ಜಾಮಉಷ್ ಷರಾಯೆ' ಮತ್ತು 'ಮುದ್‌ಖುಲ್‌ದೆರ್ ಉಸುಲ್‌ಎಫ್ಲಿಖ್' ಎಂಬ ಎರಡು ಗ್ರಂಥಗಳು, (೨) ಬಹಾವುದ್ದೀನ್ ಆಮೆಲಿಯ (ಕ್ರಿ. ಶ. ೧೬೫೩) 'ಜಾಮಎ ಅಬ್ಬಾಸಿ' ಎಂಬ ಗ್ರಂಥ, (೩) ಮುರ್ತಜ಼ನ ಮಗ ಮಹ ಮ್ಮದನ 'ಮಫ಼ಾತೀಹ್' ಗ್ರಂಥ, (೪) ಮಹಮ್ಮದ್ ಬಾಕಿರ್ ಮಜ್ ಲಿಸಿಯ (ಕ್ರಿ. ಶ. ೧೬೯೯) ಷಿಯಾ ಸಂಪ್ರದಾಯಗಳ ಸಂಕಲನವಾದ 'ಬಿಹ್‌ರುಲ್‌ಅನ್ವಾರ್' ಮತ್ತು ದೇವತಾಶಾಸ್ತ್ರ ವಿಷಯವಾದ ೧೪ ಸಂಪುಟಗಳ 'ಹಕ್ಕುಲ್‌ಯಕೀನ್' ಎಂಬ ಗ್ರಂಥಗಳು.

ಮುಸ್ಲಿಮರ ಆರಾಧನೆ, ಉಪವಾಸವ್ರತ, ಮೆಕ್ಕಾಯಾತ್ರೆ, ಜಕಾತ್ ಪಾಪಪುಣ್ಯವಿಚಾರ, ಪುನರುತ್ಥಾನಗಳನ್ನು ಕುರಿತು ಇಲ್ಲಿ ಸ್ಥೂಲವಾಗಿ ಹೇಳಬಹುದು.

'ಇಬಾದಾತ್' ಅಥವಾ ಆರಾಧನೆ: ಪ್ರಾರ್ಥನೆ (ಸಲಾತ್) ಗಳಲ್ಲಿ ಅನೇಕ ವಿಭಾಗಗಳುಂಟು. ಪ್ರತಿದಿನವೂ ಐದು ಸಲ ಪ್ರಾರ್ಥನೆ ಮಾಡಬೇಕು. ಒಂದೊಂದು ಸಲವೂ ಒಂದು ಗೊತ್ತಾದ ಸಂಖ್ಯೆಯ ರುಕತ್ (ನಮಸ್ಕಾರ) ಮಾಡಬೇಕು. ಅರುಣೋದಯಕ್ಕೆ ಮುಂಚೆ ಎರಡು ರುಕತ್, ಮಧ್ಯಾಹ್ನ ನಾಲ್ಕು ರುಕತ್, ಅಪರಾಹ್ಣ ನಾಲ್ಕು ರುಕತ್, ಸೂರ್ಯಾಸ್ತದ ತರುವಾಯ ಮೂರು ರುಕತ್, ರಾತ್ರಿ ನಾಲ್ಕು ರುಕತ್ ಮಾಡಬೇಕು. ಇವನ್ನು ಪ್ರತಿಯೊಬ್ಬನೂ ಆಗತ್ಯವಾಗಿ ಮಾಡ ಲೇಬೇಕು. ಇವಲ್ಲದೆ ಅನುಕೂಲವೂ ಇಷ್ಟವೂ ತೋರಿದರೆ ಇಷ್‌ರಾಕ್ (ಸೂರ್ಯೋದಯದ ಮೇಲೆ ಎಂಟು ರುಕತ್), ಜುಹ (ಪೂರ್ವಾಹ್ನದಲ್ಲಿ ಎಂಟು ರುಕತ್), ಮತ್ತು ತಹಜ್ಜುದ್ (ನಡುರಾತ್ರಿ ಒಂಬತ್ತು ರುಕತ್) ಗಳನ್ನು ಮಾಡಬಹುದು. ಆದರೆ, ಇವನ್ನು ಮಾಡುವವರು ಬಹು ವಿರಳ. ಪ್ರತಿಯೊಂದು ರುಕತ್ತಿನಲ್ಲೂ ನಿಂತು, ಬಗ್ಗಿ, ನೆಲಮುಟ್ಟಿ ಪ್ರಾರ್ಥನೆ ಮಾಡಬೇಕು. ಪ್ರತಿ ಪ್ರಾರ್ಥನಾ ಕಾಲದಲ್ಲೂ ಈ ಸಾಮಾನ್ಯ ರುಕತ್ತುಗಳ ಜತೆಗೆ ಸುನ್ನತ್ ಜಮಾತ್ ಪಂಗಡದವರು ಕೆಲವರು ಸುನ್ನತ್, ನಫ್ಲ್, ವಿತ್‌ರ್‌ಗಳೆಂಬ ವಿಶೇಷ ಪ್ರಾರ್ಥನೆ ಗಳನ್ನೂ ಮಾಡುತ್ತಾರೆ. ಷಿಯಾಗಳು ಐದು ಪ್ರಾರ್ಥನಾಕಾಲವನ್ನು ಬೆಳಗ್ಗೆ, ಮಧ್ಯಾಹ್ನ, ಸಾಯಂಕಾಲ—ಹೀಗೆ ಮೂರಕ್ಕೆ ಇಳಿಸಿ ಕೊಂಡಿದ್ದಾರೆ.

ಪ್ರತಿ ಪ್ರಾರ್ಥನೆಗೆ ಮೊದಲು ಅಜಾನ್ ಅಥವಾ ಪ್ರಾರ್ಥನೆಯ ಕರೆ ಹೊರಡುತ್ತದೆ. ಮೋಅಜ್ಜಿನ್ ಅಥವಾ ಪ್ರಾರ್ಥನೆಯ ಕರೆಕೊಡು ವವನು ಈ ರೀತಿಯಾಗಿ ಕೂಗಿ ಹೇಳುತ್ತಾನೆ—"ದೇವರು ದೊಡ್ಡವನು (ನಾಲ್ಕು ಸಲ); ಅಲ್ಲಾ ಹೊರತು ಬೇರೆ ದೇವರಿಲ್ಲ. ಇದಕ್ಕೆ ನಾನು ಸಾಕ್ಷಿ (ಎರಡು ಸಲ); ಮಹಮ್ಮದ್ ದೇವಪ್ರೇಷಿತ, ಇದಕ್ಕೆ ನಾನು ಸಾಕ್ಷಿ (ಎರಡು ಸಲ); ಪ್ರಾರ್ಥನೆಗೆ ಬನ್ನಿ, (ಎರಡು ಸಲ); ಮುಕ್ತಿಗೆ

ಬನ್ನಿ (ಎರಡು ಸಲ);" ಅಲ್ಲಾ ಹೊರತು ಬೇರೆ ದೇವರಿಲ್ಲ (ಸುನ್ನತ್ ಜಮಾತರು ಒಂದು ಸಲ, ಷಿಯಾಗಳು ಎರಡು ಸಲ). ಬೆಳಗಿನ ಅಸ್ಲನ್ ನಲ್ಲಿ ಸುನ್ನತ್ ಜಮಾತರು ನಿದ್ದೆಗಿಂತ ಪ್ರಾರ್ಥನೆ ಮೇಲು (ಎರಡು ಸಲ) ಎಂಬುದನ್ನೂ ಕರೆಯಲ್ಲಿ ಸೇರಿಸುತ್ತಾರೆ. ಇದಕ್ಕೆ ಬದಲು ಷಿಯಾಗಳು ಸತ್ಕಾರ್ಯಕ್ಕೆ ಬನ್ನಿ (ಎರಡು ಸಲ).

ಪ್ರತಿ ಪ್ರಾರ್ಥನೆಗೆ ಮೊದಲೂ ಕೈಕಾಲು ಮುಖಗಳನ್ನು ತೊಳೆದು ಕೊಂಡು ದೇಹ ಶುದ್ಧಿಮಾಡಿಕೊಳ್ಳಬೇಕು. ನೀರು ಸಿಕ್ಕದಿದ್ದರೆ ಮೃತ್ತಿಕಾಶುದ್ಧಿ ಮಾಡಿಕೊಳ್ಳಬಹುದು. ಸ್ತ್ರೀ ಸಂಬಂಧವೇ ಮೊದ ಲಾದವುಗಳಿಂದ ದೇಹ ಕಲುಷಿತವಾಗಿದ್ದರೆ ಪೂರ್ಣ ಸ್ನಾನಮಾಡಿ ಪ್ರಾರ್ಥನೆಗೆ ಏಳಬೇಕು. ಈ ಪೂರ್ಣ ಅಥವಾ ಅಪೂರ್ಣ ಸ್ನಾನಗಳ ವಿಧಿಯನ್ನು ಕುರಾನಿನಲ್ಲಿ ವಿವರವಾಗಿ ಹೇಳಿದೆ.

ಪ್ರಾರ್ಥನಾಕ್ರಮವನ್ನು ಕುರಾನಿನಲ್ಲಿ ನಿಷ್ಕೃಷ್ಟವಾಗಿ ಹೇಳಿಲ್ಲ. ಪ್ರಾರ್ಥನಾಕಾಲ ಮತ್ತು ಪ್ರಾರ್ಥನಾಮಾಹತ್ಮ್ಯ ಮಾತ್ರ ಹೇಳಿದೆ. ಕೊನೆಗೆ, ಯುದ್ಧ ಪ್ರಯಾಣ ಮೊದಲಾದುವುಗಳಲ್ಲಿ ನಿಂತೆಡೆಯೇ, ಕುದುರೆಯ ಮೇಲೆಯೇ ಪ್ರಾರ್ಥನೆಯನ್ನು ಮಾಡಬಹುದು. ಕುರಾನಿ ನಲ್ಲಿ "ಪೂರ್ವ ಪಶ್ಚಿಮ ಎಲ್ಲೆಡೆಗಳಲ್ಲೂ ದೇವರಿದ್ದಾನೆ. ನೀನೆತ್ತ ತಿರುಗಿದರೆ ಅತ್ತ ದೇವರ ಮುಖವಿದೆ. ದೇವರು ಸರ್ವವ್ಯಾಪಕ, ಸರ್ವಜ್ಞ" ಎಂದು ಹೇಳಿದ್ದರೂ ಪ್ರಾರ್ಥನೆಯಲ್ಲಿ ಎಲ್ಲರೂ ಮೆಕ್ಕಾಭಿಮುಖವಾಗಿ ನಿಂತುಕೊಳ್ಳುವುದು ವಾಡಿಕೆಯಾಗಿ ಬಂದಿದೆ. ಹೀಗೆ ನಿಂತು ಎರಡು ಕೈಗಳನ್ನೂ ಕಿವಿಯ ಹತ್ತಿರ ತಂದು 'ದೇವರು ದೊಡ್ಡವನು' ಎಂದು ಆರಂಭಿಸಿ ಈ ಕೆಳಗಿನ ಸೂರಹ್ ಹೇಳುತ್ತಾರೆ—'ಉದಾರನೂ ಕರುಣಾ ಮಯನೂ ಆದ ಭಗವಂತನ ಹೆಸರಿನಲ್ಲಿ ಪ್ರಾರ್ಥಿಸುತ್ತೇವೆ. ಸರ್ವ ಲೋಕನಾಥನೂ ದಯಾಮಯನೂ ಕೃಪಾಕರನೂ ಅಂತಿಮ ಮಹಾ ವಿಚಾರಣಾ ಪ್ರಭುವೂ ಆದ ಅಲ್ಲಾವನ್ನು ಪ್ರಾರ್ಥಿಸುತ್ತೇವೆ. ನಿನ್ನೊ ಬ್ಬನನ್ನೇ ಪೂಜಿಸುತ್ತೇವೆ. ನಿನ್ನೊಬ್ಬನಿಗೇ ಮೊರೆಯಿಡುತ್ತೇವೆ. ನಮ್ಮನ್ನು ಸನ್ಮಾರ್ಗದಲ್ಲಿ, ನಿನ್ನ ಪ್ರಸಾದಗೊಂಡ ಭಕ್ತರ ಮಾರ್ಗದಲ್ಲಿ ನಡಸು. ನಿನ್ನ ಕೋಪಕ್ಕೆ ಪಾತ್ರರಾದವರ, ತಪ್ಪಿಗೆ ಹೋದವರ ದಾರಿಗೆ ಒಯ್ಯ

ಬೇಡ.' ಆಮೇನ್ ( = ತಥಾಸ್ತು). ಇದಾದಮೇಲೆ ಕುರಾನಿನ ಬೇರೆಬೇರೆ ಭಾಗಗಳಿಂದ ಕೆಲವು ಸುರಹ್‌ಗಳನ್ನೂ ಹೇಳುವುದುಂಟು. ಈ ಪ್ರಾರ್ಥನಾ ನಂತರ ಮೊದಲೇ ಹೇಳಿದಂತೆ ರುಕತ್ತುಗಳನ್ನು ಮಾಡಬೇಕು.

ಪ್ರತಿದಿನವೂ ಮಾಡಬೇಕಾದ ಈ ಪ್ರಾರ್ಥನೆಯ ಜತೆಗೆ ಕೆಲವು ವಿಶೇಷ ಪ್ರಾರ್ಥನೆಗಳೂ ಉಂಟು. ಉದಾಹರಣೆಗೆ ಶುಕ್ರವಾರ ಮಧ್ಯಾಹ್ನ ಒಂದು ಗಂಟೆ ಸಮಯದಲ್ಲಿ ಮತ್ತು ರಮ್‌ಜ್ಞಾನ್, ಬಕ್ರೀದ್, ಮೊದಲಾದ ಹಬ್ಬದಿನಗಳಲ್ಲಿ ಮಸೀದಿಯಲ್ಲೊ ಬಯಲಿನಲ್ಲೊ ನೆರವಿಗೂಡಿ ಮಾಡುವ ಸಮುದಾಯ ಪ್ರಾರ್ಥನೆ.

ಉಪವಾಸ: ಪ್ರಾಯಶ್ಚಿತ್ತ, ರಾಗದ್ವೇಷಗಳ ಸಂಯಮ, ದೇಹಾತ್ಮ ಪರಿಶುದ್ಧಿ—ಮೊದಲಾದುವುಗಳಿಗಾಗಿ ಉಪವಾಸವ್ರತ ಹಿಡಿಯುವುದು ಆದಿ ಜನಾಂಗಗಳೆಲ್ಲರಲ್ಲೂ ವಾಡಿಕೆಯಲ್ಲಿತ್ತು. (ಝೊರಾಸ್ಟರ್ ಧರ್ಮದಲ್ಲಿ ಮಾತ್ರ ಇದು ಕಂಡುಬರುವುದಿಲ್ಲ). ಹೀಗೆಯೇ ಎಲ್ಲ ಮುಸ್ಲಿಮರಲ್ಲೂ ಉಪವಾಸವ್ರತ ರೂಢಿಯಲ್ಲಿದೆ. ಉಪವಾಸ ವಿಷಯದಲ್ಲಿ ಕುರಾನ್ ಈ ರೀತಿ ಹೇಳುತ್ತದೆ. 'ಓ ನಂಬುವವರೆ! ನಿಮ್ಮ ಹಿಂದಿನವರಿಗೆ ಹೇಗೊ ಹಾಗೆಯೆ ನಿಮಗೂ ಪಾಪನಿವಾರಣೆಗಾಗಿ ಉಪವಾಸ ವಿಧಿಸಿದೆ. ಕ್ಲುಪ್ತದಿನಗಳಲ್ಲಿ ಉಪವಾಸ ಮಾಡಿ. ರೋಗಿಗಳು, ಪ್ರಯಾಣದಲ್ಲಿರುವವರು ಕ್ಲುಪ್ತದಿನಗಳಲ್ಲಿ ಮಾಡಬೇಕಾದದ್ದಕ್ಕೆ ಬದಲಾಗಿ, ಬೇರೆ ಅನುಕೂಲ ದಿನಗಳಲ್ಲಿ ಉಪವಾಸ ಮಾಡಲಿ. ಕೈಯಲಾದವರು ದರಿದ್ರರಿಗೆ ಅನ್ನಹಾಕಿ ಉಪವಾಸ ವ್ರತದಿಂದ ಬಿಡುಗಡೆಹೊಂದಿ. ಉಪವಾಸ ಮಾಡುವುದು ನಿಮ್ಮ ಮೇಲ್ಮೆಗಾಗಿ. ರಮ್‌ಜ್ಞಾನ್ ತಿಂಗಳಲ್ಲಿ ಕುರಾನ್ ಪ್ರಕಾಶವಾಯಿತು. ಆದ್ದರಿಂದ ಆ ತಿಂಗಳಲ್ಲಿ ಪ್ರತಿಯೊಬ್ಬನೂ ಉಪವಾಸ ಮಾಡಲಿ. ಆಗ ರೋಗದಿಂದ ನರಳುತ್ತಿರುವವನು, ಪ್ರಯಾಣದಲ್ಲಿರುವವನು ಅಷ್ಟೇ ದಿನಗಳು ಬೇರೆ ಕಾಲದಲ್ಲಿ ಉಪವಾಸ ಮಾಡಲಿ. ದೇವರು ನಿಮಗೆ ಸುಖವನ್ನು ಬಯಸುತ್ತಾನೆಯೇ ಹೊರತು ಕಷ್ಟವನ್ನಲ್ಲ.'

ರಮ್‌ಜ್ಞಾನ್ ಉಪವಾಸ ಒಂದು ತಿಂಗಳ ಕಾಲ ಮಾಡಬೇಕು. ಆಗ ಬೆಳಗ್ಗೆ ನಾಲ್ಕರಿಂದ ಐದರ ಒಳಗೆ ಸ್ವಲ್ಪ ಆಹಾರ ತೆಗೆದುಕೊಂಡು

ಮತ್ತೆ ಸಂಜೆಯ ವರೆಗೂ ನೀರನ್ನು ಕೂಡ ಕುಡಿಯದೆ ಇದ್ದು, ರಾತ್ರಿ ಆಹಾರ ತೆಗೆದುಕೊಳ್ಳಬೇಕು. ಅಲ್ಲದೆ ಆ ಕಾಲದಲ್ಲಿ ಕಾಮಕ್ರೋಧಾದಿಗಳಿಗೆ ವಶನಾಗದೆ, ಸ್ತ್ರೀಭೋಗ ಮೊದಲಾದ ಲಾಲಸೆಗಳಿಗೆ ಬೀಳದೆ, ಮನಸ್ಸನ್ನು ಪರಿಶುದ್ಧವಾಗಿ ಇಟ್ಟುಕೊಳ್ಳಬೇಕು. ಸಂಜೆಯ ಮೇಲೆ ಸುನ್ನತ್ ಜಮಾತ್ ಮುಸ್ಲಿಮರು ಮಸೀದಿಗೆ ಹೋಗಿ ತರಾವೀಹ್ ಎಂಬ ವಿಶೇಷ ಪ್ರಾರ್ಥನೆಯಲ್ಲಿ ಭಾಗಿಗಳಾಗುತ್ತಾರೆ. ರಾತ್ರಿ ಪ್ರಾರ್ಥನೆ, ಕುರಾನ್ ಪಠನ, ಮಸೀದಿಗಳಲ್ಲಿ ಧರ್ಮಪ್ರಸಂಗ—ಇವೇ ಮೊದಲಾದ ಪುಣ್ಯ ಶ್ರವಣಗಳಲ್ಲಿ ಕಾಲ ಕಳೆಯಬೇಕು. ಸಾಮಾನ್ಯವಾಗಿ ಹಾಫೀಸ್ ಅಥವಾ ಕುರಾನ್ ಪಠನಕಾರರು ಪ್ರತಿದಿನವೂ ಒಂದೊಂದು ಭಾಗದಂತೆ ರಮ್‌ಝಾನಿನ ೨೭ನೆಯ ದಿನ ಮುಗಿಯುವಂತೆ, ಕುರಾನ್ ಪಾರಾಯಣ ಮಾಡುತ್ತಾರೆ.

ತೀರ್ಥಯಾತ್ರೆ: ಇಸ್ಲಾಮಿಗೆ ಪೂರ್ವದಲ್ಲೂ, ಅರಬರು ಮೆಕ್ಕಾದಲ್ಲಿಯ ಕಾಬ ದೇವಾಲಯದಲ್ಲಿ ಪ್ರತಿವರ್ಷವೂ ಜಾತ್ರೆ ನೆರೆಯುತ್ತಿದ್ದರು. ಪೈಗಂಬರನು ಆ ದೇವಾಲಯದ ವಿಗ್ರಹಗಳನ್ನೆಲ್ಲ ತೆಗೆದು ಹಾಕಿ, ಪೂಜಾ ವಿಧಿಯಲ್ಲಿ ಕೆಲವು ಮಾರ್ಪಾಟುಗಳನ್ನು ಮಾಡಿ ಹಿಂದಿನಂತೆಯೇ ಜಾತ್ರೆ ನಡಸಲು ಅವಕಾಶವಿತ್ತನು. ಈ ಜಾತ್ರೆಯ ಕೊನೆಯಲ್ಲಿ ನಡೆಯುವ ವಿಧಿಗಳನ್ನು ಇಲ್ಲಿ ಸಂಗ್ರಹವಾಗಿ ಹೇಳಬಹುದು—ಯಾತ್ರಿಕರು ಸ್ನಾನಮಾಡಿ, ಎರಡು ರುಕತ್ ಪ್ರಾರ್ಥನೆಮಾಡಿ, ತಮ್ಮ ಉಡಿಗೆ, ತೊಡಿಗೆಗಳನ್ನು ಕಳಚಿ, ಒಂದು ಬಟ್ಟೆಯನ್ನು ಉಟ್ಟು, ಒಂದು ಬಟ್ಟೆಯನ್ನು ಹೊದೆದು ಬರಿಯ ತಲೆಯಲ್ಲಿರಬೇಕು. ದರಿದ್ರನಿಂದ ದೊರೆಯುವರೆಗೂ ಈ ವಿಧಿಯನ್ನು ಪಾಲಿಸಲೇ ಬೇಕು. ಇದಕ್ಕೆ ಅಹ್ರಾಮ್ ಎಂದು ಹೆಸರು. ಈ ಬಟ್ಟೆಯನ್ನು ಉಟ್ಟಮೇಲೆ ಕ್ಷೌರ ಮಾಡಿಕೊಳ್ಳುವುದು, ಎಣ್ಣೆ ಹಚ್ಚಿಕೊಳ್ಳುವುದು, ಉಗುರು ತೆಗೆಯುವುದು, ಮೊದಲಾದುವನ್ನು ಮಾಡದೆ ದೀಕ್ಷೆಯಲ್ಲಿರಬೇಕು. ಮೈಯನ್ನು ಕೂಡ ಕೆರೆಯಬಾರದು. ಪ್ರಾಣಿಗಳನ್ನು ಕೊಲ್ಲಬಾರದು. ಪ್ರಾಪಂಚಿಕ ವ್ಯವಹಾರಗಳನ್ನೆಲ್ಲ ಮರೆತು ನಿರಂತರವಾಗಿ ದೇವರ ಧ್ಯಾನದಲ್ಲಿ ತೊಡಗಿ 'ದೇವರೇ! ನಿನ್ನ ಸೇವೆಗೆ ನಿಂತಿದ್ದೇನೆ' ಎಂದು ಜಪಿಸುತ್ತಿರಬೇಕು.

ಕಾಬವನ್ನು ಮೂರು ಸಲ ವೇಗವಾಗಿಯೂ, ನಾಲ್ಕು ಸಲ ಮೆಲ್ಲಗೂ ಪ್ರದಕ್ಷಿಣೆ ಮಾಡಿ, ಗುಡಿಯ ಒಳಗಿರುವ ಕರಿಯ ಶಿಲೆಯನ್ನು ಮುತ್ತಿಟ್ಟು ಕೊಂಡು, ಮೊಕಾಮ್-ಎ-ಇಬ್ರಾಹೀಮ್ ಎಂಬೆಡೆಯಲ್ಲಿ ಎರಡು ರುಕತ್ ಪ್ರಾರ್ಥನೆ ಮಾಡಬೇಕು. ಜಿಲ್‌ಹಜ್ಜದ ೭ನೆಯ ದಿನ ಸಫ಼ಾ ಗುಡ್ಡದಿಂದ ಮಾರ್ವ ಗುಡ್ಡಕ್ಕೆ ಏಳು ಸಲ ಓಡಬೇಕು. ಇದಕ್ಕೆ ಸಯ್ ಎಂದು ಹೆಸರು. ೭ನೆಯ ದಿನ ಮೆಕ್ಕಾ ಮಹಾ ಮಸೀದಿಯಲ್ಲಿ ನಡೆಯುವ ಖುತ್‌ಬ ಅಥವಾ ಧರ್ಮಪ್ರಸಂಗವನ್ನು ಕೇಳಬೇಕು. ೮ನೆಯ ದಿನ (ಮೆಕ್ಕಾದಿಂದ ಮೂರು ಮೈಲಿ ದೂರವಿರುವ) ಮೀನಾಕ್ಕೆ ಹೋಗಿ ಅಲ್ಲಿ ರಾತ್ರಿಯೆಲ್ಲ ಕಳೆಯಬೇಕು. ೯ನೆಯ ದಿನ ಅರಫಾತ್ ಬಯಲಿಗೆ ಹೋಗಿ ಧರ್ಮಪ್ರಸಂಗ ಕೇಳಿ, ಸಂಜೆಯ ಪ್ರಾರ್ಥನೆಗೆ ಮುಜ್‌ದಲಫಕ್ಕೆ ಬರಬೇಕು. ಇಲ್ಲಿ ಪ್ರಾರ್ಥನೆ ತೀರಿಸಿ ಮೀನಾಕ್ಕೆ ಬಂದು ಅಲ್ಲಿಯ ಮೂರು ಕಂಬಗಳಿಗೂ ಒಂದೊಂದಕ್ಕೆ ಏಳು ಏಳು ಕಲ್ಲುಗಳನ್ನು ಹಾಕ ಬೇಕು. ಇದಕ್ಕೆ ರಮ್ಯುತ್ ಜಮರ್ ಎಂದು ಹೆಸರು. ಕೊನೆಗೆ ಮೀನಾ ದಲ್ಲಿ ಪಶುಬಲಿಯನ್ನು ಕೊಡಬೇಕು. ಇದು ಯಾತ್ರೆಯ ಅಂತಿಮ ಅಂಗ. ಅನಂತರ ಯಾತ್ರಿಕನು ಮೆಕ್ಕಾಕ್ಕೆ ಬಂದು ಕಾಬ ಪ್ರದಕ್ಷಿಣೆ ಮಾಡಿ ಯಾತ್ರೆಯನ್ನು ಪೂರೈಸಬೇಕು. ಈ ಯಾತ್ರೆಯ ೧೧-೧೨-೧೩ನೆಯ ದಿನಗಳಲ್ಲಿ ಪಶುಬಲಿ ಕೊಟ್ಟು ಅವನ್ನು ಬಿಸಿಲಲ್ಲಿ ಒಣಗಿಸು ವುದರಿಂದ ಆ ದಿನಗಳಿಗೆ ತಷ್‌ರಿಕ್ ಅಥವಾ ಸೂರ್ಯೋದಯ ಎಂದು ಹೆಸರು. ಈ ಯಾತ್ರೆಯಲ್ಲಿ ಕಾಬ ಹತ್ತಿರವಿರುವ ಜಮ್‌ಜಮ್ ಬಾವಿಯ ನೀರು ಕುಡಿಯುವುದು ಯಾತ್ರಾಕರ್ಮದ ಒಂದು ಅಂಗ. ಈ ಯಾತ್ರೆ ಯನ್ನು ಮಾಡಿದವರಿಗೆ ಹಾಜಿಗಳೆಂದು ಹೆಸರು. ಈ ಮಹಾ ಯಾತ್ರೆ ಅಲ್ಲದೆ ಉಮ್‌ರಹ್ ಅಥವಾ ಲಘು ಯಾತ್ರೆಯೂ ಉಂಟು. ಇದರಲ್ಲಿ ಮಹಾ ಯಾತ್ರೆಯ ಕೆಲವು ಅಂಗಗಳೂ ಕರ್ಮಗಳೂ ಇರುವುದಿಲ್ಲ.

ಈ ಹಜ್ ಯಾತ್ರೆಯ ವಿಷಯದಲ್ಲಿ ಕುರಾನ್ ಈ ರೀತಿ ಹೇಳು ತ್ತದೆ—'ದೈವ ಪ್ರೀತ್ಯರ್ಥವಾಗಿ ಹಜ್ ಅಥವಾ ಯಾತ್ರೆಯನ್ನೂ ಉಮ್ ರಹ್ ಅಥವಾ ಮೆಕ್ಕಾ ದರ್ಶನವನ್ನೂ ಮಾಡಿ. ಇದಕ್ಕೆ ಅಡಚಣೆ ಏನಾದರೂ ಬಂದರೆ ಏನಾದರೂ ಕಾಣಿಕೆಯನ್ನು ಕಳುಹಿ ಕೊಡಿ. ಅದು

ಮೆಕ್ಕ ಮುಟ್ಟುವವರೆಗೂ ಕ್ಷೌರ ಮಾಡಿಕೊಳ್ಳದೆ ದೀಕ್ಷೆಯಲ್ಲಿರಿ. ರೋಗಾದಿಗಳಿಂದ ನರಳುವವರು ಭಿಕ್ಷೆಗಾಗಿ, ಬಲಿಗಾಗಿ, ತಪ್ಪಿಗೆ ತೆರ ಸಲ್ಲಿಸಿ'. ಯಾತ್ರೆ ಸಾಮಾನ್ಯವಾಗಿ ಷವ್ವಾಲ್, ಜ್ಹಿಕಾದ್, ಮತ್ತು ಜ್ಹಿಲ್‌ಹುಜ್ ತಿಂಗಳುಗಳಲ್ಲಿ ಮಾಡಬೇಕು. ಈ ಯಾತ್ರೆಗೆ ಹೋಗುವವರು ವ್ಯಾಪಾರಾದಿ ಕಾರ್ಯಗಳನ್ನು ನಡಸಿಕೊಂಡೂ ಬರಬಹುದು.

ಇಸ್ಲಾಮಿನಲ್ಲಿ ಪಶುಬಲಿ ಕೊಡುವುದು ಆಹಾರಕ್ಕಾಗಿಯೇ ಹೊರತು, ಮತ್ತೆ ಯಾವ ಕಾರಣದಿಂದಲೂ ಅಲ್ಲ. ಬಡವರಿಗೆ ಊಟ ಹಾಕುವುದಕ್ಕಾಗಲಿ, ಸುಖ ಭೋಜನಕ್ಕಾಗಲಿ ಪಶುಬಲಿಯನ್ನು ಕೊಡಬಹುದು. ಪಾಪ ಪ್ರಾಯಶ್ಚಿತ್ತಕ್ಕಾಗಿ, ಹರಕೆ ಸಲ್ಲಿಸುವುದಕ್ಕಾಗಿ ಬಲಿ ಕೊಡುವುದಿಲ್ಲ. ಬಲಿಯನ್ನು ಕೊಲ್ಲುವಾಗ ಯಾವ ಮಂತ್ರವನ್ನೂ ಜಪಿಸುವುದಿಲ್ಲ. ನೀರೆರೆಯುವುದೇ ಮೊದಲಾದ ಯಾವ ಸಂಸ್ಕಾರವನ್ನೂ ಮಾಡುವುದಿಲ್ಲ. ಅಲ್ಲಾ ಹೆಸರು ಹೇಳುವುದೊಂದು ಹೊರತು ಯಾವ ಪ್ರಾರ್ಥನೆಯನ್ನೂ ಮಾಡುವುದಿಲ್ಲ. ಬಲಿಬಿದ್ದ ಪಶುವನ್ನು ಕೂಟದವರೆಲ್ಲರೂ ಸಮವಾಗಿ ಹಂಚಿಕೊಂಡು ತಿನ್ನುತ್ತಾರೆ.

ಜ್ಹಕಾತ್ ಅಥವಾ ಭಿಕ್ಷೆ: ಮುಸ್ಲಿಂ ಧರ್ಮದ ಮೂಲತತ್ವಗಳಲ್ಲಿ ಭಿಕ್ಷೆ ಒಂದು. ಸ್ವತಂತ್ರನೂ, ನಿಸಾಬ್ ಅಥವಾ ಒಂದು ಕ್ಲುಪ್ತವಾದ ಆಸ್ತಿ ಉಳ್ಳವನೂ ಆದ ಪ್ರತಿಯೊಬ್ಬ ಮುಸ್ಲಿಮನೂ ತನ್ನವರಮಾನದಲ್ಲಿ ಒಂದು ಗೊತ್ತಾದ ಭಾಗವನ್ನು ಜ್ಹಕಾತಿಗಾಗಿ ಕೊಡಬೇಕು. ಇದು ಬಡಬಗ್ಗರಿಗೆ ದಾನಕ್ಕೂ, ಭಿಕ್ಷೆಯೆತ್ತುವ ಅಧಿಕಾರಿಗಳ ಜೀವನಕ್ಕೂ, ಇಸ್ಲಾಂ ಧರ್ಮ ಸ್ವೀಕರಿಸುವ ಮುಸ್ಲಿಮೇತರರಿಗೂ, ಸೆರೆಯಲ್ಲಿರುವವರನ್ನು ಬಿಡಿಸುವುದಕ್ಕೂ, ಬಡವರ ಕಡ ತೀರಿಸುವುದಕ್ಕೂ, ಪ್ರಯಾಣಿಕರ ಸಹಾಯಕ್ಕೂ, —ಮುಸ್ಲಿಂ ಧರ್ಮಕ್ಕಾಗಿ ಹೋರಾಡುವುದಕ್ಕೂ ಕೂಡ—ಉಪಯೋಗಿಸಬಹುದು. (ಸ್ವದೇಶವನ್ನೂ ಸ್ವಧರ್ಮವನ್ನೂ ಕಾಯ್ದುಕೊಳ್ಳುವುದಕ್ಕಾಗಿ ಹೋರಾಡುವುದೂ, ತನ್ನೊಡನೆ ಯುದ್ಧಕ್ಕೆ ಬಂದವನನ್ನು ಎದುರಿಸಿ ಯುದ್ಧ ಮಾಡುವುದೂ ಪ್ರತಿಯೊಬ್ಬ ಮುಸ್ಲಿಮನ ಕರ್ತವ್ಯ. ಕೊನೆಗೆ ಪ್ರತಿಕಕ್ಷಿ ಮಸೀದಿಯಲ್ಲಿ ಯುದ್ಧಕ್ಕೆ ನಿಂತರೆ, ಅಲ್ಲಿಯೂ ಯುದ್ಧ ಮಾಡಿ ಅವನನ್ನು ಕೊಲ್ಲುವುದಕ್ಕೆ ಮುಸ್ಲಿಮನಿಗೆ ಅಧಿಕಾರವುಂಟು.)

ಪ್ರತಿಯೊಬ್ಬನೂ ಮಾಡಬೇಕಾದ ಭಿಕ್ಷಾದಾನವಲ್ಲದೆ ಕೆಲವು ಹೆಚ್ಚುಗಟ್ಟಳೆ ದಾನಗಳೂ ಉಂಟು. ಪ್ರತಿನಿತ್ಯದ ಪ್ರಾರ್ಥನೆ, ಉಪವಾಸ ವ್ರತ, ಪ್ರತಿಜ್ಞೆಯ ಪೂರೈಕೆ, ಯಾತ್ರೆ, ಸ್ವಕಾತ್—ಇವೇ ಮೊದಲಾದುವು ದೇವರಿಗೆ ಸಲ್ಲಿಸಬೇಕಾದ ಒಂದು ಕಡವಿದ್ದಂತೆ. ಇವನ್ನು ಸಕಾಲದಲ್ಲಿ ಸಲ್ಲಿಸಬೇಕು. ಹೀಗೆ ಸಲ್ಲಿಸುವುದಕ್ಕೆ ಅದಾ ಎಂದು ಹೆಸರು. ಇದನ್ನು ಸಲ್ಲಿಸದೆ ಹೋದರೆ ತಪ್ಪಿತಕ್ಕಾಗಿ ಕಸ್ಸಾ ಅಥವಾ ಪರಿಹಾರವನ್ನು ಕೊಡಬೇಕು. ಇದು ಕರ್ತವ್ಯಲೋಪಕ್ಕೆ ತಕ್ಕಂತೆ ಬಡಬಗ್ಗರಿಗೆ ಅನ್ನ ಬಟ್ಟೆ ಕೊಡುವುದು, ಸೆರೆಯಲ್ಲಿದ್ದವರನ್ನು ಬಿಡಿಸುವುದು ಇವೇ ಮೊದಲಾದ ರೂಪಗಳನ್ನು ತಾಳಬಹುದು.

ಪಾಪ: ಇಸ್ಲಾಂ ಪ್ರಕಾರ ಮನುಷ್ಯನಲ್ಲಿ ಮೂಲತಃ ದುಷ್ಟಾತ್ಮ ಅಥವಾ ಪಾಪ ಬೀಜ ಇಲ್ಲ. ಆದರೆ, ಪಾಪಕ್ಕೆ ಮನಸ್ಸು ಕೊಡುವ ದೌರ್ಬಲ್ಯವಿದೆ. ಇದು ತನ್ನ ಕೀಳು ಸ್ವಭಾವದ ಒಂದು ಪ್ರವೃತ್ತಿ. ಇದನ್ನು ಸರಿಯಾಗಿ ಕಟ್ಟಿನಲ್ಲಿಟ್ಟು ನಡೆದರೆ ಪಾಪದೂರನಾಗಬಹುದು. ಪಾತಕಗಳನ್ನು ಮಹಾಪಾತಕಗಳು, ಸಾಧಾರಣ ಪಾತಕಗಳು ಅಥವಾ ತಪ್ಪುಗಳು ಎಂದು ಎರಡು ದೊಡ್ಡ ವಿಭಾಗ ಮಾಡಬಹುದು. ದೇವರಿಗೆ ಮತ್ತೊಂದು ವಸ್ತುವನ್ನಾಗಲಿ ವ್ಯಕ್ತಿಯನ್ನಾಗಲಿ ಸಮವಾಗಿ ಭಾವಿಸುವುದು, ಕೊಲೆ, ಕಳವು, ಕುಡಿತ, ಜೂಜು, ವ್ಯಭಿಚಾರ, ಬಡ್ಡಿ ಸಂಪಾದನೆ, ತಾಯಿತಂದೆಗಳಿಗೆ ಅವಿಧೇಯತೆ, ಅಸ್ವಾಭಾವಿಕ ಮೈಥುನ, ಹೋರಾಟದ ಹೇಡಿತನ, ಸುಳ್ಳು ಸಾಕ್ಷಿ, ಅನಾಥರ ಆಸ್ತಿಯನ್ನು ಲಪಟಾಯಿಸುವುದು, ಪ್ರಾರ್ಥನೆ ಮಾಡದಿರುವುದು, ಉಪವಾಸವ್ರತ ತಪ್ಪುವುದು—ಇವೇ ಮೊದಲಾದುವು ಮಹಾ ಪಾತಕಗಳು. ಮನಃಪೂರ್ವಕವಾದ ಪಶ್ಚಾತ್ತಾಪದಿಂದ ಯಾವ ಪಾಪದಿಂದಲಾದರೂ ಬಿಡುಗಡೆ ಹೊಂದಬಹುದು. ಹೊರಗಿನವನು ಇಸ್ಲಾಮಿಯಾದರೆ ಅವನ ತಪ್ಪುಗಳಿಗೆಲ್ಲ ಕ್ಷಮೆ ಉಂಟು. ಮನುಷ್ಯನು ಎಷ್ಟು ಪರಿಪೂರ್ಣ ಅವಸ್ಥೆಯನ್ನು ಮುಟ್ಟಿದ್ದರೂ ಸಂಪೂರ್ಣವಾಗಿ ಪಾಪಮುಕ್ತನಾಗುವುದಿಲ್ಲ. ಆದರೆ, ಮೇಲ್‌ದಾರಿಯವರು ಎಂದೂ ಮಹಾಪಾತಕಗಳನ್ನು ಮಾಡುವುದಿಲ್ಲ. ಎಚ್ಚರ ತಪ್ಪಿ ಸಣ್ಣ ತಪ್ಪುಗಳನ್ನು ಮಾಡುತ್ತಾರೆ. ಉದಾಹರಣೆಗೆ

ಆ್ಯಡಮನು ನಿಷಿದ್ಧ ಫಲವನ್ನು ತಿಂದದ್ದು ಮಹಾಪಾತಕವಲ್ಲ. ಮನಸ್ಸಿನ ಚಾಪಲ್ಯ ತೀರಿಸಿಕೊಳ್ಳುವ ಒಂದು ದೌರ್ಬಲ್ಯ ಮಾತ್ರ.

ಮರಣ ಮತ್ತು ಪುನರುತ್ಥಾನ: ಮುಸ್ಲಿಮನು ಸಾವು ಬಯಸಬಾರದು. ಏಕೆಂದರೆ, ಅವನು ಪುಣ್ಯಕರ್ಮಿಯಾಗಿದ್ದರೆ ಬದುಕಿದಷ್ಟು ದಿನವೂ ಸತ್ಕರ್ಮಗಳನ್ನು ಹೆಚ್ಚಿಸಿ ಹೆಚ್ಚು ಪುಣ್ಯಗಳಿಸಬಹುದು; ಪಾಪಕರ್ಮಿಯಾಗಿದ್ದರೆ ಪಾಪಕ್ಕೆ ಪಶ್ಚಾತ್ತಾಪಪಟ್ಟು, ಮುಂದಿನ ಪುಣ್ಯಕರ್ಮದಿಂದ ಆ ಪಾಪವನ್ನು ತೊಳೆಯಬಹುದು. ಆದರೆ ಸಾವು ಬಂದಾಗ ಅಂಜದೆ ನಲಿವಿಂದ ದೈವಸಂಕಲ್ಪಕ್ಕೆ ಮಣಿಯಬೇಕು. (ಬೇರೊಂದೆಡೆ ಹೇಳಿರುವಂತೆ) ಸತ್ತವನ ಪ್ರೇತ ಗೋರಿಯಲ್ಲಿ ಮುನ್‌ಕೆರ್ ಮತ್ತು ನಕೀರ್ ಎಂಬ ದೇವದೂತರನ್ನು ಎದುರುಗೊಳ್ಳುತ್ತದೆ. ಅವರು ಅವನ ಧರ್ಮದ ವಿಷಯವಾಗಿ ಪ್ರಶ್ನೆಮಾಡಿ ತೃಪ್ತಿಕರವಾದ ಉತ್ತರ ಬಂದರೆ, ಅವನನ್ನು ಕಾಡದೆ ಪುನರುತ್ಥಾನದ ದಿನದವರೆಗೂ ಸುಖವಾಗಿ ನಿದ್ರಿಸಲು ಬಿಡುತ್ತಾರೆ. ತೃಪ್ತಿಕರವಾದ ಉತ್ತರ ದೊರೆಯದಿದ್ದರೆ, ಆ ದಿನದವರೆಗೂ ಗೋರಿಯಲ್ಲಿ ಅವನಿಗೆ ಚಿತ್ರಹಿಂಸೆ ಕೊಡುತ್ತಾರೆ. ಸತ್ತಂದಿನಿಂದ ಪುನರುತ್ಥಾನದ ದಿನದವರೆಗಿನ ಮನುಷ್ಯನ ಅವಸ್ಥೆ ಅರ್ಧಭೌತ ಅರ್ಧಅಭೌತ. ಪುನರುತ್ಥಾನ ದಿನವನ್ನು ಹಲವು ಹೆಸರುಗಳಿಂದ ಕರೆದಿದೆ—ಯೌಮುಲ್-ಫಸ್‌ಲ್=ಎಣಿಕೆ; ದಿನ್=ತೀರ್ಪು; ಸಾಅತ್=ಘಳಿಗೆ; ಬಾಸ್=ಪ್ರಬೋಧನೆ; ಮೊದಲಾದುವು. ಪುನರುತ್ಥಾನ ದಿನದಲ್ಲಿ ಪಾರ್ಥಿವ ಶರೀರದಲ್ಲಿಯೇ ಹುಗಿದ ಗುಳಿಯಿಂದ ಎದ್ದು ದೇವರೆದುರಿಗೆ ವಿಚಾರಣೆಗೆ ನಿಲ್ಲುತ್ತಾರೆಂದು ಎಲ್ಲ ಮುಸ್ಲಿಮರೂ ನಂಬುತ್ತಾರೆ. ದೇವರು ಅವರವರ ಪಾಪಪುಣ್ಯಗಳನ್ನು ತೂಕಮಾಡಿ ತೀರ್ಪುಕೊಡುತ್ತಾನೆ. ಪ್ರತಿಯೊಬ್ಬರೂ ಸಿರಾತ್ ಎಂಬ ಸೇತುವೆಯನ್ನು ದಾಟಬೇಕು. ಇದು ಕೂದಲಿಗಿಂತ ಸಣ್ಣದೂ ಕತ್ತಿಯಲಗಿಗಿಂತ ಹರಿತವೂ ಆಗಿದ್ದು ಪುಣ್ಯಕರ್ಮಿಗಳಿಗೆ ಮಾತ್ರ ದಾರಿಕೊಟ್ಟು ಸ್ವರ್ಗಕ್ಕೆ ಬಿಡುತ್ತದೆ. ಪಾಪಕರ್ಮಿಗಳನ್ನು ದಾಟಗೊಡದೆ ನರಕಕ್ಕೆ ಕೆಡವುತ್ತದೆ.

ಸಾಮಾನ್ಯವಾಗಿ ಮುಸ್ಲಿಮರು ಶಫಾಅತ್‌ನಲ್ಲಿ ನಂಬುತ್ತಾರೆ. ಶಫಾಅತ್ ಎಂದರೆ ಪೈಗಂಬರನು ಮುಸ್ಲಿಂ ಪಾಪಕರ್ಮಿಗಳ ಪರವಾಗಿ

ದೇವರಲ್ಲಿ ಮೊರೆಯಿಟ್ಟು ದೇವರಕ್ಷಮೆ ಪಡೆಯುವುದು. ಷಿಯಾಗಳು ಈ ಷಫ್ಹಾಅತ್‌ನಲ್ಲಿ ಪೈಗಂಬರನೊಬ್ಬನನ್ನೇ ಅಲ್ಲದೆ ಪೈಗಂಬರನ ಮಗಳು ಫಾತೀಮ, ಅವಳ ಇಬ್ಬರು ಮಕ್ಕಳು ಹಸನ್ ಮತ್ತು ಹುಸೇನ್, ಮತ್ತು ಅವಳ ಗಂಡ ನಾಲ್ಕನೆಯ ಕಲೀಫ ಅಲಿ ಇವರನ್ನೂ ಸೇರಿಸುತ್ತಾರೆ. ಮೊತಾಸ್ಸಲರು ಪೈಗಂಬರನು ಪುಣ್ಯಕರ್ಮಿಗಳ ಪರವಾಗಿ ಮಾತ್ರ ಮೊರೆಯಿಡುತ್ತಾನೆಂದು ನಂಬುತ್ತಾರೆ. ವಹಬಿಗಳು ದೈವಕಟಾಕ್ಷ ಬಿದ್ದವರ ಪರವಾಗಿ ಮಾತ್ರ ದೈವಾನುಮತಿಯಿಂದ ಪೈಗಂಬರನು ಮೊರೆಯಿಡುತ್ತಾನೆಂದು ನಂಬುತ್ತಾರೆ. ವೈದಿಕರು ಮುಕ್ತಿ ಎಂದರೆ ನರಕದಿಂದ ಬಿಡುಗಡೆ ಎಂದು ತಿಳಿಯುತ್ತಾರೆ. ಆದರೆ, ಸೂಫಿಗಳು ಮುಕ್ತಿ ಅಜ್ಞಾನದಿಂದ ಬಿಡುಗಡೆ ಎನ್ನುತ್ತಾರೆ.

ಮೂಢನಂಬಿಕೆಗಳು: ಸೈತಾನ್, ದೆವ್ವ, ಭೂತ, ಪಿಶಾಚಿ, ಮೋಹಿನಿ, ಯಂತ್ರ, ರಕ್ಷೆ-ದೃಷ್ಟಿ, ಕೆಟ್ಟ ಕಣ್ಣು, ಶಕುನ, ಕಣಿ, ಯಕ್ಷಿಣಿ, ಮಾಟ—ಇವೇ ಮೊದಲಾದುವುಗಳಲ್ಲಿ ಮುಸ್ಲಿಂ ಸಾಮಾನ್ಯರು ನಂಬುತ್ತಾರೆ. ಈ ನಂಬಿಕೆಗಳಿಗೂ ಹಿಂದೂ ಜನಸಾಮಾನ್ಯದ ನಂಬಿಕೆಗಳಿಗೂ ಅಷ್ಟೇನು ವ್ಯತ್ಯಾಸವಿಲ್ಲದಿರುವುದರಿಂದ ಈ ವಿಷಯವನ್ನು ಇಲ್ಲಿ ಪ್ರಸ್ತಾಪಿಸುವ ಆವಶ್ಯಕತೆಯಿಲ್ಲ.

## ಮುಸ್ಲಿಂ ನ್ಯಾಯ (ಷರಿಯತ್)

ಇದು ಸಹೀಹ್ ಅಥವಾ ನ್ಯಾಯಸಮ್ಮತ ಮತ್ತು ಬಾತಲ್ ಅಥವಾ ನಿಷಿದ್ಧ ಎಂದು ಎರಡು ತರದ ನಡೆವಳಿಗಳ ವಿವೇಚನೆಯ ಆಧಾರದ ಮೇಲೆ ಕಟ್ಟಿದೆ. ಮನುಷ್ಯ ಕರ್ತವ್ಯಗಳು ಕೆಲವು ದೇವರ ಸಂಬಂಧವಾದುವೂ ಕೆಲವು ಮನುಷ್ಯಸಂಬಂಧವಾದುವೂ ಎಂದು ವಿಂಗಡವಾಗಿವೆ. ಇವು ಮತ್ತೆ ಸಂಪೂರ್ಣ ಮತ್ತು ಅಸಂಪೂರ್ಣಗಳೆಂದು ವಿಭಾಗವಾಗಿವೆ. ಅಲ್ಲದೆ ಮಾಡಲೇಬೇಕಾದುವು ಮತ್ತು ಮಾಡಬಹುದಾದುವು ಎಂದೂ ವಿಭಾಗವಾಗಿವೆ. ಸಂಪೂರ್ಣವಾದ ದೈವಸಂಬಂಧ ಕರ್ತವ್ಯಗಳು ಯಾವುವೆಂದರೆ—(೧) ಈಮಾನ್ ಅಥವಾ ನಂಬಿಕೆ. (೨) ಐದು ಕಾಲಗಳಲ್ಲಿ ಮಾಡಬೇಕಾದ ಪ್ರಾರ್ಥನೆ. (೩) ರಮ್‌ಜಾನ್ ಉಪವಾಸ. (೪) ಜಕಾತ್ (ಭಿಕ್ಷಾದಾನ). (೫) ಯಾತ್ರೆ.

(೬) ಖುಮ್ಸ್ ಅಥವಾ ಕೊಳ್ಳೆಯಲ್ಲೊ ಗಣಿಯಲ್ಲೊ ಸಿಕ್ಕಿದ ಆಸ್ತಿಯಲ್ಲಿ ೧/೫ ಪಾಲು ಸರ್ಕಾರಕ್ಕೆ ಕೊಡುವುದು. (೭) ಕೊಲೆ, ಕಳ್ಳು, ಕುಡಿತ, ಜೂಜು, ಹಾದರ—ಮೊದಲಾದ ಪಾಪಗಳನ್ನು ಮಾಡದಿರುವುದು. ಆಸಂಪೂರ್ಣ ದೈವಸಂಬಂಧ ಕರ್ತವ್ಯಗಳು ವ್ಯಕ್ತಿಗೆ ಸಂಬಂಧಪಟ್ಟಿದ್ದರೂ ಸರ್ಕಾರದ ಮೇಲ್ವಿಚಾರಣೆಗೆ ಒಳಪಟ್ಟಿವೆ. ಈ ಕರ್ತವ್ಯಗಳಲ್ಲಿ ಕೆಲವು ಯಾವುವೆಂದರೆ—ಆತ್ಮರಕ್ಷಣೆ, ಮಾನರಕ್ಷಣೆ, ಆಸ್ತಿರಕ್ಷಣೆ, ಒಡೆತನ, ಮದುವೆ, ನ್ಯಾಯಸಮ್ಮತ ನಡೆವಳಿಗಳಲ್ಲಿ ಸ್ವಾತಂತ್ರ್ಯ ಮೊದಲಾದುವು. ಅಲ್ಲದೆ, ಕೃತ್ಯಗಳು ಬಾಹ್ಯೇಂದ್ರಿಯಗಳಿಂದ ಮಾಡುವ ಬಾಹ್ಯಕೃತ್ಯಗಳೆಂದೂ ಮಾನಸಿಕವಾದ ಆಂತರಿಕ ಕೃತ್ಯಗಳೆಂದೂ ಎರಡು ರೀತಿ ವಿಂಗಡವಾಗಿವೆ. ಷರ ಅಥವಾ ನ್ಯಾಯಶಾಸ್ತ್ರ ಬಾಹ್ಯಕೃತ್ಯಗಳನ್ನು ಮಾತ್ರ ಗಣನೆಗೆ ತಂದುಕೊಳ್ಳಬಹುದು. ಬಾಹ್ಯಕೃತ್ಯ ಕೌಲ್ ಅಥವಾ ನುಡಿ, ಅಮಲ್ ಅಥವಾ ಕೆಲಸ ರೂಪದ್ದಾಗಿರಬಹುದು.

ಮುಸ್ಲಿಂ ನ್ಯಾಯದ ಆಧಾರತತ್ವ ಸರ್ವಸಮಾನತೆ. ನ್ಯಾಯ ವ್ಯವಹಾರದಲ್ಲೂ, ಸಮಾಜ ವ್ಯವಹಾರದಲ್ಲೂ, ಹಾಗೆಯೇ ದೇವರ ಮುಂದೆಯೂ, ಎಲ್ಲ ಮುಸ್ಲಿಮರೂ ಒಂದೇ. ಸರ್ವಾಧಿಕಾರ ನಡಸುವ ಪುರೋಹಿತನಾಗಲಿ, ಧರ್ಮಸಂಸ್ಥೆಯಾಗಲಿ, ದೊರೆಯಾಗಲಿ ಇರುವುದಿಲ್ಲ. ಪ್ರತಿಯೊಬ್ಬನೂ ತಾನೇ ನೇರವಾಗಿ ದೇವರನ್ನು ಮರೆಹೊಗಬೇಕು.

ಮುಸ್ಲಿಂ ದಂಡನ್ಯಾಯವನ್ನು ಇಲ್ಲಿ ವಿವರವಾಗಿ ಹೇಳುವುದಕ್ಕಾಗುವುದಿಲ್ಲ. ಈ ದಂಡತತ್ವವನ್ನು ಸಾಮಾನ್ಯವಾಗಿ 'ಮುಯ್ಯಿಗೆ ಮುಯ್ಯಿ' ತತ್ವ ಎಂದು ಕರೆಯಬಹುದು,—ಜೀವಕ್ಕೆ ಜೀವ, ಕದ್ದ ಕೈ ಕತ್ತರಿಸುವುದು—ಇವೇ ಮೊದಲಾದುವು. ಆದರೆ, ಮುಸ್ಲಿಮರಲ್ಲಿ ಕೊಲೆಪಾತಕನನ್ನು ಗಲ್ಲಿಗೆ ಹಾಕಲೇಬೇಕೆಂಬ ವಿಧಿಯಿಲ್ಲ. ನ್ಯಾಯಸಮ್ಮತವಾಗಿಯೇ ಅವನು ಸತ್ತವನ ಮನೆಯವರಿಗೆ ಕೊಲೆದಂಡ ಕೊಟ್ಟು ಬಿಡುಗಡೆ ಹೊಂದಬಹುದು. ದೇವರನ್ನೂ ಅವನ ಧರ್ಮಪ್ರವರ್ತಕರನ್ನೂ ಎದುರಿಸಿ ಹೋರಾಡುವವನನ್ನು ಗಡೀಪಾರು ಮಾಡಬಹುದು, ಕೊಲ್ಲಬಹುದು, ಸಿಲುಬೆಗೆ ಏರಿಸಬಹುದು. ಕುಡಿತ, ಹಾದರ, ಜೂಜು, ಚಾಡಿ—ಮೊದಲಾದ ತಪ್ಪುಗಳಿಗೆ ಚಡಿ ಶಿಕ್ಷೆ ಸಾಮಾನ್ಯವಾದ್ದು. ಆದರೆ,

ಇದೆಲ್ಲವೂ ಕಾಲ ದೇಶ ವರ್ತಮಾನ ಅನುಸಾರವಾಗಿ ಈಗ ಮಾರ್ಪಟ್ಟು ಹೋಗಿದೆ. ಉದಾಹರಣೆಗೆ—ಕೊಲೆದಂಡ ಕೊಂಡು ಕೊಲೆಪಾತಕ ನನ್ನು ಬಿಡುವುದಾಗಲಿ, ಕದ್ದ ಕೈ ಕತ್ತರಿಸುವುದಾಗಲಿ ಈಗ ಎಲ್ಲಿಯೂ ಸಾಮಾನ್ಯವಾಗಿ ಕಂಡುಬರುವುದಿಲ್ಲ.

ಆಸ್ತಿಯ ಹಕ್ಕು: ಇಸ್ಲಾಂ ಪೂರ್ವದ ಅರಬರಲ್ಲಿ ಹೆಂಗಸರಿಗೂ ಮಕ್ಕಳಿಗೂ ಆಸ್ತಿಯಲ್ಲಿ ಹಕ್ಕಿರಲಿಲ್ಲ. ಏಕೆಂದರೆ ಅರಬರ ಉತ್ತರಾಧಿ ಕಾರತತ್ವದ ಪ್ರಕಾರ ಯುದ್ಧಮಾಡಿ ಕುಟುಂಬ ರಕ್ಷಣೆ ಮಾಡಬಲ್ಲ ವರಿಗೆ ಮಾತ್ರ ಆಸ್ತಿಯಲ್ಲಿ ಹಕ್ಕಿತ್ತು. ಇಲ್ಲಿ ಇಸ್ಲಾಂನ್ಯಾಯದಲ್ಲಿ ಇರುವ ಆಸ್ತಿಯ ಹಕ್ಕುಬಾಧ್ಯತೆಗಳ ವಿಷಯದ ಸೂಕ್ಷ್ಮ ವಿವರಗಳನ್ನು ಕೊಡಲಾಗುವುದಿಲ್ಲ. ಮೂಲತತ್ವವನ್ನು ಹೇಳುವುದಾದರೆ ಹೆಂಗಸಿಗೂ ಆಸ್ತಿಯಲ್ಲಿ ಪಾಲುಂಟು. ಸಾಮಾನ್ಯವಾಗಿ ಗಂಡಸಿಗೆ ಎರಡು ಪಾಲಾ ದರೆ ಹೆಂಗಸಿಗೆ ಒಂದು ಪಾಲು. ಗಂಡನ ಆಸ್ತಿಯಲ್ಲಿ ಹೆಂಗಸಿಗೂ ಹೆಂಡತಿಯ ಆಸ್ತಿಯಲ್ಲಿ ಗಂಡನಿಗೂ ಹಕ್ಕುಂಟು. ಹಕ್ಕಿನ ವಿಷಯದ ಕುರಾನ್ ವಚನಗಳನ್ನು ಅರ್ಥಮಾಡುವುದರಲ್ಲಿಯೂ ಹತ್ತಿರ ಸಂಬಂಧ ವನ್ನು ನಿರ್ಣಯಿಸುವುದರಲ್ಲಿಯೂ ಬೇರೆ ಬೇರೆ ಪಂಗಡಗಳಲ್ಲಿ ಭಿನ್ನಾ ಭಿಪ್ರಾಯಗಳಿವೆ. ಉದಾಹರಣೆಗೆ—ಸುನ್ನಿಗಳು ಹತ್ತಿರಸಂಬಂಧವಲ್ಲ ದಿದ್ದರೂ ಪುರುಷಸಂತತಿಗೇ ಪ್ರಾಧಾನ್ಯ ಕೊಡುತ್ತಾರೆ. ಷಿಯಾಗಳು ಹತ್ತಿರ ಸಂಬಂಧ ಒಂದನ್ನೇ ನೋಡುತ್ತಾರೆ. ಧರ್ಮಾಂತರರಾದವ ರಿಗೂ ಜಾರಜರಿಗೂ ಆಸ್ತಿಯಲ್ಲಿ ಹಕ್ಕಿಲ್ಲ. ಆದರೆ, ಸುನ್ನಿಗಳು ಮಾತ್ರ ಜಾರಜರಿಗೆ ಅವರ ತಾಯಿಯ ಆಸ್ತಿಯಲ್ಲಿ ಪಾಲು ಕೊಡಿಸುತ್ತಾರೆ. ಮುಸ್ಲಿಮನು ತಾನು ಬದುಕಿರುವಾಗ ತನ್ನ ಆಸ್ತಿಯನ್ನು ತನಗೆ ತೋರಿ ದಂತೆ ವಿನಿಯೋಗಿಸುವ ಹಕ್ಕುಂಟು. ಆದರೆ, ಕಡೆಯಿಷ್ಟ ಬರೆದು ಆಸ್ತಿ ವಿನಿಯೋಗ ಮಾಡಬೇಕಾದರೆ ೧/೩ ಪಾಲನ್ನು ತನಗೆ ತೋರಿ ದಂತೆಯೂ, ೨/೩ ಪಾಲನ್ನು ತನ್ನ ಉತ್ತರಾಧಿಕಾರಿಗಳಿಗೂ ವಿನಿ ಯೋಗಿಸಬೇಕು.

# ಅಧ್ಯಾಯ ೧೪

## ಮುಸ್ಲಿಂ ಸಮಾಜ ತತ್ವ

ಮುಸ್ಲಿಮರು ಪ್ರಪಂಚದ ನಾನಾ ಭಾಗಗಳಲ್ಲಿ ಹರಡಿ ಬಹುಕಾಲ ನೆಲಸಿ, ಆಯಾ ದೇಶಪದ್ಧತಿಗಳನ್ನು ಅನುಸರಿಸಿಕೊಂಡು ಬಂದಿರುವುದರಿಂದ, ಇಲ್ಲಿ ಎಲ್ಲ ಮುಸ್ಲಿಮರ ಸಮಾಜ ವ್ಯವಹಾರಗಳನ್ನು ಕುರಿತು ಸಂಪೂರ್ಣವಾಗಿ ವಿವರಿಸುವುದು ಕಷ್ಟ. ಆದರೆ, ಧರ್ಮಸಂಬಂಧವಾದ ಪ್ರತಿಕ್ರಿಯೆಗಳಲ್ಲೂ, ಕರ್ಮಗಳಲ್ಲೂ, ಕೆಲವು ನೀತಿ ನಡೆವಳಿಗಳಲ್ಲೂ, ಬಹುಮಟ್ಟಿಗೆ ಎಲ್ಲ ಮುಸ್ಲಿಮರಿಗೂ ಹೋಲಿಕೆ ಇರುತ್ತದೆ. ಮುಸ್ಲಿಂ ಸಮಾಜದ ನೀತಿ ವ್ಯವಹಾರ ಪೈಗಂಬರನು ಕೊಟ್ಟ ಅಂತ್ಯ ಸಂದೇಶದ ಆಧಾರದ ಮೇಲೆ ನಿಂತಿದೆ. ಆ ಸಂದೇಶದಲ್ಲಿ ಅವನು ಹೇಳಿದ್ದೇನೆಂದರೆ "ಓ ಜನರೆ! ನನಗೆ ಕಿವಿಗೊಡಿ. ಇಲ್ಲಿ ಮುಂದಿನ ವರ್ಷ ನಾನು ಇರದೆ ಹೋಗಬಹುದು. ನಿಮ್ಮ ಪ್ರಾಣ ಮತ್ತು ಆಸ್ತಿಪಾಸ್ತಿಗಳು ಪವಿತ್ರವೂ ಅವಧ್ಯವೂ ಆದುವು. ಆದ್ದರಿಂದ ಒಬ್ಬರ ಮೇಲೆ ಒಬ್ಬರು ಕೈಮಾಡ ಕೂಡದು. ಪ್ರತಿಯೊಬ್ಬರಿಗೂ ಅವರವರ ಸ್ಥಿತಿಗೆ ಅನುಸಾರವಾಗಿ ಆಸ್ತಿಯಲ್ಲಿ ಹಕ್ಕುಂಟು. ಮಗು ತಾಯಿತಂದೆಗಳಿಗೆ ಸೇರಿದ್ದು. ನಿಮ್ಮ ಹೆಂಡಿರ ಮೇಲೆ ನಿಮಗೆ ಅಧಿಕಾರವುಂಟು. ಹಾಗೆಯೇ ನಿಮ್ಮ ಮೇಲೆ ಅವರಿಗೂ ಉಂಟು. ಅವರು ನಿಮಗೆ ದ್ರೋಹಮಾಡಬಾರದು. ನೀವು ಅವರನ್ನು ಪ್ರೀತಿ ದಯೆಗಳಿಂದ ಕಾಣಬೇಕು. ನಿಮ್ಮಲ್ಲಿಟ್ಟಿರುವ ನಂಬಿಕೆಗೆ ತಪ್ಪಿ ನಡೆಯಬೇಡಿ. ಬಡ್ಡಿಯೆತ್ತಿ ಬದುಕಬೇಡಿ. ರಕ್ತಕ್ಕೆ ರಕ್ತ ಎಂದು ಹೋಗಬೇಡಿ. ನಿಮ್ಮ ಗುಲಾಮರನ್ನು ಕರುಣೆಯಿಂದ ಕಾಣಿ. ನೀವು ತಿನ್ನುವ ತಿಂಡಿಯನ್ನೇ ಅವರಿಗೂ ತಿನ್ನಿಸಿ. ನೀವು ಉಡುವ ಉಡಿಗೆಯನ್ನೇ ಅವರಿಗೂ ಉಡಿಸಿ. ಅವರು ತಪ್ಪಿಹೋದರೆ ಕ್ಷಮಿಸಿ. ದೇವರಲ್ಲಿ ಪ್ರಾರ್ಥನೆ ಮಾಡುವ ಗುಲಾಮರು ನಮಗೆ ಅಣ್ಣತಮ್ಮಂದಿರು. ಎಲ್ಲ ಮುಸ್ಲಿಮರೂ ಅಣ್ಣತಮ್ಮಂದಿರು. ಅನ್ಯಾಯಕ್ಕೆ ಹೋಗಬೇಡಿ". ಮುಸ್ಲಿಂ ಸಮಾಜದ ತಳಹದಿ ಈ ಮೂಲತತ್ವಗಳ ಮೇಲೆ ಕಟ್ಟಿದೆ. ಇದು ಮೊದಲು ಅರೇಬಿಯದಲ್ಲೂ ಕ್ರಮೇಣ ಇತರ ಮುಸ್ಲಿಂ ಪ್ರದೇಶಗಳಲ್ಲೂ ಹರಡಿ ಬೆಳೆಯಿತು.

ಸಮಾಜಕ್ಕೆ ತಳಹದಿ ಮನೆ. ಮನೆಯ ಅಡಿಗಲ್ಲು ತಾಯಿತಂದೆಗಳು. ಕುಟುಂಬದಲ್ಲಿ ಸ್ತ್ರೀಪುರುಷರಿಗಿರುವ ಸ್ಥಾನಮಾನಗಳ ಅನುಸಾರವಾಗಿ ಸಮಾಜ ಬೆಳೆಯುತ್ತದೆ. ಇಸ್ಲಾಮಿನಲ್ಲಿ ಮನೆ ಯಜಮಾನನು ಗಂಡಸಾಗಿದ್ದು ಅವನಿಗೆ ಹೆಚ್ಚು ಅಧಿಕಾರವೂ ಜವಾಬ್ದಾರಿಯೂ ಇದ್ದರೂ ಹೆಂಗಸೂ ಪ್ರಧಾನಸ್ಥಾನದಲ್ಲಿಯೇ ಇದ್ದಾಳೆ. ಇಸ್ಲಾಂ ಪೂರ್ವದ ಅರಬರಲ್ಲಿ ಬಹುಪತಿತ್ವ ಸಾಧಾರಣವಾಗಿದ್ದು, ಹೆಂಗಸು ತನ್ನ ಮನ ಬಂದಾಗ ತನ್ನ ಗಂಡನನ್ನು ಬಿಡಬಹುದಾಗಿತ್ತು. ಮನ ಬಂದಾಗ ಮನಬಂದವನನ್ನು ಮದುವೆಯಾಗಿ, ಬೇಕಿಲ್ಲದಾಗ ಬಿಡುವುದಕ್ಕೆ ಸಂಪೂರ್ಣ ಸ್ವಾತಂತ್ರ್ಯ ಇತ್ತು. ಜ್ಞಾತಾಜ್ಞಾತ ತಂದೆಗಳಿಗೆ ಹುಟ್ಟಿದ ಮಕ್ಕಳೆಲ್ಲರೂ ತಾಯಿಯ ಅಧೀನದಲ್ಲಿ ಇರುತ್ತಿದ್ದರು. ಇದರಿಂದ ವಂಶ ಸ್ತ್ರೀ ಮೂಲಕ ನಡೆದು ಬರುತ್ತಿತ್ತು. ಅರಬರಲ್ಲಿ ಅವಿಭಕ್ತ ಕುಟುಂಬ ಪದ್ಧತಿಯಿದ್ದು, ಒಂದು ಮನೆಯ ದೊಡ್ಡವನು ಆ ಮನೆಯ ಯಜಮಾನನಾಗಿದ್ದನು. ಹಲವು ಸೋದರರಿಗೆ ಒಬ್ಬ ಹೆಂಡತಿ ಇರುತ್ತಿದ್ದಳು. ಬಲತಾಯಿಯ ಮಕ್ಕಳನ್ನು ಮದುವೆಯಾಗುವುದು ಸಾಮಾನ್ಯವಾಗಿತ್ತು. ಅಬ್ರಹಾಮ್ ಮೊದಲಾದವರು ತಮ್ಮ ಬಲ ತಾಯಿಯ ಮಕ್ಕಳನ್ನು ಮದುವೆಯಾಗಿದ್ದರು. ಕ್ರಮೇಣ ಹೆಂಗಸರು ಮನೆಯ ಆಸ್ತಿಯ ಜತೆಯಲ್ಲಿ ಸೇರಿ ಎಣಿಕೆಯಾಗಿ ಬಂದು, ತಂದೆ ತೀರಿದ ತರುವಾಯ ಮಗ ಬಲತಾಯಿಯನ್ನು ಮದುವೆಮಾಡಿಕೊಳ್ಳುವ ಸ್ಥಿತಿಗೆ ಬಂತು. ಹೆಂಡತಿಯ ತಾಯನ್ನೂ ಮದುವೆ ಮಾಡಿಕೊಳ್ಳುತ್ತಿದ್ದರು. ಗಂಡ ತನ್ನ ಹೆಂಡತಿಯಲ್ಲಿ ವೀರಪುತ್ರರನ್ನು ಪಡೆಯುವುದೇ ಮೊದಲಾದ ಉದ್ದೇಶಗಳಿಂದ ಅವಳಿಗೆ ಮತ್ತೊಬ್ಬನೊಡನೆ ಮಲಗಲು, ಕೊಂಚಕಾಲ ಬಾಳಲು, ಅವಕಾಶ ಕೊಡುತ್ತಿದ್ದನು. ಇಸ್ಲಾಂ ಪ್ರಚಾರಕ್ಕೆ ಬಂದು ಈ ಪದ್ಧತಿಗಳನ್ನೆಲ್ಲ ತೊಡೆದುಹಾಕಿ, ಗಂಡಸನ್ನು ಮನೆಯ ಒಡೆಯನನ್ನಾಗಿ ಮಾಡಿತು. ಹೆಂಡತಿ ಮಕ್ಕಳು ಪುರುಷನ ಅಧೀನರಾದರು. ಬಹುಪತಿತ್ವ ತಪ್ಪಿತು. ಅಲ್ಲದೆ, ಅರಬರಲ್ಲಿದ್ದ ಹೆಣ್ಣು ಮಕ್ಕಳನ್ನು ಕೊಂದುಹಾಕುವ ಕೆಟ್ಟ ಪದ್ಧತಿಯೂ ನಿಂತಿತು.

ಇಸ್ಲಾಂ ಪೂರ್ವದಲ್ಲಿದ್ದ ಸ್ತ್ರೀಪ್ರಾಧಾನ್ಯ ತಪ್ಪಿಹೋದರೂ ಅವಳಿಗಿದ್ದ ಗೌರವ ಮತ್ತು ಕೆಲವು ಸ್ವಾತಂತ್ರ್ಯಗಳು ತಪ್ಪದೆ ಇಸ್ಲಾಮಿನಲ್ಲಿ ಉಳಿದುಬಂದುವು. ಪೈಗಂಬರನು "ಸ್ವರ್ಗ ತಾಯಿ ಕಾಲಡಿಯಲ್ಲಿದೆ" ಎಂದು ಹೇಳುತ್ತಿದ್ದನಂತೆ. ಮೊದಲೇ ಹೇಳಿರುವಂತೆ ಹೆಂಗಸಿಗೆ ಆಸ್ತಿಯಲ್ಲಿ ಹಕ್ಕುಂಟು. ಅವಳ ಆಸ್ತಿಯ ಮೇಲೆ ಗಂಡನಿಗೂ ಅಧಿಕಾರವಿರುವುದಿಲ್ಲ. ಮದುವೆಯುಗಲಿಕೆಯ ಅಧಿಕಾರವುಂಟು. ಅವಳು ಸಾರ್ವಜನಿಕ ಕಾರ್ಯಗಳಲ್ಲಿ, ಉದ್ಯೋಗಗಳಲ್ಲಿ ಭಾಗ ವಹಿಸಬಹುದು. ಸ್ತ್ರೀಯರಿಗೆ ವಿದ್ಯಾಭ್ಯಾಸಕ್ಕಾಗಿ ಕೈರೊ, ಡಮಾಸ್ಕಸ್, ಬಗ್‌ದಾದ್, ಕಾರ್ಡೋವ—ಮೊದಲಾದ ಕೇಂದ್ರಗಳಲ್ಲೆಲ್ಲ ವಿದ್ಯಾಶಾಲೆಗಳಿದ್ದುವು. ಹಲವು ಶ್ರೀಮಂತ ಸ್ತ್ರೀಯರು ಧರ್ಮಸಂಸ್ಥೆಗಳನ್ನೂ ಮಸೀದಿ ಛತ್ರಗಳನ್ನೂ ವೈದ್ಯಶಾಲೆ ಅನಾಥಶಾಲೆಗಳನ್ನೂ ಕಟ್ಟಿಸಿರುತ್ತಾರೆ. ಧರ್ಮಶಾಸ್ತ್ರ, ಸಾಹಿತ್ಯ, ರಾಜ್ಯಾಡಳಿತಗಳಲ್ಲೂ ತಮ್ಮ ಭಾಗವನ್ನು ಗೌರವದಿಂದ ನಿರ್ವಹಿಸಿರುತ್ತಾರೆ. ಎಷ್ಟೋ ಜನ ವೀರ ಸ್ತ್ರೀಯರು ಪುರುಷರೊಡನೆ ಯುದ್ಧಗಳಲ್ಲಿ ಭಾಗಿಗಳಾಗಿದ್ದಾರೆ. ಇಸ್ಲಾಂ ಚರಿತ್ರೆಯಲ್ಲಿ ಪ್ರಸಿದ್ಧರಾದ ಯೋಧರು, ರಾಜ್ಯವಾಳಿದವರು, ಆಡಳಿತಗಾರರು, ವಾಗ್ಮಿಗಳು, ದೇವತಾ ಶಾಸ್ತ್ರಜ್ಞರು, ಸಂಪ್ರದಾಯ ಪಂಡಿತರು, ಕವಿಗಳು, ಸೂಫಿ ಸಾಧುಗಳು, ಜ್ಯೋತಿಶ್ಶಾಸ್ತ್ರಕಾರರು, ಕಲೆಗಾರರು, ಸಂಗೀತಗಾರರು—ಇವರೇ ಮೊದಲಾದ ಮಹಾ ಸ್ತ್ರೀವ್ಯಕ್ತಿಗಳನ್ನು ಕುರಿತು ಪ್ರಸ್ತಾಪಿಸಲು ಇಲ್ಲಿ ಎಡೆಯಿಲ್ಲವಾಗಿ, ಮನಸ್ಸಿಲ್ಲದೆ ಕೈಬಿಟ್ಟಿದೆ.

ಮದುವೆ: ಪೈಗಂಬರನು ಬ್ರಹ್ಮಚರ್ಯೆಯನ್ನು ಒಪ್ಪದೆ ಮದುವೆಗೆ ಪ್ರೋತ್ಸಾಹ ಕೊಟ್ಟನು. ಅವನು ಒಮ್ಮೆ "ಮದುವೆ ಮಾಡಿಕೊಂಡ ಸಂಸಾರಿ ಅರ್ಧ ಧರ್ಮವನ್ನು ಸಾಧಿಸಿದಂತೆ" ಎಂದು ಹೇಳಿದನಂತೆ. ಸೂಫಿ ಸಾಧುಗಳು ಕೂಡ ಮದುವೆ ಮಾಡಿಕೊಂಡು ಸಂಸಾರಿಗಳಾಗಿ ಇರುತ್ತಿದ್ದರು. (ಷೇಖ್ ಅಬ್ದುಲ್‌ಕಾದರ್ ಗೀಲಾನಿ ಎಂಬ ಸೂಫಿ ಸಾಧುವಿಗೆ ೪೦ ಜನ ಮಕ್ಕಳಿದ್ದರಂತೆ). ಸ್ತ್ರೀ ಪುರುಷರು ತಮ್ಮ ಜೀವಮಾನದಲ್ಲಿ ಒಮ್ಮೆಯೇ ಮದುವೆಮಾಡಿಕೊಳ್ಳಬೇಕೆಂಬ ಕಟ್ಟಿಲ್ಲ. ಸಂಸಾರ ನಡಸುವುದಕ್ಕೆ ದೈಹಿಕ ಮತ್ತು ಆರ್ಥಿಕಶಕ್ತಿ ಇರುವವರಿಗೆ

ಮದುವೆಗಳನ್ನು ಮಾಡಿಕೊಳ್ಳುತ್ತಲೇ ಇರಬಹುದು. ಇಸ್ಲಾಂ ಆದಿ ಕಾಲದಲ್ಲಿ ಒಳ್ಳೆಯ ಮನೆತನಕ್ಕೆ ಸೇರಿದ ವಿಧವೆಯರು ಅಥವಾ ವಿವಾಹ ವಿಘಟನೆ ಹೊಂದಿದ ಸ್ತ್ರೀಯರು ಎಷ್ಟೋ ಮಂದಿ ಹಲವು ಮದುವೆಗಳನ್ನು ಮಾಡಿಕೊಂಡಿದ್ದಾರೆ. ಪೈಗಂಬರನ ಬಹು ಗೌರವದ ಹೆಂಡತಿ ಖದೀಜಳಿಗೆ ಪೈಗಂಬರನ ಮದುವೆಗೆ ಮೊದಲೆ ಎರಡು ಮದುವೆಗಳು ಆಗಿದ್ದುವು. ಪೈಗಂಬರನ ಹಲವು ಹೆಂಡಿರಲ್ಲಿ ಆಯೆಷ ಒಬ್ಬಳೇ ಕನ್ಯೆಯಾಗಿ ಮದುವೆಯಾದವಳು. ಇಸ್ಲಾಂ ಪೂರ್ವದ ಅರಬರಲ್ಲಿ ಒಬ್ಬನಿಗೆ ಹಲವು ಹೆಂಡಿರಿರುವುದು ಬಹು ಸಾಮಾನ್ಯವಾಗಿತ್ತು. ಇಸ್ಲಾಂ ಧರ್ಮ ಪ್ರಚಾರಕ್ಕೆ ಬಂದು, ಒಬ್ಬನಿಗೆ ಒಬ್ಬ ಹೆಂಡತಿ ಎಂಬುದು ಸಾಮಾನ್ಯ ಕಟ್ಟಾಯಿತು. ಆದರೆ, ಹಲವು ಹೆಂಡಿರನ್ನು ಆಳಿ ಸಾಕುವ ಶಕ್ತಿಯಿದ್ದರೆ ಒಂದಕ್ಕಿಂತ ಹೆಚ್ಚು ಮದುವೆ ಮಾಡಿಕೊಳ್ಳಬಹುದು.

ವಿಧಿಬದ್ಧವಾದ ಮದುವೆಯ ಜತೆಗೆ ಷಿಯಾಗಳಲ್ಲೂ ಮಾಲೆಕಿಗಳಲ್ಲೂ 'ಮುತ' ಎಂಬ ಒಂದು ವಿಧವಾದ ಹಂಗಾಮಿ ಮದುವೆ ಉಂಟು. ಇದರಲ್ಲಿ ಗಂಡಸರು ಹೆಂಗಸರು ಒಂದು ಗೊತ್ತುಮಾಡಿಕೊಂಡ ಕಾಲ ಒಡನಿದ್ದು ಸಂಸಾರ ಮಾಡಿ, ತರುವಾಯ ವಿಧಿಪೂರ್ವಕ ವಿಘಟನೆಯಿಲ್ಲದೆ ಬೇರೆಯಾಗಬಹುದು. ಇದು ಸಾಮಾನ್ಯವಾಗಿ ಪ್ರಯಾಣಿಕರು, ದಿಕ್ಕಿಲ್ಲದ ವಿಧವೆಯರು—ಮೊದಲಾದವರ ಅನುಕೂಲಕ್ಕಾಗಿ ಏರ್ಪಟ್ಟದ್ದು.

ಇಸ್ಲಾಂ ಧರ್ಮದಲ್ಲಿ ಮದುವೆ ಮೂಲತಃ ಸಮಾಜವ್ಯವಹಾರದ ಒಂದು ಒಪ್ಪಂದ ಮಾತ್ರ. ಋತುಮತಿಯಾದ ಹೆಂಗಸು ತನ್ನ ಮನಕ್ಕೊಪ್ಪಿದವನನ್ನು ಮದುವೆಯಾಗುವ ಅಧಿಕಾರವುಂಟು. ಚಿಕ್ಕಂದಿನಲ್ಲೆ ಮದುವೆಯಾಗಿ ಬಿಟ್ಟಿದ್ದರೆ, ಋತುಮತಿಯಾದ ಮೇಲೆ ತನಗೆ ಬೇಡವಿದ್ದರೆ ಗಂಡನನ್ನು ಬಿಟ್ಟುಬಿಡುವ ಅಧಿಕಾರವೂ ಉಂಟು. ಮದುವೆಯ ಕಾಲದಲ್ಲಿ ತನಗೆ ಬೇಕಾದ ಷರತ್ತುಗಳನ್ನು ಹಾಕಿ ಒಪ್ಪಂದ ನಡಸಲು ಅವಳಿಗೆ ಹಕ್ಕುಂಟು. ಗಂಡನು ಹುಚ್ಚ, ಷಂಡ ಅಥವಾ ಅತಿ ದರಿದ್ರನಾಗಿದ್ದರೆ ವಿವಾಹವಿಘಟನೆ ಹೊಂದುವ ಅಧಿಕಾರ ಉಂಟು. ಗಂಡ ತನ್ನ ಹೆಂಡತಿಯನ್ನು ಒಮ್ಮೆ ಬಿಟ್ಟು, ಮತ್ತೆ ಅವಳನ್ನೇ ಮದುವೆಯಾಗ

ಬಹುದು. ಆದರೆ, ಮೂರು ಸಲ ವಿಘಟನ ವಾಕ್ಯೋಚ್ಚಾರಣೆ ಮಾಡಿ ಪರಿತ್ಯಜಿಸಿದ ಮೇಲೆ, ಅವಳನ್ನೇ ಮತ್ತೆ ಮದುವೆಯಾಗಬೇಕಾದರೆ, ಆವಳು ಮತ್ತೊಬ್ಬನನ್ನು ಮದುವೆಯಾಗಿ ಅವನೊಡನೆ ಬಾಳಿ ಅವನಿಂದ ವಿಘಟನೆ ಹೊಂದಿರಬೇಕು.

ನಪುಂಸಕತೆ, ಹುಚ್ಚು, ದಾರಿದ್ರ್ಯ—ಮೊದಲಾದುವೇ ಅಲ್ಲದೆ ಈ ಕೆಳಗಿನ ಕಾರಣಗಳಿಂದಲೂ ಮದುವೆಯುಗಲಿಕೆ ಆಗಬಹುದು—ಗಂಡ ಹೆಂಡಿರ ಅಂತಸ್ತಿನಲ್ಲಿ ಬಹಳ ಅಂತರವಿದ್ದರೆ; ಸಾಕಷ್ಟು ತೆರ ಕೊಡದೆ ಹೋದರೆ; ಇಬ್ಬರಲ್ಲೊಬ್ಬರು ಧರ್ಮಾಂತರವಾದರೆ; ಹಾದರಕ್ಕೆ ಬಿದ್ದರೆ; ಗಂಡ ನಾಲ್ಕು ತಿಂಗಳ ಕಾಲ ಹೆಂಡತಿಯೊಡನೆ ಮಲಗುವುದಿಲ್ಲವೆಂದು ಆಣೆ ಇಟ್ಟರೆ; ಗಂಡನಾಗಲಿ ಹೆಂಡತಿಯಾಗಲಿ ಒಬ್ಬರಿಗೊಬ್ಬರು ತೊತ್ತಾಗಿ ಅಸ್ವತಂತ್ರರಾದರೆ; ಗಂಡ ದೇಶಾಂತರ ಹೊರಟುಹೋದರೆ; ಗಂಡಹೆಂಡರಿಗೆ ಮೂರು ಹೊತ್ತೂ ಜಗಳವಿದ್ದು ಮನಸ್ಸು ಒಡೆದಿದ್ದರೆ; ಗಂಡ ಹೆಂಡತಿಗೆ ನೀನು ಸ್ವತಂತ್ರಳಾದೆ ಎಂದು ಹೇಳಿಬಿಟ್ಟರೆ. ಆದರೆ, (ಹೀಗೆ ಬಿಟ್ಟ ಹೆಂಡತಿಯನ್ನು, ಎರಡು ತಿಂಗಳು ಉಪವಾಸ ಮಾಡಿಯಾಗಲಿ, ೬೦ ಜನ ಬಡವರಿಗೆ ಅನ್ನ ಹಾಕಿಯಾಗಲಿ, ಒಬ್ಬ ಗುಲಾಮನನ್ನು ಬಿಡಿಸಿಯಾಗಲಿ, ಮತ್ತೆ ಸ್ವೀಕರಿಸಬಹುದು).

ಒಂದೇ ಮನೆತನದಲ್ಲೂ ಹತ್ತಿರ ಸಂಬಂಧದಲ್ಲೂ ಮದುವೆ ಮಾಡಿಕೊಳ್ಳುವುದು ತುಂಬ ವಾಡಿಕೆಯಲ್ಲಿತ್ತು. ಇಂಥ ಮದುವೆಗೆ ಹುಟ್ಟಿದ ಮಕ್ಕಳು ಶುದ್ಧ ರಕ್ತದವರು. ಬೇರೆ ಬೇರೆ ಮನೆತನದವರಲ್ಲಿ ಮದುವೆಯಾಗುತ್ತಿದ್ದದ್ದೂ ಉಂಟು. ಇಂಥ ಮದುವೆಗೆ ಹುಟ್ಟಿದ ಮಕ್ಕಳು ಬಲಿಷ್ಠರೂ ಆರೋಗ ದೃಢಕಾಯರೂ ಆಗುತ್ತಾರೆ ಎಂಬ ನಂಬಿಕೆ ಇತ್ತು. ಯುದ್ಧದಲ್ಲಿ ಹಿಡಿದು ತಂದ ಕುಲೀನ ಸ್ತ್ರೀಯರನ್ನು ಮದುವೆಯಾಗುತ್ತಿದ್ದರು. ಚೆಲುವೆಯರಾದ ಗುಲಾಮಿ ಹೆಣ್ಣುಗಳನ್ನು ಕೊಂಡುಕೊಂಡು, ಅವರನ್ನು ದಾಸ್ಯದಿಂದ ಬಿಡುಗಡೆ ಮಾಡಿ ಮದುವೆಯಾಗುತ್ತಿದ್ದದ್ದೂ ಉಂಟು. ಅಬ್ಬಾಸಿ ಕಲೀಫರಲ್ಲಿ ಹಲವರು ಇಂಥ ಗುಲಾಮಿ ಹೆಂಡತಿಯರಿಗೆ ಹುಟ್ಟಿದವರು. ಯಾವ ಯಾವ ನೆಂಟರಲ್ಲಿ ಸಂಬಂಧ

ಬೆಳಸಬಹುದು, ಬೆಳಸಬಾರದು ಎಂಬ ವಿಷಯವಾಗಿ ಕುರಾನಿನಲ್ಲಿ ವಿಶದವಾಗಿ ಹೇಳಿದೆ. ಇಸ್ಲಾಮಿನಲ್ಲಿ ಚಿಕ್ಕಪ್ಪ ದೊಡ್ಡಪ್ಪನ, ಚಿಕ್ಕಮ್ಮ ದೊಡ್ಡಮ್ಮನ, ಮಕ್ಕಳನ್ನು ಮದುವೆಯಾಗುವುದು ನಿಷಿದ್ಧವಲ್ಲ. ಇರಾಣಿಯನ್ನರಲ್ಲಿ ಸಾಮಾನ್ಯವಾಗಿ ಗಂಡ ಹೆಂಡಿರು ಒಂದೇ ಮನೆತನ ದವರಾಗಿರುತ್ತಾರೆ. ಮುಸ್ಲಿಮನು 'ಹೀದನ್' ಸ್ತ್ರೀಯನ್ನು ಮದುವೆ ಯಾಗಕೂಡದು. ಆದರೆ, ಕ್ರೈಸ್ತ, ಯೆಹೂದ್ಯ ಅಥವಾ ಝೊರಾಸ್ಟರ್ ಧರ್ಮದವಳನ್ನು ಸುನ್ನಿ ಮುಸ್ಲಿಮನು ಮದುವೆಯಾಗಬಹುದು.

ಇಂಡಿಯದ ಮುಸ್ಲಿಮರಲ್ಲಿ ನಿಶ್ಚಿತಾರ್ಥ, ದಿಬ್ಬಣ ತೆರಳುವುದು, ವರನ ಮೆರವಣಿಗೆ, ಮೊದಲಾದುವೂ, ಹಿಂದುಗಳನ್ನು ಅನುಕರಿಸಿ ಮಾಡುವ ಇನ್ನೂ ಹಲವು ಪ್ರತಿಕ್ರಿಯೆಗಳೂ ರೂಢಿಯಲ್ಲಿವೆ. ಬಹು ಹಿಂದಿನ ಕಾಲದಿಂದಲೂ ಅರಬರಲ್ಲಿ ಕುಲಕ್ಕೆ ಊಟ ಹಾಕುವುದು ಮದುವೆಯ ಬಹು ಮುಖ್ಯ ಅಂಗವಾಗಿದೆ. ಆದರೆ ಇಸ್ಲಾಂ ಮದುವೆ ಯಲ್ಲಿ ಪ್ರಧಾನಕರ್ಮ 'ನಿಕಾ'. ಇದು ಅರಬ್ಬಿಮಾತು. ಇದರ ಅರ್ಥ 'ಸಂಯೋಗ' ಎಂದು. ಆದರೆ ಸಾಮಾನ್ಯವಾಗಿ ಕರಾರು ಅಥವಾ ಒಪ್ಪಂದ ಎಂಬ ಭಾವದಲ್ಲಿ ಈಗ ಈ ಪದ ಉಪಯೋಗವಾಗುತ್ತಿದೆ. ಈ ಕರ್ಮ ಬಹು ಸುಲಭವಾದದ್ದು ; ಇದಕ್ಕೆ ಬೇಕಾದದ್ದು ಗಂಡು ಹೆಣ್ಣಿನ ಒಪ್ಪಿಗೆ. ವಧೂವರರ ತಂದೆತಾಯಿಗಳು, ಬಂಧುಬಳಗದವರು, ಇಷ್ಟಮಿತ್ರರು—ಇವರ ಸಮಕ್ಷದಲ್ಲಿ ಕಾಜಿ ಹೆಣ್ಣಿನ ಮತ್ತು ಗಂಡಿನ ಒಪ್ಪಿಗೆ ಪಡೆದು ಕೆಲವು ಕುರಾನ್ ವಚನಗಳನ್ನು ಪಠನಮಾಡಿ, ಕೆಲವು ವಿವಾಹಸ್ತೋತ್ರಗಳನ್ನು ಹೇಳಿ ಇಬ್ಬರಿಗೂ ಆಶೀರ್ವಾದಮಾಡುತ್ತಾನೆ. ತರುವಾಯ ಬಾದಾಮಿ, ಖರ್ಜೂರ, ಸಕ್ಕರೆಯನ್ನು ಸಿಕ್ಕಿದವರಿಗೆ ಸೀರುಂಡೆಯಾಗಿ ನೆರವಿಯಲ್ಲಿ ಎರಚುತ್ತಾರೆ. ಇದು ಪೈಗಂಬರನ ಕಾಲದಿಂದ ಬಂದ ಸಂಪ್ರದಾಯ. ಆದರೆ, ಈಗ ಇರಾನ್ ಮೊದಲಾದ ಎಡೆಗಳಲ್ಲಿ ಹೀಗೆ ಎರಚದೆ ತಟ್ಟೆಯಲ್ಲಿಟ್ಟು ಪ್ರತಿಯೊಬ್ಬರಿಗೂ ಕೊಡು ತ್ತಾರೆ. ಇಂಡಿಯದಲ್ಲಿ ನಿಕಾ ಸಮಯದಲ್ಲಿ ಸಂಗೀತ ನಾಚ್‌ಗಳು ನಡೆಯುತ್ತವೆ. ವಿವಾಹಸ್ನಾನಕ್ಕೆ ವಧೂವರರು ಬೇರೆಬೇರೆಯಾಗಿ ತಮ್ಮ ತಮ್ಮ ಮಿತ್ರರೊಡಗೂಡಿ ಮಧ್ಯ ಮತ್ತು ಪಶ್ಚಿಮ ಏಷ್ಯಗಳಲ್ಲಿ

ಸಾರ್ವಜನಿಕ ಸ್ನಾನಘಟ್ಟಗಳಿಗೆ ಹೋಗುತ್ತಾರೆ. ಆದರೆ, ಇಂಡಿಯದಲ್ಲಿ ಮನೆಯಲ್ಲಿಯೇ ನಡಸುತ್ತಾರೆ. ಈ ನಿಕಾ ಕರ್ಮವಾದ ಮೇಲೆ 'ಜಿಲ್‌ವಹ್' ಕರ್ಮ ನಡೆಯುತ್ತದೆ. (ಇದಕ್ಕೆ ಅರಬ್ಬಿಯಲ್ಲಿ 'ಸ್ತೆಸ್ಸೈತ್‌ಅತ್ ಅರೂಸ್') ಎಂದೂ, ಪರ್ಷಿಯನ್ನಲ್ಲಿ 'ಸ್ಲಿಫ್ಲಾಫ್' ಎಂದೂ ಹೆಸರು.) ವರನು ಮೆರವಣಿಗೆಯಲ್ಲಿ ವಧುವಿನ ಮನೆಗೆ ಬಂದು, ಕನ್ನಡಿಯಲ್ಲಿ ಬುರ್ಕಿ ಕಳಚಿದ ವಧುವಿನ ಮುಖವನ್ನು ನೋಡಿ, ಅವಳ ಅಂದಚೆಂದಗಳ ವಿಷಯದಲ್ಲಿ ತನ್ನ ಒಪ್ಪಿಗೆ ಕೊಟ್ಟು, ತಂದ ಮೆಚ್ಚಿಗೆಯಿತ್ತು, ತರುವಾಯ ವಧೂವರರು ವರನ ಮನೆಗೆ ಮೆರವಣಿಗೆ ಹೊರಡುತ್ತಾರೆ.

ಮದುವೆಗೆ ಸಾಮಾನ್ಯವಾಗಿ ವಧೂವರರ ಜಾತಕವನ್ನೂ ಗ್ರಹಕೂಟಾದಿಗಳನ್ನೂ ನೋಡಿ ಶುಭಲಗ್ನವನ್ನು ಗೊತ್ತುಮಾಡುತ್ತಾರೆ.

ಇರಾನಿನಲ್ಲಿ ಹೆಣ್ಣಿನ ಕಡೆಯವರು ಗಂಡಿನ ಕಡೆಯವರಿಗೆ ಹೆಣ್ಣಿನ ಕನ್ಯಾತ್ವವನ್ನು ನಿದರ್ಶನಮಾಡಿಕೊಡುವ ಸಂಪ್ರದಾಯ ಒಂದಿದೆ. ಇದಕ್ಕಾಗಿ ಹೆಣ್ಣಿನ ತಾಯೋ ಅವಳ ಕಡೆಯ ಮತ್ತೆ ಯಾರಾದರೂ ವೃದ್ಧ ಸ್ತ್ರೀಯೋ ಮದುಮನೆಯ ಪಕ್ಕದ ಕೋಣೆಯಲ್ಲಿ ಮಲಗಿರುತ್ತಾಳೆ. ದಂಪತಿಗಳು ಮಲಗುವುದಕ್ಕಾಗಿ ಹಾಸಿದ್ದ ಬಿಳಿಯ ಬಟ್ಟೆಯನ್ನು ಅವರು ಎದ್ದ ಮೇಲೆ ಗಂಡನ ಕಡೆಯವರಿಗೆ ತೋರಿಸಿ ಹೆಣ್ಣಿನ ಕನ್ಯಾತ್ವವನ್ನು ನಿದರ್ಶನ ಮಾಡಿಕೊಡುತ್ತಾಳೆ. ಹೀಗೆ ಹೆಣ್ಣಿನ ಕನ್ಯಾತ್ವ ಸಿದ್ಧಪಡದಿದ್ದರೆ ಗಂಡ ಅವಳನ್ನು ತೊರೆದುಬಿಡಬಹುದು.

ವೇಶ್ಯೆಯರು ಮತ್ತು ದಾಸಿಗಳು: ಶ್ರೀಮಂತತನದ ಗೌರವಕ್ಕಾಗಿಯೋ ಇತರ ಕಾರಣಗಳಿಂದಲೋ ಸೂಳೆಯರನ್ನೂ ಗುಲಾಮಿ ಹುಡುಗಿಯರನ್ನೂ ಇಟ್ಟುಕೊಳ್ಳುವುದು ಅರಬರಲ್ಲಿ ಸಾಮಾನ್ಯವಾಗಿತ್ತು. ಇವರಲ್ಲಿ ಹುಟ್ಟಿದ ಮಕ್ಕಳಿಗೂ ಮದುವೆಯಾದ ಹೆಂಡತಿಯಲ್ಲಿ ಹುಟ್ಟಿದ ಮಕ್ಕಳಿಗೂ ಸ್ಥಾನಮಾನಗಳಲ್ಲಿ ವ್ಯತ್ಯಾಸವೇನೂ ಇರಲಿಲ್ಲ. ಈಜಿಪ್ಟ್, ಸಿರಿಯ, ತುರ್ಕೀ, ಮೆಸೊಪೊಟೇಮಿಯ, ಇರಾನ್ ಮೊದಲಾದ ಮುಸ್ಲಿಂ ದೇಶಗಳಲ್ಲಿ ಗುಲಾಮರನ್ನು ತಂದು ಮಾರುವ ವ್ಯಾಪಾರ ಕಟ್ಟೆಗಳಿದ್ದುವು. ಜಾರ್ಜಿಯ, ಅಬಿಸೀನಿಯ, ಉತ್ತರ ಆಫ್ರಿಕ, ಗ್ರೀಸ್,

ಮಧ್ಯಏಷ್ಯ—ಮೊದಲಾದ ದೇಶಗಳಿಂದ ಜನರನ್ನು ಹಿಡಿದುತಂದು ಗುಲಾಮರನ್ನಾಗಿ ಮಾರುತ್ತಿದ್ದರು. ಮೊದಲೇ ಹೇಳಿರುವಂತೆ ಎಷ್ಟೋ ಸಲ ಒಡೆಯನು ಹೀಗೆ ಕೊಂಡ ತನ್ನ ಗುಲಾಮಿ ಹುಡುಗಿಗೆ ಸ್ವಾತಂತ್ರ್ಯ ಕೊಟ್ಟು ಅವಳನ್ನು ಮದುವೆಯಾಗುತ್ತಿದ್ದನು. ಇಸ್ಲಾಂ ಗುಲಾಮ ಪದ್ಧತಿಯನ್ನು ಕೊಡೆದುಹಾಕದಿದ್ದರೂ, ಗುಲಾಮರ ಕಷ್ಟವನ್ನು ಕೊಂಚಮಟ್ಟಿಗಾದರೂ ಪರಿಹಾರಮಾಡಿತು. ಪೈಗಂಬರನು ತನ್ನ ಗುಲಾಮನನ್ನು ದತ್ತುಮಗನನ್ನಾಗಿ ಮಾಡಿಕೊಂಡು, ತನ್ನ 'ಒಂದು ಬಿಟ್ಟ' ತಂಗಿ ಅವನನ್ನು ಮದುವೆಯಾಗುವಂತೆ ಒಪ್ಪಿಸಿ, ಅವರಿಗೆ ಹುಟ್ಟಿದ ಮಗನನ್ನು ಕುಲೀನ ಕುರಾಯಿಷರು ಸೇರುತ್ತಿದ್ದ ಸೈನ್ಯಕ್ಕೆ ದಳಪತಿಯನ್ನಾಗಿ ಮಾಡಿದನು. ಇದು ಗುಲಾಮರ ವಿಷಯದಲ್ಲಿ ಇಸ್ಲಾಂ ದೃಷ್ಟಿಯನ್ನೇ ಸಂಪೂರ್ಣವಾಗಿ ಬದಲಾಯಿಸಿತು. ಆದರೆ, ಸಾಮಾನ್ಯವಾಗಿ ಗುಲಾಮನ ಸಮಾಜಸ್ಥಾನ ಸ್ವತಂತ್ರ ಮನುಷ್ಯನ ಸ್ಥಾನಕ್ಕಿಂತ ಕೊಂಚ ಕಡಮೆಯದು. ಉದಾಹರಣೆಗೆ ಸ್ವತಂತ್ರನು ನಾಲ್ವರು ಹೆಂಡಿರನ್ನು ಮದುವೆಯಾಗಬೇಕಾದರೆ ಗುಲಾಮನು ಇಬ್ಬರನ್ನು ಮಾತ್ರ ಮದುವೆಯಾಗಬಹುದು. ಆದರೆ ಇದರಲ್ಲಿ ವಿಚಿತ್ರ ಸಂಗತಿ ಎಂದರೆ—ಶಿಕ್ಷೆಯಲ್ಲೂ ಹೀಗೆಯೇ ಇದ್ದು, ಸ್ವತಂತ್ರ ಮನುಷ್ಯನಿಗೆ ಆಗುವುದರಲ್ಲಿ ಅರ್ಧ ಮಾತ್ರ ಶಿಕ್ಷೆ ಗುಲಾಮನಿಗೆ ಆಗುತ್ತಿತ್ತು.

ಪರ್‌ದ ಪದ್ಧತಿ: ಹೆಂಗಸರು ಗಂಡಸರ ಕಣ್ಣಿಗೆ ಬೀಳದೆ ಮರೆಯಾಗಿರುವುದು ಒಂದಲ್ಲ ಒಂದು ರೀತಿಯಲ್ಲಿ ಯೂರೋಪ್ ಮತ್ತು ಏಷ್ಯಾಖಂಡಗಳ ಹಲವು ದೇಶಗಳಲ್ಲಿ ಬಹಳ ಹಿಂದಿನಿಂದ ಬಂದ ಸಂಪ್ರದಾಯ. ಗ್ರೀಸ್‌ನಲ್ಲಿ ಈ ಪದ್ಧತಿಯಿತ್ತು. ಇರಾನಿನಲ್ಲಿ ಅಖಿಮಾನಿಯನ್ ಕಾಲದ ಶಿಲ್ಪದಲ್ಲಿ ಸ್ತ್ರೀ ಪ್ರತಿಮೆಗಳು ಇಲ್ಲದಿರುವುದರಿಂದ ಆ ಕಾಲದಲ್ಲಿ ಈ ಪದ್ಧತಿ ಒಂದು ತರದಲ್ಲಿ ನೆಲಸಿತ್ತೆಂದು ಊಹಿಸಬಹುದಾಗಿದೆ. ಅರಬರ ಕುರಾಯಿಷ್ ಮೊದಲಾದ ಬುಡಕಟ್ಟುಗಳಲ್ಲಿ ಮದುವೆಯಾದ ಹೆಂಗಸರು ಬುರ್ಕಿ ಹಾಕಿಕೊಳ್ಳುತ್ತಿದ್ದರು. ಆದರೆ, ಮಹಮ್ಮದನ ಹೆಂಡತಿ ಆಯಿಷ ಬುರ್ಕಿ ಹಾಕಿಕೊಳ್ಳುತ್ತಿರಲಿಲ್ಲ. ೨ನೆಯ ಖಲೀಫ಼ ಉಮರನು ವಿದ್ಯಾರ್ಥಿನಿಯರು ಕುರಾನ್ ಪಾಠಕರ ಮುಂದೆ

ಬುರ್ಕಿ ಹಾಕಿಕೊಳ್ಳದಿರಲು ಅವಕಾಶವಿತ್ತನು. ಅಲ್ಲದೆ, ಅರಬರು ತಮ್ಮ ಹೆಂಡಿರನ್ನು ರಣರಂಗಕ್ಕೆ ಜತೆಯಲ್ಲಿ ಕರೆದುಕೊಂಡು ಹೋಗುವುದು ಸಾಮಾನ್ಯವಾಗಿತ್ತು. ಅದರಲ್ಲೂ ಈಗ ಅರೇಬಿಯ, ಇರಾನ್ ಮತ್ತು ಇತರ ಮುಸ್ಲಿಂ ದೇಶಗಳಲ್ಲಿ ಹೆಂಗಸರು ಮಸೀದಿಯಲ್ಲಿ ಪ್ರಾರ್ಥನೆಗೆ ಸೇರುವುದು, ಧರ್ಮಪ್ರಸಂಗಗಳಲ್ಲಿ ಭಾಗಿಗಳಾಗುವುದು, ಇತರ ವ್ಯಾಪಾರ ವ್ಯವಹಾರಗಳನ್ನು ನಡಸುವುದು—ಸಾಮಾನ್ಯವಾಗಿದೆ. ಅಲ್ಲದೆ, ಸಾಮಾನ್ಯವಾಗಿ ಯಾವ ಮುಸ್ಲಿಂ ದೇಶದಲ್ಲೇ ಆಗಲಿ ಹಳ್ಳಿಗಳಲ್ಲಿ ಪರ್‌ದ ಪದ್ಧತಿ ಇಲ್ಲವೇ ಇಲ್ಲವೆನ್ನಬಹುದು.

ಪರ್‌ದ ಪದ್ಧತಿ ಎಲ್ಲ ದೇಶಗಳಲ್ಲೂ ಒಂದೇ ಸಮನಾಗಿಲ್ಲ. ಈಜಿಪ್ಟ್, ಅರೇಬಿಯ, ಇರಾನ್‌ಗಳಲ್ಲಿ ನಾಮಮಾತ್ರವಾಗಿದ್ದು, ಹೆಂಗಸರು ತಲೆಯಮೇಲೆ ಗವಸುಹಾಕಿಕೊಂಡು ಬೀದಿಯಲ್ಲಿ ಸರಾಗವಾಗಿ ಸ್ವತಂತ್ರವಾಗಿ ತಿರುಗಾಡುತ್ತಾರೆ. ಆದರೆ, ಇಂಡಿಯದಲ್ಲಿ ಪರ್‌ದಪದ್ಧತಿ ಬಹು ಕಟ್ಟುನಿಟ್ಟು. ಸಾಮಾನ್ಯವಾಗಿ ಹೆಂಗಸರು ಮನೆಬಿಟ್ಟು ಬರುವುದೇ ಇಲ್ಲ. ಅಷ್ಟೇ ಅಲ್ಲ. ಮನೆಯಲ್ಲೂ ಪರಪುರುಷನಿಗೆ ಮುಖ ತೋರಿಸುವುದಿಲ್ಲ. ಈ ಪದ್ಧತಿ ತೈಮೂರ್‌ನಿಂದ ಬಂತೆಂದು ಕೆಲವರು ಹೇಳುತ್ತಾರೆ. ಅವನು ಮುಸ್ಲಿಂ ಹೆಂಗಸರು ಹಿಂದುಗಳಿಗೆ ಮುಖ ತೋರಿಸಕೂಡದೆಂದು ಅಪ್ಪಣೆ ಮಾಡಿದ್ದನಂತೆ. ಆದರೆ ತೈಮೂರನು ಇಂಡಿಯದಲ್ಲಿದ್ದದ್ದು ಬಹು ಸ್ವಲ್ಪ ಕಾಲ ಮಾತ್ರವಾದ್ದರಿಂದ ಅವನ ಅಪ್ಪಣೆಯೊಂದರಿಂದಲೇ ಇದು ಬಂತೆಂದು ಹೇಳಲಾಗುವುದಿಲ್ಲ. ಇದಕ್ಕೆ ಬೇರೆ ಕಾರಣಗಳಿರಬೇಕು. ಈ ಪರ್‌ದ ಪದ್ಧತಿ ಉತ್ತಮ ಮತ್ತು ಮಧ್ಯಮ ದರ್ಜೆಯವರಲ್ಲಿ ಮಾತ್ರ ಇದೆಯೇ ಹೊರತು, ಕೆಳಗಿನ ದರ್ಜೆಯವರಲ್ಲಿಲ್ಲ. ಈ ಪದ್ಧತಿಯಿಂದ ಕೆಡುಕುಗಳು ಮಧ್ಯಮ ದರ್ಜೆಯವರಿಗೇ ಹೆಚ್ಚು. ಈಗೀಗ ಜನರು ಎಚ್ಚತ್ತು ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಬದಲಾವಣೆಗಳಿಗೆ ತಕ್ಕಂತೆ ಬದುಕನ್ನು ಮಾರ್ಪಡಿಸಿಕೊಳ್ಳುತ್ತಿರುವುದನ್ನು ನೋಡಿದರೆ, ಈ ಪರ್‌ದ ಪದ್ಧತಿಯೂ ಬೇಗ ತಪ್ಪಿಹೋಗಬಹುದೆಂದು ಕಾಣುತ್ತದೆ. ತುರ್ಕಿಯಲ್ಲಿ ಇದು ಸಂಪೂರ್ಣವಾಗಿ ತಪ್ಪಿಹೋಗಿ, ಅಲ್ಲಿಯ ಹೆಂಗಸರು ಯೂರೋಪಿನ ಇತರ ದೇಶ

ಗಳಲ್ಲಿಯು ಹೆಂಗಸರಂತೆ ಸ್ವತಂತ್ರರಾಗಿದ್ದಾರೆ. ಈಜಿಪ್ಟ್, ಇರಾನ್, ಅರೇಬಿಯದವರೂ ಅವರನ್ನು ಅನುಸರಿಸುತ್ತಿದ್ದಾರೆ.

ಜನನ ಮತ್ತು ಶೈಶವ: ಮಗು ಹುಟ್ಟಿದ ಒಡನೆ ಅದನ್ನು ತೊಳೆದು, ತಾಯಿ ಬಸಿರಾಗಿದ್ದಾಗಲೆ ಮಾಡಿಟ್ಟುಕೊಂಡಿದ್ದ ಬಟ್ಟೆ ಹಾಕಿ, ಮನೆಯ ಯಜಮಾನನು ಅದರ ಕಿವಿಯಲ್ಲಿ ಅಜಾನ್ (ಪ್ರಾರ್ಥನೆಯ ಕರೆ) ಜಪಿಸುತ್ತಾನೆ. (ಗಂಡುಮಗು ಶುಭಸೂಚಕವೆಂಬ ನಂಬಿಕೆಯಿದೆ.) ತರುವಾಯ ಮಗುವಿನ ತಂದೆಯೊ ಅಥವಾ ಮನೆಯ ಹಿರಿಯನೊ ನಾಮಕರಣ ಮಾಡುತ್ತಾನೆ. ಇಸ್ಲಾಂ ಪೂರ್ವದ ಅರಬರಲ್ಲಿ 'ಅಕೀಕಹ್' ಎಂಬ ಒಂದು ಕರ್ಮ ನಡೆಯುತ್ತಿತ್ತು. ಜನನೋತ್ಸವಕ್ಕಾಗಿ ಬಲಿಕೊಟ್ಟ ಪಶುವಿನ ರಕ್ತವನ್ನು ಮಗುವಿನ ತಲೆಗೆ ಸವರುತ್ತಿದ್ದರು. ಅನಂತರ ಮಗುವಿನ ಜುಟ್ಟನ್ನು ದೇವರಿಗೆ ಮುಡಿಕೊಡುತ್ತಿದ್ದರು. ಈ ಪದ್ಧತಿ ಕೊಂಚ ಮಾರ್ಪಾಡಾಗಿ, ಅದರ ಮತದೃಷ್ಟಿಯನ್ನು ಕಳೆದುಕೊಂಡಿದ್ದರೂ ಸಾಮಾಜಿಕ ದೃಷ್ಟಿಯನ್ನು ಉಳಿಸಿಕೊಂಡು, ಇಸ್ಲಾಂ ತರುವಾಯದಲ್ಲೂ ನಡೆದುಬಂದಿದೆ. ಬಾಣಂತಿ ಹತ್ತು ದಿನಗಳು ಹೊಲೆ ಮನೆಯಲ್ಲಿರುತ್ತಾಳೆ. ೪೦ನೆಯ ದಿನ ಮಂಗಳಸ್ನಾನ ಮಾಡುವವರೆಗೂ ಗಂಡನೊಡನೆ ಮಲಗುವುದಿಲ್ಲ. ಸಾಮಾನ್ಯವಾಗಿ ಏಳನೆಯ ದಿನ ನಡೆಯುವ ನಾಮಕರಣ ಮತ್ತು ಮೇಲೆ ಹೇಳಿದ 'ಅಕಿಕಾಹ್' ಕರ್ಮಗಳ ಜತೆಗೆ, ಕ್ರಮೇಣ ಅಕ್ಷರಾಭ್ಯಾಸ, ಕುರಾನ್ ಅಧ್ಯಯನ, ಸುನತಿ, ಮೊದಲಾದ ಕರ್ಮಗಳು ನಡೆಯುತ್ತವೆ.

ಶ್ರೀಮಂತ: ಮನೆತನದಲ್ಲಿ ಮೊಲೆಯೂಡುವ ದಾದಿಯನ್ನು ಗೊತ್ತುಮಾಡಿ ಅವಳನ್ನು ಪಥ್ಯದಲ್ಲಿಟ್ಟಿರುವುದು ಬಹಳ ವಾಡಿಕೆ. ಮೊಲೆ ಕೊಟ್ಟದಾದಿ ತಾಯಿಸಮಾನಳಾಗಿ ಗೌರವಪಡೆಯುತ್ತಿದ್ದಳು. ಇವಳಿಗೆ 'ದಾಯಿ' ಎಂದು ಹೆಸರು. ಅಕ್ಬರ್ ಚಕ್ರವರ್ತಿ ತನ್ನ ದಾಯಿಳ ಮಕ್ಕಳು ತಪ್ಪು ಮಾಡಿದರೂ ದಂಡಿಸದೆ "ನನಗೂ ಅವರಿಗೂ ಒಂದೇ ಹಾಲಿನ ಹೊನಲಿದೆ. ನಾನು ಅದನ್ನು ದಾಟಲಾರೆ" ಎನ್ನುತ್ತಿದ್ದನಂತೆ.

ಸುನ್ನತ್: ಇಸ್ಲಾಂ ಪೂರ್ವದ ಅರಬರು, ಯೆಹೂದ್ಯರು, ಅಫ್ಘಾನಿಸ್ತಾನದ ಕಾಫಿರರು, ಆಫ್ರಿಕದ ಹಲವು ಬುಡಕಟ್ಟಿನವರು,

ಅಬಿಸೀನಿಯದ ಕ್ರೈಸ್ತರು, ಈಜಿಪ್ಟ್, ಮೆಡಗಾಸ್ಕರ್, ಆಸ್ಟ್ರೇಲಿಯಾ, ಮೆಲೆನೇಸಿಯ, ಪಾಲಿನೇಷಿಯ, ಮೊದಲಾದ ನಾನಾದೇಶಗಳ ಜನರು—ಇವರಲ್ಲೆಲ್ಲ ಬಹು ಹಿಂದಿನ ಕಾಲದಿಂದಲೂ 'ಸುನತಿ' ರೂಢಿಯಲ್ಲಿತ್ತು. ಅರಬರ ಪ್ರಕಾರ ಈ ಸುನತಿ ಸಂಪ್ರದಾಯ ಅಬ್ರಹಾಮ್ ಕಾಲದಿಂದ ಆರಂಭವಾಯಿತು. ಇದರ ವಿಷಯವಾಗಿ ಕುರಾನ್‌ನಲ್ಲಿ ಏನೂ ಹೇಳಿರುವುದಿಲ್ಲ. ಆದ್ದರಿಂದಲೇ ಈ ಕರ್ಮವನ್ನು ಸುನ್ನತ್ ಎಂದು ಕರೆದಿದೆ. ಎಂದರೆ ಅದನ್ನು ಆಚರಿಸುವುದು ಒಳ್ಳೆಯದು, ಸಂಪ್ರದಾಯ; ಆದರೆ, ನಿರ್ಬಂಧಕರ್ತವ್ಯವಲ್ಲ. ಇಸ್ಲಾಮಿನಲ್ಲಿ ಈ ಸುನತಿ ಉಳಿದುಬರುವುದಕ್ಕೆ ಒಂದು ಪ್ರಬಲಕಾರಣ ಏನೆಂದರೆ—ಇತರ ಧರ್ಮದಿಂದ ಇಸ್ಲಾಮಿಗೆ ಸೇರಿಸಿಕೊಂಡವರು ಸಂಪೂರ್ಣವಾಗಿ ಧರ್ಮಾಂತರ ಹೊಂದಿದ್ದಕ್ಕೆ ಈ ಸುನತಿ ಒಂದು ಅನುಕೂಲವಾದ ಹೊರಗುರುತಾಗಿ ಸಿಕ್ಕಿತು. ಕೆಲವರು ಈ ಕರ್ಮದಿಂದ ಮಾನಸಿಕ ಪರಿಣಾಮವೂ ಉಂಟೆಂದು ನಂಬುತ್ತಾರೆ. ಅರಬರಲ್ಲಿ ಗಂಡಸು ಹೆಂಗಸರಿಬ್ಬರಿಗೂ ಸುನತಿ ನಡೆಯುತ್ತಿತ್ತು. ಆದರೆ, ಈಗ ಮುಸ್ಲಿಮರಲ್ಲಿ ಗಂಡಸರಿಗೆ ಮಾತ್ರ ನಡೆಯುತ್ತದೆ. ಇದೂ ಕೂಡ ಎಲ್ಲ ದೇಶಗಳಲ್ಲೂ ಎಲ್ಲರಿಗೂ ನಡೆಯುತ್ತವೆಂದು ಹೇಳಲಾಗುವುದಿಲ್ಲ. ಹುಟ್ಟಿದ ಏಳನೆಯ ದಿನದಿಂದ ೧೦-೧೨ ವರ್ಷ ವಯಸ್ಸಿನ ಒಳಗೆ ಯಾವಾಗಲಾದರೂ ಸುನತಿ ನಡೆಯಬಹುದು. ಸಾಮಾನ್ಯವಾಗಿ ಇದನ್ನು ಮಾಡುವವನು ಕ್ಷೌರಕ. ಆಫ್ರಿಕದಲ್ಲಿ ಮುಲ್ಲಾ ಅಥವಾ ಪುರೋಹಿತನೂ, ಟ್ಯೂನಿಸ್ಸಿನಲ್ಲಿ ಜೋಯಿಸ ಅಥವಾ ಯಂತ್ರಕಟ್ಟುವವನೂ ಇದನ್ನು ಮಾಡುತ್ತಾರೆ. ಆದರೆ, ಈಗೀಗ ವೈದ್ಯನ ಕೈಯಿಂದ ಇದನ್ನು ಮಾಡಿಸುವುದು ರೂಢಿಗೆ ಬರುತ್ತಿದೆ. ಇಂಡಿಯದಲ್ಲಿ ಈ ಸುನತಿ ಕರ್ಮದಲ್ಲಿ ಇಷ್ಟ ಮಿತ್ರರನ್ನು ಕರೆದು ಸಂಗೀತಾದಿ ಉತ್ಸವ ನಡಸುವುದು ವಾಡಿಕೆ.

ಶವಸಂಸ್ಕಾರ: ಪ್ರಾಣ ಹೋದೊಡನೆಯೆ ಕಣ್ಣು ಬಾಯಿಗಳನ್ನು ಮುಚ್ಚಿ, ಮುಖವನ್ನು ಕಿಬ್‌ಲದ (ಮೆಕ್ಕದ) ಕಡೆಗೆ ತಿರುಗಿಸಿಟ್ಟು ಧೂಪ ಹಾಕುತ್ತಾರೆ. ಹಣಗಾರರು ದುಡ್ಡು ಕೊಟ್ಟು ಕುರಾನ್ ಓದಿಸುತ್ತಾರೆ. ಶವವನ್ನು ತೊಳೆದು ಗಂಡಸಿನ ಹೆಣವನ್ನು ಮೂರು ಹೊಸ ಬಿಳಿಯ

ಬಟ್ಟೆಗಳಿಂದಲೂ, ಹೆಂಗಸಿನದನ್ನು ಐದು ಹೊಸ ಬಿಳಿಯ ಬಟ್ಟೆಗಳಿಂದಲೂ ಹೊದಿಸುತ್ತಾರೆ. ಹೊದಿಸಿ ಕರ್ಪೂರದ ಪುಡಿಯನ್ನು ಉದುರಿಸುತ್ತಾರೆ. ತರುವಾಯ ಹೆಣವನ್ನು ಹೆಣದ ಪೆಟ್ಟಿಗೆಯಲ್ಲಿಟ್ಟು ಹೂವು ಹಾಕುತ್ತಾರೆ. (ಇಂಡಿಯದಲ್ಲಿ ಶಾಲು ಹೊದಿಸಿ, ಹೆಣ ಹುಗಿದ ಮೇಲೆ ಆ ಶಾಲನ್ನು ಯಾರಾದರೂ ಬಡವರಿಗೆ ದಾನಮಾಡಿಬಿಡುತ್ತಾರೆ.) ಈ ಹೆಣದ ಪೆಟ್ಟಿಗೆಯನ್ನು ದೊಡ್ಡವರು ಚಿಕ್ಕವರು ಎಂಬ ಭೇದವಿಲ್ಲದೆ ಸ್ಮಶಾನಕ್ಕೆ ಜತೆಯಲ್ಲಿ ಬರುವ ಪ್ರತಿಯೊಬ್ಬರೂ ಹೊರಬೇಕು. ಹೆಣವನ್ನು ಹುಗಿದು ಮನೆಗೆ ಬಂದು, ಸತ್ತೆಡೆ ದೀಪವಿಡುತ್ತಾರೆ. ಹೆಣ ಹೂತಮೇಲೆ ಸತ್ತವನನ್ನು ಸಂಬೋಧಿಸಿ, ಅವನು ಮುನ್‌ಕೆರ್ ಮತ್ತು ನಕೀರ್ ಎಂಬ ಇಬ್ಬರು ದೇವದೂತರಿಗೆ ಕೊಡಬೇಕಾದ ಉತ್ತರವನ್ನು ಒಬ್ಬನು ಹೇಳುತ್ತಾನೆ. ಇದಕ್ಕೆ ತಲ್‌ಕೀನ್ ಎಂದು ಹೆಸರು—"ಓ ಅಬ್ದುಲ್ಲ (ದೇವರದಾಸ)! (ಇಂಥವನ) ಮಗನೇ! ನಿನ್ನ ಧರ್ಮವನ್ನು ಮರೆಯಬೇಡ, ಅಲ್ಲಾ ಹೊರತು ಬೇರೆ ದೇವರಿಲ್ಲವೆಂಬುದನ್ನೂ, ಮುಹಮ್ಮದನು ದೇವಪ್ರೇಷಿತನೆಂಬುದನ್ನೂ, ಸ್ವರ್ಗ, ನರಕ, ಪುನರುತ್ಥಾನಗಳು ಸತ್ಯವೆಂಬುದನ್ನೂ ನೆನಪಿನಲ್ಲಿಡು. ದೇವದೂತರು ಬಂದು ಕೇಳಿದಾಗ 'ದೇವರು ನನ್ನ ಸ್ವಾಮಿ, ಇಸ್ಲಾಂ ನನ್ನ ಧರ್ಮ, ಮುಹಮ್ಮದ್ ನನ್ನ ಪೈಗಂಬರ್, ಕುರಾನ್ ನನ್ನ ಮಾರ್ಗದರ್ಶಿ, ಕಾಬಾ ನನ್ನ ಕಿಬ್‌ಲಾ, ಮುಸ್ಲಿಮರು ನನ್ನ ಸೋದರರು' ಎಂದು ಹೇಳು". ಈ ರೀತಿಯಾಗಿ ಸರಿಯಾದ ಉತ್ತರ ಬಂದರೆ, ಸತ್ತವನ ಆತ್ಮ ಪುನರುತ್ಥಾನದವರೆಗೆ ಸುಖವಾಗಿ ನಿದ್ರಿಸಲು ದೂತರು ಅವಕಾಶ ಕೊಡುತ್ತಾರೆ. ಇಲ್ಲದಿದ್ದರೆ ಅಲ್ಲಿಯವರೆಗೂ ಹಿಂಸೆ ಕೊಡುತ್ತಾರೆ. ಮಕ್ಕಳಿಗೆ ಈ ದೂತರ ಪರೀಕ್ಷೆ ಇರುವುದಿಲ್ಲ.

ಮೂರನೆಯ ದಿನ ಗೋರಿಗೆ ಹೋಗಿ ಪ್ರಾರ್ಥನೆ ಮಾಡುತ್ತಾರೆ. ಏಳನೆಯ ಅಥವಾ ಹತ್ತನೆಯ ದಿನ ಜನರಿಗೆ ಊಟ ಹಾಕುತ್ತಾರೆ. ೪೦ನೆಯ ದಿನ ನೆಂಟರಿಷ್ಟರು ಗೋರಿಗೆ ಹೋಗಿ ಸತ್ತವನ ಆತ್ಮಶಾಂತಿಗಾಗಿ ಪ್ರಾರ್ಥನೆ ಮಾಡಿ ಜನರಿಗೆ ಊಟಹಾಕುತ್ತಾರೆ. ಇದಕ್ಕೆ ಚೆಹ್‌ಲುಮ್ (ಪರ್ಷಿಯನ್ನಲ್ಲಿ 'ನಲವತ್ತು' ಎಂದು ಅರ್ಥ) ಎಂದು

ಹೆಸರು. ಬರ್‌ಸಿ ಅಥವಾ ವರ್ಷಾಬ್ದಿಕವನ್ನೂ ಮಾಡುತ್ತಾರೆ. ಸಾಮಾನ್ಯವಾಗಿ ಪ್ರತಿ ಗುರುವಾರವೂ, ಕೊನೆಯ ಪಕ್ಷ ವರ್ಷಕ್ಕೊಮ್ಮೆಯಾದರೂ ಮುಸ್ಲಿಮರು ತಮ್ಮ ಸೆಂಟರಿಷ್ಟರ ಗೋರಿಯನ್ನು ನೋಡಿಕೊಂಡು ಬರುತ್ತಾರೆ.

ಅರಬರ ಹೆಂಗಸರು ತಮ್ಮ ಗಂಡ ಅಥವಾ ಅಣ್ಣನನ್ನು ಹುಗಿದೆಡೆಯಲ್ಲಿ ಡೇರಾ ಹಾಕಿ ಆರು ತಿಂಗಳು ಅಥವಾ ವರ್ಷಕಾಲ ವಾಸಿಸುವ ಪದ್ಧತಿಯಿತ್ತು. ಇದು ಕ್ರಮೇಣ ಹುಗಿದೆಡೆಯಲ್ಲಿ ನೆಲೆ ಕಟ್ಟಡಕ್ಕೆ ಎಡೆಗೊಟ್ಟಿತು. ಇದು ಮುಸ್ಲಿಂ ವಾಸ್ತುಶಿಲ್ಪಕ್ಕೆ ಎಷ್ಟು ಸಹಾಯ ಮಾಡಿದೆ ಎಂಬುದಕ್ಕೆ ಆಗ್ರದ 'ತಾಜ್‌ಮಹಲ್' ಒಂದೇ ಸಾಕ್ಷಿ ಸಾಕು.

ಹಬ್ಬ ಹುಣ್ಣಿಮೆಗಳು: ಹಬ್ಬ ಹುಣ್ಣಿಮೆಗಳನ್ನು ಕುರಾನ್‌ನಲ್ಲಿ ಹೇಳಿಲ್ಲ. ಆದರೂ, ಇವುಗಳಲ್ಲಿ ಎರಡು ಮತ ಸಂಬಂಧವಾಗಿದ್ದು ಪ್ರಪಂಚದ ಎಲ್ಲ ಮುಸ್ಲಿಮರೂ ಆಚರಿಸುತ್ತಾರೆ. ಇವು 'ಈದ್-ಎ-ಸ್ಗುಹಾ' ಮತ್ತು ರಮ್‌ಸ್ಹಾನ್. ಈದ್-ಎ-ಸ್ಗುಹಾ ಎಂದರೆ ಬಲಿಹಬ್ಬ ಎಂದರ್ಥ. ಈದ್-ಎ-ಸ್ಗುಹಾವನ್ನು ತುರ್ಕಿ ಮತ್ತು ಈಜಿಪ್ಟಿನಲ್ಲಿ ಬಯ್‌ರಾಮ್ ಎಂದೂ, ಇರಾನಿನಲ್ಲಿ ಈದ್-ಎ-ಕುರ್‌ಬಾನ್ ಎಂದೂ, ಇಂಡಿಯದಲ್ಲಿ ಬಕ್ರೀದ್ ಎಂದೂ ಕರೆಯುತ್ತಾರೆ. ಇದು ಅರಬ್ಬೀ ವರ್ಷದ ಕೊನೆಯ ತಿಂಗಳಾದ ಸ್ಲಿಲ್‌ಹುಜ್ಜದ ೯, ೧೦ನೆಯ ತೇದಿಗಳಲ್ಲಿ ಬರುತ್ತದೆ. ಇದನ್ನು ಇಸ್ಲಾಂ ಪೂರ್ವದಲ್ಲೂ ಮೆಕ್ಕಾ ಯಾತ್ರಿಕರು ಮೀನಾ ಎಂಬ ಕಣಿವೆಯ ಹತ್ತಿರದಲ್ಲಿ ಹಸು, ಕುರಿ, ಒಂಟೆ—ಮೊದಲಾದ ಪ್ರಾಣಿಗಳನ್ನು ಬಲಿಕೊಟ್ಟು ಆಚರಿಸುತ್ತಿದ್ದರು. ಈ ಪದ್ಧತಿ ಈಗಲೂ ಉಳಿದುಕೊಂಡು ಬಂದಿದೆ. ಈ ಹಬ್ಬದ ದಿನ ಮುಸ್ಲಿಮರು ಸ್ನಾನಮಾಡಿ ಹೊಸಬಟ್ಟೆ ಹಾಕಿಕೊಂಡು ಈದ್‌ಗ ಅಥವಾ ಪ್ರಾರ್ಥನಾಲಯಕ್ಕೆ ಹೋಗುತ್ತಾರೆ. ಮನೆಗೆ ಬಂದು ಪಶುಬಲಿ ಕೊಟ್ಟು ಹಬ್ಬ ಮಾಡುತ್ತಾರೆ. ಇಂಡಿಯದಲ್ಲಿ ಕೆಲವೆಡೆಗಳಲ್ಲಿ ಬಲಿಪಶುವನ್ನು ಅಲಂಕಾರ ಮಾಡಿ ಕೊಲೆಯೆಡೆಗೆ ಮೆರವಣಿಗೆ ತೆಗೆದುಕೊಂಡು ಹೋಗುವುದುಂಟು. ಮೆಸೊಪೊಟೇಮಿಯ, ಮಧ್ಯ ಏಷ್ಯ ಮೊದಲಾದ ದೇಶಗಳಲ್ಲಿ ಸಂಗೀತ,

ನೃತ್ಯ ಮೊದಲಾದುವನ್ನು ಏರ್ಪಡಿಸುವುದುಂಟು. ಇರಾನ್, ಮಧ್ಯ ಏಷ್ಯ ಮೊದಲಾದ ದೇಶಗಳಲ್ಲಿ ನೆಂಟರಿಷ್ಟರ ಮತ್ತು ಸಾಧುಸಜ್ಜನರ ಗೋರಿಗಳಿಗೆ ಹೋಗಿ ಬರುತ್ತಾರೆ.

ರಮ್‌ಜಾನ್ ಹಬ್ಬವನ್ನು ಅರಬ್ಬಿವರ್ಷದ ೧೦ನೆಯ ತಿಂಗಳಾದ ಷವ್ವಾಲಿನ ಮೊದಲನೆಯ ತೇದಿಯಲ್ಲಿ ಆಚರಿಸುತ್ತಾರೆ. ಇದನ್ನು ಈದ್ ಉಲ್‌ಫಿತ್‌ರ್, ಈದ್‌ಎಸದೆಕಹ್ (ಭಿಕ್ಷೆಯ ಹಬ್ಬ), ಈದ್ ಎಸಘೀರ್ ಎಂದೂ ಕರೆಯುವುದುಂಟು. ಷವ್ವಾಲಿನ ಹಿಂದಿನ ತಿಂಗಳಾದ ರಮ್‌ಜಾನ್‌ನಲ್ಲಿ ಉಪವಾಸ ಮಾಡುತ್ತಾರೆ. ಇದು ಇಸ್ಲಾಂ ಪೂರ್ವದ್ದಲ್ಲ. ಪೈಗಂಬರ್ ಆರಂಭಿಸಿದ್ದು. ಬಕ್ರೀದಿನಂತೆಯೇ ಈ ದಿನವೂ ಮುಸ್ಲಿಮರು ಸ್ನಾನಮಾಡಿ ಹೊಸ ಬಟ್ಟೆ ಉಟ್ಟು, ಈದ್‌ಗಕ್ಕೆ ಹೋಗಿ ಪ್ರಾರ್ಥನೆಯಲ್ಲಿ ಭಾಗಿಗಳಾಗುತ್ತಾರೆ. ತರುವಾಯ ನೆಂಟರಿಷ್ಟರು ಒಬ್ಬರನ್ನೊಬ್ಬರು ನೋಡಿಕೊಂಡು ಬಂದು ಚಿಕ್ಕವರು ದೊಡ್ಡವರ ಹರಕೆಯನ್ನು ಪಡೆಯುತ್ತಾರೆ.

ಇವುಗಳಲ್ಲದೆ ಇನ್ನೂ ಹಲವು ಹಬ್ಬಗಳುಂಟು. ಇವುಗಳಲ್ಲಿ ಕೆಲವು ಪಂಗಡದವು ಮಾತ್ರ, ಕೆಲವು ದೇಶಗಳವು ಮಾತ್ರ. ಉದಾಹರಣೆಗೆ ಮೀಲಾದ್ ಅಥವಾ ಮೌಲೂದ್ (ಪೈಗಂಬರನ ಜನ್ಮದಿನ) ಹಬ್ಬವನ್ನು ಟರ್ಕಿ, ಈಜಿಪ್ಟ್, ಇಂಡಿಯ ಮತ್ತು ಇರಾನಿನ ಕೆಲವು ಭಾಗಗಳಲ್ಲಿ ಆಚರಿಸುತ್ತಾರೆ. ವಹ್ಹಾಬಿಗಳು ಇದನ್ನು ಆಚರಿಸುವುದಿಲ್ಲ.

ಷಬ್‌ಎಬರಾತ್: ಇದು ಎಂಟನೆಯ ತಿಂಗಳಾದ ಷಾಬಾನ್‌ನಿನ ೧೫ನೆಯ ದಿನ ಆಗುತ್ತದೆ. ಈ ದಿನ ಮುಂದಿನ ವರ್ಷದ ಫಲಾಫಲಗಳನ್ನು ಪ್ರತಿಯೊಬ್ಬನಿಗೂ ದೇವಲೋಕದಲ್ಲಿ ಗೊತ್ತುಮಾಡುತ್ತದೆ ಎಂದು ನಂಬಿಕೆಯಿದೆ. ಹೆಚ್ಚುಕಡಮೆ, ಹಿಂದುಗಳು ದೀಪಾವಳಿಯನ್ನು ಆಚರಿಸುವಂತೆ ಇದನ್ನು ಮುಸ್ಲಿಮರು ಆಚರಿಸುತ್ತಾರೆ. ಇದು ಪುರಾತನ ಇರಾನಿನ ಫ್ಲರ್‌ವರ್ದೀನ್ ಹಬ್ಬವಾಗಿರಬಹುದು. ಷಬ್‌ಎಬರಾತಿನ ರಾತ್ರಿ ಸಿದ್‌ರತುಲ್-ಮುಂತಹ ಎಂಬ ಗಿಡವನ್ನು ಅಲ್ಲಾಡಿಸುತ್ತದೆಯಂತೆ. ಅಡಗಿದ ಪ್ರತಿಯೊಂದು ಎಲೆಯಲ್ಲೂ ಒಬ್ಬೊಬ್ಬನ ಹೆಸರು

ಬರೆದಿದ್ದು, ಎಲೆ ಉದುರಿದಂತೆಲ್ಲ ಆಯಾ ಹೆಸರಿನವನ ಸಾವು ನಿಶ್ಚಯ ವಾಗುತ್ತದೆಯಂತೆ.

ಆಖೀರ್ ಚಾರ್‌ಷಂಬ: ಇದು ಎರಡನೆಯ ತಿಂಗಳಾದ ಸಫ್ಫರಿನ ಕೊನೆಯ ಬುಧವಾರ ಬರುತ್ತದೆ. ಆದಿನ ಪೈಗಂಬರನು ಮಹಾ ವ್ಯಾಧಿ ಯೊಂದರಿಂದ ಗುಣ ಹೊಂದಿದನಂತೆ. ಅದರ ನೆನಪಿಗಾಗಿ ಜನರು ಅಂದು ಸ್ನಾನಾದಿಗಳನ್ನು ಮಾಡಿ ಯಂತ್ರ ಕಟ್ಟಿಕೊಳ್ಳುತ್ತಾರೆ.

ನೌ ರೋಸ್ ಅಥವಾ ಮುಸ್ಲಿಂ ಯುಗಾದಿ: ಇದನ್ನು ವಿಶೇಷ ವಾಗಿ ಇರಾನಿಯನ್ನರು ಆಚರಿಸುತ್ತಾರೆ. ಮತಭೇದ ಜಾತಿಭೇದ ವಿಲ್ಲದೆ ಇರಾನಿನಲ್ಲಿ ಇದು ನಾಡಹಬ್ಬವಾಗಿದೆ.

ಸಾಧುಗಳು ಮತ್ತು ಸಮಾಧಿಗಳು: ಸಾಧು (ವಲಿ) ಕೂಟಗಳು ಮುಸ್ಲಿಂ ಸಾಮಾಜಿಕ ಮತ್ತು ಧಾರ್ಮಿಕ ಬೆಳವಣಿಗೆಯಲ್ಲಿ ಒಂದು ಮುಖ್ಯ ಅಂಗ. ಇದು ಹಲವು ಸಂಸ್ಥಾ ಸ್ಥಾಪನೆಗಳಿಗೂ ಭವ್ಯಭವನ ನಿರ್ಮಾಣಗಳಿಗೂ ಆಧಾರವಾಯಿತು. ಆದರೆ ಇದರಿಂದ ಹಲಕೆಲವು ಕೆಡುಕುಗಳೂ ಆಗಿವೆ. ಜನರಲ್ಲಿ ಸೋಮಾರಿತನ, ಮೂಢ ನಂಬಿಕೆ ಮೊದಲಾದುವು ಇದರಿಂದ ಉಂಟಾಗಿವೆ. ಕಪಟ ಸಾಧುಗಳು ಮೂಢ ಜನರಿಗೆ ಮಂಕುಬೂದಿ ಎರಚಿರುವುದು ಅಪುರೂಪವೇನೂ ಅಲ್ಲ. ಸಾಧು ಗಳನ್ನು ಮಹಾವ್ಯಕ್ತಿಗಳೆಂದು ಗೌರವಿಸುತ್ತಿದ್ದರು. ಸಾಮಾನ್ಯವಾಗಿ ವಲಿಗಳು ಊರಿಂದ ಹೊರಗೆ ಮಠಗಳಲ್ಲಿ ಶಿಷ್ಯಮಂಡಲಿ ಭಕ್ತಮಂಡಲಿ ಗಳಿಂದ ಕೂಡಿ ವಾಸಿಸುತ್ತಿದ್ದರು. ಚಕ್ರವರ್ತಿಗಳು ಮತ್ತು ಕಲೀಫ಼ರೇ ಮೊದಲುಮಾಡಿ ಎಲ್ಲರೂ ಅವರಲ್ಲಿಗೆ ಹೋಗಿ ದರ್ಶನ ಪಡೆಯುತ್ತಿದ್ದರು. ಸಾಧುಗಳು ಸತ್ತಮೇಲೆ ಅವರಿಗೆ ಸಮಾಧಿಕಟ್ಟಿ, ಆ ಸ್ಥಳದಲ್ಲಿ ಭವ್ಯ ಭವನಗಳನ್ನು ಎಬ್ಬಿಸುತ್ತಿದ್ದರು. ಇರಾನಿನಲ್ಲಿ ಇಂಥ ಸಾಧುಸಮಾಧಿ ಒಂದಲ್ಲ ಒಂದು ಇಲ್ಲದ ಹಳ್ಳಿಯೇ ಇಲ್ಲವೆನ್ನಬಹುದು. ಈ ಸಾಧು ಸಮಾಧಿಗಳ ಪಕ್ಕದಲ್ಲಿ ಹೆಣವನ್ನು ಹುಗಿದರೆ ಸತ್ತವನ ಆತ್ಮಕ್ಕೆ ಮೇಲೆಂದು ಭಾವನೆಯಿದೆ. ಇದರಿಂದ ಹಲವರು ತುಂಬ ಹಣ ವೆಚ್ಚ ಮಾಡಿ ಹೆಣವನ್ನು ತಮಗೆ ಬೇಕಾದ ಸಾಧುವಿನ ಸಮಾಧಿಯ ಬಳಿಗೆ ಸಾಗಿಸಿಕೊಂಡು ಹೋಗಿ ಹೂಳುತ್ತಾರೆ. ಸಮಾಧಿ ಕಟ್ಟಡಮಾತ್ರವಲ್ಲದೆ

ಸುತ್ತಮುತ್ತಲಿನ ಗಿಡಮರಗಳೂ ಪ್ರಾಣಿಗಳೂ ಪವಿತ್ರವೆಂಬ ಭಾವನೆ ಯಿದ್ದು ಅಲ್ಲಿ ಮೃಗಗಳನ್ನು ಕೊಲ್ಲುವುದಿಲ್ಲ. ಹಲವರು ಈ ಸಮಾಧಿಗಳ ಹತ್ತಿರ ತಮ್ಮ ಹರಕೆ ಸಲ್ಲಿಸುತ್ತಾರೆ. ಸಿರಿಯ, ಮೆಸೊಪೊಟೇಮಿಯ ಮೊದಲಾದ ಪ್ರದೇಶಗಳಲ್ಲಿ ಹಲವು ಸಮಾಧಿಗಳು ಮುಸ್ಲಿಮರಿಗೂ ಯೆಹೂದ್ಯರಿಗೂ ಕ್ರೈಸ್ತರಿಗೂ ಸಮಾನವಾದ ಗೌರವಕ್ಕೆ ಪಾತ್ರಗಳಾ ಗಿವೆ. ಇಂಡಿಯದಲ್ಲಿ ಹಿಂದೂ ಯೋಗಿಗೆ ಮುಸ್ಲಿಂ ಭಕ್ತರೂ ಮುಸ್ಲಿಂ ಫಕೀರನಿಗೆ ಹಿಂದೂ ಭಕ್ತರೂ ಇರುವುದು ಅಪುರೂಪವಲ್ಲ.

ಇಂಡಿಯದ ಮುಸ್ಲಿಮರು ಸಾಧುಗಳ ಜ್ಞಾಪಕಾರ್ಥವಾಗಿ ಅವರ ಸಮಾಧಿಯ ಬಳಿ ನೆರೆದು 'ಉರ್‌ಸ್' ನಡಸುತ್ತಾರೆ. ಸಮಾಧಿ ಯನ್ನು ತೊಳೆದು ಹೂವಿನಿಂದ ಅಲಂಕರಿಸಿ, ಸ್ತೋತ್ರಗೀತಗಳನ್ನು ಹಾಡಿ, ಪ್ರಸಾದ ಹಂಚುತ್ತಾರೆ. ಈ 'ಉರ್‌ಸ್' ಕಾಲದಲ್ಲಿ ಕುಣಿತ, ಜೂಜಾಟ ಮೊದಲಾದುವೂ ನಡೆಯುವುದುಂಟು. ಅಲ್ಲದೆ, ಇದರಲ್ಲಿ ಕೆಲವು ವೇಳೆ ಹಿಂದುಗಳೂ ಸೇರುವುದುಂಟು. ಈ ಉರ್‌ಸ್ ಪಶ್ಚಿಮ ಏಷ್ಯಾ ಪ್ರದೇಶಗಳಲ್ಲಿಲ್ಲ..

ಮೊಹರ್‍ರಮ್ : ಇದು ಇಮಾಮ್ ಹುಸೇನಿನ ಕೊಲೆಯ ಸ್ಮಾರಕ. ಮುಸ್ಲಿಂ ವರ್ಷದ ಮೊದಲ ತಿಂಗಳಾದ ಮೊಹರ್‍ರಮ್, ಕೆರ್ಬಲದಲ್ಲಿ ನಡೆದ ಇಮಾಮ್ ಹುಸೇನಿನ ಕೊಲೆಯಿಂದ, ಶೋಕಮಾಸವಾಗಿ ಪರಿಣ ಮಿಸಿದೆ. ಇಮಾಮ್ ಹುಸೇನಿಗೆ ಸಯ್ಯಿದುಸ್‌ಷೊಹೂದ ಅಥವಾ ಸ್ವಧರ್ಮಕ್ಕಾಗಿ ಪ್ರಾಣ ಕೊಟ್ಟವರಲ್ಲಿ ಮೊದಲಿಗ ಎಂದು ಬಿರುದಿದೆ. ಇವನು ಇರಾನಿನ ಮುಸ್ಲಿಮರಿಗೆ ಬಹು ಪ್ರಿಯನಾದ ವೀರ. ಇಮಾಮ್ ಹುಸೇನನು ಪೈಗಂಬರನ ಮಗಳಾದ ಫಾತಿಮಳ ಮಗ. ಇವನು ಕ್ರಿ. ಶ. ೬೨೬ರಲ್ಲಿ ಹುಟ್ಟಿ ಕ್ರಿ. ಶ. ೬೮೦ ರಲ್ಲಿ ಕೆರ್ಬಲದಲ್ಲಿ ಕೊಲೆಯಾದನು. ಮೊದಲನೆಯ ಏಳುವರ್ಷಗಳನ್ನು ತನ್ನ ತಾತ ಪೈಗಂಬರನ ಬಳಿ ಯಲ್ಲೂ, ಮುಂದಿನ ಮೂವತ್ತು ವರ್ಷಗಳನ್ನು ತನ್ನ ತಂದೆ ಅಲಿಯ ಬಳಿಯಲ್ಲೂ, ತರುವಾಯ ಹತ್ತು ವರ್ಷಗಳನ್ನು ತನ್ನ ಸೋದರ ಹಸನ್ ಬಳಿಯಲ್ಲೂ ಉಳಿದ ಹತ್ತು ವರ್ಷಗಳನ್ನು ಬನೀಹಾಷಿಮರನಾಯಕ ನಾಗಿಯೂ ಕಳೆದನು. ಹುಸೇನಿನ ಕೊಲೆಯ ದುರಂತಘಟನೆಯನ್ನು

ತಂದ ಕಾರಣಗಳನ್ನು ತಿಳಿಯಬೇಕಾದರೆ ಆ ಕಾಲದ ಕಿಲಾಫತ್ ಚರಿತ್ರೆಯನ್ನು ಕೊಂಚ ನೋಡಬೇಕಾದದ್ದು ಆವಶ್ಯಕ.

ಇಸ್ಲಾಂ ಸ್ಥಾಪನೆಯ ಕಾಲಕ್ಕೆ ಕುರಯಿಷ್ ಬುಡಕಟ್ಟಿನವರಲ್ಲಿ ಬನೀಹಾಷಿಮ್, ಬನೀಮಖ್ಜೂಮ್, ಬನೀಉಮಯ್ಯ ಎಂಬ ಮನೆತನಗಳು ಮುಂದಾಗಿದ್ದುವು. ಬನೀಹಾಷಿಮ್ ವಂಶದವರು ಸಾಹಸ, ಪಾಂಡಿತ್ಯ, ಔದಾರ್ಯಗಳಿಗೆ ಹೆಸರಾಗಿದ್ದರೂ ಸಂಖ್ಯೆಯಲ್ಲಿ ಕಡಮೆಯಾಗಿಯೂ ಉಪಪನ್ನರಲ್ಲದೆಯೂ ಇದ್ದರು. ಪೈಗಂಬರ್, ನಾಲ್ಕನೆಯ ಕಲೀಫ ಅಲಿ, ಅಬ್ಬಾಸಿ ಕಲೀಫರ ಮೂಲಪುರುಷ ಅಬ್ಬಾಸ್—ಮೊದಲಾದವರು ಹಾಷಿಮ್ ವಂಶದವರು. ಬನಿಮಖ್ಜೂಮರು ಧನಿಕರೂ, ಸಾಹಸಿಗಳೂ, ಮಹತ್ವಾಕಾಂಕ್ಷಿಗಳೂ ಆಗಿದ್ದರು. ಮುಘೀರನ ಮಗ ವಲೀದ್, ಹಿಷಾಮ್ ಮಗ ಪೈಗಂಬರನ ಪರಮ ಶತ್ರುವಾದ ಅಮ್ರ್ ಮೊದಲಾದವರು ಮಖ್ಜೂಮ್ ವಂಶದವರು. ಬನೀಉಮಯ್ಯರು ರಾಜತಂತ್ರ ನಿಪುಣರೂ, ದಕ್ಷಸೇನಾನಿಗಳೂ ಅರಬರ ಅನಾದಿ ಸಂಪ್ರದಾಯದ ಮತ್ತು ಧರ್ಮದ ಪಕ್ಷಪಾತಿಗಳೂ, ಆಗಿದ್ದರು. ಉತ್ಬ, ಅಬೂಸುಫ್ಯಾನ್, ಹಕಮ್, ಮೂರನೆಯ ಕಲೀಫ ಉಸ್ಮಾನ್—ಮೊದಲಾದವರು ಈ ವಂಶದ ಮುಂದಾಳುಗಳಾಗಿದ್ದರು.

ಪೈಗಂಬರನು ಮುಸ್ಲಿಮರೆಲ್ಲರೂ ಅಣ್ಣತಮ್ಮಂದಿರು ಎಂಬ ತತ್ವವನ್ನು ಉಪದೇಶಿಸಿ, ಅದರಂತೆಯೇ ಆಚರಣೆಗೆ ತಂದದ್ದು ಅನೇಕ ಕುರಯೀಷರಿಗೆ ಸರಿಬೀಳಲಿಲ್ಲ. ಅದರಲ್ಲೂ ಮಖ್ಜೂಮ್ ಮತ್ತು ಉಮಯ್ಯ ಕುಲದವರಿಗೆ ಅರಬರಲ್ಲಿ ಕುರಯೀಷ್ ಇತರರನ್ನು ಕುರಾಯಿಷ್‌ರೊಡನೆಯೂ, ಅರಬೀತರರನ್ನು ಅರಬರೊಡನೆಯೂ ಸಮ ಮಾಡುವುದು ಕೊಂಚವೂ ಸರಿಬೀಳದೆ ಅವರು ಪೈಗಂಬರನ ಪರಮ ಶತ್ರುಗಳಾದರು. ಅಲ್ಲದೆ, ಹಾಷಿಮ ಬುಡಕಟ್ಟಿನವನ ನಾಯಕತ್ವವನ್ನೂ ಅವರು ಒಪ್ಪಿಕೊಳ್ಳಲಿಲ್ಲ. ಇದರಿಂದ ಪೈಗಂಬರನಿಗೂ ಅವನ ಅನುಯಾಯಿಗಳಿಗೂ ೧೩ ವರ್ಷಗಳ ಕಾಲ ಬಹು ತೊಂದರೆಯಾಗಿ, ಕೊನೆಗೆ ಮದೀನ ಯಾತ್ರಿಕರ ಸಹಾಯದಿಂದ ಅವರು ಮದೀನದಲ್ಲಿ ಹೋಗಿ ನೆಲಸಿದರು. ಪೈಗಂಬರನನ್ನು ದಾರಿಯಲ್ಲಿ ಹೊಂಚಿ ತಲೆ

ಕಡಿಯಬೇಕೆಂಬ ಕುರಯೀಷರ ಎಣಿಕೆ ನೆರವೇರಲಿಲ್ಲ. ಮದೀನದಲ್ಲೂ ಪೈಗಂಬರನಿಗೆ ಅನುಕೂಲ ಪ್ರತಿಕೂಲ ಪಕ್ಷಗಳು ಇದ್ದದ್ದರಿಂದ ಅಲ್ಲಿಯೂ ಅವನ ಕೆಲಸ ಅಷ್ಟೇನೂ ಸುಲಭವಾಗಲಿಲ್ಲ. ಹಲವರು ಕಪಟ ಮುಸ್ಲಿಮ ರಾಗಿ ಅಧಿಕಾರಕ್ಕೆ ಬರುವ ಸಮಯವನ್ನು ಹೊಂಚುತ್ತಿದ್ದರು. ಆದರೂ ಈ ಕಷ್ಟಗಳನ್ನೆಲ್ಲ ಪರಿಹರಿಸಿಕೊಂಡು ಪೈಗಂಬರನೂ ಅವನ ಅನು ಯಾಯಿಗಳೂ ಕ್ರಮೇಣ ಬಲಗೊಂಡು ಹತ್ತು ವರ್ಷಗಳಲ್ಲಿ ಉಮ ಯ್ಯರು, ಮಖ್‌ಸೂಮರು ಮೊದಲಾದ ಪ್ರತಿಕೂಲ ಕುರಯೀಷರ ಬಲ ವನ್ನು ಮುರಿದು, ಅರೇಬಿಯದಲ್ಲಿ ಪೈಗಂಬರನ ಕೈಕೆಳಗೆ ಮುಸ್ಲಿಂ ಪ್ರಭುತ್ವಸ್ಥಾಪನೆಯಾಯಿತು. ಇದರಿಂದ ಒಂದು ದೃಷ್ಟಿಯಲ್ಲಿ ಹಾಷಿ ಮರು ಮೇಲ್ಕೈ ಆದರು.

ಮುಹಮ್ಮದನ ತರುವಾಯ ಅಬೂಬಕ್‌ರ್‌ನೂ, ಅವನ ತರು ವಾಯ ಉಮರನೂ, ಅಧಿಕಾರಕ್ಕೆ ಬಂದು, ಈ ಇಬ್ಬರು ಕಲೀಫ್ಫರೂ ಪೈಗಂಬರನ ಸರ್ವ ಸಮತಾತತ್ವವನ್ನು ಪಾಲಿಸಿಕೊಂಡು ಬಂದರು. ಮೂರನೆಯ ಕಲೀಫ್ಫನು ಒಳ್ಳೆಯವನಾಗಿದ್ದರೂ ಸ್ವಕುಲ ಮಮತೆಯಿಂದ ತನ್ನ ಕುಲದವರಾದ ಉಮಯ್ಯರನ್ನೇ ಮುಸ್ಲಿಂ ರಾಜ್ಯಗಳಲ್ಲೆಲ್ಲ ಅಧಿ ಕಾರಕ್ಕೆ ತಂದನು. ಈ ಉಮಯ್ಯರು ಬಲಗೊಂಡು ದಬ್ಬಾಳಿಕೆಗೆ ಆರಂಭಿಸಿದ್ದರಿಂದ ಅಶಾಂತಿಗೆ ಕಾರಣವಾಗಿ, ಕೊನೆಗೆ ದಂಗೆಗೆ ಇಟ್ಟು ಕೊಂಡು ಕಲೀಫ್ಫನು ಕೊಲೆಯಾದನು. ಕಲೀಫ್ ಪಟ್ಟಕ್ಕೆ ಪೈಗಂಬ ರನ ಅಳಿಯನಾದ ಅಲಿಯನ್ನು ತಂದರು. ಈ ಹೊಸ ಪಕ್ಷದವರ ಹೆಗ್ಗುರಿ ಮುಸ್ಲಿಂ ಸಾಮ್ರಾಜ್ಯದಲ್ಲಿ ಮತ್ತೆ ಸರ್ವ ಸಮತಾತತ್ವವನ್ನು ಸ್ಥಾಪಿಸುವುದಾಗಿತ್ತು. ಅಲಿಯ ಆಯ್ಕೆ ಉಮಯ್ಯರಿಗೂ ಇತರ ಕೆಲವು ಕುರಯೀಷರಿಗೂ ಸರಿಬೀಳದೆ ಒಳಗೊಳಗೇ ಕುದಿಯುತ್ತಿತ್ತು. ಆದರೂ ಅಲಿ ಹೊರಗಿನ ಮತ್ತು ಒಳಗಿನ ಕಾಟಗಳನ್ನು ತಡೆದುಕೊಂಡು ಐದು ವರ್ಷಗಳ ಕಾಲ ದಕ್ಷತೆಯಿಂದ ಅಧಿಕಾರ ಮಾಡಿದನು. ಇವನ ನಂತರ ಇವನ ಮಗ ಹಸನ್ನನ್ನು ಕಲೀಫ್ ಪಟ್ಟಕ್ಕೆ ಆಯ್ದರು. ಆದರೆ, ಇವನ ತಂದೆಯ ಕಾಲದಿಂದಲೂ ಬಲಿಷ್ಠನಾಗಿ ಹೊಂಚುಹಾಕುತ್ತಿದ್ದ ಸಿರಿಯ ಪ್ರಾಂತಾಧಿಕಾರಿಯಾದ ಮೊಆವಿಯನಿಗೆ ಕಲೀಫ್ ಪಟ್ಟವನ್ನು

ವಹಿಸಿಬಿಟ್ಟನು. ಹೀಗೆ ಎರಡನೆಯ ಸಲ ಸಿಕ್ಕಿದ ಅವಕಾಶವನ್ನು ಉಮಯ್ಯರು ಚೆನ್ನಾಗಿ ಉಪಯೋಗಿಸಿಕೊಂಡು, ಕುರಾಯಿಷ್ ಅಲ್ಲದವರ ಬಲವನ್ನು ಸಂಪೂರ್ಣವಾಗಿ ಮುರಿದರು. ಮುಸ್ಲಿಂ ಸಾಮ್ರಾಜ್ಯದಲ್ಲೆಲ್ಲ ಮತ್ತೆ ಉಮಯ್ಯರ ಅಧಿಕಾರ ಪ್ರಬಲವಾಯಿತು.

ಹಸನ್ ಮೋಆವಿಯನಿಗೆ ಪಟ್ಟ ಒಪ್ಪಿಸಿದಾಗ ಮೋಆವಿಯನ ತರುವಾಯ ಮತ್ತೆ ಕಲೀಫನು ಆಯ್ಕೆ ಆಗಬೇಕೆಂದು ಒಪ್ಪಂದವಾಗಿತ್ತು. ಆದರೆ ಬಲಿಷ್ಠನಾಗಿದ್ದ ಮೋಆವಿಯನು ಈ ಒಪ್ಪಂದವನ್ನು ಮೀರಿ ತನ್ನ ಮಗ ಯಜೀದನನ್ನು ಕಲೀಫ್ ಪಟ್ಟಕ್ಕೆ ನಿಯಮಿಸಿದನು. ಹಾಷಿಮರ ನಾಯಕನಾಗಿದ್ದ ಇಮಾಮ್ ಹುಸೇನ್ ಇದನ್ನು ಪ್ರತಿಭಟಿಸಿದನು. ಆದರೆ ಮದೀನದಲ್ಲಿ ತನಗೆ ಬೆಂಬಲ ಸಿಕ್ಕದೆ ಮೆಕ್ಕಾಕ್ಕೆ ಹೋದನು. ಅಲ್ಲಿಯೂ ಅವನಿಗೆ ಅಷ್ಟೇನೂ ನೆಮ್ಮದಿ ಇರಲಿಲ್ಲ. ಈ ನಡುವೆ ತಾನು ಅಲ್ಲಿಗೆ ಬಂದು ತಮ್ಮ ನಾಯಕನಾಗಿ ಉಮಯ್ಯರ ಕಾಟವನ್ನು ತಪ್ಪಿಸಬೇಕೆಂದು ಕೂಫದಿಂದ ಹುಸೇನಿಗೆ ಹಲವು ಕಾಗದಗಳು ಬಂದುವು. ಆದರ ಪ್ರಕಾರ ತನ್ನ ನೆಂಟನಾದ ಮುಸ್ಲಿಮನನ್ನು ಅಲ್ಲಿಯ ಸ್ಥಿತಿಗತಿಗಳನ್ನು ನೋಡಿಕೊಂಡು ಬರಲು ಕೂಫಕ್ಕೆ ಕಳುಹಿದನು. ಮುಸ್ಲಿಮನು ಅಲ್ಲಿಗೆ ಹೋಗಿ ನೋಡಿ, ೩೦,೦೦೦ ಜನ ಸಶಸ್ತ್ರ ಸೈನಿಕರು ಸಿದ್ಧರಾಗಿರುತ್ತಾರೆಂದು ಹೇಳಲು, ಹುಸೇನ್ ಕೂಫಕಡೆಗೆ ಹೊರಟನು. ಈ ಮಧ್ಯೆ ಕಲೀಫ ಯಜೀದನು ಉಬಯ್‌ದುಲ್ಲನನ್ನು ಕೂಫ ಪ್ರಾಂತಾಧಿಕಾರಿಯನ್ನಾಗಿ ನೇಮಿಸಿದನು. ಇವನು ಬಂದು, ಏಳುವುದರಲ್ಲಿದ್ದ ದಂಗೆಯನ್ನು ಅಡಗಿಸಿ ಹಲವರನ್ನು ತಲೆಹೊಯ್ಸಿದನು. ಅಲ್ಲದೆ ನುಮಯ್‌ರ್ ಮಗ ಹುಸೇನನ ಮತ್ತು ಹುರ್‌ನ ಕೈಕೆಳಗೆ ಸೈನಿಕರನ್ನು ಕಳುಹಿ ಇಮಾಮ್‌ಹುಸೇನನನ್ನು ತಡೆಯುವಂತೆ ಅಪ್ಪಣೆ ಕೊಟ್ಟನು. ಹೀಗೆ ಇಮಾಮ್ ಹುಸೇನನು ಮೆಸೊಪೊಟೇಮಿಯದ ಕಣಿವೆಗಳಲ್ಲಿ ಬರುವ ವೇಳೆಗೆ ಬೆಂಬಲದ ಕೆಳೆಯರಿಗೆ ಬದಲಾಗಿ ಕೈದು ತೊಟ್ಟ ಹಗೆಗಳನ್ನು ಎದುರುಗೊಂಡನು. ಉಬಯ್‌ದುಲ್ಲನು ಇಮಾಮ್ ಹುಸೇನನ ಬರವನ್ನು ಕೇಳಿ ಅವನನ್ನು ಕೂಫಾಕ್ಕೆ ಕರೆತರುವಂತೆ ಆಜ್ಞಾಪಿಸಿದನು. ಅಲ್ಲದೆ ಉಬಯ್‌ದುಲ್ಲನ ಅಪ್ಪಣೆಯಂತೆ ರಯ್ ಪ್ರಾಂತಾಧಿಕಾರಿಯಾದ

ಉಮರನೂ ತನ್ನ ಸೈನ್ಯದೊಡಗೂಡಿ ಇಮಾಮ್ ಹುಸೇನನ ಮೇಲೆ ನಡೆದನು. ಹೀಗೆ ಎಲ್ಲೆಲ್ಲೂ ಹುಸೇನನಿಗೆ ತೊಂದರೆಯೇ ಆಗಿ, ಅವನಿಗೆ ಅಡಿಯಿಡಲು ದಾರಿಯೇ ತೋಚದೆ ಕೊನೆಗೆ ಹಗೆಯ ಕೈವಶನಾಗ ಬೇಕಾಯಿತು. ಹುರ್‌ನ ಜತೆಯಲ್ಲಿ ಯೂಫ್ರಟಿಸ್ ನದಿಯ ದಡದ ಮೇಲಿನ ಹಳ್ಳಿಯಾದ ಕೆರ್ಬಲಕ್ಕೆ ಬಂದನು. ಈ ವೇಳೆಗೆ ಉಮರನು ಕೆರ್ಬಲಕ್ಕೆ ಬಂದು ಹುರ್‌ನ ಸೈನ್ಯಕ್ಕೂ ತನ್ನ ಸೈನ್ಯಕ್ಕೂ ಸರ್ವಾಧಿಕಾರಿಯಾದನು. ಉಮರನು ಇಮಾಮ್ ಹುಸೇನನನ್ನು ಅವನ ಪ್ರಯಾಣಕ್ಕೆ ಕಾರಣ ಕೇಳಿದನು. ಹುಸೇನನು ಕೂಫದವರು ತನ್ನ ಸಹಾಯ ಬೇಡಿ ಬರೆದರೆಂದೂ, ಜನರಿಗೆ ತಾನು ಬೇಕಿಲ್ಲದಿದ್ದರೆ ಮರಳುವುದಾಗಿಯೂ ಹೇಳಿದನು. ಉಮರನಿಗೆ ಇದು ಸಮರ್ಪಕವಾಗಿ ತೋರಿ ಅದನ್ನು ಉಬಯ್‌ದುಲ್ಲನಿಗೆ ತಿಳಿಸಿದನು. ಆದರೆ ಕೆಲವು ಖವರಾಜ್ ಅಧಿಕಾರಿಗಳು ಹುಸೇನನು ಶರಣಾಗತನಾಗಿ ಕೂಫಕ್ಕೆ ಬರಬೇಕೆಂದು ಹಠ ಹಿಡಿದರು. ಹುಸೇನಿಗೆ ಉಬಯ್‌ದುಲ್ಲನ ಈ ಅಪ್ಪಣೆಯನ್ನು ಒಯ್ಯಬಂದವನು ಷಿಮ್‌ರ್ ಎಂಬವನು. ಇವನು ಅಲಿಯ ಕೈಕೆಳಗೆ ಸೈನಿಕನಾಗಿದ್ದು, ತರುವಾಯ ಖವಾರಜರ ಪಕ್ಷ ವಹಿಸಿ ಅಲಿಯ ಸಂತತಿಗೆ ಪರಮಶತ್ರುವಾಗಿದ್ದನು. ಷಿಮ್‌ರ್ ತನ್ನ ಕೈಕೆಳಗೆ ಸೈನಿಕರನ್ನು ತೆಗೆದುಕೊಂಡು, ಉಮ್‌ರ್‌ನು ಏನಾದರೂ ತಡ ಮಾಡಿದರೆ ಸೈನ್ಯಾಧಿಕಾರವನ್ನು ತಾನೇ ತೆಗೆದುಕೊಳ್ಳುವುದಕ್ಕೆ ಅಪ್ಪಣೆ ಪಡೆದು, ಕೂಫದಿಂದ ಹೊರಟನು.

ಉಮ್‌ರ್‌ನು ಇಮಾಮ್ ಹುಸೇನನಿಗೆ ಶರಣಾಗತನಾಗಬೇಕೆಂಬ ಹೊಸ ಅಪ್ಪಣೆಯನ್ನು ತಿಳಿಸಲು, ಹುಸೇನನು ಆ ವಿಷಯವನ್ನು ಪರ್ಯಾಲೋಚಿಸಲು ಒಂದು ರಾತ್ರಿ ಅವಕಾಶಬೇಡಿ ಪಡೆದನು. ರಾತ್ರಿ ತನ್ನ ಸ್ವಲ್ಪ ಸೈನಿಕರನ್ನು ಕರೆದು ಸ್ಥಿತಿಯನ್ನು ವಿವರಿಸಿ, ಅವರು ಪಾಳಯವನ್ನು ಬಿಟ್ಟು ಆತ್ಮರಕ್ಷಣೆ ಮಾಡಿಕೊಳ್ಳಲು ಅವಕಾಶ ಕೊಟ್ಟನು. ಆದರೆ ಎಲ್ಲೋ ಕೆಲವರು ಮಾತ್ರ ಹೋಗಿ, ಬಹುಮಂದಿ ಅವನೊಡನೆಯೇ ಇದ್ದು ಕಾದು ಮಡಿಯುವುದಾಗಿ ಹೇಳಿದರು. ಅವನು ಅದನ್ನು ಒಪ್ಪಿ, ಡೇರೆಗಳನ್ನೆಲ್ಲ ಹತ್ತಿರ ಹತ್ತಿರ ಬಿಗಿದು ಪಾಳಯದ

ಹಿಂದೆ ದೊಡ್ಡ ಕಾಲುವೆ ತೋಡಿ, ಸೌದೆ ತುಂಬಿ ಬೆಂಕಿ ಹೊತ್ತಿಸಿ ಒಬ್ಬರೂ ಹಿಮ್ಮೆಟ್ಟಲು ಎಡೆಯಿಲ್ಲದಂತೆ ಮಾಡಿದನು. ಮಾರನೆಯ ದಿನ ಬೆಳಗ್ಗೆ (ಮೊಹರ್ರಮ್ ತಿಂಗಳ ೧೦ನೆಯ ದಿನ) ತನ್ನ ಸ್ವಲ್ಪ ಮಂದಿ ಸೈನಿಕರೊಡಗೂಡಿ ಒಂಟೆಯ ಮೇಲೆ ಹಗೆಯಕಡೆ ನಡೆದು ಅವರೊಡನೆ ಈ ರೀತಿಯಾಗಿ ಹೇಳಿದನು—"ಓ ಕೂಫ಼ದವರೆ, ಸಿರಿಯದವರೆ! ನಾನು ನಿಮ್ಮ ಪೈಗಂಬರನ ಬದುಕಿರುವ ಒಬ್ಬನೇ ಮೊಮ್ಮಗನಲ್ಲವೆ? ನಿಮ್ಮ ಆಸ್ತಿಯನ್ನು ನಾನೇನಾದರೂ ಕಸಿದೆನೆ? ನಿಮ್ಮಲ್ಲಿ ಯಾರನ್ನಾದರೂ ಕೊಂದೆನೆ? ಇಸ್ಲಾಂ ಧರ್ಮಕ್ಕೆ ವಿರುದ್ಧವಾಗಿ ಏನಾದರೂ ನಡೆದೆನೆ? ನೀವೇ ನನ್ನನ್ನು ಬಾ ಎಂದು ಕರೆಯಲಿಲ್ಲವೆ?" ಇದಕ್ಕೆ ಕೆಲವರು, ತಪ್ಪೆಸಗದಿದ್ದರೂ ನಿಮ್ಮ ತಂದೆ ನಮ್ಮವರನ್ನು ಕೊಂದ ತಪ್ಪಿಗಾಗಿ ಈಗ ನಿನ್ನ ಮೇಲೆ ಸೇಡು ತೀರಿಸುತ್ತೇವೆ, ಎಂದರು. ಇದನ್ನು ನೋಡಿ ಹುರ್ ಮನನೊಂದು ತನ್ನ ಸೈನ್ಯಬಿಟ್ಟು, ಇಮಾಮ್ ಹುಸೇನ್‌ನಲ್ಲಿಗೆ ಬಂದು ಅವನಿಗೆ ಬೆಂಬಲವಾಗಿ ನಿಂತು ಹೋರಾಡಲು ಸಿದ್ಧನಾದನು. ಬೈಗಿನವರೆಗೂ ಹಲವು ದ್ವಂದ್ವಯುದ್ಧಗಳು ನಡೆದು ಹುಸೇನನ ಮಗ, ಸೋದರರು, ಸೋದರ ಮಕ್ಕಳು, ಅನುಯಾಯಿಗಳು—ಎಲ್ಲರೂ ಮಡಿದು ಕೊನೆಗೆ ಹುಸೇನನೂ ಬಿದ್ದನು. ಅವರ ತಲೆಗಳನ್ನೆಲ್ಲ ಯಸೀದಿಗೆ ಕಳುಹಿದರು. ಇಮಾಮ್ ಹುಸೇನನ ಹೆಂಡತಿಯರು, ಸೋದರಿಯರು, ಉಳಿದಿದ್ದ ಒಬ್ಬನೇ ಮಗ ಅಲಿ ಜ಼ಯ್‌ನುಲ್ಲಾ ಬೆದೀನ್ ಮೊದಲಾದವರನ್ನೆಲ್ಲ ಸೆರೆಹಿಡಿದು ಯಸೀದನ ದರ್ಬಾರಿಗೆ ತಂದರು.

ಈ ಘೋರ ದುರಂತ ಅವಸ್ಥೆಯನ್ನು ನೋಡಿ ಮದೀನ ಮತ್ತು ಮೆಕ್ಕಾದವರು ಕ್ರೋಧಗೊಂಡು ಉಮಯ್ಯರ ಮೇಲೆ ದಂಗೆಯೆದ್ದರು. ಉಮಯ್ಯರ ಕಡೆಯ ಸಿರಿಯದ ಸೈನ್ಯ ಮದೀನರನ್ನು ಸೋಲಿಸಿ, ಮೂರು ದಿನಗಳವರೆಗೆ ಊರುಕೊಳ್ಳೆ ಹೊಡೆದು ತಮ್ಮ ಸೇಡು ತೀರಿಸಿ ಕೊಂಡರು. ಮೆಕ್ಕ ಮುತ್ತಿ ಅದನ್ನು ಕೈವಶಮಾಡಿಕೊಳ್ಳುವುದರೊಳ ಗಾಗಿ ಯಸೀದನ ಮರಣವಾರ್ತೆ ಮುಟ್ಟಿತು. ಉಮಯ್ಯರ ಪಕ್ಷದವರು ವೃದ್ಧ ಮರ್‌ವಾನನ್ನು ಕಲೀಫನನ್ನಾಗಿ ಆಯ್ದರು. ನುರಿತ ದಳಪತಿ ಅಬುಉಬಯ್‌ದಾನ ಮಗ ಮುಖ್‌ತಾರನು ಕೂಫವನ್ನು ಆಕ್ರಮಿಸಿ

ಕೊಂದನು. ಹೆಜಾಸ್ ಜುಬಯರ್‌ನ ಮಗ ಅಬ್ದುಲ್ಲನ ಕೈಕೆಳಗಿತ್ತು. ಮುಖ್ತಾರನು ಇಮಾಮ್ ಹುಸೇನನನ್ನು ಪ್ರತಿಭಟಿಸಿ ಯುದ್ಧಮಾಡಿದ ಮುಂದಾಳುಗಳನ್ನೆಲ್ಲ ಹಿಡಿದು ಕೊಲ್ಲಿಸಿದನು. ಇದನ್ನು ನೋಡಿ ಜುಬಯರ್‌ದುಲ್ಲನು ಸಿರಿಯನ್ ಸೈನ್ಯ ತೆಗೆದುಕೊಂಡು ಕೂಫವನ್ನು ಮುತ್ತಿದನು. ಆದರೆ ಸೋತು ಕೊಲೆಯಾದನು. ಹೀಗೆ ಕರ್ಬಲದ ದುರಂತ ಪ್ರಕರಣ ಎರಡು ಕಡೆಯುವರ ತಲೆಯಾಳುಗಳನ್ನೂ ಆಹುತಿ ತೆಗೆದುಕೊಂಡು ಕೊನೆಗಂಡಿತು.

ಇಮಾಮ್ ಹುಸೇನನ ಹೆಸರು ಧೈರ್ಯ ಸ್ಥೈರ್ಯ ವೀರ್ಯ ಗಳಿಗೆ ಹೆಸರಾಯಿತು. ಉಮಯ್ಯರು ಇನ್ನೂ ೬೦ ವರ್ಷಗಳ ಕಾಲ ರಾಜ್ಯವಾಳಿ ಚಕ್ರಾಧಿಪತ್ಯವನ್ನು ವಿಸ್ತರಿಸಿದರೂ, ಕೊನೆಗೆ ಬನೀಹಾಷಿ ಮರು ಇರಾನಿನಲ್ಲಿ ದಂಗೆಯೆದ್ದು ಜಯಶೀಲರಾಗಿ ಬನೀಅಬ್ಬಾಸ್ ಖಲೀಫನಾದನು. ಕ್ರಮೇಣ ಸಿರಿಯ, ಈಜಿಪ್ಟ್, ಇರಾನ್‌ಗಳಲ್ಲಿ ಕುರ ಯೇಷೇತರ ಮತ್ತು ಅರಬೇತರ ರಾಜಸಂತತಿಗಳಿದ್ದರೂ ಬಾಗ್‌ದಾದಿನ ಖಲೀಫನು ಧರ್ಮಗುರುವಾಗಿ ನಿಂತನು. ಮಧ್ಯ ಇರಾನ್ ಮತ್ತು ಮೆಸೊಪೊಟೇಮಿಯವನ್ನು ಆಳಿದ ಬುವಯ್‌ಹಿ ಸಂತತಿಯವರು ಅಲಿ ಸಂತತಿಗೆ ಭಕ್ತಿಯಿಂದ ನಡೆದುಕೊಂಡು ಕರ್ಬಲದ ದುರಂತ ಪ್ರಕರಣದ ನೆನಪಿಗಾಗಿ ಕೂಟ ಕೂಡುವುದಕ್ಕೆ ಪ್ರೋತ್ಸಾಹ ಕೊಟ್ಟರು. ಈ ಕೂಟಗಳು ಇರಾನಿನ ಸಫವಿದ್ದರ ಆಳಿಕೆಯಲ್ಲಿ ಪ್ರಬಲಗೊಂಡುವು. ಇದೇ ರೀತಿ ಇಂಡಿಯದಲ್ಲೂ ವರ್ಷಂಪ್ರತಿ ಕೂಟಗಳು ಏರ್ಪಟ್ಟವು. ಆದರೆ, ಶೋಕಮೂಲವಾದ ಈ ಕೂಟಗಳು ಬರಬರುತ್ತ, ಇಂಡಿಯದಲ್ಲಿ ಉತ್ಸವ ಸಂದರ್ಭವಾಗಿ ಪರಿಣಮಿಸಿಬಿಟ್ಟವೆ. ಆದರೆ, ಹುಲಿಯ ವೇಷ ಕರ್ಬಲದಲ್ಲಿ ಸತ್ತು ಕೆಡೆದ ವೀರರ ದೇಹವನ್ನು ಕಾದುವೆಂದು ಹೇಳುವ ಹುಲಿಗಳಿಗೂ, ಅಲಾವಹ್ ಅಥವಾ ಹೊಂಡ ಪಾಳಯದ ಹಿಂಭಾಗದಲ್ಲಿ ಹಾಕಿದ್ದ ಬೆಂಕಿಗೂ, ಪಂಜ ಅಥವಾ ಕೈ ಆಕಾರದ ಗುಡಿ (ಬಾವುಟ) ಮಹಮ್ಮದ್, ಅಲಿ, ಫಾತಿಮ, ಹಸನ್, ಮತ್ತು ಹುಸೇನರಿಗೂ ಚಿಹ್ನೆ ಯಾಗಿರಬಹುದು. ಆದರೆ, ಹುಲಿಯ ವೇಷ, ಪಂಜಗಳು ಇರಾನ್ ಮೊದಲಾದೆಡೆಗಳಲ್ಲಿಲ್ಲ. ಇಮಾಮ್ ಹುಸೇನನೂ ಅವನ ಕಡೆಯುವರೂ

ಪಟ್ಟ ಕಷ್ಟ ಮತ್ತು ಸಂಕಟಗಳು ಅರಬ್ಬಿ, ಪರ್ಷಿಯನ್ ಮತ್ತು ಉರ್ದು ಭಾಷೆಗಳಲ್ಲಿ ದೊಡ್ಡ ಸಾಹಿತ್ಯವಾಗಿ ಪರಿಣಮಿಸಿದೆ. ಇದನ್ನು ವರ್ಷದಲ್ಲಿ ಕೆಲವು ದಿನವಾದರೂ ಪಾರಾಯಣ ಮಾಡದ ಮುಸ್ಲಿಂ ಮನೆ ಇಲ್ಲವೆನ್ನ ಬಹುದು. ಇರಾನ್ ಮೆಸೊಪೊಟೇಮಿಯಗಳಲ್ಲಿ ಇದರ ನಾಟಕಗಳನ್ನು ಆಡುತ್ತಾರೆ.

## ಕೊನೆಮಾತು

ಇಲ್ಲಿಯವರೆಗೆ ಪ್ರತಿಪಾದಿಸಿರುವಂತೆ, ಇಸ್ಲಾಂ ಧರ್ಮ ಮತ್ತು ಸಂಸ್ಕೃತಿ ಯೂರೋಪ್, ಏಷ್ಯ ಮತ್ತು ಆಫ್ರಿಕ ಖಂಡಗಳ ಹಲವೆಡೆ ಗಳಲ್ಲಿ ಹರಡಿ ತಮ್ಮ ಪ್ರಭಾವವನ್ನು ಬೀರಿವೆ. ಮುಸ್ಲಿಮರು ಸ್ಪೇನ್ ನನ್ನೂ ಇಂಡಿಯವನ್ನೂ ಗೆದ್ದು ರಾಜ್ಯವಾಳಿ, ಆ ಮೂಲಕ ತಮ್ಮ ಧರ್ಮ ಸಂಸ್ಕೃತಿಗಳನ್ನು ಹರಡಿದರು. ಸ್ಪೇಯ್‌ನಿನಲ್ಲೂ ಇಂಡಿಯದಲ್ಲೂ ಇಸ್ಲಾಂ ಬರುವ ವೇಳೆಗೆ ಬೇರೆ ಧರ್ಮವೂ ಸಂಸ್ಕೃತಿಯೂ ಇದ್ದುವು. ಇಸ್ಲಾಂ ಸಂಸ್ಕೃತಿ ಸ್ಪೇಯ್‌ನ್ ಮೂಲಕ ಇತರ ಯೂರೋಪ್ ದೇಶ ಗಳಿಗೂ, ಇಂಡಿಯದ ಮೂಲಕ ಇಂಡೊ-ಚೈನ, ಪೆಸಿಫಿಕ್ ದ್ವೀಪಗಳು ಮುಂತಾದ ಪೂರ್ವ ದೇಶಗಳಿಗೂ ಹರಿಯಿತು. ಸ್ಪೇಯ್‌ನಿನಲ್ಲಿ ಮೊದ ಮೊದಲು ಹೋಗಿ ಕೆಲಸ ಮಾಡಿದವರು ಅರಬರು ಮತ್ತು ಬರ್ಬರರು. ಇಂಡಿಯದಲ್ಲಿ ಕೆಲಸಮಾಡಿದವರು ಅರಬರು ಮತ್ತು ಇರಾನಿಯನ್ನರು. ಇತರ ಪೂರ್ವ ದೇಶಗಳಲ್ಲಿ ಮುಸ್ಲಿಂ ಸಂಸ್ಕೃತಿಯ ಉನ್ನತಿಗೆ ಕೆಲಸ ಮಾಡಿದವರು ಜೋರಾಸ್ಟರ್ ಧರ್ಮದವರು ಮತ್ತು ಸಿರಿಯನ್ ಕ್ರೈಸ್ತರು.

ಮಧ್ಯಕಾಲದ ಯೂರೋಪಿನ ಕಲೆ, ಶಾಸ್ತ್ರ, ಸಂಸ್ಕೃತಿ ಮೊದ ಲಾದುವುಗಳೆಲ್ಲ ಸ್ಪೇಯ್‌ನಿನ ಮತ್ತು ಉತ್ತರ ಆಫ್ರಿಕದ ಮುಸ್ಲಿಮರಿಗೆ ಋಣಿಯಾಗಿವೆ. ಅಲ್ಲದೆ, ಯೂರೋಪಿನಲ್ಲಿ ಮುಸ್ಲಿಂ ರಾಜಕೀಯ ಪ್ರಾಬಲ್ಯ ಕಡಮೆಯಾಗಿ ಮುರಿದುಬಿದ್ದದ್ದೇ ಮುಸ್ಲಿಂ ಸಂಸ್ಕೃತಿಯ ಅಭಿವೃದ್ಧಿಗೆ, ಉನ್ನತಿಗೆ, ಕಾರಣವಾಯಿತು ಎನ್ನಬಹುದು. ಟಾಲೆಡೊ (ಕ್ರಿ. ಶ. ೧೦೮೫), ಕಾರ್ಡೋವ (ಕ್ರಿ. ಶ. ೧೨೩೬), ಸೆವಿಲ್ (ಕ್ರಿ.ಶ. ೧೨೪೮), ಗ್ರಾನಡ (ಕ್ರಿ. ಶ. ೧೪೯೨) ಇವು ಕ್ರಮೇಣ ಕ್ರೈಸ್ತರ ಕೈವಶವಾದುವು. ಈ ಪಟ್ಟಣಗಳಲ್ಲಿ ಶೇಖರವಾಗಿದ್ದ ಮುಸ್ಲಿಂ ಜ್ಞಾನ

ಭಾಂಡಾರವೆಲ್ಲ ಕ್ರೈಸ್ತರ ಕೈವಶವಾಗಿ, ಅವೆಲ್ಲವೂ ಲ್ಯಾಟಿನ್ನಿಗೆ ಪರಿವರ್ತನವಾಗಿ, ಎಲ್ಲ ಯೂರೋಪಿಗೂ ಹರಡಿ ಶಾಸ್ತ್ರ ಮತ್ತು ಕಲೆಗಳ ಮೇಲೆ ಅವುಗಳ ಪ್ರಭಾವ ಬಿತ್ತು.

ಪೂರ್ವ ದೇಶಗಳಲ್ಲಿ ಮೊಗಲರ ದಾಳಿ ಮತ್ತು ಅಬ್ಬಾಸಿ ಕಲೀಫರ ಅವನತಿಯ ಕಾರಣದಿಂದ ಬಗ್‌ದಾದಿನ ಅನೇಕ ವಿದ್ವಾಂಸರು ಇಂಡಿಯಕ್ಕೆ ಬಂದು ನೆಲಸಿದರು. ಅಲ್ಲದೆ, ಪಾರಸಿಕರಿಗೂ ಹಿಂದುಗಳಿಗೂ ಬಹುಕಾಲದಿಂದ ಸಂಪರ್ಕವಿದ್ದು, ಇರಾನ್ ಮತ್ತು ಭಾರತೀಯ ಸಂಸ್ಕೃತಿಗಳು ಹಲವು ವಿಷಯಗಳಲ್ಲಿ ಒಂದಾಗಿದ್ದುವು. ಇದರ ಜತೆಗೆ ರಾಜಕೀಯ ಬಲವೂ ಕೈಗೆ ಬಂದು ಇಸ್ಲಾಂ ಹರಡಿಕೆಗೆ ಹೆಚ್ಚು ಅವಕಾಶವಾಯಿತು. ಇಂಡಿಯದಲ್ಲಿ ನಿಜವಾದ ಇಸ್ಲಾಂ ಧರ್ಮ ಹರಡಿದ್ದು ಸೂಫಿ ಸಾಧುಗಳಿಂದ ಎನ್ನಬಹುದು. ಮುಸ್ಲಿಂ ನಾಯಕರಿಗೂ ದಳಪತಿಗಳಿಗೂ ಇದ್ದ ರಾಜ್ಯ ಲಾಭಾಕಾಂಕ್ಷೆಗಿಂತಲೂ ಸೂಫಿಗಳಿಗೆ ಇದ್ದ ಇಸ್ಲಾಂ ಧರ್ಮಪ್ರಸಾರಣೆಯ ಉತ್ಸಾಹ ಹೆಚ್ಚಾಗಿತ್ತು. ಹಿಂದೂ ಮುಸ್ಲಿಂ ಧರ್ಮ ಸಮನ್ವಯಕ್ಕೂ ಐಕ್ಯಕ್ಕೂ ಏಕಕಾಲದಲ್ಲಿ ಸಹಾಯಕನೂ ಸಾಕ್ಷಿಯೂ ಆದ ಕಬೀರನೂ (ಕ್ರಿ. ಶ. ೧೪೪೦-೧೫೧೮), ಸಿಕ್ ಮತಸ್ಥಾಪಕನಾದ ಗುರುನಾನಕನೂ (ಕ್ರಿ. ಶ. ೧೫೩೮) ಈ ಸೂಫಿತತ್ತ್ವ ಪ್ರಸಾರಣೆಯ ಫಲ ಎನ್ನಬಹುದು. ಈ ಪ್ರಸಿದ್ಧ ವ್ಯಕ್ತಿಗಳೇ ಅಲ್ಲದೆ ಹುಸೇನಿ ಬ್ರಾಹ್ಮಣರು, ಪೀರ್‌ಸ್ಥಾದರು ಸತ್ಪಾಮಿಗಳು, ಖೋಜರು, ಧಡ್ಡುಪಂಥಿಗಳು—ಇವರೇ ಮೊದಲಾದ ಪಂಗಡದವರು ಈ ಹಿಂದೂ ಮುಸ್ಲಿಂ ಸಮನ್ವಯದ ಫಲವಾಗಿ ಬಂದವರು. ಪಂಜಾಬಿನ ದಯಾನಂದ ಸರಸ್ವತಿಯವರಿಂದ ಸ್ಥಾಪಿತವಾದ ಆರ್ಯ ಸಮಾಜವೂ ಒಂದು ರೀತಿಯಿಂದ ಮುಸ್ಲಿಂ ಪ್ರಚಾರದ ಫಲವಾಗಿ ಹುಟ್ಟಿದ್ದು ಎನ್ನಬಹುದು.